# [illegible]-ನುಡಿಯ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ನಾಟಕದ ಪಾತ್ರ
## (ಏಕೀಕರಣಪೂರ್ವ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ


ಸಂಶೋಧನೆ
ಎನ್. [illegible]

ಮಾರ್ಗದರ್ಶನ
ಡಾ. ಎ.ಮೋಹನ ಕುಂಟಾರ್





ಭಾಷಾ ನಿಕಾ[illegible]
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬




ಆಗಸ್ಟ್ - ೨೦೦೯

# ನಾಡು–ನುಡಿಯ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ನಾಟಕದ ಪಾತ್ರ (ಏಕೀಕರಣಪೂರ್ವ)

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧನೆ




ಎನ್. ಶೇಖರ್

ಮಾರ್ಗದರ್ಶನ

ಡಾ. ಎ. ಮೋಹನ ಕುಂಟಾರ್

ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಆಗಸ್ಟ್ ೨೦೦೯

# ದೃಢೀಕರಣ ಪತ್ರ

ಶ್ರೀ ಎನ್. ಶೇಖರ್ ಅವರು **ನಾಡು–ನುಡಿಯ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ನಾಟಕದ ಪಾತ್ರ (ಏಕೀಕರಣಪೂರ್ವ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾನಿಲಯ, ಹಂಪಿಯ ಭಾಷಾ ನಿಕಾಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

27-08-2009

**ಡಾ. ಮೋಹನ ಕುಂಟಾರ್**
ಪ್ರಾಧ್ಯಾಪಕರು
ಭಾಷಾ [illegible] ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

# ಪ್ರಮಾಣ ಪತ್ರ

ಶ್ರೀ ಎನ್. ಶೇಖರ್ ಆದ ನಾನು **ನಾಡು-ನುಡಿಯ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ನಾಟಕದ ಪಾತ್ರ (ಏಕೀಕರಣಪೂರ್ವ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎ. ಮೋಹನ ಕುಂಟಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾನಿಲಯ, ಹಂಪಿಯ ಭಾಷಾ ನಿಕಾಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

27-08-2019

ಎನ್. ಶೇಖರ್

**ಎನ್.ಶೇಖರ್**

# ಪರಿವಿಡಿ

## ಸಂಕೇತಾಕ್ಷರಗಳ ವಿವರ

| | | |
|---|---|---|
| ಪ್ರ.ಕ. | – | ಪ್ರಬುದ್ಧ ಕರ್ಣಾಟಕ |
| ಪು. | – | ಪುಟ |
| ಪ್ರಧಾನ ಸಂ. | – | ಪ್ರಧಾನ ಸಂಪಾದಕ |
| ಎ.ಆರ್.ಕೃ.ಜೀ.ಸಾ | – | ಎ.ಆರ್.ಕೃ ಜೀವನ ಸಾಧನೆ |
| ಸಂ. | – | ಸಂಪಾದಕರು |
| 25–2 | – | ಈ ರೀತಿಯ ಸಂಖ್ಯೆಗಳು ಬಂದಾಗ ಮೊದಲನೆಯ ಸಂಖ್ಯೆ ಸಂಪುಟವನ್ನೂ ಎರಡನೆಯ ಸಂಖ್ಯೆ ಸಂಚಿಕೆಯನ್ನು ಸೂಚಿಸುತ್ತದೆ |

# ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪ್ರಸ್ತಾವನೆ

ಪ್ರಬುದ್ಧ ಕರ್ಣಾಟಕ ಕನ್ನಡದ ವಿಶಿಷ್ಟವಾದ ಸಾಹಿತ್ಯ ಪತ್ರಿಕೆ. ಸಂಶೋಧಕರಿಗೆ ಮಾರ್ಗದರ್ಶಿಯಾಗಿ, ಶಾಸ್ತ್ರಜ್ಞರಿಗೆ ಮುಖವಾಣಿಯಾಗಿ, ಸಾಹಿತ್ಯಾಸಕ್ತರಿಗೆ ಸಂಗಾತಿಯಾಗಿ, ಬರಹಗಾರರಿಗೆ ವೇದಿಕೆಯಾಗಿ, ಜನಸಾಮಾನ್ಯ-ರೊಡನೆ ಸ್ಪಂದಿಸುತ್ತಾ ಬೆಳೆದು ಇಲ್ಲಿಯವರೆಗೂ ಉಳಿದು ಬಂದಿರುವ ಪತ್ರಿಕೆ(೨೦೦೯), ೧೯೧೯ರಲ್ಲಿ ಪ್ರಾರಂಭವಾಗಿ ಇನ್ನೂ ಕೆಲವೇ ವರ್ಷಗಳಲ್ಲಿಯೇ ಶತಮಾನವನ್ನು ಕಾಣಲಿರುವ ಈ ಪತ್ರಿಕೆಯ ಸಾಧನೆ ಸಾಮಾನ್ಯವಾದುದಲ್ಲ. ಇಷ್ಟು ದೀರ್ಘಕಾಲದವರೆಗೆ ಯಾವುದೇ ಪತ್ರಿಕೆಯು ಉಳಿಯುವುದು ವಿಶೇಷವಾದ ಸಂಗತಿಯೇ! ಅಂತರಂಗದಲ್ಲಿ ಸತ್ವಯುತವಾಗಿದ್ದು ಅದನ್ನು ಬಹಿರಂಗವಾಗಿ ಪ್ರಕಟಿಸುತ್ತಾ ಬದುಕಿನ ಎಲ್ಲಾ ಮಗ್ಗುಲುಗಳಿಗೆ ಸ್ಪಂದಿಸುತ್ತಾ ಬಂದಾಗ ಮಾತ್ರ ಇದು ಸಾಧ್ಯ. ಪ್ರಬುದ್ಧ ಕರ್ಣಾಟಕವೂ ಕೂಡ ಸಾಹಿತ್ಯಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ತನ್ನ ಕಾಲದ ಜನಾಭಿಪ್ರಾಯಗಳಿಗೆ ಮನ್ನಣೆ ನೀಡುತ್ತಾ ಸಾಧಿಸಿದ ಬೆಳವಣಿಗೆ ಅಪೂರ್ವವಾದುದು. ತನ್ನ ಕಾಲದ ಸಾಹಿತ್ಯ ವಲಯದಲ್ಲಿ ಗೌರವಯುತವಾದ ಸ್ಥಾನವನ್ನು ಸಂಪಾದಿಸಿ ಪ್ರಬುದ್ಧವಾದ ಪ್ರಮುಖ ಸಾಹಿತ್ಯ ಪತ್ರಿಕೆಯೆಂಬ ಆದರಕ್ಕೆ ಇದು ಪಾತ್ರವಾಗಿದೆ.

ಹಾ.ಮಾ.ನಾಯಕ ಅವರು ಗುರುತಿಸುವ ಹಾಗೆ ಪ್ರಬುದ್ಧ ಕರ್ಣಾಟಕವು "ಕನ್ನಡ ಸಾಹಿತ್ಯದ ನವೋದಯದ ಕಹಳೆಯೂದಿದ ನಿಯತ ಕಾಲಿಕ".[೧] ಕಲ್ಲೇಶಿವೋತ್ತಮರಾವ್ ಅವರ ಅಭಿಪ್ರಾಯದಂತೆ "ಕನ್ನಡ ನವೋದಯ ಕಾರಣ ಶಕ್ತಿಗಳಲ್ಲಿ ಒಂದಾದ ಪ್ರಬುದ್ಧ ಕರ್ಣಾಟಕ ತ್ರೈಮಾಸಿಕಕ್ಕೆ ಇದೀಗ ಐವತ್ತು ವರ್ಷಗಳು ತುಂಬುವುದು ಸಂತೋಷದ ಸಂಗತಿ. ಕನ್ನಡ ಸಾಹಿತ್ಯ ಲೋಕದಲ್ಲಿ ನಿಜವಾಗಿಯೂ ಪ್ರಬುದ್ಧ ಕರ್ಣಾಟಕವು ವಿಶಿಷ್ಟವಾದ ಸೇವೆಯನ್ನು ಸಲ್ಲಿಸಿ ಕನ್ನಡವನ್ನು ಸಮೃದ್ಧವನ್ನಾಗಿ ಮಾಡಿದೆ"[೨] ಎಂಬ ಹೇಳಿಕೆಗಳು ಪ್ರಬುದ್ಧ ಕರ್ಣಾಟಕದ ಸ್ವಭಾವವನ್ನು ಪರಿಚಯಿಸಿದರೆ ಬಸವರಾಜ ಕಟ್ಟೀಮನಿಯವರು, "ಪ್ರಬುದ್ಧ ಕರ್ಣಾಟಕ ಪತ್ರಿಕೆ ನಮ್ಮೆಲ್ಲರ ಸಾಹಿತ್ಯ ತಾಯಿ. ಆ ತಾಯಿಯ ಮಕ್ಕಳಾದ ನಾವು ಕರ್ಣಾಟಕದ ಬೇರೆ ಬೇರೆ ಕಡೆಗಳಲ್ಲಿ ವಾಸಿಸುತ್ತಿದ್ದೇವೆ. ಸಾಹಿತ್ಯಾಸಕ್ತರಿಗೆಲ್ಲ ತವರೂರು ಮೈಸೂರು.

---

೧. ನಾಯಕ ಹಾ.ಮಾ.(ಸಂ), ಚಿನ್ನದಗರಿ, ೧೯೭೪, ಪು. vi.
೨. ನಾಯಕ ಹಾ.ಮಾ.(ಸಂ), ಚಿನ್ನದಗರಿ, ೧೯೭೪, ಪು. ೨೯೭.

ಕನ್ನಡದ ಆತ್ಮ, ಕನ್ನಡದ ಪ್ರಾಣ ಮೈಸೂರಿನಲ್ಲಿದೆ. ಕನ್ನಡ ಬಗೆಗೆ, ಕನ್ನಡ ಸಾಹಿತ್ಯದ ಬಗೆಗೆ, ಕನ್ನಡ ಬರವಣಿಗೆಯ ಬಗೆಗೆ ನಮಗೆ ಸ್ಫೂರ್ತಿ ಲಭಿಸಿದ್ದು ಪ್ರಬುದ್ಧ ಕರ್ಣಾಟಕದಿಂದ"[೧] ಎಂದಿರುವ ಮಾತುಗಳು ಪ್ರಬುದ್ಧ ಕರ್ಣಾಟಕದ ಬಗ್ಗೆ ನಾಡಿನಾದ್ಯಂತ ಬರಹಗಾರರಿಗೆ ಇದ್ದ ಗೌರವ ಹಾಗೂ ಆದರವನ್ನು ಪರಿಚಯ ಮಾಡಿಕೊಡುತ್ತದೆ. "ನನ್ನ ವಯಸ್ಸಿನ ಬರಹಗಾರರೆಲ್ಲರೂ ಪ್ರಬುದ್ಧ ಕರ್ಣಾಟಕ ಮಾತೆಯ ಮೊಲೆಹಾಲು ಕುಡಿದೇ ಬೆಳೆದವರೆಂದರೂ ಅತಿಶಯೋಕ್ತಿಯಾಗದು"[೨] ಎಂಬುದು ನವೋದಯದ ಬೆಳವಣಿಗೆಯ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕವು ನಿರ್ವಹಿಸಿದ ಪಾತ್ರವನ್ನು ಪರಿಚಯಿಸಿದರೆ "ಸಹೃದಯರಿಗೆ ಪ್ರಿಯವಾಗಿ ಸರ್ವಾಂಗ ಸುಂದರವಾಗಿ ಇಂದಿಗೂ ಸಾಹಿತ್ಯಾಭಿರುಚಿಯನ್ನು ತಿದ್ದುವುದರಲ್ಲಿ ಮೇಲ್ಪಂಕ್ತಿಯಾಗಿದೆ"[೩] ಎಂಬ ಅನಂತ ರಂಗಾಚಾರ್ ಅವರ ಹೇಳಿಕೆ ಪತ್ರಿಕೆಯ ಸ್ವರೂಪ ಹಾಗೂ ಸ್ವಭಾವಗಳೆರಡನ್ನೂ ಪರಿಚಯಿಸುತ್ತದೆ. ಹೀಗೆ ಸಾಹಿತ್ಯ ವಲಯದಲ್ಲಿ ಅಪೂರ್ವವಾದ ಪತ್ರಿಕೆಯೆಂಬ ಹೆಗ್ಗಳಿಕೆಯನ್ನು ಗಳಿಸಿಕೊಂಡಿರುವುದಾದರೂ ಪ್ರಬುದ್ಧ ಕರ್ಣಾಟಕದ ಕೊಡುಗೆಯನ್ನು ಇಂದಿನ ಸಂದರ್ಭದಲ್ಲಿ ನಿಂತು ಹಿಂದಿರುಗಿ ನೋಡಿದಾಗ ಅದನ್ನು ಕೇವಲ ಸಾಹಿತ್ಯ ಪತ್ರಿಕೆಯಾಗಿಯೇ ಗುರುತಿಸಿದರೆ ಅದರ ಕಾರ್ಯ ವ್ಯಾಪ್ತಿಯನ್ನು ನಿಷ್ಪಕ್ಷಪಾತವಾಗಿ ಗುರುತಿಸಿದಂತೆ ಆಗುವುದಿಲ್ಲ.

ಕನ್ನಡ ನಾಡಿನ ಏಕೀಕರಣದ ಸಂದರ್ಭದಲ್ಲಿ, ಕನ್ನಡ ನಾಡು ಹಾಗೂ ನುಡಿಯ ಬಗ್ಗೆ ವಿದ್ಯಾವಂತರಲ್ಲಿ ಅಭಿಮಾನ ಬೆಳೆಸುವ ಸಂದರ್ಭದಲ್ಲಿ, ಕನ್ನಡ ಭಾಷೆಗೆ ಸ್ಥಾನ ಮಾನ ದೊರಕಿಸಿಕೊಡುವ ಸಮಯದಲ್ಲಿ, ಸಾಹಿತ್ಯಕವಾಗಿ ಕನ್ನಡ ಭಾಷೆಯ ಪ್ರಗತಿ ಸಾಧನೆಗೆ ಸಹಕರಿಸುವಲ್ಲಿ ಹಾಗೂ ನಾಡಿನ ಸಮಗ್ರ ಅಭಿವೃದ್ಧಿಯ ಚಿಂತನೆಯಲ್ಲಿ ಪ್ರಬುದ್ಧ ಕರ್ಣಾಟಕ ತೋರಿದ ಆಸಕ್ತಿ, ಮಾರ್ಗದರ್ಶನ, ಬೆಂಬಲ ಇವುಗಳನ್ನು ಗುರುತಿಸದಿದ್ದರೆ, ಅದರ ಸಾಮಾಜಿಕ, ರಾಜಕೀಯ, ಸಾಹಿತ್ಯಕ ಜವಾಬ್ದಾರಿಯನ್ನು ಗಮನಿಸದಿದ್ದರೆ ಅದನ್ನು ಕುರಿತಾದ ತಿಳುವಳಿಕೆ ಪೂರ್ಣ ಗೊಂಡಂತಾಗುವುದಿಲ್ಲ. ಆದುದರಿಂದ ಪ್ರಬುದ್ಧ ಕರ್ಣಾಟಕವನ್ನು ಪುನರ್ ಪರಿಶೀಲಿಸುವ ಹಾಗೂ ಹೊಸ ದೃಷ್ಟಿಕೋನದಿಂದ ನೋಡುವ ಅಗತ್ಯವಿದೆ. ಪ್ರಬುದ್ಧ ಕರ್ಣಾಟಕವು ತನ್ನ ಸಮಕಾಲೀನ ಪರಿಸರದ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯದ ಹಾಗೂ ಪ್ರಮುಖವಾಗಿ ನಾಡುನುಡಿಗಳ ವಿಚಾರಗಳಿಗೆ ಸ್ಪಂದಿಸಿದ ಬಗೆ ಮತ್ತು ಅದಕ್ಕೆ ನೀಡಿದ ಪ್ರತಿಕ್ರಿಯೆಗಳು ಅಧ್ಯಯನದ ದೃಷ್ಟಿಯಿಂದ ಮಹತ್ವವನ್ನು ಪಡೆಯುತ್ತವೆ. ಈ

---

೧. ನಾಯಕ ಹಾ.ಮಾ., (ಸಂ), ಚಿನ್ನದಗರಿ, ೧೯೭೪, ಪು. ೩೫೭.
೨. ನಾಯಕ ಹಾ.ಮಾ., (ಸಂ), ಚಿನ್ನದಗರಿ, ೧೯೭೪, ಪು. ೩೫೭.
೩. ನಾಯಕ ಹಾ.ಮಾ., ತಿಪ್ಪೇರುದ್ರಸ್ವಾಮಿ.ಹೆಚ್(ಸಂ), ಎ.ಆರ್.ಕೃ. ಜೀವನ–ಸಾಧನೆ, ೧೯೭೧, ಪು. ೧೯.

ದೃಷ್ಟಿಯಿಂದ ಅದರ ಸಮಕಾಲೀನ ಸಮಾಜದ ಪರಿಸರದ ಬಗ್ಗೆ ಸೂಕ್ಷ್ಮವಾಗಿ ಗಮನಿಸುವುದು ಅಗತ್ಯವಾಗುತ್ತದೆ.

೨೦ನೆಯ ಶತಮಾನದ ಆರಂಭದಲ್ಲಿ ಸಮಾಜವು ಹೊಸತನದ ಕಡೆಗೆ ಹೆಜ್ಜೆಯನ್ನಿರಿಸಲು ಪ್ರಾರಂಭಿಸಿತ್ತು. ಹೊಸ ಹೊಸ ವಸ್ತುಗಳ ಅವಿಷ್ಕಾರ ಹಾಗೂ ಹೊಸ ಹೊಸ ಆಲೋಚನೆಗಳಿಂದ ಎಲ್ಲ ರಂಗಗಳಲ್ಲಿ ಹೊಸತನ ಮೂಡತೊಡಗಿತ್ತು. ರಾಜಕೀಯ, ಸಾಮಾಜಿಕ, ಸಾಹಿತ್ಯಕ ಬದಲಾವಣೆಗಳ ಹುಡುಕಾಟ ಆರಂಭವಾಗಿತ್ತು. ಇದಕ್ಕೆ ಪೂರಕವಾಗಿ ಮೈಸೂರು ಪ್ರಾಂತ್ಯದಲ್ಲಿ ಮೈಸೂರು ಅರಸರು ಸಮಾಜಕ್ಕೆ ಅನೇಕ ಬಗೆಯ ಅನುಕೂಲತೆಗಳನ್ನು ಒದಗಿಸಿಕೊಟ್ಟಿದ್ದರು. ಅಧ್ಯಯನ ಅವಧಿಯನ್ನು ಗಮನದಲ್ಲಿರಿಸಿಕೊಂಡು ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಕಾಲವನ್ನಷ್ಟೇ ಪರಿಗಣಿಸಿದರೆ ಅದು ಮೈಸೂರು ಸಂಸ್ಥಾನಕ್ಕೆ ಮಾದರಿ ಸಂಸ್ಥಾನವೆಂಬ ಹಿರಿಮೆಯನ್ನು ಗಳಿಸಿಕೊಟ್ಟ ಅವಧಿ. ಈ ಅವಧಿ ಭಾರತೀಯ ಸ್ವಾತಂತ್ರ್ಯದ ಕಲ್ಪನೆ ರೂಪುಗೊಳ್ಳುತ್ತಿದ್ದ ಕಾಲ ಘಟ್ಟ. ನಾಲ್ವಡಿ ಕೃಷ್ಣರಾಜ ಒಡೆಯರು ೧೯೦೨ರಲ್ಲಿ ಅಧಿಕಾರವಹಿಸಿಕೊಂಡ ನಂತರ ಅವರು ಕರ್ಣಾಟಕ ಪ್ರಾಂತ್ಯಗಳೆಲ್ಲಡೆ ಪ್ರವಾಸ ಮಾಡಿ ಪ್ರಜೆಗಳಿಗೆ ಅಗತ್ಯವೇನು ಎಂಬುದನ್ನು ಅರಿತುಕೊಂಡಿದ್ದರು. ಪ್ರಜೆಗಳಿಗೆ ಎಲ್ಲಾ ರೀತಿಯ ಸಹಾಯ ಮಾಡಬೇಕೆಂಬ ಉತ್ಕಟ ಅಭಿಲಾಷೆಯನ್ನು ಹೊಂದಿದ್ದ ಇವರ ಕಾಲದಲ್ಲಿಯೇ ಮೈಸೂರು ನಾನಾ ವಿಧವಾದ ಸವಲತ್ತುಗಳನ್ನು ಪಡೆದುಕೊಂಡಿತ್ತು.

೧೯೦೫ರಲ್ಲಿ ಬೆಂಗಳೂರಿಗೆ, ೧೯೦೬ರಲ್ಲಿ ಮೈಸೂರಿಗೆ ವಿದ್ಯುದ್ದೀಪಗಳು ಬಂದುವು. ಸಹಕಾರ ಸಂಘಗಳ ರೆಗ್ಯುಲೇಷನ್, ಸಾರ್ವಜನಿಕ ಆರೋಗ್ಯ ಇಲಾಖೆ, ಪಶುವೈದ್ಯ ಇಲಾಖೆ, ಉತ್ತಮವಾದ ಸಾರಿಗೆ ಸಂಪರ್ಕ, ನ್ಯಾಯವಿಧೇಯಕ ಸಭೆಗಳು ಪ್ರಾರಂಭಗೊಂಡವು ಸಂಸ್ಥಾನದ ಕಾನೂನು ರಚನೆಯ ಕಾರ್ಯದಲ್ಲಿ ಅಧಿಕಾರಿಗಳು ಹಾಗೂ ಸಾರ್ವಜನಿಕ ಪ್ರತಿನಿಧಿಗಳು ಪಾಲ್ಗೊಳ್ಳುವಂತೆ ಮಾಡುವ ದೃಷ್ಟಿಯಿಂದ ಪ್ರಜಾಪ್ರತಿನಿಧಿ ಸಭೆಯ ರಚನೆಯಾಯಿತು. ಪ್ರಜಾಪ್ರತಿನಿಧಿ ಸಭೆಯ ಚುನಾವಣೆಯಲ್ಲಿ ಸ್ತ್ರೀಯರಿಗೂ ಮತದಾನದ ಹಕ್ಕು ಲಭಿಸಿತು. ಸರ್.ಎಂ.ವಿಶ್ವೇಶ್ವರಯ್ಯನವರ ಆಸೆಯ ಪರಿಣಾಮವಾಗಿ ಅನೇಕ ಯೋಜನೆಗಳು ಕಾರ್ಯರೂಪಕ್ಕೆ ಬಂದುವು. ಇವರಿಬ್ಬರ ನೇತೃತ್ವದಲ್ಲಿ ಮೈಸೂರು ಸರ್ವತೋಮುಖ ಪ್ರಗತಿ ಹೊಂದಿತು. ದೇವಸ್ಥಾನಗಳಿಗೆ ದೇವದಾಸಿಯರನ್ನು ಬಿಡುತ್ತಿದ್ದ ಅನಿಷ್ಟ ಪದ್ಧತಿಯು ಹಿಂದಕ್ಕೆ ಸರಿಯಿತು. ನಾಡಿನ ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ಮೈಸೂರು ಬ್ಯಾಂಕಿನ ಸ್ಥಾಪನೆಯಾಯಿತು.

ರಾಜ್ಯದ ಅಭಿವೃದ್ಧಿಯು ಆ ನಾಡಿನ ವ್ಯವಸಾಯ ಹಾಗೂ ಕೈಗಾರಿಕೆಗಳನ್ನು ಅವಲಂಭಿಸಿದೆ ಎಂಬುದನ್ನು ಅರಿತಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಕೃಷ್ಣರಾಜ ಸಾಗರದಂತಹ ಬೃಹತ್ ನೀರಾವರೀ ಯೋಜನೆಗಳ ಜೊತೆಯಲ್ಲಿ ಅನೇಕ ಸಣ್ಣ

ನೀರಾವರಿ ಯೋಜನೆಗಳನ್ನು ಜಾರಿಗೆ ತಂದು ವ್ಯವಸಾಯಾಭಿವೃದ್ಧಿಗೆ ಭದ್ರಬುನಾದಿ ಹಾಕಿದರು. ಕೈಗಾರಿಕೆಗಳ ಅಭಿವೃದ್ಧಿಗೆ ಮೊದಲ ಹೆಜ್ಜೆಯಾಗಿ ಶಿವನಸಮುದ್ರ ಜಲವಿದ್ಯುತ್ ಯೋಜನೆ, ಭದ್ರಾವತಿ ಕಬ್ಬಿಣದ ಕಾರ್ಖಾನೆ, ಮೈಸೂರಿನ ಗಂಧದೆಣ್ಣೆಯ ಕಾರ್ಖಾನೆ ಪ್ರಾರಂಭಗೊಂಡು ಕೈಗಾರಿಕಾ ಕ್ಷೇತ್ರದಲ್ಲೂ ಮುನ್ನಡೆಯನ್ನು ಸಾಧಿಸಿತು. ನಾಡು ಮುಂದುವರೆಯಬೇಕಾದರೆ ನಾಡಿನ ಭಾಷೆ ಹಾಗೂ ನಾಡಿನ ಜನತೆಯ ಶೈಕ್ಷಣಿಕ ಮಟ್ಟ ಹೆಚ್ಚಾಗಬೇಕೆಂಬ ಆಶಯದೊಡನೆ ಬೆಂಗಳೂರಿನಲ್ಲಿ ೧೯೧೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತು.

ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ ನೀಡುವ ವಿಚಾರದಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದ ನಾಲ್ವಡಿಯವರು ಜನಸಾಮಾನ್ಯರಿಗೂ ವಿದ್ಯೆಯನ್ನು ದೊರಕಿಸಿಕೊಡುವ ದೃಷ್ಟಿಯಿಂದ ೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಿದರು. ಇದೆಲ್ಲದರ ಫಲವಾಗಿ ಜನಗಳ ಬದುಕಿನ ಕ್ರಮದಲ್ಲಿ ವ್ಯತ್ಯಾಸ ಕಾಣಿಸಿಕೊಂಡಿತು. ಜನರೂ ಬದಲಾದ ಸಾಮಾಜಿಕ ಆಗುಹೋಗುಗಳಿಗೆ ಸ್ಪಂದಿಸತೊಡಗಿದರು. ಇದು ಸಮಾಜವನ್ನೆಲ್ಲಾ ಆಕ್ರಮಿಸಿಕೊಂಡಂತೆ ಸಾಹಿತ್ಯವನ್ನು ಆವರಿಸಿಕೊಂಡಿತು.

ಹೊಸ ಶಿಕ್ಷಣ ನೀತಿಯಿಂದಾಗಿ, ಪಸರಿಸಿದ ಜ್ಞಾನದ ಬೆಳಕಿನಿಂದಾಗಿ ಪರಂಪರಾಗತವಾಗಿದ್ದ ವಿಚಾರಗಳೆಲ್ಲವನ್ನೂ ಹೊಸ ದೃಷ್ಟಿಕೋನದಿಂದ ಗಮನಿಸುವ ಪ್ರಕ್ರಿಯೆ ಪ್ರಾರಂಭವಾಗಿತ್ತು. ಕನ್ನಡದ ಬಗ್ಗೆ ಕರ್ನಾಟಕದ ಬಗ್ಗೆ ಚಿಂತಿಸುವ ಚಿಂತಕರು ಕಾಣಿಸಿಕೊಳ್ಳತೊಡಗಿದರು. "ಬೆನಗಲ್ ರಾಮರಾವ್ ಎಂಬ ದಕ್ಷಿಣ ಕನ್ನಡ ಮೂಲದ, ಮದ್ರಾಸ್‌ನಲ್ಲಿ ಸರಕಾರೀ ಅಧಿಕಾರಿಯಾಗಿದ್ದ ವಿದ್ವಾಂಸರು ೧೯೦೩ರಲ್ಲಿ ಒಂದು ಭಾಷಣವನ್ನು ಮಾಡಿ ಕನ್ನಡ ಭಾಷಿಕ ಪ್ರದೇಶಗಳು ಒಂದು ಪ್ರಾಂತವಾಗಿ ರೂಪುಗೊಳ್ಳಬೇಕೆಂದು ಹೇಳಿದರು. ಖ್ಯಾತ ಸ್ವಾತಂತ್ರ್ಯಯೋಧರೂ ಲೋಕಮಾನ್ಯ ಟಿಳಕರ ಜೊತೆಗಾರರೂ ಆಗಿದ್ದ ನ್ಯಾಯಮೂರ್ತಿ ಎಸ್.ಎಸ್.ಸೆಟ್ಲೂರ್ ಅವರು ಇದೇ ರೀತಿ ಒಂದು ಬೇಡಿಕೆಯನ್ನು ಧಾರವಾಡದಲ್ಲಿ ಒಂದು ಉಪನ್ಯಾಸದಲ್ಲಿ ಹೇಳಿದರು(೧೯೦೬).[೧] ಈ ಸಮಯದಲ್ಲಿಯೇ ಕರ್ನಾಟಕದ ವೈಭವವನ್ನು ಸಾರುವ ಕನ್ನಡಿಗರಲ್ಲಿ ಅಭಿಮಾನ ಮೂಡಿಸುವ ಕರ್ಣಾಟಕ ಗತವೈಭವ ಕೃತಿ ಪ್ರಕಟವಾಯಿತು. ಬಿ.ಎಂ.ಶ್ರೀಕಂಠಯ್ಯನವರು ಕನ್ನಡ ಮಾತು ತಲೆ ಎತ್ತುವ ಬಗೆಯನ್ನು ಅರಿತು ೧೯೧೧ರಲ್ಲಿ ಧಾರವಾಡದ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಭಾಷಣ ಮಾಡಿದರು.

ಸಮಾಜದಲ್ಲಿ ನಡೆಯುತ್ತಿದ್ದ ಇಂತಹ ಹಲವಾರು ಘಟನೆಗಳು ಹಾಗೂ ನಾಡಿನ ಪರವಾದ ಚಿಂತನೆಗಳು ಸಾಹಿತ್ಯದ ಮೇಲೆ ಪ್ರಭಾವ ಬೀರಲು

---

೧. ಡಾ. ಸೂರ್ಯನಾಥ ಯು.ಕಾಮತ್, ಕರ್ನಾಟಕ ಏಕೀಕರಣ ಸಿದ್ಧಿ ಮತ್ತು ಸಾಧನೆ, ೨೦೦೩, ಪು. ೨.

ಪ್ರಾರಂಭಿಸಿದ್ದವು. ಹೊಸ ಬಗೆಯ ಸಾಹಿತ್ಯದ ಸೃಷ್ಟಿ, ಗುರಿ, ಉದ್ದೇಶ ಇವುಗಳ ಬಗ್ಗೆ ಚಿಂತನೆ ಪ್ರಾರಂಭವಾಗಿತ್ತು. ಈ ಶತಮಾನದ ಆರಂಭದಲ್ಲಿಯಂತೂ ಈ ಬಗ್ಗೆ ಆಲೋಚಿಸುವುದು ತೀರಾ ಅವಶ್ಯಕವಾಗಿತ್ತು. ಸಾಹಿತ್ಯದ ಗುರಿಯನ್ನು, ಸ್ಪಷ್ಟಪಡಿಸಿ-ಕೊಳ್ಳುವುದು ಜೊತೆಯಲ್ಲಿಯೇ ಆಂಗ್ಲ ಭಾಷೆಯ ಅಧ್ಯಯನದ ಫಲವಾಗಿ ಸಾಹಿತ್ಯದ ವಿವಿಧ ಪ್ರಕಾರಗಳ ಕಡೆ ವಿದ್ಯಾವಂತರ ಆಸಕ್ತಿ ಹರಿಯತೊಡಗಿತ್ತು. ವಿವಿಧ ಸಾಹಿತ್ಯ ಪ್ರಕಾರಗಳ ಸ್ವರೂಪವನ್ನು ನಿರ್ಧಾರ ಮಾಡುವ, ಹೊಸ ರೀತಿಯನ್ನು ಸೃಷ್ಟಿಸಿ ಕೊಡುವ ಪ್ರಯೋಗಗಳು ನಡೆಯುತ್ತಿದ್ದ ಸಮಯವದು. ಇದಕ್ಕೆ ಪೂರಕವಾಗಿ, ಪ್ರೇರಕವಾಗಿ ಜನಗಳ ಆಶೋತ್ತರಗಳನ್ನು ಸಮರ್ಥವಾಗಿ ಪ್ರತಿನಿಧಿಸಬಲ್ಲ ಹಾಗೂ ಪ್ರತಿಧ್ವನಿಸಬಲ್ಲ ವೇದಿಕೆಯೊಂದರ ಅಗತ್ಯವಿದ್ದು ಅದನ್ನು ನೆರವೇರಿಸಿಕೊಟ್ಟ ಪತ್ರಿಕೆಯೇ ಪ್ರಬುದ್ಧ ಕರ್ಣಾಟಕ.

**ಅಧ್ಯಯನದ ಉದ್ದೇಶ**

೨೦ನೆಯ ಶತಮಾನದ ಆರಂಭದ ಕಾಲ ಕನ್ನಡ ಸಾಹಿತ್ಯದ ದೃಷ್ಟಿಯಿಂದ ಒಂದು ರೀತಿಯ ಪರ್ವಕಾಲ. ತನಗೆ ಹಿಂದಿನಿಂದಲೂ ಚೈತನ್ಯವನ್ನು ತುಂಬುತ್ತಾ ಬಂದ ಸಂಸ್ಕೃತವನ್ನು ಕಡೆಗಣಿಸದೆ, ಹೊಸ ದೃಷ್ಟಿಕೋನಕ್ಕೆ ಕಾರಣವಾದ ಆಂಗ್ಲ ಸಾಹಿತ್ಯವನ್ನು ಮರೆಯದೆ ಇವೆರಡರ ಸಾರವನ್ನೂ ಹೀರಿ ಕನ್ನಡವು ಪುಷ್ಟಿಗೊಂಡು ಬೆಳೆದ ಕಾಲ. ಇದೇ ಸಮಯದಲ್ಲಿಯೇ ಬಂಗಾಳಿ ಹಾಗೂ ಮರಾಠೀ ಸಾಹಿತ್ಯಗಳು ಕನ್ನಡದ ಮೇಲೆ ಬೀರಿದ ಪ್ರಭಾವವನ್ನೂ ಮರೆಯುವಂತಿಲ್ಲ. "ಸಾಮಾಜಿಕ ಸುಧಾರಣೆಯ ಒಲವೂ ಭಾರತದ ಸತ್ವ ಸಂಸ್ಕೃತಿಗಳ ಅಧ್ಯಯನದ ಒಲವೂ ಮೊದಲು ಬಲಗೊಂಡಿದ್ದು ಬಂಗಾಳದಲ್ಲಿ ಭಾರತೀಯ ಭಾಷೆಯೊಂದರಲ್ಲಿ ಆಧುನಿಕ ಎನ್ನಬಹುದಾದ ಸಾಹಿತ್ಯ ಮೊದಲು ಸೃಷ್ಟಿಯಾದದ್ದು ಬಂಗಾಳ ಭಾಷೆಯಲ್ಲಿ".[೧] ಅದು ಭಾರತದ ಉಳಿದ ಭಾಷೆಗಳ ಮೇಲೆ ಪ್ರಭಾವ ಬೀರಿದಂತೆ ಕನ್ನಡದ ಮೇಲೂ ಪ್ರಭಾವವನ್ನು ಬೀರಿತ್ತು. ಇನ್ನೊಂದೆಡೆಯಲ್ಲಿ "ಕನ್ನಡಿಗರ ವೈಚಾರಿಕ ಉದ್ಬೋಧದೊಡನೆ ಉದ್ಭಾವನೆಗಳಿಗೆ ಮಹಾರಾಷ್ಟ್ರದ ಬೌದ್ಧಿಕ ತೇಜಸ್ಸೇ ಉದ್ದೀಪಕವಾಯಿತು"[೨] ಕನ್ನಡದ ಬರಹಗಾರರು ಎಲ್ಲ ಭಾಷೆಗಳ ಉತ್ತಮ ವಸ್ತುಗಳನ್ನು ಅನುವಾದ ಮಾಡತೊಡಗಿದರು. ನಾಡಿನ ವಿವಿಧ ಭಾಗಗಳಿಂದ ಹರಿದು ಬರುತ್ತಿದ್ದ ಎಲ್ಲ ಬಗೆಯ ಹೊಸ ಬಗೆಯ ಸಾಹಿತ್ಯ ಆಲೋಚನೆಗಳು ಇಲ್ಲಿ ಸ್ಥಾನ ಪಡೆಯಲು ಆರಂಭಿಸಿತ್ತು. ಹೊಸ ಹೊಸ ರೀತಿಯ ಸಾಹಿತ್ಯ ಪ್ರಕಾರಗಳು ರಚನೆ ಆರಂಭವಾಗಿತ್ತು.

---

೧. ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ೨೦೦೮, ಪು. ೧೩.
೨. ಗೌರೀಶ ಕಾಯ್ಕಿಣಿ (ಸಂ), ಸ್ವಾತಂತ್ರ್ಯೋತ್ತರ ವಿಚಾರಸಾಹಿತ್ಯ, ೧೯೮೨, ಪು. ೭.

ಇದೇ ಸಂದರ್ಭದಲ್ಲಿ ಪ್ರಾರಂಭಗೊಂಡ ಪ್ರಬುದ್ಧ ಕರ್ಣಾಟಕ ಆಧುನಿಕ ಕನ್ನಡದ ಎಲ್ಲ ಸಾಹಿತ್ಯ ಪ್ರಕಾರಗಳಾದ ಭಾವಗೀತೆ, ಸಣ್ಣಕಥೆ, ವಿಮರ್ಶೆಗಳಲ್ಲದೆ ಪ್ರಗಾಥ, ಸುನೀತ, ಅಣಕವಾಡು, ವಚನ, ಕಥನಕವನ, ಪ್ರಬಂಧ, ಗೀತನಾಟಕದಂತಹ ಹೊಸ ರೀತಿಯ ಸಾಹಿತ್ಯ ಪ್ರಕಾರಗಳಿಗೆ ಆದ್ಯತೆ ನೀಡಿದೆ. ವೈಜ್ಞಾನಿಕ ಬರಹಗಳು, ಸಂಶೋಧನ ಬರಹಗಳು. ಕನ್ನಡ ಸಾಹಿತ್ಯ ಚರಿತ್ರೆಯನ್ನು ನಿರ್ಮಾಣಕ್ಕೆ ಸಂಬಂಧಿಸಿದ ಲೇಖನಗಳು ಕವಿಗಳ ಕಾಲ, ದೇಶ, ಕೃತಿ, ಮತ ಇವೇ ಮೊದಲಾದವುಗಳನ್ನು ಪ್ರಕಟಿಸಿ, ಚರ್ಚಿಸಿ, ನಿರ್ಣಯಿಸುವ, ಪ್ರಯತ್ನಗಳನ್ನು ಮಾಡಿದೆ. ವ್ಯಾಕರಣ, ಛಂದಸ್ಸು, ನಾಡಿನ ಚರಿತ್ರೆ, ಇತಿಹಾಸ, ಶಾಸನಗಳ ಅಧ್ಯಯನ, ಪದಗಳ ನಿಷ್ಪತ್ತಿ, ಜನಪದ ಸಾಹಿತ್ಯ, ವಚನ ಸಾಹಿತ್ಯ, ದಾಸ ಸಾಹಿತ್ಯ, ಸಂಪ್ರದಾಯ, ಧಾರ್ಮಿಕ ಆಚರಣೆಗಳಂತಹ ಹಲವಾರು ವಿಚಾರಗಳ ಕಡೆ ಗಮನ ಹರಿಸಿದೆ.

ಮುದ್ರಣ ಯಂತ್ರದ ಬಳಕೆ ಹೆಚ್ಚಾಗುತ್ತಿದ್ದ ಆ ಕಾಲದಲ್ಲಿ ವಿವಿಧ ಲೇಖಕರ ಅಭಿಪ್ರಾಯಗಳನ್ನು ಹೆಚ್ಚು ಹೆಚ್ಚಾಗಿ ಜನಸಾಮಾನ್ಯರಿಗೂ ತಲುಪಿಸಲು ಯತ್ನಿಸಿದೆ. ನಾಡಿನಲ್ಲಿ ಪ್ರಕಟಗೊಳ್ಳುತ್ತಿದ್ದ ಹಲವಾರು ಸಾಹಿತ್ಯಾಂಶಗಳನ್ನು ಹೊಂದಿದ್ದ ಪತ್ರಿಕೆಗಳ ನಡುವೆ ವಿಶೇಷವಾಗಿ, ತನ್ನ ಕಾರ್ಯವೈಖರಿಯಿಂದ, ಪ್ರಕಟಿಸುತ್ತಿದ್ದ ವಿಷಯಗಳ ಪ್ರಬುದ್ಧತೆಯಿಂದ, ಪ್ರಬುದ್ಧ ಕರ್ಣಾಟಕ ವಿಶೇಷ ಪತ್ರಿಕೆಯಾಗಿ ಗುರುತಿಸಲ್ಪಡುತ್ತಿದ್ದು ತನ್ನ ವಿಚಾರಧಾರೆಗಳ ಮೂಲಕ ಹೆಚ್ಚು ಜನರನ್ನು ತಲುಪಲು ಯಶಸ್ವಿಯಾಗಿದೆ. "ಯಾವ ದೇಶದಲ್ಲಿಯೇ ಆಗಲಿ ಮುದ್ರಣವು ಕಾಲಿರಿಸಿದ ಕೆಲವೇ ಕಾಲದಲ್ಲಿ ಆ ದೇಶವು ಪ್ರಗತಿ ಪಥದಲ್ಲಿ ಮುನ್ನಡೆದುದು ಐತಿಹಾಸಿಕವಾಗಿ ಸಿದ್ಧವಾದ ಮಾತು. ಭಾರತದಲ್ಲಿಯೂ ಹಾಗೆಯೇ ಆಯಿತು".[೧] ಕರ್ನಾಟಕವೂ ಇದಕ್ಕೆ ಹೊರತಾಗದೆ ಇಲ್ಲಿಯ ಜನಜೀವನವೂ ಹೊಸ ಆಯಾಮವನ್ನು ಪಡೆಯಿತು. ಅದು ನಮ್ಮ ಶೈಕ್ಷಣಿಕ ಹಾಗೂ ಸಾಹಿತ್ಯ ರಂಗಗಳಲ್ಲಿ ಕ್ರಾಂತಿಯನ್ನು ಉಂಟು ಮಾಡಿತು. ಹೀಗೆ ಬದಲಾಗುತ್ತಿದ್ದ ಸಾಹಿತ್ಯಕ ಸಾಮಾಜಿಕ ಪರಿಸರದಲ್ಲಿ ರಚನೆಗೊಳ್ಳುತ್ತಿದ್ದ ಸಾಹಿತ್ಯ ಸೃಷ್ಟಿಗೆ ಬೆಂಬಲವಾಗಿ ನಿಂತದ್ದು ಪ್ರಬುದ್ಧ ಕರ್ಣಾಟಕ.

ಕಾವ್ಯಗಳಲ್ಲಿನ ಹೊಸ ಛಂದಸ್ಸಿನ ಪ್ರಯೋಗದ ಸಾಧ್ಯಾಸಾಧ್ಯತೆ, ಆಧುನಿಕ ಆಲೋಚನೆ, ಭಾಷಾ ಪ್ರಯೋಗಗಳ ಸಂದರ್ಭಗಳಲ್ಲಿ ಸಮಸ್ಯೆಗಳು ತಲೆದೋರಿದಾಗ ಅವುಗಳನ್ನು ಪರಿಹರಿಸುವುದರ ಕಡೆ ಪ್ರಬುದ್ಧ ಕರ್ಣಾಟಕ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಿದೆ. ಈ ಸಂದರ್ಭದಲ್ಲಿ ಪತ್ರಿಕೆಯು ಸಾಗಿದ ಹಾದಿ, ಸಾಧಿಸಿದ ಗುರಿ ಹಾಗೂ ಅದರ ಆಲೋಚನೆಗಳನ್ನು ಗಮನಿಸಬೇಕಾಗಿದೆ. ನಾಡಿನ ಏಕೀಕರಣದ

---

೧. ಶ್ರೀನಿವಾಸ ಹಾವನೂರ : ಹೊಸಗನ್ನಡ ಅರುಣೋದಯ, ೨೦೦೦, ಪು. ೯-೧೦.

ಹೋರಾಟದ ಸಂದರ್ಭಗಳಲ್ಲಿ, ನಾಡನ್ನು ಕಟ್ಟುವ ಸಂದರ್ಭಗಳಲ್ಲಿ ಅದು ಕಾಲದಿಂದ ಕಾಲಕ್ಕೆ ವ್ಯಕ್ತಪಡಿಸಿದ ಅಭಿಪ್ರಾಯಗಳು ಹಾಗೂ ಅದನ್ನು ಕ್ರೋಡೀಕರಿಸಿ ಪ್ರಚಾರ ಕೊಟ್ಟ ರೀತಿಯು ಗಮನಾರ್ಹ. ಆದರೆ ಪ್ರಬುದ್ಧ ಕರ್ಣಾಟಕದ ಈ ಕಾರ್ಯವನ್ನು ಎಲ್ಲೋ ಕೆಲವು ಬಾರಿ ಬರಹಗಳಲ್ಲಿ ಉಲ್ಲೇಖಿಸಿರುವುದನ್ನು ಬಿಟ್ಟರೆ ಅದಕ್ಕೆ ಸಲ್ಲಬೇಕಾದ ಸ್ಥಾನ ದೊರೆತಿಲ್ಲ. ಪತ್ರಿಕೆಯ ಸಾಹಿತ್ಯೇತರ ಉದ್ದೇಶಗಳನ್ನು ಗುರುತಿಸಿಲ್ಲ. ಪತ್ರಿಕೆಯ ಇಂತಹ ಕೊಡುಗೆಯ ಕಡೆ ಗಮನಹರಿಸಿಯೂ ಇಲ್ಲ.

ಪರಕೀಯರು ಭಾರತದ ಮೇಲೆ ಆಕ್ರಮಣವನ್ನು ನಡೆಸಿ ದೀರ್ಘಕಾಲದ ಆಳ್ವಿಕೆಯನ್ನು ನಡೆಸುತ್ತಿದ್ದ ಕಾಲವದು. ದಾಸ್ಯದ ಕಾರಣದಿಂದಾಗಿ ಕನ್ನಡಿಗರಲ್ಲಿಯೂ ಸ್ವತಂತ್ರ ರಹಿತರಾಗಿದ್ದ ತಾವು ತಲೆ ಎತ್ತಿ ನಿಲ್ಲಬೇಕು, ಸ್ವತಂತ್ರಗಳಿಸಿಕೊಂಡು ಬದುಕಬೇಕು ಎಂಬ ಅರಿವು ನಿಧಾನವಾಗಿ ಜಾಗೃತಗೊಳ್ಳುತ್ತಿದ್ದು, ರಾಷ್ಟ್ರದ ಕಲ್ಪನೆ ಪ್ರಜಾಪ್ರಭುತ್ವದ ವಿಷಯದ ಜ್ಞಾನ, ರಾಷ್ಟ್ರೀಯತೆ, ಸ್ವಾಭಿಮಾನ ವಿಕಸಿತವಾಗುತ್ತಿತ್ತು. ಪ್ರಾಚೀನ ಸಂಸ್ಕೃತಿಯ ಬಗ್ಗೆ ಅಭಿಮಾನ ಆಸಕ್ತಿಗಳು ಕೆರಳತೊಡಗಿದ್ದವು. ಇದೇ ಪರಿಸರದ ಭಾಗವಾಗಿದ್ದ ಕರ್ಣಾಟಕದಲ್ಲಿಯೂ ರಾಷ್ಟ್ರೀಯತೆ ಜಾಗೃತಗೊಂಡಿತ್ತು. ಜಾಗೃತಗೊಂಡ ಈ ಭಾವನೆಯೇ ಕರ್ಣಾಟಕತ್ವದ ಭಾವನೆಯ ಬೆಳವಣಿಗೆಗೆ ಕಾರಣವಾಯಿತು. ಕರ್ಣಾಟಕದ ಪ್ರಾಚೀನ ವೈಭವವನ್ನು ನೆನಪಿಸುವ ಸಂಸ್ಕೃತಿಯನ್ನು ಜ್ಞಾಪಿಸುವ ಪ್ರಯತ್ನಗಳು ನಡೆಯತೊಡಗಿದ್ದವು. ಅಂದಿನ ಅಗತ್ಯವಾಗಿದ್ದ ಈ ಕಾರ್ಯಗಳನ್ನು ನೆರವೇರಿಸುವ ಪ್ರಾಮಾಣಿಕ ಪ್ರಯತ್ನವನ್ನು ಪ್ರಬುದ್ಧ ಕರ್ಣಾಟಕ ಮಾಡಿದೆ.

ಕನ್ನಡ ಮಾತಾಡುವ ಜನಗಳೆಲ್ಲವೂ ಒಂದಾಗಬೇಕು. ಪ್ರಾದೇಶಿಕ ಭಾವನೆಗಳು ಮರೆಯಾಗಬೇಕು, ನಾವೆಲ್ಲರೂ ಒಂದೇ ಎಂಬ ಭಾವನೆ ಮೂಡಬೇಕು. ಹರಿದು ಹಂಚಿ ಹೋಗಿದ್ದ ಕನ್ನಡ ನಾಡು ಒಂದಾಗಬೇಕು ಎಂಬ ಸದುದ್ದೇಶದಿಂದ ಭಾಷಾಭಿಮಾನದ ವಿಚಾರಗಳನ್ನು ಜನರಿಗೆ ತಲುಪಿಸಿ ಅವರನ್ನು ಹೋರಾಟಕ್ಕೆ ಮಾನಸಿಕವಾಗಿ ದೈಹಿಕವಾಗಿ ಸಿದ್ಧಗೊಳಿಸುವ ಪ್ರಯತ್ನಗಳನ್ನು ಹಲವಾರು ಮಹನೀಯರು, ಹಲವಾರು ಸಂಘ ಸಂಸ್ಥೆಗಳು, ಹಲವಾರು ಪತ್ರಿಕೆಗಳು ಕೈಗೊಂಡಿದ್ದವು. ಅಂತಹ ಪತ್ರಿಕೆಗಳಲ್ಲಿ ಪ್ರಮುಖವಾದದ್ದು ಪ್ರಬುದ್ಧ ಕರ್ನಾಟಕ, ಮೈಸೂರು ಅರಸರ ಅಧೀನದ ಸಂಸ್ಥೆಯ ಪತ್ರಿಕೆಯಾದ ಇದರಲ್ಲಿ ಕನ್ನಡ ನಾಡು ಹಾಗೂ ನುಡಿಯ ವಿಚಾರದ ಪ್ರಶ್ನೆ ಎದುರಾದಾಗ ಅದು ತನ್ನ ನಿಲುವನ್ನು ಸ್ಪಷ್ಟಪಡಿಸುತ್ತಾ ಜನಗಳಲ್ಲಿ ಜಾಗೃತಿಯನ್ನು ಉಂಟು ಮಾಡುವ ಪ್ರಯತ್ನಗಳನ್ನು ಮಾಡಿದೆ. ಸದೃಢವಾದ, ಸಾಮಾಜಿಕ ನ್ಯಾಯದ, ಪರಿಕಲ್ಪನೆಯ ಸಮಾಜ ನಿರ್ಮಾಣ ಮಾಡಬೇಕು ಎಂಬ ಆಶಯವನ್ನು ಹೊಂದಿರುವ ಪ್ರಬುದ್ಧ ಕರ್ಣಾಟಕವನ್ನು ಕುರಿತು

ಇದುವರೆವಿಗೆ ವಿಸ್ತೃತವಾದ ಅಧ್ಯಯನ ನಡೆದಿಲ್ಲ. ನವೋದಯ ಸಾಹಿತ್ಯ ನಿರ್ಮಾಣದ ವಿಷಯ ಪ್ರಸ್ತಾಪವಾದಾಗಲೆಲ್ಲಾ 'ಪ್ರಬುದ್ಧ ಕರ್ಣಾಟಕ' ತೋರಿಸಿದ ಕಾಳಜಿ, ನೀಡಿದ ಸಹಕಾರ ಇದರ ವಿಚಾರಗಳು ಪದೇ ಪದೇ ಪ್ರಸ್ತಾಪವಾದರೂ ಅದು ಕೇವಲ ಪ್ರಾಸಾಂಗಿಕವಾಗಿ ಬಂದಿರುವ ಉಲ್ಲೇಖಗಳಾಗಿವೆ, ಅಷ್ಟೇ ಹೊರತು ಈ ಪತ್ರಿಕೆಯನ್ನೇ ಪ್ರಧಾನವಾಗಿ ಇರಿಸಿಕೊಂಡು ಪ್ರಕಟವಾಗಿರುವ ಲೇಖನಗಳು ತೀರಾ ವಿರಳವಾಗಿವೆ.

ಈ ಪತ್ರಿಕೆಯನ್ನು ಕುರಿತಂತೆ ಪ್ರಕಟವಾಗಿರುವ ಲೇಖನಗಳನ್ನು ಗಮನಿಸಿದರೆ, ಪ್ರಬುದ್ಧ ಕರ್ಣಾಟಕಕ್ಕೆ ಇಪ್ಪತ್ತೈದು ವರ್ಷಗಳು ತುಂಬಿದ ಅದರ ಸ್ಥಾಪನಾ ಸಂಸ್ಥಾಪಕರಾದ ಎ.ಆರ್.ಕೃಷ್ಣಶಾಸ್ತ್ರಿಗಳು ಬರೆದಿರುವ ಲೇಖನ ಬಹಳ ಮಹತ್ವ-ಪೂರ್ಣವಾದದ್ದು. ಪ್ರಬುದ್ಧ ಕರ್ಣಾಟಕಕ್ಕೆ ಐವತ್ತು ವರ್ಷಗಳು ತುಂಬಿದ ಸಂದರ್ಭದಲ್ಲಿ ಅದರ ಸಾಧನೆಯ ಹಾದಿಯನ್ನು ಕುರಿತು ಹಾ.ಮಾ.ನಾಯಕರು ಬರೆದಿರುವ ಲೇಖನ, ಎನ್.ಅನಂತರಂಗಾಚಾರ್ ಅವರ ಅಪಾರ ಪರಿಶ್ರಮದಿಂದಾಗಿ ಹೊರಬಂದಿರುವ 'ಪ್ರಬುದ್ಧ ಕರ್ಣಾಟಕ' ಅಕಾರಾದಿ ಕವಿ ಕಾವ್ಯ ಸೂಚಿ ಎಂಬ ಗ್ರಂಥ, ನಿರಂಜನ ವಾನಳ್ಳಿಯವರ 'ಕನ್ನಡದಲ್ಲಿ ಕಲೆ ಸಾಹಿತ್ಯ ಪತ್ರಿಕೆಗಳು' ಎಂಬ ಸಂಶೋಧನ ಪ್ರಬಂಧದಲ್ಲಿ ಪ್ರಾಸಾಂಗಿಕವಾಗಿ ಬಂದಿರುವ ಪ್ರಬುದ್ಧ ಕರ್ಣಾಟಕ ಕುರಿತಾದ ಲೇಖನಗಳನ್ನು ಗಮನಿಸಬಹುದು. ನಿರಂಜನ ವಾನಳ್ಳಿಯವರು ತಮ್ಮ ಸಂಶೋಧನ ಪ್ರಬಂಧದಲ್ಲಿ ಹೇಳುವ ಹಾಗೆ "ಕನ್ನಡ ಕಲೆ ಮತ್ತು ಸಾಹಿತ್ಯ ಸಾಹಿತ್ಯ ಪತ್ರಿಕೆಗಳ ವಿಸ್ತೃತವಾದ ಅಧ್ಯಯನವಂತೂ ಯಾರೂ ತುಳಿಯದ ಹಾದಿಯಾಗಿ ಉಳಿದಿದೆ"[೧] ಎನ್ನುವಂತಹ ಪರಿಸ್ಥಿತಿಯಲ್ಲಿ ಕನ್ನಡ ನಾಡುನುಡಿಯ ಅಭಿವೃದ್ಧಿಗೂ ಸೇವೆ ಸಲ್ಲಿಸಿದ ಇನ್ನೂ ಮಹತ್ವದ ಕೊಡುಗೆ ನೀಡುತ್ತಿರುವ ಇಂತಹ ಪತ್ರಿಕೆಯ ಅಧ್ಯಯನ ಅವಶ್ಯಕವಾಗಿದೆ ಹಾಗೂ ಅಗತ್ಯವಾಗಿದೆ.

**ಅಧ್ಯಯನದ ಸ್ವರೂಪ**

ಕನ್ನಡ ನಾಡು ಹಾಗೂ ನುಡಿಯ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ಣಾಟಕವು ನೀಡಿರುವ ಕೊಡುಗೆಗಳನ್ನು ಹಾಗೂ ಅದರ ಮಹತ್ವವನ್ನು ಗುರುತಿಸುವ ದೃಷ್ಟಿಯಿಂದ ಅಧ್ಯಯನವನ್ನು ಐದು ಅಧ್ಯಾಯಗಳನ್ನಾಗಿ ಮಾಡಿಕೊಳ್ಳಲು ಯೋಚಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಸಂಶೋಧನೆಯ ಉದ್ದೇಶ ವ್ಯಾಪ್ತಿ ಹಾಗೂ ಗುರಿಗಳನ್ನು ನಿಗದಿಪಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯು ಪ್ರಾರಂಭ-ಗೊಂಡ ಸಂದರ್ಭ, ಅದಕ್ಕೆ ಪೂರಕವಾಗಿ ಅದರ ಮಾತೃ ಸಂಸ್ಥೆಯಾದ ಕರ್ಣಾಟಕ

---

೧. ನಿರಂಜನ ವಾನಳ್ಳಿ, ಕನ್ನಡದಲ್ಲಿ ಕಲೆ-ಸಾಹಿತ್ಯ ಪತ್ರಿಕೆಗಳು, ೨೦೦೧, ಪು. ೨೩.

ಸಂಘದ ಕಾರ್ಯಚಟುವಟಿಕೆಗಳನ್ನು ಗುರುತಿಸಲು ಯತ್ನಿಸಿದೆ. ಪ್ರಬುದ್ಧ ಕರ್ಣಾಟಕದ ಪೂರ್ವದಲ್ಲಿದ್ದ ಸಾಹಿತ್ಯಕ ಪತ್ರಿಕೆಗಳು ಹಾಗೂ ಅವುಗಳ ಉದ್ದೇಶ, ಧ್ಯೇಯ, ಆದ್ಯತೆಗಳನ್ನು ಸಂಕ್ಷಿಪ್ತವಾಗಿ ಗಮನಿಸಿ ಇವುಗಳ ನಡುವೆ ಪ್ರಬುದ್ಧ ಕರ್ಣಾಟಕ ಹೇಗೆ ವಿಶಿಷ್ಟ ಪತ್ರಿಕೆಯಾಗಿದೆ ಎಂಬ ಅಂಶದ ಕಡೆ ಗಮನಹರಿಸಿದೆ. ಪ್ರಬುದ್ಧ ಕರ್ಣಾಟಕ ತನ್ನ ಸಮಕಾಲೀನ ಸಾಹಿತ್ಯ ಪತ್ರಿಕೆಗಳ ಬಗೆಗೆ ತೋರಿದ ಕಾಳಜಿ ಅವುಗಳಿಗೆ ನೈತಿಕವಾಗಿ ನೀಡಿದ ಬೆಂಬಲ ತೋರಿದ ಮಾರ್ಗದರ್ಶನ ಇವುಗಳ ಬಗ್ಗೆ ಅಧ್ಯಯನ ಅಗತ್ಯವಾಗಿದೆ. ಪತ್ರಿಕೆಯ ಹುಟ್ಟಿನ ಕಾರಣ, ಪತ್ರಿಕೆಯ ಹೆಸರು, ಪತ್ರಿಕೆಯ ಮುಖಪುಟ, ಅದರ ವಿಶೇಷ, ಕಾಲದಿಂದ ಕಾಲಕ್ಕೆ ಅದರಲ್ಲಿ ಉಂಟಾದ ಬದಲಾವಣೆ, ಪತ್ರಿಕೆಯ ಕಾಲ, ಅದರಲ್ಲಿ ಪ್ರಕಟವಾಗುತ್ತಿದ್ದ ವಿಭಾಗಗಳು, ಅವುಗಳ ವೈಶಿಷ್ಟ್ಯಗಳನ್ನು ಗುರುತಿಸಲು ಯತ್ನಿಸಲಾಗಿದೆ. ಕಾವ್ಯಾವಲೋಕನ, ವಸ್ತುಕೋಶ, ಸಾದರ ಸ್ವೀಕಾರ ಇವೇ ಮೊದಲಾದ ವಿಭಾಗಗಳ ಮೂಲಕ ಕನ್ನಡ ಹಾಗೂ ಕನ್ನಡಿಗರ ಏಳಿಗೆಯನ್ನು ಸಾಧಿಸಿದ ಬಗ್ಗೆ ವಿವೇಚಿಸಲಾಗಿದೆ. ಪ್ರಮುಖವಾಗಿ ಪತ್ರಿಕೆಯ ಬೆಳವಣಿಗೆಗೆ ಸಹಕರಿಸಿದ ಸಂಪಾದಕರುಗಳ ಸೇವೆಯನ್ನು ಹಾಗೂ ಅವರ ಕಾರ್ಯ ವೈಖರಿಗಳ ಕಡೆ ಗಮನ ಹರಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ, ಕನ್ನಡ ನಾಡು ಇನ್ನೂ ಭೌಗೋಳಿಕವಾಗಿ ಏಕೀಕರಣಗೊಳ್ಳದೇ ಇದ್ದ ಸಂದರ್ಭದಲ್ಲಿಯೇ ಅದರ ಭೌಗೋಳಿಕ ವಿಶಿಷ್ಟತೆಗಳನ್ನು ಗುರುತಿಸುವ, ಕನ್ನಡ ನಾಡಿನ ಐತಿಹಾಸಿಕ ಸ್ಥಳಗಳನ್ನು ಪರಿಚಯಿಸುವ, ಪ್ರಾಕೃತಿಕ ಹಾಗೂ ಪ್ರೇಕ್ಷಣೀಯ ಸ್ಥಳಗಳ ಕಡೆ ಗಮನ ಸೆಳೆಯುವ ಪ್ರಯತ್ನಗಳು ಅಗತ್ಯವಾಗಿತ್ತು. ನಮ್ಮ ನಾಡಿನ ಸಾಂಸ್ಕೃತಿಕ ಜಾನಪದ ಆಚರಣೆಗಳ ಬಗ್ಗೆ ಕನ್ನಡಿಗರಲ್ಲಿ ಆಸಕ್ತಿಯನ್ನು ಕೆರಳಿಸಬೇಕಾಗಿತ್ತು. ಇಂತಹ ಪ್ರಯತ್ನಗಳ ಮೂಲಕ ಕನ್ನಡ ನಾಡಿನ ಏಕೀಕರಣದ ಪ್ರಯತ್ನ ಸಾಗಬೇಕಾಗಿತ್ತು. ಇಂತಹ ಮಹತ್ತರವಾದ ಕಾರ್ಯವನ್ನು ಪ್ರಬುದ್ಧ ಕರ್ಣಾಟಕ ಹೇಗೆ ನಿರ್ವಹಿಸಿದೆ ಎಂಬುದರ ಬಗ್ಗೆ ಗಮನಹರಿಸಲಾಗಿದೆ. ಏಕೀಕರಣ ಪೂರ್ವದಲ್ಲಿ ಕನ್ನಡ ನಾಡಿನ ಪರಿಸ್ಥಿತಿ ಹದಗೆಟ್ಟಿದ್ದು ಕನ್ನಡ ನಾಡಿನ ವಿವಿಧ ಪ್ರಾಂತಗಳ ಜನರು ಮಾನಸಿಕವಾಗಿ ಒಗ್ಗೂಡಬೇಕಾದುದು ಅಗತ್ಯವಾಗಿತ್ತು. ನಾಡಿನ ಬಗ್ಗೆ ಯೋಚಿಸದೆ ತಮ್ಮ ವೈಯಕ್ತಿಕ ಸುಖ ಸಂತೋಷಗಳ ಕಡೆ ಗಮನಹರಿಸಿದ್ದ ಯುವಕರ ಮನಸ್ಸನ್ನು ನಾಡಿನ ಸೇವೆಯ ಕಡೆ ಗಮನ ಸೆಳೆಯಬೇಕಾಗಿತ್ತು. ಕಳೆದುಹೋಗಿದ್ದ ಕನ್ನಡ ನಾಡಿನ ವೈಭವವನ್ನು ಪುನರ್ ಸ್ಥಾಪಿತವಾಗುವುದು ಅವಶ್ಯಕವಾಗಿತ್ತು. ಕನ್ನಡ ನಾಡು ಬೇರೆ ಯಾವುದೇ ನಾಡಿನಷ್ಟೇ ವೈಭವ, ಧರ್ಮ, ಸಾಂಸ್ಕೃತಿಕ ಹಿನ್ನೆಲೆಗಳನ್ನು ಹೊಂದಿದೆ ಎಂಬ ಸ್ವಾಭಿಮಾನವನ್ನು ಬೆಳೆಸಬೇಕಾಗಿತ್ತು. ಇಂತಹ ಪ್ರಯತ್ನಗಳು ನಾಡಿನ ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ರೂಪದಲ್ಲಿ

ನಡೆಯುತ್ತಿತ್ತು. ಇಂತಹ ವಿಷಯಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಬೆಂಬಲವನ್ನು ಕ್ರೋಢೀಕರಿಸುವ ಪ್ರಯತ್ನವನ್ನು ಮಾಡಿದ ಪ್ರಬುದ್ಧ ಕರ್ಣಾಟಕ ಅದಕ್ಕೆ ಹೇಗೆ ಶ್ರಮಿಸಿತು ಎಂಬುದನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಭಾರತವು ಸ್ವಾತಂತ್ರ್ಯವನ್ನು ಗಳಿಸಿದ ನಂತರ ವಿವಿಧ ಭಾಷೆಗಳನ್ನಾಡುವ ಪ್ರಾಂತ್ಯಗಳು ಒಂದಾಗಬೇಕು ಎಂಬ ಒತ್ತಡ ಹೆಚ್ಚಾಗಿತ್ತು. ರಾಷ್ಟ್ರದ ವಿವಿಧ ಭಾಗಗಳಲ್ಲಿ ಭಾಷೆಯ ಆಧಾರದ ಮೇಲೆ ಪ್ರಾಂತಗಳ ರಚನೆಯಾಗತೊಡಗಿದ್ದವು. ಈ ಸಂದರ್ಭದಲ್ಲಿ ಅದರ ಸಾಧಕ ಭಾದಕಗಳನ್ನು ಅರಿಯಲು ಕೇಂದ್ರ ಸರ್ಕಾರವು ಕೆಲವು ಸಮಿತಿಗಳನ್ನು ನೇಮಿಸಿತ್ತು. ಆ ಸಮಿತಿಗಳ ವರದಿಗಳ ಆಧಾರದ ಮೇಲೆ ಪ್ರಾಂತಗಳ ರಚನೆಯಾಗತೊಡಗಿದ್ದವು. ಈ ರೀತಿ ನೇಮಕಗೊಂಡ ಸಮಿತಿಗಳು ನಮ್ಮ ಪ್ರಾಂತ್ಯಕ್ಕೂ ಭೇಟಿ ನೀಡಿದ್ದವು. ಇವುಗಳಲ್ಲಿ ಕೆಲವು ಕನ್ನಡಿಗರ ಆಸೆ ಅಭಿಪ್ರಾಯ–ಗಳಿಗೆ ನೋವಾಗುವ ಹಾಗೆ ವರದಿಗಳನ್ನು ನೀಡಿದ್ದವು. ಕನ್ನಡ ನಾಡು ಒಂದಾಗಬೇಕಾದ ಸಮಯದಲ್ಲಿ ಇಂತಹ ವರದಿಗಳು ಕನ್ನಡಿಗರಲ್ಲಿ ನಿರಾಸೆಯನ್ನು ಮೂಡಿಸಿದ್ದವು. ಇಂತಹ ಸಂದರ್ಭದಲ್ಲಿ ವರದಿಗಳಲ್ಲಿರುವ ವಿಚಾರಗಳ ಸತ್ಯಾಸತ್ಯತೆಯನ್ನು ಪರಿಶೀಲಿಸಿ, ಚರ್ಚಿಸಿ ಕನ್ನಡಿಗರಲ್ಲಿ ಹುರುಪು ಮೂಡಿಸುವ ಪ್ರಯತ್ನ ಆಗಬೇಕಿತ್ತು. ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿನ ಪ್ರಬುದ್ಧ ಕರ್ಣಾಟಕ ಅದಕ್ಕೆ ಪ್ರತಿಕ್ರಿಯಿಸಿದ ರೀತಿ ಹಾಗೂ ಬೆಂಬಲವನ್ನು ಕ್ರೋಢೀಕರಿಸಲು ತೋರಿದ ಬದ್ಧತೆ ಇವುಗಳನ್ನು ಗುರುತಿಸಲು ಯತ್ನಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ, ಕನ್ನಡ ನುಡಿಯ ಅಭಿವೃದ್ಧಿಗಾಗಿ ಪ್ರಬುದ್ಧ ಕರ್ಣಾಟಕ ಶ್ರಮಿಸಿದ ಬಗೆಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡ ನುಡಿಯ ಅಭಿವೃದ್ಧಿ ಎಂದಾಗ ಅದು ಕನ್ನಡ ಭಾಷೆ ಹಾಗೂ ಕನ್ನಡ ಸಾಹಿತ್ಯ ಎಂಬ ಎರಡು ಅಂಶಗಳನ್ನು ಒಳಗೊಂಡಿದೆ. ಕನ್ನಡ ಭಾಷೆ ದಕ್ಷಿಣ ಭಾರತದ ಪ್ರಮುಖ ಭಾಷೆಗಳಲ್ಲಿ ಒಂದಾಗಿದ್ದು ಅದು ತನ್ನದೇ ಆದ ಪ್ರಾಚೀನತೆ, ವಿಶಿಷ್ಟತೆ, ಪರಂಪರೆಯನ್ನು ಹೊಂದಿದೆ. ಕನ್ನಡ ಭಾಷೆ ಪುರಾತನವಾಗಿದ್ದು ಅದಕ್ಕೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ಇಂದು ಈ ವಿಷಯಗಳು ಸಾಮಾನ್ಯವಾದ ವಿಚಾರವಾಗಿದ್ದು ಸಾಮಾನ್ಯವಾದ ಸಂಗತಿ ಎನ್ನಿಸಬಹುದಾದರೂ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಇದು ಕುತೂಹಲಕರವಾದ ವಿಚಾರವಾಗಿದ್ದು ಇದರ ಬಗ್ಗೆ ಸಂಶೋಧನ ಕಾರ್ಯಗಳು ಸಾಗುತ್ತಿದ್ದವು. ಕನ್ನಡ ಭಾಷೆಯ ಪ್ರಾಚೀನತೆಯನ್ನು ಖಚಿತಪಡಿಸುವ ಕಾರ್ಯಗಳು ಆಗಬೇಕಾಗಿತ್ತು. ಇಂತಹ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕವು ಕನ್ನಡ ಭಾಷೆಯ ಪ್ರಾಚೀನತೆಯನ್ನು ಹಾಗೂ ಅದರ ವಿಶಿಷ್ಟತೆಯನ್ನು ಗುರುತಿಸುವುದರ ಮೂಲಕ ಉಳಿದ ಭಾಷೆಗಳ ಸಾಲಿನಲ್ಲಿ ಅದಕ್ಕೆ ಪ್ರಮುಖವಾದ

ಸ್ಥಾನ ದೊರಕಿಸಿಕೊಡುವುದಕ್ಕಾಗಿ ಹೇಗೆ ಶ್ರಮಿಸಿತು ಎಂಬುದನ್ನು ಗಮನಿಸಿದೆ. ಕನ್ನಡ ಭಾಷೆ ನಾನಾ ಮುಖವಾಗಿ ಬೆಳವಣಿಗೆಯನ್ನು ಸಾಧಿಸಬೇಕು ಪ್ರಪಂಚದ ಎಲ್ಲ ಬಗೆಯ ಜ್ಞಾನಗಳು ಕನ್ನಡಿಗರಿಗೆ ದಕ್ಕಬೇಕು ಎಂಬ ಆಶಯವನ್ನು ಹೊಂದಿದ್ದ ಪ್ರಬುದ್ಧ ಕರ್ಣಾಟಕ ಅದನ್ನು ನಿಭಾಯಿಸಿದ ಬಗೆಯನ್ನು ಗುರುತಿಸಿದೆ.

ಸಮಾರೋಪ ಅಧ್ಯಾಯದಲ್ಲಿ ಅಧ್ಯಯನದ ಒಟ್ಟಾರೆ ಸ್ವರೂಪವನ್ನು ಹಾಗೂ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಂಡ ಫಲಿತಾಂಶವನ್ನು ಸಂಗ್ರಹಿಸಿ ನೀಡಲು ಯೋಚಿಸಿದೆ.

ಶಿಕ್ಷಣರಂಗದಲ್ಲಿ ಕನ್ನಡ ಭಾಷೆ ಸಂಸ್ಕೃತ, ಇಂಗ್ಲಿಷ್‌ನಂತಹ ಭಾಷೆಗಳ ಜೊತೆ ಪೈಪೋಟಿ ನಡೆಸಬೇಕಾಗಿತ್ತು. ಮಾಧ್ಯಮದ ಭಾಷೆಯಾಗಿ ಕನ್ನಡ ಬಳಕೆಯಾಗಬೇಕು ಎಂಬುದರ ಬಗ್ಗೆ ಚಿಂತನೆ ಮೂಡತೊಡಗಿತ್ತು. ಪ್ರಥಮ ಭಾಷೆಯಾಗಿ ಕನ್ನಡ ಬಳಕೆಗೆ ಬರಬೇಕಾಗಿತ್ತು. ಇಂತಹ ಸಂದರ್ಭದಲ್ಲಿ ಕನ್ನಡಿಗರ ಬುದ್ಧಿ ಭಾವಗಳು ಬೆಳೆಯ ಬೇಕಾದರೆ ಯಾವುದರಿಂದ ಸಾಧ್ಯ ಎಂಬ ವಿಚಾರದ ಕಡೆ ಪ್ರಬುದ್ಧ ಕರ್ಣಾಟಕ ತೋರಿದ ಪ್ರತಿಕ್ರಿಯೆ ಪ್ರಮುಖವಾಗಿದೆ. ಅದು ಕಾಲದಿಂದ ಕಾಲಕ್ಕೆ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾ ಬೆಂಬಲ ಸೂಚಿಸಿದ ಪರಿಯನ್ನು ಗಮನಿಸಲಾಗಿದೆ.

ಕನ್ನಡ ಸಾಹಿತ್ಯ ಅಂದು ನಾನಾ ಬಗೆಯ ಸಾಹಿತ್ಯ ಪ್ರಕಾರಗಳ ಕಡೆ ವಾಲುತ್ತಿತ್ತು. ಹೊಸ ಹೊಸ ವಿಚಾರಗಳು ಆಲೋಚನೆಗಳು ಸಾಹಿತ್ಯದಲ್ಲಿ ಸ್ಥಾನ ಪಡೆಯುತ್ತಿದ್ದವು. ಸಾಹಿತ್ಯ ಪ್ರಕಾರಗಳ ಗುಣ ಲಕ್ಷಣ ಇವುಗಳು ಸ್ಪಷ್ಟವಾಗಿದೆ. ಇದ್ದ ಸಮಯದಲ್ಲಿ ಅದಕ್ಕೆ ನಿರ್ದಿಷ್ಟವಾದ ಸ್ವರೂಪವನ್ನು ಖಚಿತಪಡಿಸುವುದು ಅಗತ್ಯ-ವಾಗಿತ್ತು. ವಿವಿಧ ಸಾಹಿತ್ಯ ಪ್ರಕಾರಗಳು ಸೃಷ್ಟಿಗೆ ವೇದಿಕೆಯೊಂದನ್ನು ಕಲ್ಪಿಸಿಕೊಡು-ವುದರ ಮೂಲಕ ಅವುಗಳ ಬೆಳವಣಿಗೆಗೆ ಸಹಾಯ ಒದಗಿಸಬೇಕಿತ್ತು. ವಿದ್ಯಾವಂತ ತರುಣರ ಅನಿಸಿಕೆ ಆಶಯಗಳಿಗೆ ಅಭಿವ್ಯಕ್ತಿಗೆ ವೇದಿಕೆಯೊಂದರ ಅಗತ್ಯವಿದ್ದು ಪ್ರಬುದ್ಧ ಕರ್ಣಾಟಕ ಅದನ್ನು ನೆರವೇರಿಸಿದ ಬಗೆಯನ್ನು ಚರ್ಚೆಗೆ ಒಳಪಡಿಸಲಾಗಿದೆ. ವೈಜ್ಞಾನಿಕ, ಸಾಮಾಜಿಕ, ಶಾಸ್ತ್ರೀಯ ವಿಷಯಗಳಿಗೆ ಸಂಬಂಧಿಸಿದ ಬರಹಗಳಿಗೆ ಆದ್ಯತೆ ನೀಡಿ ಅವುಗಳನ್ನು ಪ್ರಕಟಿಸಿ ಸಮಗ್ರವಾದ ಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿದ ಪತ್ರಿಕೆಯ ಸ್ಥಾನವನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಈ ಪ್ರಬಂಧದಲ್ಲಿ ಪತ್ರಿಕೆಯಲ್ಲಿ ಪ್ರಕಟಗೊಂಡಿರುವ ಸಾಹಿತ್ಯವನ್ನು ಗಮನಿಸಿ ಅವುಗಳಲ್ಲಿ ವ್ಯಕ್ತವಾಗಿರುವ ನಾಡು-ನುಡಿ ಕುರಿತಾದ ಅನಿಸಿಕೆ ಆಶಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆಯೇ ಹೊರತು ಸಾಹಿತ್ಯ ಬರಹಗಳ ಶೈಲಿ, ತಂತ್ರ, ಪಾತ್ರಚಿತ್ರಣ ಇವುಗಳನ್ನು ಕುರಿತು ವಿಮರ್ಶಾ ದೃಷ್ಟಿಯಾಗಲೀ ಸಾಹಿತ್ಯಾಂಶಗಳನ್ನು ತೂಗಿ ನೋಡಿ ಬೆಲೆ ಕಟ್ಟುವುದಾಗಲೀ ಇಲ್ಲಿ ಉದ್ದೇಶವಾಗಿಲ್ಲ.

ಆದರೆ ಸಾಹಿತ್ಯದ ಸೃಷ್ಟಿಗೆ ಈ ಪತ್ರಿಕೆ ನೀಡಿದ ಬೆಂಬಲ ಅಪೂರ್ವವಾದದ್ದು. ಮೊದಲನೆಯ ಸಂಪುಟದಲ್ಲಿ ೧೨೦ ಪುಟಗಳಷ್ಟಿದ್ದ ಈ ಪತ್ರಿಕೆ ತನ್ನ ಬೆಳ್ಳಿ ಹಬ್ಬದ ಸಂಚಿಕೆಯ ಹೊತ್ತಿಗೆ ೬೪೭ ಪುಟಗಳಷ್ಟು ವಿಸ್ತೃತವಾಗಿದೆ. ಚಿನ್ನದ ಸಂಚಿಕೆಯ ವೇಳೆಗೆ ತನ್ನ ಗಾತ್ರವನ್ನು ಮತ್ತಷ್ಟು ಹೆಚ್ಚಿಸಿಕೊಂಡು ೧೧೨೬ ಪುಟಗಳಷ್ಟಾಗಿದೆ. ಸುಮಾರು ೫೬೦ಕ್ಕಿಂತ ಹೆಚ್ಚಿನ ಬರಹಗಾರರಿಗೆ ವೇದಿಕೆ ಕಲ್ಪಿಸಿಕೊಟ್ಟಿದೆ. ಚಿನ್ನದ ಸಂಚಿಕೆಯಲ್ಲಿ ಹಾ.ಮಾ.ನಾಯಕರು ನೀಡಿರುವ ಪಟ್ಟಿಯು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಗೊಂಡಿರುವ ಸಾಹಿತ್ಯದ ವಿವಿಧ ಕ್ಷೇತ್ರಗಳ ವಿಸ್ತರತೆಯನ್ನು ಪರಿಚಯಿಸುತ್ತದೆ. ಪ್ರಬುದ್ಧ ಕರ್ನಾಟಕವು ಸಾಹಿತ್ಯಕ್ಕೆ ನೀಡಿದ ಆದ್ಯತೆಯನ್ನು ಈ ಪಟ್ಟಿಯ ಮೂಲಕ ಗಮನಿಸಬಹುದು. "ಆವರಣದಲ್ಲಿ ಚಿಹ್ನೆಗಳಲ್ಲಿರುವ ಸಂಖ್ಯೆಗಳಲ್ಲಿ ಮೊದಲನೆಯದು ಬೆಳ್ಳಿ ಸಂಚಿಕೆವರೆಗಿನದು. ಎರಡನೆಯದು ಚಿನ್ನದ ಸಂಚಿಕೆಗಳವರೆಗಿನದು. ಲೇಖಕರು (೨೪೪:೫೬೦) ಸಾಹಿತ್ಯ ಲೇಖನಗಳು (೧೪೩:೫೨೮) ಕವಿತೆಗಳು (೨೯೮:೮೮೪) ನಾಟಕಗಳು (೨೨:೪೯) ಸಣ್ಣ ಕಥೆ, ಪ್ರಬಂಧ (೧೨೫:೨೪೪) ಇತಿಹಾಸ ಲೇಖನಗಳು (೨೦:೪೪) ವಿಜ್ಞಾನ ಇತ್ಯಾದಿ (೮೫:೨೫೦) ವಿಮರ್ಶೆಯಾದ ವಸ್ತುಗಳು ಪತ್ರಿಕೆಗಳು (೩೭೪:೮೫೬) ಚಿತ್ರಗಳೂ (೧೪೦:೨೯೧) ಲೇಖನಗಳಿಂದಾದ ಪುಸ್ತಕಗಳು (೪೭:೭೦) ಕಮ್ಮಟದ ಕಿಡಿಗಳು (೪೭)"[೧] ಇವುಗಳಲ್ಲಿ ಕೆಲವು ಸಂಪೂರ್ಣವಾಗಿ ಸಾಹಿತ್ಯಾಂಶಗಳನ್ನು ಹೊಂದಿದ್ದರೆ ಇನ್ನು ಕೆಲವು ಸಾಹಿತ್ಯದ ಅಂಶಗಳ ಜೊತೆಯಲ್ಲಿಯೇ ಸಾಂದರ್ಭಿಕವಾಗಿ ತನ್ನ ಸಮಕಾಲೀನ ಆಸೆ ಆಶಯಗಳನ್ನು ಪರಿಚಯ ಮಾಡಿಕೊಟ್ಟಿದೆ. ಸಾಮಾಜಿಕ ಕಳಕಳಿ. ಸಮಾಜದ ಸುಧಾರಣಾ ಮನೋಭಾವ, ಆಧುನಿಕ ಚಿಂತನೆ ಇಂತಹ ವಿಷಯಗಳು ಸಾಂದರ್ಭಿಕವಾಗಿ ಬಂದಿದ್ದರೂ ಅವುಗಳ ಬಂದ ಕಾಲಘಟ್ಟ ಹಾಗೂ ಅವುಗಳಲ್ಲಿ ವ್ಯಕ್ತಗೊಂಡಿರುವ ಅಭಿಪ್ರಾಯಗಳು ಮಹತ್ವವನ್ನು ಪಡೆಯುತ್ತವೆ. ಈ ಅಂಶಗಳು ಮೇಲ್ನೋಟಕ್ಕೆ ಗೋಚರಿಸದಿದ್ದರೂ ಅವುಗಳ ಅಂತರಂಗದಲ್ಲಿ ಅಡಗಿರುವ ಈ ಆಶಯಗಳನ್ನೂ ಹೊರತೆಗೆಯುವ ಹಾಗೂ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಕನ್ನಡನಾಡು ನುಡಿಯ ಬೆಳವಣಿಗೆಗೆ ಸಂಬಂಧಿಸಿದ ದಾಖಲೆಗಳನ್ನೂ ಆಧಾರಗಳನ್ನೂ ಸಾಮಾಗ್ರಿಗಳನ್ನು ಈ ಬರಹಗಳಲ್ಲಿ ಗಮನಿಸಿ ಅದರ ಮೂಲಕ ನಾಡು ನುಡಿಯ ಬೆಳವಣಿಗೆಯಲ್ಲಿ ಈ ಪತ್ರಿಕೆ ನಿರ್ವಹಿಸಿದ ಪಾತ್ರವನ್ನೂ ಕುರಿತು ಚರ್ಚೆಗೆ ಒಳಪಡಿಸಲಾಗಿದೆ.

ಈ ಪತ್ರಿಕೆಯ ಬರಹಗಾರರು ಯಾವುದೇ ಒಂದು ಪ್ರದೇಶಕ್ಕೆ ಸೀಮಿತ-ವಾದವರಲ್ಲ. ಅಂದಿನ ವಿವಿಧ ಕನ್ನಡ ಪ್ರದೇಶಗಳ ಜನರ ನಾಡು-ನುಡಿಯ ಬಗೆಗಿನ

---

೧. ಎನ್.ಅನಂತರಂಗಾಚಾರ್(ಸಂ), ೧೯೮೨, ಪ್ರಬುದ್ಧ ಕರ್ನಾಟಕ, ಅಕಾರಾದಿ ಕವಿಕಾವ್ಯಸೂಚಿ, ಪ್ರಸಾರಾಂಗ, ಮೈಸೂರು ಪುಟ. ii.

ಆಸಕ್ತಿ, ಅನಿಸಿಕೆ, ಅಭಿಮಾನ, ಅಭಿಪ್ರಾಯಗಳನ್ನು ಗ್ರಹಿಸುವ ಸಂದರ್ಭದಲ್ಲಿ ಈ ಪತ್ರಿಕೆಯ ಅಧ್ಯಯನ ಪ್ರಮುಖವಾಗುತ್ತದೆ. ಈ ಪತ್ರಿಕೆಯ ಬರಹಗಾರರ ವ್ಯಾಪ್ತಿ ವಿಶಾಲವಾದದ್ದು. ಗುಣ, ಸ್ವಭಾವ, ವಯಸ್ಸು, ಅನುಭವ ಜಾತಿ, ಆಸಕ್ತಿ ಇವುಗಳೆಲ್ಲದರಲ್ಲಿ ವೈವಿಧ್ಯತೆ ಪಡೆದಿದ್ದ ಬರಹಗಾರರ ಸಮೂಹವೇ ಇಲ್ಲಿದ್ದು ಯಾವುದೇ ವಿಚಾರಗಳಿಗೆ ಸಂಬಂಧಿಸಿದಂತೆ ನಾಡಿನ ಸಮಗ್ರ ದೃಷ್ಟಿಕೋನ ಇಲ್ಲಿ ಲಭ್ಯವಾಗುತ್ತದೆ. ಇದರಿಂದ ಅಂದಿನ ಸಮಾಜದ ನಿಲುವು ಆಸೆ ಆಶೋತ್ತರಗಳನ್ನೂ ವಿವಿಧ ನೆಲೆಯಿಂದ ಗ್ರಹಿಸಲು ಸಾಧ್ಯವಾಗುತ್ತದೆ. ಆಧುನಿಕ ಬದುಕನ್ನೂ ರೂಪಿಸಿಕೊಳ್ಳಲು ಅವಶ್ಯಕವಾದ ವಿಚಾರಗಳನ್ನು ಪರಿಚಯಿಸುವಲ್ಲಿ ಬದಲಾದ ಪರಿಸರದ ಪ್ರಯೋಜನಗಳನ್ನು ನಾಡಿನ ಜನತೆಗೆ ದೊರಕಿಸಿ ಕೊಡುವುದರಲ್ಲಿ ಪ್ರಬುದ್ಧ ಕರ್ಣಾಟಕ ನಿರ್ವಹಿಸಿದ ಪಾತ್ರವನ್ನು ಪರಿಗಣಿಸಬೇಕಾಗಿದೆ. ಪ್ರಬುದ್ಧ ಕರ್ಣಾಟಕದಲ್ಲಿ ಸಾಹಿತ್ಯ ವಿಚಾರಗಳಷ್ಟೇ ಪ್ರಮುಖಸ್ಥಾನ ಗಳಿಸಿಕೊಂಡಿರುವ ಶಾಸ್ತ್ರೀಯ ಹಾಗೂ ವೈಜ್ಞಾನಿಕ ವಿಚಾರಗಳೆರಡೂ ಅಧ್ಯಯನದ ವ್ಯಾಪ್ತಿಗೆ ಸೇರಿಲ್ಲ. ವೈಜ್ಞಾನಿಕ ಸಂಶೋಧನೆಗಳು ವೈಜ್ಞಾನಿಕ ಬರಹಗಳು ಅದರಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು, ಅದರ ಒಪ್ಪು ತಪ್ಪುಗಳು, ಸಂಶೋಧನೆಯ ದೃಷ್ಟಿಯಿಂದ ಅದರ ಪ್ರಾಮುಖ್ಯತೆ, ಇವುಗಳ ವಿಮರ್ಶೆ ಅಧ್ಯಯನದ ಮುಖ್ಯ ಉದ್ದೇಶವಾಗಿಲ್ಲ. ಆದರೆ ವೈಜ್ಞಾನಿಕ ಬರಹಗಳೇ ವಿರಳವಾಗಿದ್ದ ಕಾಲದಲ್ಲಿ ಅವುಗಳಿಗೆ ಆದ್ಯತೆ ನೀಡಿ ವಿಜ್ಞಾನದ ಪ್ರಯೋಜನಗಳನ್ನು ಜನಸಾಮಾನ್ಯರಿಗೂ ಮುಟ್ಟಿಸಬೇಕು ಎನ್ನುವ ಪತ್ರಿಕೆಯ ಕಾಳಜಿಯನ್ನು, ವೈಜ್ಞಾನಿಕ ಬರಹಗಳಿಗೆ ಅಗತ್ಯವಾಗಿ ಬೇಕಾಗಿದ್ದ ವೈಜ್ಞಾನಿಕ ಪರಿಭಾಷೆಯನ್ನು ಸೃಷ್ಟಿಸಿಕೊಡುವುದರಲ್ಲಿ ಅದು ತೋರಿದ ಆಸಕ್ತಿಯನ್ನು ಗಮನಿಸಲಾಗಿದೆ. ಶಾಸ್ತ್ರೀಯ ವಿಚಾರಗಳನ್ನು ಸರಳವಾಗಿ ಜನಗಳಿಗೆ ತಲುಪಿಸಿ ಅವರಿಗೆ ಅದರಲ್ಲಿ ಆಸಕ್ತಿ ಅಭಿರುಚಿ ಬೆಳೆಯುವಂತೆ ಮಾಡುವ ಪ್ರಬುದ್ಧ ಕರ್ಣಾಟಕದ ಆಶಯವನ್ನೂ ಗುರುತಿಸುವುದರ ಜೊತೆಯಲ್ಲಿ ಶಾಸ್ತ್ರೀಯ ಹಾಗೂ ವೈಜ್ಞಾನಿಕ ಬರಹಗಳಲ್ಲಿ ಹಣಕ್ಕಿರುವ ಮಾನವೀಯ ಕಾಳಜಿಯನ್ನು ವಿಮರ್ಶೆಗೆ ಒಳಪಡಿಸಲಾಗಿದೆ.

**ಅಧ್ಯಯನ ವ್ಯಾಪ್ತಿ**

ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡಿದ್ದು ೧೯೧೯ರಲ್ಲಿ ಇಲ್ಲಿಯವರೆವಿಗೆ ಸುಮಾರು ತೊಂಭತ್ತು ವರ್ಷಗಳ ಸಮರ್ಪಕವಾದ ಸೇವೆಯನ್ನು ಸಲ್ಲಿಸಿರುವ ಪ್ರಬುದ್ಧ ಕರ್ಣಾಟಕದ ಬೆಳವಣಿಗೆಯನ್ನು ಮೂರು ಹಂತಗಳಲ್ಲಿ ಗುರುತಿಸಬಹುದು. ೧೯೧೯ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಲ್ಲಿ ಪ್ರಾರಂಭಗೊಂಡು ೧೯೩೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಆಡಳಿತ ವ್ಯಾಪ್ತಿಗೆ

ಒಳಪಡುವವರೆಗಿನ ಕಾಲ ಘಟ್ಟ ಮೊದಲನೆಯದು. ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡು ಹಂತ ಹಂತವಾಗಿ ಕನ್ನಡಿಗ ಓದುಗರ ನಡುವೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡ ಕಾಲಘಟ್ಟವಿದು. ಎರಡನೆಯ ಕಾಲ ಘಟ್ಟ ೧೯೩೭ರಿಂದ ೧೯೫೬ರ ವರೆಗಿನ ಅವಧಿ. ಪ್ರಬುದ್ಧ ಕರ್ಣಾಟಕವು ಮೈಸೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಸೇರಿ ಕರ್ನಾಟಕ ಏಕೀಕರಣಗೊಳ್ಳುವವರೆಗಿನ ಕಾಲಘಟ್ಟ ಇದು. ಭಾರತದ ಸ್ವಾತಂತ್ರ ಸಂಗ್ರಾಮದ ವಿಚಾರಗಳನ್ನು, ಕರ್ನಾಟಕ ಏಕೀಕರಣದ ವಿಚಾರಗಳನ್ನು ಅಭಿಪ್ರಾಯಗಳನ್ನು ಒಗ್ಗೂಡಿಸುತ್ತಿದ್ದ ಸಂದರ್ಭವಾಗಿದೆ. ಹರಿದು ಹಂಚಿ ಹೋಗಿದ್ದ ಕನ್ನಡ ನಾಡು ಏಕೀಕರಣಗೊಂಡು ಕನ್ನಡ ರಾಜ್ಯ ಉದಯವಾದ ಕಾಲವಿದು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಜನಗಳೇ ಇಲ್ಲಿಯೂ ಇದ್ದುದರಿಂದ ಪತ್ರಿಕೆಯ ವಿಚಾರಗಳಲ್ಲಿ ಯಾವುದೇ ರೀತಿಯ ಹೊಂದಾಣಿಕೆ, ಬದಲಾವಣೆಗಳು ಈ ಘಟ್ಟದ ಆರಂಭದಲ್ಲಿ ಪ್ರಮುಖವಾಗಿ ಗೋಚರಿಸಲಿಲ್ಲ. ಆದರೆ ನಂತರ ದಿನಗಳಲ್ಲಿ ಸ್ಥಾನಪತಿಗಳ ಇಚ್ಛೆಯ ಹಾದಿಯನ್ನು ತುಳಿಯಬೇಕಾದ ಅನಿವಾರ್ಯತೆ ಪತ್ರಿಕೆಗೆ ಉಂಟಾದುದನ್ನು ಗಮನಿಸಬಹುದು.

೧೯೫೬ರ ನಂತರದ ಕಾಲ ಘಟ್ಟ ಮೂರನೆಯದು. ಈ ಅಧ್ಯಯನದ ಸಂದರ್ಭದಲ್ಲಿ ಮೊದಲ ಎರಡು ಘಟ್ಟದ ಅವಧಿಯನ್ನು ಎಂದರೆ ೧೯೧೯ರಿಂದ ೧೯೫೬ರ ವರೆಗಿನ ಪ್ರಬುದ್ಧ ಕರ್ಣಾಟಕಗಳನ್ನು ಅಧ್ಯಯನಕ್ಕೆ ಗುರಿಪಡಿಸಲಾಗಿದೆ. ರಾಜ್ಯದಲ್ಲಿ, ರಾಷ್ಟ್ರದಲ್ಲಿ ಹಲವು ಬಗೆಯ ಚಳುವಳಿ ಹೋರಾಟಗಳು ನಡೆದ ಈ ಕಾಲದಲ್ಲಿ ವಿಶ್ವವಿದ್ಯಾನಿಲಯದ ಪತ್ರಿಕೆಯಾದ ಪ್ರಬುದ್ಧ ಕರ್ನಾಟಕ ತನ್ನ ಆರಂಭದ ಆಶಯವಾಗಿದ್ದ ಶುದ್ದ ಸಾಹಿತ್ಯ ಪತ್ರಿಕೆಯಾಗಿಯೇ ಉಳಿಯಲು ಸಾಧ್ಯವಾಯಿತೆ? ತನ್ನ ಸುತ್ತಮುತ್ತಲಿನ ಘಟನೆಗಳ ಬಗ್ಗೆ ಅದು ನೀಡಿದ ಪ್ರತಿಕ್ರಿಯೆ ಎಂತಹುದು? ಸಾಹಿತ್ಯ ಪತ್ರಿಕೆಯಾಗಿ ಹೆಸರನ್ನು ಉಳಿಸಿಕೊಂಡು ಅದು ತನ್ನ ನಿಲುವುಗಳನ್ನು ಹೇಗೆ ಪ್ರಕಟಿಸಿತು. ಇವೇ ಮೊದಲಾದ ಅಂಶಗಳನ್ನು ಗುರುತಿಸುವ ಪ್ರಯತ್ನ ಇದುವರೆವಿಗೆ ನಡೆದಿಲ್ಲ. ಈ ಅಂಶಗಳ ಕಡೆ ಗಮನಹರಿಸುವ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದಲ್ಲಿ ವ್ಯಕ್ತವಾಗುತ್ತಿರುವ ರಾಷ್ಟ್ರಭಕ್ತಿ, ಭಾಷಾಪ್ರೇಮ, ನಾಡಿನ ಆದರದಂತಹ ವಿಚಾರಗಳಷ್ಟೇ ಅಧ್ಯಯನದ ವ್ಯಾಪ್ತಿಗೆ ಸೇರಿದೆ.

****

## ಅಧ್ಯಾಯ - ೨

# ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಹುಟ್ಟು ಮತ್ತು ಬೆಳವಣಿಗೆ

**ಪೀಠಿಕೆ**

ಯಾವುದೇ ಪತ್ರಿಕೆಯು ಜನ್ಮ ತಳೆಯುವುದಕ್ಕೆ ಅದರದೇ ಆದ ಒತ್ತಡಗಳಿರುತ್ತವೆ. ನಿರ್ದಿಷ್ಟವಾದ ಗುರಿ ಹಾಗೂ ಉದ್ದೇಶಗಳಿರುತ್ತವೆ. ಪ್ರಬುದ್ಧ ಕರ್ಣಾಟಕ ಪ್ರಾರಂಭವಾಗುವ ವೇಳೆಗೆ ಕನ್ನಡದಲ್ಲಿ ಅನೇಕ ಸಾಹಿತ್ಯ ಪರವಾದ ಪತ್ರಿಕೆಗಳಿದ್ದವು. ಅವುಗಳ ಜೊತೆಯಲ್ಲೇ ವಿಭಿನ್ನ ಆಶಯದೊಂದಿಗೆ ಹುಟ್ಟಿದ ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡ ಕಾಲದ ಕನ್ನಡದ ಸ್ಥಿತಿಗತಿಯನ್ನು ಗಮನಿಸಿದಾಗ ಪ್ರಬುದ್ಧ ಕರ್ಣಾಟಕದಂತಹ ಪತ್ರಿಕೆಯ ಮಹತ್ವವನ್ನು ಗುರುತಿಸಲು ಸಾಧ್ಯವಾಗುತ್ತದೆ.

ಪ್ರಾಚೀನ ಕಾಲದಿಂದಲೂ ಕನ್ನಡ ಸಾಹಿತ್ಯವು ಕಾಲದಿಂದ ಕಾಲಕ್ಕೆ ತನ್ನ ಸಾಹಿತ್ಯದ ಸ್ವರೂಪದಲ್ಲಿ ಹೊಸದನ್ನು ಹುಡುಕುತ್ತಾ ಪಡೆಯುತ್ತಾ ಬಂದು ಚಂಪೂ ರಗಳೆ ಷಟ್ಪದಿ ಸಾಂಗತ್ಯ ಇವೇ ಮೊದಲಾದ ಅಭಿವ್ಯಕ್ತಿ ಮಾಧ್ಯಮಗಳಿಗೆ ಸ್ಪಂದಿಸಿದೆ. ಹೀಗೆ ಸಾಗುತ್ತಾ ಬಂದ ಕನ್ನಡ ಸಾಹಿತ್ಯವು ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಹೊಸದೊಂದು ದಿಕ್ಕಿನ ಕಡೆ ಮುಖ ಮಾಡಿತು. ಒಂದು ಭಾಷೆಯನ್ನು ಮಾತಾಡುವ ಜನಗಳು ಒಬ್ಬ ದೊರೆಯ ಆಡಳಿತಕ್ಕೆ ಒಳಪಟ್ಟಿದ್ದು ಅವರ ಭಾಷೆ ಹಾಗೂ ಆಳುವವರ ಬೆಂಬಲ ಹಾಗೂ ಪ್ರೀತಿ ಆ ಭಾಷೆಗೆ ಲಭಿಸಿದರೆ ಅದು ಮತ್ತಷ್ಟು ಪುಷ್ಟವಾಗಿ ಬೆಳೆಯುತ್ತದೆ. ಆದರೆ ಕನ್ನಡಕ್ಕೆ ಅಂದಿನ ಪರಿಸ್ಥಿತಿ ಅನುಕೂಲವಾಗಿರಲಿಲ್ಲ. ಕನ್ನಡ ಭಾಷೆ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ಕನ್ನಡನಾಡು ಬೇರೆ ಬೇರೆ ಆಡಳಿತಗಾರರ ಅಧೀನಕ್ಕೆ ಒಳಪಟ್ಟು ಅವರ ಭಾಷೆಗಳ ಜೊತೆ ಸೆಣಸಾಡಬೇಕಾಗಿತ್ತು.

ಏಕೀಕರಣ ಪೂರ್ವದಲ್ಲಿ ಕನ್ನಡದ ಪ್ರದೇಶಗಳು ೨೦ ವಿಭಿನ್ನ ಆಡಳಿತ ಭಾಗಗಳಲ್ಲಿ ಹರಿದು ಹಂಚಿಹೋಗಿದ್ದವು. ಮೈಸೂರು ಸಂಸ್ಥಾನಕ್ಕೆ ಸೇರಿದ ಪ್ರದೇಶವು ದೊಡ್ಡದಾದ ಕನ್ನಡದ ಭಾಗವಾಗಿತ್ತು. ಉತ್ತರ ಕರ್ಣಾಟಕದ ಒಂದು ಭಾಗ ಹೈದರಾಬಾದ್ ನಿಜಾಮರ ಆಡಳಿತಕ್ಕೆ ಸೇರಿದ್ದರಿಂದ ಅವರ ಭಾಷೆಯಾದ ಉರ್ದುವಿನೊಂದಿಗೆ, ಮತ್ತೊಂದು ಭಾಗ ಮದ್ರಾಸಿನ ಅಧಿಪತ್ಯಕ್ಕೆ ಸೇರಿದ್ದರೂ ಆಂಧ್ರದ ಸಾಮಿಪ್ಯದ ಕಾರಣ ತೆಲುಗಿನೊಂದಿಗೆ, ಮತ್ತೊಂದು ಭಾಗ ಮಹಾರಾಷ್ಟ್ರಕ್ಕೆ ಸಮೀಪವಿದ್ದು ಅಲ್ಲಿ ಮರಾಠಿ ಭಾಷೆಯ ಪ್ರಾಬಲ್ಯವನ್ನು ಎದುರಿಸಬೇಕಾಗಿತ್ತು. ಹಳೆಯ ಮೈಸೂರು ಪ್ರಾಂತ್ಯದಲ್ಲಿ ಕನ್ನಡಕ್ಕೆ ತಕ್ಕಮಟ್ಟಿಗೆ ಪ್ರಾಶಸ್ತ್ಯ ಇತ್ತು. ಆದರೆ ಅದು ಮೈಸೂರು ಅರಸರ ಆಶ್ರಯವನ್ನು ಅವಲಂಬಿಸಿದ್ದರಿಂದ ಅವರ ಆಶಯಗಳಿಗೆ ಸ್ಪಂದಿಸಬೇಕಾಗಿತ್ತು. ಸುಮಾರು ೨೦ಕ್ಕೂ ಹೆಚ್ಚಿನ ಆಡಳಿತ ಘಟಕಗಳೊಳಗೆ

ಕರ್ನಾಟಕವು ಸೇರಿಕೊಂಡಿತ್ತು. (೧) ಮೈಸೂರು, ಮಂಡ್ಯ, ಹಾಸನ, ಚಿತ್ರದುರ್ಗ ಚಿಕ್ಕಮಗಳೂರು, ತುಮಕೂರು, ಕೋಲಾರ, ಶಿವಮೊಗ್ಗ, ಬೆಂಗಳೂರು ಜಿಲ್ಲೆಗಳನ್ನು ಒಳಗೊಂಡ ದೊಡ್ಡ ಭಾಗವಾಗಿತ್ತು. (೨) ಬಳ್ಳಾರಿ, ದಕ್ಷಿಣ ಕನ್ನಡ, ನೀಲಗಿರಿ ಜಿಲ್ಲೆ ಮತ್ತು ಇತರ ತಾಲೂಕು ಇವುಗಳನ್ನು ಒಳಗೊಂಡು ಮದ್ರಾಸು ಪ್ರಾಂತವಾಗಿತ್ತು. (೩) ಮುಂಬೈ ಪ್ರಾಂತ್ಯವು ಉತ್ತರ ಕನ್ನಡ, ಧಾರವಾಡ, ಬಿಜಾಪುರ, ಬೆಳಗಾವಿ ಜಿಲ್ಲೆಗಳನ್ನು ಒಳಗೊಂಡಿತ್ತು. (೪) ಕಂಟೋನ್‌ಮೆಂಟ್ ಕರ್ನಾಟಕವು ಬೆಂಗಳೂರು ಮತ್ತು ಬೆಳಗಾವಿ ಜಿಲ್ಲೆಯ ಕೆಲವು ಭಾಗಗಳು ಬ್ರಿಟಿಷರ ದಂಡು ಪ್ರದೇಶಗಳಾಗಿದ್ದು ಆಂಗ್ಲರ ಕೇಂದ್ರಾಡಳಿತಕ್ಕೆ ಸೇರಿದ್ದವು. (೫) ಕೊಡಗು ಪ್ರತ್ಯೇಕ ಪ್ರಾಂತವಾಗಿದ್ದು ಚೀಫ್ ಕಮೀಷನರ್‌ನ ಆಡಳಿತದಲ್ಲಿತ್ತು. (೬) ಹೈದ್ರಾಬಾದ್ ಕರ್ನಾಟಕದ ಬೀದರ, ಗುಲಬರ್ಗ ಮತ್ತು ರಾಯಚೂರು ಜಿಲ್ಲೆಗಳು ಹೈದರಾಬಾದಿನ ನಿಜಾಮನ ಆಳ್ವಿಕೆಯಲ್ಲಿದ್ದವು. ಇವುಗಳಲ್ಲದೆ (೭) ಮುಧೋಳ (೮) ಜತ್ (೯) ಅಕ್ಕಲಕೋಟೆ (೧೦) ಸೊಂಡೂರು (೧೧) ರಾಮದುರ್ಗ (೧೨) ಸವಣೂರು (೧೩) ಕಾಗಲ (೧೪) ಮಿರಜ (೧೫) ಬುಧಗಾಂವ (೧೬) ಸಾಂಗ್ಲಿ (೧೭) ಕುರದವಾಡ (೧೮) ವಡಗಾಂವ (೧೯) ಜಮಖಂಡಿ (೨೦) ಕೊಲ್ಲಾಪುರದ ಸಂಸ್ಥಾನಗಳು ಆಳ್ವಿಕೆಯನ್ನು ಮಾಡುತ್ತಿದ್ದವು. ಹೀಗಾಗಿ ಕನ್ನಡಕ್ಕೆ ದೊರಕಬೇಕಾದ ಸ್ಥಾನಮಾನಗಳು ದೊರೆತಿರಲಿಲ್ಲ. ಬೇರೆ ಬೇರೆ ಭಾಷಿಕರ ಆಡಳಿತಕ್ಕೆ ಒಳಪಟ್ಟಿದ್ದ ಕನ್ನಡಿಗರು, ಕನ್ನಡ ಭಾಷೆ, ಕನ್ನಡ ಸಾಹಿತ್ಯ ಬೆಳೆಸುವುದರ ಮೂಲಕ ತಮ್ಮ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾಗಿತ್ತು. ಮೈಸೂರು ಅರಸರ ಸಾಹಿತ್ಯ ಪ್ರೇಮ, ವಿದ್ಯಾಪಕ್ಷಪಾತ ಪ್ರೋತ್ಸಾಹ ಹಾಗೂ ಪ್ರೇರಣೆಯಿಂದ ಪ್ರಾಚೀನ ಹಾಗೂ ಅರ್ವಾಚೀನ ಗ್ರಂಥಗಳು ಪ್ರಕಟವಾಗ-ತೊಡಗಿದ್ದರೂ ಅದು ತನ್ನ ಮೊದಲಿನ ರಭಸವನ್ನು ಕಳೆದುಕೊಂಡಿತ್ತು. "ಕನ್ನಡದಲ್ಲಿ ಪ್ರೌಢರಚನೆ ೧೭೦೦ರ ವೇಳೆಗೆ ಚಿಕ್ಕದೇವ ಒಡೆಯರ ಆಡಳಿತದ ಕೊನೆಯ ಹೊತ್ತಿಗೆ ನಿಂತೇಹೋಗಿತ್ತು. ಅಲ್ಲಿಂದ ಮುಂದೆ ದೌರ್ಬಲ್ಯ, ಅನಾದರತೆ, ಅನ್ಯಾಕ್ರಮಣ ಮೊದಲಾದವು ರಾಜಕೀಯ ಪ್ರಪಂಚದಲ್ಲಿ ಕಾಣಿಸಿಕೊಂಡಂತೆಯೇ ಸಾಹಿತ್ಯ ಪ್ರಪಂಚದಲ್ಲಿಯೂ ಕಾಣಿಸಿಕೊಂಡಿತ್ತು".[೧]

ಹೊಸ ಬಗೆಯ ಸಾಹಿತ್ಯದ ರಚನೆಗೆ ಅವಶ್ಯಕವಾಗಿದ್ದ ಪರಿಸರವಾಗಲೀ ಸೌಲಭ್ಯಗಳಾಗಲೀ ಸೃಷ್ಟಿಯಾಗಿರಲಿಲ್ಲ. ಬಹುತೇಕ ವಿದ್ಯಾವಂತ ಕನ್ನಡಿಗರಲ್ಲಿ ಕನ್ನಡದ ವಿಚಾರವಾಗಿ, ಕನ್ನಡ ಸಾಹಿತ್ಯದ ವಿಚಾರವಾಗಿ ತಾತ್ಸಾರವಿದ್ದ ಕಾಲವದು. ಇಂಗ್ಲೀಷ್ ಬಲ್ಲ ಕನ್ನಡ ವಿದ್ಯಾವಂತರು ಕನ್ನಡ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದವರನ್ನು ಕಂಡು ಕನಿಕರವನ್ನು ವ್ಯಕ್ತಪಡಿಸುತ್ತಿದ್ದುದೂ ಉಂಟು. ಪದವಿಗಳನ್ನು ಪಡೆದು ದೊಡ್ಡ ದೊಡ್ಡ

---

೧. ಅನಂತನಾರಾಯಣ.ಎಸ್. ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ. ಪು. ೩.

ಹುದ್ದೆಗಳಲ್ಲಿದ್ದ ಕೆಲವರು ಸಾರ್ವಜನಿಕ ಸಭೆಗಳಲ್ಲಿ ಕನ್ನಡದಲ್ಲಿ ಮಾತನಾಡಲೂ ಹಿಂಜರಿಯುತ್ತಿದ್ದರು. ಬಿ.ಎಂ.ಶ್ರೀಕಂಠಯ್ಯನವರಂಥ ಕನ್ನಡ ಪರವಾಗಿದ್ದವರನ್ನೂ ಕಾಡುತ್ತಿದ್ದ ಸಮಸ್ಯೆಯದು. ಇತ್ತ ಇಂಗ್ಲಿಷನ್ನೂ ಸಂಪೂರ್ಣವಾಗಿ ಅಪ್ಪಿಕೊಳ್ಳಲಾರದೆ ಅದನ್ನು ಬಿಟ್ಟು ಕನ್ನಡದ ಪರವಾಗಿಯೂ ಇರಲಾರದೆ ದ್ವಂದ್ವ ಹಾಗೂ ಗೊಂದಲಗಳನ್ನು ಅನುಭವಿಸುತ್ತಿದ್ದರು. "ಕರ್ಣಾಟಕ ಸಂಘದವರೂ ಇತರರೂ ಕನ್ನಡದಲ್ಲಿ ಮಾತನಾಡಲು ಕೇಳಿದರೆ ಶ್ರೀಕಂಠಯ್ಯನವರು ಇಂಗ್ಲೀಷಿನಲ್ಲಿ ಬೇಕಾದರೆ ಮಾತನಾಡುತ್ತೇನೆ ಎಂದು ಹೇಳಿದುದು ಈಗಿನ್ನೂ ಆಕ್ಷೇಪಕವಾಗಿ ವ್ಯಂಗ್ಯ ಪ್ರತೀಕವಾಗಿ ನಿಂತಿದೆ"[೧] ಎಂಬುದು ವಿ.ಸೀತಾರಾಮಯ್ಯನವರ ಹೇಳಿಕೆ.

ನಂತರ ದಿನಗಳಲ್ಲಿ ಗಾಂಧೀಜಿಯವರ ಪ್ರಭಾವ ಸಮಾಜದಲ್ಲಿ ಹೊಸ ಚೈತನ್ಯವನ್ನು ಹುಟ್ಟು ಹಾಕಿತು. ಪರಕೀಯರ ಆಕ್ರಮಣದಿಂದ ತತ್ತರಿಸಿ ಹೋಗಿದ್ದ ಜನರ ಮುಂದೆ ಬೇರೆ ಬೇರೆ ದೇಶಗಳ ಜನರಂತೆ ತಾವೂ ಸ್ವಾತಂತ್ರ್ಯ ಪಡೆಯಬೇಕೆಂಬ ಆಸೆ ಚಿಗುರತೊಡಗಿತ್ತು. ತಮ್ಮ ತಾಯಿ ನಾಡು, ತಾಯಿ ನುಡಿ ಯಾವುದರಲ್ಲೂ ಯಾರಿಗೂ ಕಡಿಮೆಯಿಲ್ಲ ಅದಕ್ಕೂ ತನ್ನದೇ ಆದ ಚಾರಿತ್ರಿಕ ಹಿನ್ನೆಲೆ ವೈಭವ ಪರಂಪರೆ ಇದೆ. ಅದರಲ್ಲಿ ಹೊಸ ಹೊಸ ಸಾಹಿತ್ಯವನ್ನು ಸೃಷ್ಟಿಸುವ ಮೂಲಕ ತಮ್ಮ ಸ್ವಂತಿಕೆಯನ್ನು ಮೆರೆಯಬೇಕೆಂಬ ಉತ್ಸಾಹ ಗರಿ ಕೆದರತೊಡಗಿತ್ತು. ಭಾರತದಲ್ಲಿ ಗಾಂಧಿ ಯುಗದ ಆರಂಭದ ಕಾಲವದು. ಸ್ವಭಾಷೆ ಸ್ವಧರ್ಮ, ಸ್ವದೇಶ ಘೋಷಣೆಯ ವಿಚಾರದಲ್ಲಿ ಗಾಂಧೀಜಿಯವರ ಆಂದೋಲನದ ಫಲವಾಗಿ ಒಂದು ಬಗೆಯ ಹೊಸ ಹುರುಪು ಹುಟ್ಟಿತ್ತು. ತಮ್ಮ ಭಾಷೆ ಹಾಗೂ ನುಡಿಯ ಬಗ್ಗೆ ತೋರುವ ಒಲವು ಸ್ವಾತಂತ್ರ್ಯದ ಹೋರಾಟಕ್ಕೆ ನೀಡುವ ಸಹಕಾರ ಎಂಬುದು ಯುವ ಪೀಳಿಗೆಯ ಭಾವನೆಯಾಗಿತ್ತು. ಭಾರತದ ಇತರ ಭಾಗಗಳಂತೆಯೇ ಕರ್ನಾಟಕದಲ್ಲೂ ಸಾಹಿತ್ಯದ ಬಗ್ಗೆ ತೀವ್ರವಾದ ಅಭಿರುಚಿ ಇಲ್ಲದವರಿಗೂ ಭಾಷೆಯ ಬಗ್ಗೆ ಆಸಕ್ತಿ ಮೂಡತೊಡಗಿತ್ತು. ಕನ್ನಡ ಮಾತಾಡುವ ಜನರಿರುವ ನಾನಾ ಭಾಗಗಳಲ್ಲಿ ಕನ್ನಡ ನಾಡಿನ ಅಭ್ಯುದಯಕ್ಕಾಗಿ ಕನ್ನಡ ನಾಡಿನ ಸಮಗ್ರ ಬೆಳವಣಿಗೆಗಾಗಿ ಪ್ರಯತ್ನಗಳು ಸಾಗುತ್ತಿದ್ದವು. ಅದನ್ನು ಹೇಗೆ ಸಾಧಿಸಿಕೊಳ್ಳಬೇಕು ಎಂಬುದರ ಬಗ್ಗೆ ಸ್ಪಷ್ಟವಾದ ರೂಪು ತಿಳಿಯದಿದ್ದರೂ ಅದಕ್ಕಾಗಿ ಹಾತೊರೆಯುತ್ತಿದ್ದ ಹಲವಾರು ಹೃದಯಗಳು ಅದನ್ನು ಸಾಧಿಸಿಕೊಳ್ಳಲು ತವಕಿಸುತ್ತಿದ್ದವು. ಇದಕ್ಕೋಸ್ಕರ ಅನೇಕ ಮಹನೀಯರು ತಮ್ಮ ಆಸಕ್ತಿ ಅಭಿರುಚಿಗೆ ತಕ್ಕಂತೆ ಭಿನ್ನ ಭಿನ್ನವಾದ ಪ್ರಯತ್ನಗಳನ್ನು ಮಾಡುತ್ತಿದ್ದರು. ಕನ್ನಡ ಪರವಾದ ಸಂಘ ಸಂಸ್ಥೆಗಳನ್ನು ಪ್ರಾರಂಭಿಸಿ ಯುವಕರನ್ನು ಸಂಘಟಿಸಿ ಕನ್ನಡದ ಕೆಲಸಕ್ಕಾಗಿ ಪ್ರಚೋದಿಸುತ್ತಿದ್ದರು.

---

೧. ವಿ.ಸಿ., ಮುನ್ನುಡಿ, ಶ್ರೀ ಸಾಹಿತ್ಯ, ೧೯೮೩, ಪು. ೧೧.

೧೮೯೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ರಾ.ಹ.ದೇಶಪಾಂಡೆ-ಯವರು ಪ್ರಾರಂಭಿಸಿದರು. ಕರ್ನಾಟಕ ಇತಿಹಾಸ ಸಂಸ್ಕೃತಿಯನ್ನು ಪುನರುಜ್ಜೀವನ-ಗೊಳಿಸುವ ಮೂಲಕ ಕನ್ನಡಿಗರಲ್ಲಿ ರಾಷ್ಟ್ರೀಯತೆ ಮತ್ತು ಕನ್ನಡಾಭಿಮಾನವನ್ನು ಉದ್ದೀಪನಗೊಳಿಸುವುದು. ಈ ಸಂಘದ ಉದ್ದೇಶವಾಗಿತ್ತು. ೧೯೧೪ರಲ್ಲಿ ಆಲೂರು ವೆಂಕಟರಾಯರಿಂದ ಪ್ರಾರಂಭವಾದ ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ, ಮಹಾರಾಜ ನಾಲ್ಮಡಿ ಕೃಷ್ಣರಾಜ ಒಡೆಯರ್ ಮತ್ತು ವಿಶ್ವೇಶ್ವರಯ್ಯನವರ ಪ್ರೋತ್ಸಾಹದಿಂದ ೧೯೧೫ರಲ್ಲಿ ಆರಂಭವಾದ ಕನ್ನಡ ಸಾಹಿತ್ಯ ಪರಿಷತ್ತು, ೧೯೧೬ರಲ್ಲಿ ಧಾರವಾಡದಲ್ಲಿ ಸ್ಥಾಪನೆಯಾದ ಕರ್ನಾಟಕ ಸಭಾ, ೧೯೧೮ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಪ್ರಾರಂಭವಾದ ಕರ್ನಾಟಕ ಸಂಘ ಇದೇ ಸಂದರ್ಭದಲ್ಲಿ ಧಾರವಾಡದಲ್ಲಿ ಸ್ಥಾಪನೆಗೊಂಡ ಗೆಳೆಯರ ಬಳಗ ಹೀಗೆ ಕರ್ನಾಟಕದ ವಿವಿಧ ಭಾಗಗಳಲ್ಲಿ ಹಲವಾರು ಸಂಘಟನೆಗಳು ಕನ್ನಡ ಪರವಾದ ಭಾವನೆಯನ್ನು ಉದ್ದೀಪನಗೊಳಿಸುವ ಕಾರ್ಯದಲ್ಲಿ ತೊಡಗಿದ್ದವು. ರಾಜಕೀಯ ಕಾರಣಗಳಿಂದ ಚೂರು ಚೂರಾಗಿದ್ದ ಕರ್ನಾಟಕದ ಎಲ್ಲ ಭಾಗಗಳೂ ಒಂದುಗೂಡಬೇಕೆಂಬ ಜನಾಭಿಪ್ರಾಯ ಗಟ್ಟಿಗೊಳ್ಳುತ್ತಿತ್ತು. ಈ ಕಲ್ಪನೆಯು ಮೂಲತಃ ಒಂದು ಆಂದೋಲನವಾಗಿ ರೂಪುಗೊಳ್ಳಲು ಕಾರಣರಾದವರು ಬುದ್ಧಿ ಜೀವಿಗಳು, ಕವಿಗಳು, ಲೇಖಕರು, ಪತ್ರಕರ್ತರು ಮೊದಲಾದವರು. ಕನ್ನಡಿಗರಲ್ಲಿ ಏಕೀಕರಣದ ಭಾವನೆಗಳನ್ನು ಸಾಕಾರಗೊಳಿಸುವಲ್ಲಿ ಛಿದ್ರವಾಗಿದ್ದ ಕನ್ನಡಿಗರನ್ನು ಒಂದುಗೂಡಿಸಲು ಎಲ್ಲರ ಸಹಕಾರ ಅಗತ್ಯ ಎಂಬುದನ್ನು ಅರಿತಿದ್ದ ಚಿಂತನಶೀಲರು ಅದನ್ನು ಪಡೆಯಲು ಪ್ರಯತ್ನಿಸಿದರು. ಜನತೆಯಲ್ಲಿ ಜಾಗೃತಿಯನ್ನು ಉಂಟುಮಾಡಲು ತಮ್ಮ ಲೇಖನ, ಕಾವ್ಯ, ಇತಿಹಾಸ, ಗ್ರಂಥಗಳಿಂದ ಕರ್ನಾಟಕ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಅನಾವರಣ-ಗೊಳಿಸಿದರು.

ಕನ್ನಡಿಗರು ಒಂದುಗೂಡದೆ, ಕರ್ನಾಟಕ ಏಕೀಕರಣವಾಗದೆ ಕನ್ನಡಕ್ಕೆ ಪ್ರಗತಿ ಇಲ್ಲವೆಂದು ತಿಳಿದಿದ್ದ ಆಲೂರು ವೆಂಕಟರಾಯರು, ಕಡಪ ರಾಘವೇಂದ್ರರಾಯ-ರಂತಹ ಹಿರಿಯರು ಕರ್ನಾಟಕ ಏಕೀಕರಣಕ್ಕಾಗಿ ತಮ್ಮ ಶಕ್ತಿಯನ್ನು ವಿನಿಯೋಗಿಸು-ತ್ತಿದ್ದರು. ಕನ್ನಡದ ಸಂಘ ಸಂಸ್ಥೆಗಳು ನಾಡ ಹಬ್ಬಗಳನ್ನು ಉತ್ಸವಗಳನ್ನು ಏರ್ಪಡಿಸಿ ಜನಗಳಲ್ಲಿ ಜಾಗೃತಿ ಮೂಡಿಸುವ ಕಾರ್ಯ ಮಾಡಿದವು. ಎಚ್.ಎಸ್.ಪಾರ್ವತಿ ಅವರು ಗುರುತಿಸುವ ಹಾಗೆ "ವಿದ್ಯಾರಣ್ಯ ಉತ್ಸವ, ವಿಜಯನಗರ ಉತ್ಸವ, ಬಸವೇಶ್ವರ ಉತ್ಸವ, ನಿಜಗುಣ ಶಿವಯೋಗಿಗಳ ಉತ್ಸವ, ಕುಮಾರವ್ಯಾಸ ಉತ್ಸವ, ಪಂಪ ಉತ್ಸವ, ಇವೇ ಮುಂತಾದವುಗಳು ಕರ್ನಾಟಕವನ್ನು ಬಲಪಡಿಸಲು ಕೈಗೊಂಡ

ಉತ್ಸವಗಳು"[೧] ಎಂಬುದು ಗಮನಿಸಬಹುದಾದ ಅಂಶ. ಇಂತಹ ಉತ್ಸವಗಳು ಕೇವಲ ವಿದ್ಯಾವಂತರನ್ನು ಮಾತ್ರವಲ್ಲದೆ ಜನ ಸಾಮಾನ್ಯರ ದೃಷ್ಟಿಯೂ ಕನ್ನಡದ ಕಡೆ ಹರಿಯುವಂತೆ ಮಾಡಿದವು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವಂತೂ ಇನ್ನೂ ಒಂದು ಹೆಜ್ಜೆ ಮುಂದಕ್ಕೆ ಇರಿಸಿ ವಿಶ್ವವಿದ್ಯಾಲಯದ ಆವರಣದಿಂದ ಜನಸಾಮಾನ್ಯರ ಬಳಿಗೆ ಕನ್ನಡವನ್ನು ಕರೆದೊಯ್ಯಲು ಇಂತಹ ಕಾರ್ಯಕ್ರಮಗಳನ್ನು ಹೆಚ್ಚು ಹೆಚ್ಚಾಗಿ ಆಯೋಜಿಸಿತು. ಸಂಘವು ಕೈಗೊಂಡ ಕಾರ್ಯಕ್ರಮಗಳು ಕೇವಲ ಒಂದು ಪ್ರದೇಶಕ್ಕೆ ಸೀಮಿತವಾಗದೆ ನಾಡಿನಾದ್ಯಂತ ಹರಡಬೇಕೆಂಬ ಸದುದ್ದೇಶದಿಂದ ಆ ವಿಚಾರಗಳನ್ನು ಪ್ರಕಟಿಸಿತು. ಇದಕ್ಕಾಗಿ ಅದು ಆರಿಸಿಕೊಂಡಿದ್ದು ಪತ್ರಿಕೆಯ ಮಾಧ್ಯಮವನ್ನು, ಆ ಪತ್ರಿಕೆಯೇ ಪ್ರಬುದ್ಧ ಕರ್ಣಾಟಕ.

ಯಾವುದೇ ಚಳುವಳಿ ಅಥವಾ ಆಂದೋಲನದ ಯಶಸ್ಸು, ಜನತೆ ವಹಿಸುವ ಪಾತ್ರದ ಮೇಲೆ ಅವಲಂಬಿಸಿರುತ್ತದೆ. ಎಷ್ಟರ ಮಟ್ಟಿಗೆ ಜನಗಳು ಪಾಲ್ಗೊಳ್ಳುವರೋ ಅಷ್ಟು ಬೇಗ ಯಶಸ್ಸು ಲಭ್ಯವಾಗುತ್ತದೆ. ಇದಕ್ಕೆ ಬೇಕಾಗಿರುವುದು ಜನರಲ್ಲಿ ಉಂಟಾಗಬೇಕಾದ ಜಾಗೃತಿ. ಈ ಜಾಗೃತಿ ಅಥವಾ ಪ್ರಜ್ಞೆ ಮೂಡಿಸುವಲ್ಲಿ ಪತ್ರಿಕೆಗಳ ಪಾತ್ರ ಮಹತ್ತರವಾದುದಾಗಿದೆ. ಸ್ವಾತಂತ್ರ ಸಂಗ್ರಾಮದಲ್ಲಿ ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಅವುಗಳು ಪ್ರಮುಖ ಪಾತ್ರವನ್ನು ವಹಿಸಿದ್ದವು. ವಿವಿಧ ಆಡಳಿತ ಘಟಕಗಳಲ್ಲಿ ಹಂಚಿಹೋಗಿದ್ದ ಕನ್ನಡಿಗರು ಅನ್ಯ ಭಾಷೀಯರ ಪ್ರಭಾವದಲ್ಲಿ ಸಿಲುಕಿ ತಮ್ಮ ಮಾತೃಭಾಷೆಯನ್ನು ಮರೆಯುವ ಸ್ಥಿತಿಯಲ್ಲಿದ್ದರು. ಅಂತಹ ಸರಿವೇಳೆಯಲ್ಲಿ ಜನ್ಮ ತಾಳಿದ ಪ್ರಬುದ್ಧ ಕರ್ಣಾಟಕ ಜನರಲ್ಲಿ ಜಾಗೃತಿಯನ್ನುಂಟು ಮಾಡಲು ಪ್ರಯತ್ನಿಸಿತು. ಅವರ ಭಾಷಾಭಿಮಾನವನ್ನು ಕೆರಳಿಸಿ ಏಕೀಕರಣದ ಬಗ್ಗೆ ಹುರಿದುಂಬಿಸುವಲ್ಲಿ ಪ್ರಮುಖ ಪಾತ್ರವಹಿಸಿತು. ಕಾಲೇಜಿನ ವಿದ್ಯಾರ್ಥಿಗಳಿಗಾಗಿ ಪ್ರಾರಂಭಗೊಂಡ ಈ ಪತ್ರಿಕೆ ನಂತರದ ದಿನಗಳಲ್ಲಿ ರಾಜ್ಯದ ವಿವೇಕವಂತರ ಗಮನ ಸೆಳೆಯಿತು. ಯಾವುದೇ ಸಮಸ್ಯೆಗಳ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದ ಅಭಿಪ್ರಾಯವೇನಿದೆಯೆಂದು ಕುತೂಹಲದಿಂದ ಎದುರು ನೋಡುವ ಪರಿಪಾಠವೂ ಬೆಳೆಯಿತು.

**ಕರ್ಣಾಟಕ ಸಂಘ:**

೧೯೧೫ರಲ್ಲಿ ಎ.ಆರ್.ಕೃಷ್ಣಶಾಸ್ತ್ರಿಯವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಕನ್ನಡ ಅಧ್ಯಾಪಕರಾಗಿ ಹೋದಾಗ ಅಲ್ಲಿ ಕನ್ನಡಕ್ಕೆ ಪೂರಕವಾದ ಪರಿಸ್ಥಿತಿಯೇನೂ ಇರಲಿಲ್ಲ. ಕನ್ನಡವೆಂದರೆ ಅಲಸ್ಯ ತೋರುತ್ತಿದ್ದ ವಿದ್ಯಾರ್ಥಿಗಳಿಂದ

---

೧. ಸುಜಾತ ಎಚ್.ಎಸ್., ಎಂ.ಎಸ್.ಪುಟ್ಟಣ್ಣ ಒಂದು ಅಧ್ಯಯನ, ೧೯೮೧, ಪು. ೬೦.

ಎ.ಆರ್.ಕೃಷ್ಣಶಾಸ್ತ್ರಿಗಳು ತಮ್ಮಲ್ಲಿರುವ ವಿದ್ವತ್ತು ಹಾಗೂ ಸತ್ವದಿಂದಾಗಿ ಅಭಿಮಾನಗಳಿಸಿಕೊಂಡರು. ವಿದ್ಯಾರ್ಥಿಗಳ ಒಡನಾಟದ ಸಂದರ್ಭದಲ್ಲಿಯೇ ಅವರು ತಮ್ಮ ವಿದ್ಯಾರ್ಥಿಗಳಲ್ಲಿದ್ದ ಸಾಮರ್ಥ್ಯಗಳನ್ನು ಗುರುತಿಸಿ ಅದನ್ನು ಕನ್ನಡದ ಪರ ವಿನಿಯೋಗಿಸಲು ಅನುಕೂಲವಾಗುವಂತೆ ಕರ್ಣಾಟಕ ಸಂಘವನ್ನು ಸ್ಥಾಪಿಸಿಲು ಯೋಚಿಸಿದರು. ಈ ಸಂಘಕ್ಕೆ ಕನ್ನಡ ಸಮಾಜ, ಕರ್ಣಾಟಕ ಸಮಾಜ, ಸಾಹಿತ್ಯ ಸಮಾಜ ಇವೇ ಮೊದಲಾದ ಹೆಸರುಗಳನ್ನು ಇಡಬಹುದೆಂದು ಚರ್ಚೆಗೆ ಬಂದರೂ ಕೊನೆಗೆ ಉಳಿದ ಹೆಸರು ಕರ್ಣಾಟಕ ಸಂಘ. ಈ ಸಂಘದ ರೂಪುರೇಖೆಗಳು ಇದರ ಕಾರ್ಯವ್ಯಾಪ್ತಿ ಇವುಗಳ ಬಗ್ಗೆ ಸ್ಪಷ್ಟವಾದ ಅಭಿಪ್ರಾಯ ಹೊಂದಿದ್ದ ಎ.ಆರ್.ಕೃಷ್ಣಶಾಸ್ತ್ರಿಗಳಿಗೆ ಬೆಂಬಲವಾಗಿ ನಿಂತವರು ಟಿ.ಎಸ್.ವೆಂಕಣ್ಣಯ್ಯನವರು. ಕರ್ಣಾಟಕ ಸಂಘವು ಪ್ರಾರಂಭವಾದಾಗ ಎ.ಆರ್.ಕೃಷ್ಣಶಾಸ್ತ್ರಿಗಳ ಅಭಿಪ್ರಾಯದಂತೆ ಬಿ.ವೆಂಕಟನಾರಾಯಣಪ್ಪನವರು ಅಧ್ಯಕ್ಷರಾಗಿ, ಎ.ಆರ್.ಕೃಷ್ಣಶಾಸ್ತ್ರಿಗಳು ಉಪಾಧ್ಯಕ್ಷರಾಗಿ, ಹಾಗೂ ವಿದ್ಯಾರ್ಥಿಗಳ ಕಡೆಯಿಂದ ಶ್ರೀ. ಟಿ.ಗುರುರಾಯರು ಕಾರ್ಯದರ್ಶಿಗಳಾಗಿ ನೇಮಕಗೊಂಡರು.

ಯುವಕರಲ್ಲಿ ಕನ್ನಡಾಭಿಮಾನವನ್ನು ಬೆಳೆಸುವ ದೃಷ್ಟಿಯಿಂದ ಈ ಸಂಘವು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕನ್ನಡಕ್ಕಾಗಿ ದುಡಿಯುತ್ತಿದ್ದ ಹಲವಾರು ಮಹನೀಯರನ್ನು ಕರೆಯಿಸಿ ಅವರಿಂದ ಉಪನ್ಯಾಸಗಳನ್ನು ಏರ್ಪಡಿಸಿದೆ. ಕನ್ನಡದ ಸಾಹಿತ್ಯ, ಕನ್ನಡಕ್ಕೆ ಪ್ರೋತ್ಸಾಹ ನೀಡುವಂತಹ ವಿಷಯಗಳ ಬಗ್ಗೆ ರಾಜ್ಯದ ಬೇರೆ ಬೇರೆ ಕರ್ನಾಟಕ ಸಂಘಗಳಲ್ಲಿ ನಡೆದ ಕಾರ್ಯಕ್ರಮಗಳನ್ನು ಪರಿಚಯಿಸಿದೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ನೀಡಿ ತಾನು ಕಾರ್ಯ ಮಾಡುವುದಷ್ಟೇ ಅಲ್ಲದೆ ರಾಜ್ಯಾದ್ಯಾಂತ ಕರ್ನಾಟಕ ಸಂಘಗಳ ಸ್ಥಾಪನೆಗೆ ಸ್ಫೂರ್ತಿಯನ್ನು ನೀಡಿದೆ. ತಾನು ಏರ್ಪಡಿಸುತ್ತಿದ್ದ ಉಪನ್ಯಾಸಗಳು ಸಮಸ್ತ ಕನ್ನಡ ಜನರಿಗೂ ಲಭ್ಯವಾಗಬೇಕೆಂಬ ದೃಷ್ಟಿಯಿಂದ ಅದನ್ನು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಿದೆ. ಕೆಲವೊಂದು ಬಾರಿ ಅವುಗಳನ್ನು ಸ್ವತಂತ್ರ ಕೃತಿಗಳಾಗಿಯೂ ಮುದ್ರಿಸಿ ಉಚಿತವಾಗಿ ತನ್ನ ಸದಸ್ಯರಿಗೆ ಹಂಚಿರುವುದೂ ಉಂಟು. ಡಿ.ವಿ.ಜಿ.ಯವರ 'ನಿವೇದನ' ಶ್ರೀನಿವಾಸರ 'ಬಿನ್ನಹ', ಬಿ.ಎಂ.ಶ್ರೀ. ಅವರ 'ಇಂಗ್ಲೀಷ್ ಗೀತೆಗಳು' ಇವೇ ಮೊದಲಾದ ಕೃತಿಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಕರ್ನಾಟಕ ಸಂಘ ಹಾಗೂ ಅದರ ಜವಾಬ್ದಾರಿ ಹೊತ್ತಿದ್ದ ಪದಾಧಿಕಾರಿಗಳು ವಿದ್ಯಾರ್ಥಿಗಳಲ್ಲಿ ಅರ್ಹತೆ ಇರುವುದನ್ನು ಗಮನಿಸಿ ಅವರನ್ನು ಪ್ರೋತ್ಸಾಹಿಸಿ ಕನ್ನಡಕ್ಕಾಗಿ ದುಡಿಯುವಂತೆ ಪ್ರೇರೇಪಣೆ ನೀಡಿದೆ. ಎಸ್.ವಿ.ಪರಮೇಶಭಟ್ಟರ ಮಾತುಗಳಲ್ಲಿ ಹೇಳಬೇಕಾದರೆ "ಕರ್ಣಾಟಕ ಸಂಘದವರು ಆ ಕಾಲಕ್ಕೆ ಏರ್ಪಡಿಸಿದ್ದ

ಒಂದು ಸ್ಪರ್ಧೆಯಲ್ಲಿ ನನಗೆ ಯಾವ ಬಹುಮಾನವೂ ಬರಲಿಲ್ಲ. ಈ ಸಂಗತಿಯನ್ನು ನೆನೆದು ವೆಂಕಣಯ್ಯನವರು ಸ್ವತಃ ತಾವೇ ಒಂದು ಬಹುಮಾನವನ್ನು ಘೋಷಿಸಿ ತಾವು ಸಂಪಾದಿಸಿದ್ದ ಬಸವರಾಜ ದೇವರ ರಗಳೆಯ ಒಂದು ಪ್ರತಿಯನ್ನು ಬಹುಮಾನವಾಗಿ ಕರ್ನಾಟಕ ಸಂಘದ ವಾರ್ಷಿಕೋತ್ಸವದ ಅಧ್ಯಕ್ಷರಾದ ರಾವ್‌ಬಹಾದ್ದೂರ್, ಆರ್. ನರಸಿಂಹಾಚಾರ್ಯರ ಸ್ವಹಸ್ತದಿಂದ ನನಗೆ ಕೊಡಿಸಿಕೊಟ್ಟರು"[೧] ಎಂದು ಹೇಳಿದ್ದಾರೆ ಮತ್ತು ಹೀಗೆ ದೊರೆತ ನೈತಿಕ ಬೆಂಬಲವು ನಂತರದ ದಿನಗಳಲ್ಲಿ ಸಾಹಿತ್ಯ ರಚನೆಗೆ ಪ್ರೇರಣೆ ಒದಿಗಿಸಿಕೊಟ್ಟಿದ್ದನ್ನು ನೆನಪಿಸಿಕೊಳ್ಳುತ್ತಾರೆ. ಕನ್ನಡಕ್ಕೆ ಪ್ರಯೋಜನವಾಗುತ್ತದೆ ಎಂದು ಮನವರಿಕೆಯಾದರೆ ಹೇಗಾದರೂ ಅವರನ್ನು ಓಲೈಸಿ ಕನ್ನಡ ಕೆಲಸಕ್ಕೆ ತೊಡಗಿಸುವಂತೆ ಈ ಸಂಘ ಪ್ರೇರೇಪಣೆಯನ್ನು ನೀಡಿದೆ.

ವಿದ್ಯಾವಂತರ ನಡುವೆ ಪ್ರಾರಂಭಗೊಂಡ ಈ ಸಂಘ ಕೆಲವೇ ದಿನಗಳಲ್ಲಿ ತನ್ನ ಕಾರ್ಯವ್ಯಾಪ್ತಿಯನ್ನು ವಿಶ್ವವಿದ್ಯಾಲಯವನ್ನೂ ದಾಟಿ ವಿಸ್ತರಿಸಿಕೊಂಡಿತು. ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವು ಕೇವಲ ಆ ಕಾಲೇಜಿನ ವಿದ್ಯಾರ್ಥಿಗಳದ್ದೇ ಎಂಬ ಭಾವನೆ ಮೊದಲಿನಿಂದಲೂ ಬರಲಿಲ್ಲ..... ಸಂಘದ ಉಪನ್ಯಾಸ ಉತ್ಸವಗಳೆಂದರೆ ಬೆಂಗಳೂರಿನ ಪ್ರಮುಖರಿಗೆ ಆಹ್ವಾನ ಹೋಗುತ್ತಿತ್ತು. ಅವರೂ ಅವುಗಳಲ್ಲಿ ಭಾಗಿಗಳಾಗುತ್ತಿದ್ದರು. ಹಾಗಾಗಿ ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡುತ್ತಿದ್ದ ಹಲವಾರು ಹಿರಿಯರ ಬೆಂಬಲವೂ ಈ ಸಂಘಕ್ಕೆ ದೊರೆಯಿತು. ಇದೇ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಪ್ರಾರಂಭವಾಗಿ ಹಲವಾರು ಚಟುವಟಿಕೆಗಳನ್ನು ನಡೆಸುತ್ತಿದ್ದರೂ ಕೆಲವರಿಗೆ ಅದು ತೃಪ್ತಿಯನ್ನು ತಂದಿರಲಿಲ್ಲ. ಕನ್ನಡಕ್ಕಾಗಿ ದುಡಿಯುತ್ತಿದ್ದರೂ ಅವರ ಹೃದಯಗಳು ತಮ್ಮದೇ ಆದ ವೇದಿಕೆಯೊಂದರ ಹುಡುಕಾಟದಲ್ಲಿ ತೊಡಗಿತ್ತು. ಇಂತಹ ಸಂದರ್ಭದಲ್ಲಿ ಎ.ಆರ್.ಕೃಷ್ಣಶಾಸ್ತ್ರಿಗಳು ಡಿ.ವಿ.ಜಿ.ಯಂತಹ ಹಿರಿಯ ಸಾಹಿತಿಗಳನ್ನು ಭೇಟಿಮಾಡಿ "ಪರಿಷತ್ತು ಪ್ರಾರಂಭ ಮಾಡಿದವರು ಎಲ್ಲರೂ ಮುದುಕರು ಪ್ರತಿಷ್ಠಾವಂತರು, ನೀವು ಹೋಗಿ ಅವರ ಜೊತೆ ಸೇರಿಕೊಂಡಿದ್ದೀರಲ್ಲಾ? ಅವರಿಂದ ಏನು ಕೆಲಸ ನಡೆಯುತ್ತದೆ? ಕೆಲಸ ಮಾಡುವವರಿಲ್ಲದೆ ಹೋದರೆ ಪರಿಷತ್ತಿನಿಂದ ಯಾರಿಗೇನು ಪ್ರಯೋಜನ"[೨] ಎಂದು ಹೇಳಿ ತಮ್ಮೊಡನೆ ಕನ್ನಡ ಕೆಲಸಕ್ಕೆ ಬರುವಂತೆ ಆಹ್ವಾನಿಸಿದರು. ಡಿವಿಜಿ ಅವರು ಈ ವಿಚಾರವನ್ನು ಸುಲಭವಾಗಿ ಒಪ್ಪದೆ ಈ ವಿಚಾರಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಅವರ ಉದ್ದೇಶ ಧ್ಯೇಯ ಧೋರಣೆ ಇವುಗಳನ್ನು ತಿಳಿದುಕೊಂಡು ಕನ್ನಡಕ್ಕಾಗಿ ಕಾರ್ಯನಿರ್ವಹಿಸಲು ಇದು

---

೧. ಕುವೆಂಪು(ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೧೦೧-೧೦೨.
೨. ಕುವೆಂಪು(ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೧೧.

ಸೂಕ್ತ ವೇದಿಕೆ ಎಂಬುದನ್ನು ಅರಿತುಕೊಂಡು ಎ.ಆರ್.ಕೃಷ್ಣಶಾಸ್ತ್ರಿಗಳ ಜೊತೆ ಸಹಕರಿಸಲು ಒಪ್ಪಿಗೆ ಸೂಚಿಸಿದರಂತೆ. ಹೀಗೆ ಕನ್ನಡ ಪರವಾಗಿರುವವರನ್ನು ಗುರುತಿಸಿ ಒಂದೆಡೆಗೆ ಅವರನ್ನು ಕರೆತಂದು ಅವರೆಲ್ಲರ ಸಹಕಾರದೊಂದಿಗೆ ಈ ಸಂಘ ಬೆಳವಣಿಗೆಯನ್ನು ಸಾಧಿಸಿದೆ.

ಈ ಬೆಳವಣಿಗೆಯ ಸಂದರ್ಭದಲ್ಲಿ ಇದು ಕನ್ನಡ ಸಾಹಿತ್ಯ ಪರಿಷತ್ತಿಗೆ ಪ್ರತಿಸ್ಪರ್ಧಿಯಾಗಿ ಬೆಳೆಯದೆ ಅದರ ಸದುದ್ದೇಶಗಳಿಗೆ ಪೂರಕವಾಗಿ ನಿಂತು ಅಭಿವೃದ್ಧಿಯನ್ನು ಸಾಧಿಸಿದೆ. ೧೯೧೮ರಲ್ಲಿ ಆರಂಭಗೊಂಡ ಈ ಸಂಘ ಬಲುಬೇಗನೆ ಜನಪ್ರಿಯತೆಗಳಿಸಿಕೊಂಡಿತು. ಆಗ ಮೈಸೂರಿನಲ್ಲಿ ಇದ್ದುದು ಎರಡೇ ಕಾಲೇಜು. ಒಂದು ಮೈಸೂರಿನ ಮಹಾರಾಜ ಕಾಲೇಜು, ಇನ್ನೊಂದು ಬೆಂಗಳೂರಿನ ಸೆಂಟ್ರಲ್ ಕಾಲೇಜು. "ಆಗ ಮಹಾರಾಜರ ಮಹಾ ಜನತೆಗೂ ಕಾಲೇಜಿಗೂ ಕಾಲೇಜು ಅಧ್ಯಾಪಕರಿಗಳಿಗೂ ಅಂತರ ಅಪಾರ. ಸಾಮಾನ್ಯ ಜನರು ಕಾಲೇಜು ವಾತಾವರಣದಲ್ಲಿ ಸಂಚರಿಸಲೂ ಹಿಂದೆ ಮುಂದೆ ನೋಡುತ್ತಿದ್ದರು. ಈ ಕಾಲ್ಪನಿಕ ಭ್ರಾಂತಿಯನ್ನು ಹೋಗಲಾಡಿಸಿ ಅಡ್ಡಿ ಆತಂಕಗಳನ್ನು ನಿವಾರಿಸಿ ಸಾಮಾನ್ಯ ಜನರೊಂದಿಗೆ ಸಹೃದಯ ಸಂಪರ್ಕ ಬೆಳೆಸಿದ ಕೀರ್ತಿ ಅಂದಿನ ಕರ್ಣಾಟಕ ಸಂಘ ಹಾಗೂ ಪ್ರಬುದ್ಧ ಕರ್ಣಾಟಕಕ್ಕೆ ಸೇರಿದ್ದು".[೧] ಹೀಗೆ ಜನಗಳ ಪ್ರೀತಿ, ವಿದ್ಯಾರ್ಥಿಗಳ ಸಹಕಾರ ಇವುಗಳಿಂದ ಬೆಳೆದ ಸಂಘವು ಪ್ರಬುದ್ಧ ಕರ್ಣಾಟಕವನ್ನು ಪ್ರಾರಂಭಿಸಿತು. ಪ್ರಬುದ್ಧ ಕರ್ಣಾಟಕದ ಬೆಳವಣಿಗೆಗೆ ಕರ್ಣಾಟಕ ಸಂಘದ ಸಹಕಾರ ದೊರೆತಿರಿವಂತೆಯೇ ಕರ್ಣಾಟಕ ಸಂಘದ ಎಲ್ಲ ಚಟುವಟಿಕೆಗಳಿಗೆ ಬೆಂಬಲವಾಗಿ ನಿಂತಿದ್ದು ಪ್ರಬುದ್ಧ ಕರ್ಣಾಟಕ.

**ಪ್ರಬುದ್ಧ ಕರ್ಣಾಟಕದ ಪೂರ್ವದ ಕೆಲವು ಸಾಹಿತ್ಯ ಪತ್ರಿಕೆಗಳು**

ಎ.ಆರ್.ಕೃಷ್ಣಶಾಸ್ತ್ರಿಗಳು ನಾಡು ನುಡಿಗಾಗಿ ಪತ್ರಿಕೆಯೊಂದನ್ನು ಪ್ರಾರಂಭಿಸುವ ಮೊದಲು ಮಾಸ್ತಿಯನ್ನು ಭೇಟಿ ಮಾಡಿ ಚರ್ಚಿಸಿದಾಗ ಸ್ವಲ್ಪ ನಿಧಾನವಾಗಿ ಮಾಡುವುದು ಒಳ್ಳೆಯದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಕಳೆದ ಶತಮಾನದ ಆರಂಭದಲ್ಲಿ, ಪತ್ರಿಕೆಯೊಂದನ್ನು ಪ್ರಾರಂಭಿಸುವುದು. ಅದರಲ್ಲೂ ಸಾಹಿತ್ಯದ ಪತ್ರಿಕೆಯನ್ನು ಹೊರ ತರುವುದು ಸಾಹಸದ ಕಾರ್ಯವೇ ಆಗಿತ್ತು. ಈ ವೇಳೆಗೆ ಹಲವಾರು ಪತ್ರಿಕೆಗಳು ಸಾಹಿತ್ಯಕ್ಕಾಗಿ ಪ್ರಾರಂಭಗೊಂಡಿದ್ದರೂ ಅಲ್ಪಾಯುಷಿಗಳಾಗಿ ಅಂತ್ಯವನ್ನು ಕಂಡಿದ್ದವು. ಸಾಹಿತ್ಯ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿ ವಿಫಲರಾದವರ ಉದಾಹರಣೆಗಳು ಅವರ ಕಣ್ಣೆದುರೇ ಇದ್ದವು. ೧೮೪೩ರಲ್ಲಿ ಮಂಗಳೂರು

೧. ಕುವೆಂಪು(ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೨೧೯.

ಸಮಾಚಾರ ಎಂಬ ಪತ್ರಿಕೆಯಿಂದ ಪ್ರಾರಂಭಗೊಂಡ ಕನ್ನಡ ಪತ್ರಿಕೆಯ ಪ್ರಕಟಣೆ ನಂತರದ ದಿನಗಳಲ್ಲಿ ನಿಧಾನವಾಗಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಭಿನ್ನ ಭಿನ್ನವಾದ ಪತ್ರಿಕೆಗಳ ಪ್ರಕಟಣೆಯೊಂದಿಗೆ ಅಭಿವೃದ್ಧಿ ಪಡೆಯಿತು.

ಆರಂಭದ ಹಂತದಲ್ಲಿ ಬಂದ ಪತ್ರಿಕೆಗಳಲ್ಲಿ ಕ್ರೈಸ್ತ ಮಿಶನರಿಗಳ ವಿಚಾರಗಳು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಸ್ತಾಪಗೊಂಡಿವೆ. ಹೊಸ ಮಾಧ್ಯಮಗಳನ್ನು ಬಳಸಿ ಜ್ಞಾನ ಪ್ರಸಾರ ಮಾಡಬಹುದೆಂಬ ಆಶಯ ಇವುಗಳಲ್ಲಿ ಗೋಚರ-ವಾಗುವುದಾದರೂ ಕಲೆಯ ಮಾಧ್ಯಮಕ್ಕೇ ಮೀಸಲಾದ ಪತ್ರಿಕೆಗಳನ್ನು ಪ್ರಕಟಿಸ-ಬಹುದೆಂಬ ಆಲೋಚನೆ ಯಾರಿಗೂ ಹೊಳೆದಂತೆ ತೋರುವುದಿಲ್ಲ. ಆದರೆ ಸಾಹಿತ್ಯ ವೇದಿಕೆಯಾಗಿ ಪತ್ರಿಕೆಯನ್ನು ಬಳಸಿಕೊಳ್ಳುವ ಪರಿಪಾಠವಿದ್ದು ಇವುಗಳು ನಂತರ ಬಂದ ಸಾಹಿತ್ಯ ಪತ್ರಿಕೆಗಳಿಗೆ ಸದೃಢವಾದ ಬುನಾದಿಯನ್ನು ಹಾಕಿಕೊಟ್ಟಿವೆ.

ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಪತ್ರಿಕೆಗಳ ಪಾತ್ರ ಪ್ರಮುಖವಾದದ್ದು. ದಿನಪತ್ರಿಕೆ ಹಾಗೂ ನಿಯತಕಾಲಿಕೆಗಳು, ಸಾಮಾನ್ಯ ಆಸಕ್ತಿಯ ಪತ್ರಿಕೆಗಳೇ ಆಗಿದ್ದರೂ ಅವುಗಳು ಸಣ್ಣ ಕಥೆ, ಕಾವ್ಯ, ಪ್ರಬಂಧ, ವಿಮರ್ಶೆ, ಹಾಸ್ಯ ಬರಹ, ಮೊದಲಾದವು-ಗಳನ್ನು ಆರಂಭದಿಂದಲೂ ಪ್ರಕಟಿಸುತ್ತಾ ಬಂದಿವೆ. ನವ ಪ್ರಕಾಶನಗಳ ಪಟ್ಟಿ ಪ್ರಕಟಿಸುವುದು, ಸಾಹಿತ್ಯ ಸ್ಪರ್ಧೆಗಳನ್ನು ಏರ್ಪಡಿಸಿ ಹೊಸ ಬರಹಗಾರರಿಗೆ ವೇದಿಕೆ ಕಲ್ಪಿಸುವುದು, ಪುಸ್ತಕಗಳ ಸಮೀಕ್ಷೆ ವಿಮರ್ಶೆಗಳನ್ನು ವಿಮರ್ಶಕರಿಂದ ಮಾಡಿಸುವುದು ಹೀಗೆ ವಿವಿಧ ರೀತಿಯ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸುವ ಕೆಲಸಗಳನ್ನು ಸಾಮಾನ್ಯ ಪತ್ರಿಕೆಗಳು ಮಾಡಿದರೆ, ಸಾಹಿತ್ಯಕ್ಕಾಗಿಯೇ ಕೆಲವು ನಿಯತಕಾಲಿಕೆಗಳು ಪ್ರಾರಂಭಗೊಂಡಿರುವುದು ಉಂಟು. ೧೮೫೯ರಲ್ಲಿ 'ಮೈಸೂರು ವೃತ್ತಾಂತ ಭೋಧಿನಿ' ಎಂಬ ಪತ್ರಿಕೆ ಪ್ರಾರಂಭವಾಗಿತ್ತು. ೧೮೬೫ರಲ್ಲಿ ಕರ್ನಾಟಕ ಪ್ರಕಾಶಕ ಆರಂಭವಾಗಿತ್ತು. ಇದರಲ್ಲಿ ಕನ್ನಡ ಹಾಗೂ ಇಂಗ್ಲಿಷ್ ಎರಡೂ ಭಾಷೆಯ ಲೇಖನಗಳು ಪ್ರಕಟ-ವಾಗುತ್ತಿದ್ದವು. ಮೈಸೂರಿಗರ ಹಿತಕ್ಕಾಗಿ ಈ ಪತ್ರಿಕೆ ಹೋರಾಡಿತು. ರಾಜ್ಯಾಡಳಿತವನ್ನು ಟೀಕಿಸುವ ಧೈರ್ಯವನ್ನು ತೋರಿಸಿತು. ೧೮೬೨ರಲ್ಲಿ 'ಅರುಣೋದಯ' ಎಂಬ ಮಾಸ ಪತ್ರಿಕೆ ಪ್ರಾರಂಭವಾಗಿತ್ತು. ಇದರಲ್ಲಿ ಜ್ಞಾನಾರ್ಜನೆ, ಧಾರ್ಮಿಕ ಸ್ಥಿರತೆ, ವಿಜ್ಞಾನ ಪ್ರಪಂಚ, ತಿಳುವಳಿಕೆ, ಕಥೆ, ಎಳೆಯರಿಗೆ ಉಪದೇಶ ಇವೇ ಮೊದಲಾದ ಬರಹಗಳು ಇದ್ದಂತೆ ಕಂಡು ಬರುತ್ತದೆ. ೧೮೬೫ರಲ್ಲಿ ಡೆಪ್ಯೂಟಿ ಚೆನ್ನ ಬಸಪ್ಪ ಅವರು 'ಮಠ ಪತ್ರಿಕೆ' ಎಂಬುದನ್ನು ಪ್ರಾರಂಭಿಸಿದರು. ಇದು ೧೮೭೧ರಲ್ಲಿ ಕನ್ನಡ ಶಾಲಾ ಪತ್ರಿಕೆ ಎಂದು ಬದಲಾವಣೆಯನ್ನು ಹೊಂದಿದೆ. ಈ ಪತ್ರಿಕೆಯು 'ಕನ್ನಡ ನಿಷ್ಠೆಯ ಗಂಗೋತ್ರಿಯಂತಿದ್ದ ಟ್ರೈನಿಂಗ್ ಕಾಲೇಜಿನಲ್ಲಿ ಬೆಳೆದುದರಿಂದ ಅನೇಕ ಪ್ರೌಢ ಲೇಖನಗಳಿಗೆ ಎಡೆ ಮಾಡಿಕೊಟ್ಟಿತು. ಕನ್ನಡ ಸಾಹಿತ್ಯ ಹಾಗೂ ಶಾಸ್ತ್ರ ಗ್ರಂಥಗಳ

ಪರಾಮರ್ಶ ಅದರ ಮೂಲಕ ನಡೆಯಿತು'[1] ೧೮೬೬ರಲ್ಲಿ ಪ್ರಾರಂಭವಾದ ಮೈಸೂರು ಗೆಜೆಟ್ ಕೇವಲ ಸರ್ಕಾರಿ ಪ್ರಕಟಣೆಗಳಿಗೆ ಸೀಮಿತವಾಗದೆ ಪ್ರಾಸಂಗಿಕ ವಿಚಾರಗಳ ಕಡೆಗೂ ಗಮನ ಹರಿಸುತ್ತಿತ್ತು. ೧೮೬೮ರಲ್ಲಿ ಸಭಾಪತ್ರ, ನ್ಯಾಯ ಸಂಗ್ರಹ ೧೮೭೧ರಲ್ಲಿ ಸುಭೋಧಿನಿ, ೧೮೭೫ರಲ್ಲಿ ವೆಂಕಟರಂಗೋಕಟ್ಟಿ ಅವರ 'ಶೋಧಕ' ಪತ್ರಿಕೆಗಳು ಪ್ರಾರಂಭವಾಗಿದ್ದವು. ಶೋಧಕ ಪತ್ರಿಕೆಯಂತೂ ಜನತೆಯ ಜ್ಞಾನಾಭಿವೃದ್ಧಿಯ ಕಡೆಗೆ ದೃಷ್ಟಿ ಹರಿಸಿತ್ತು ಇದು ಕನ್ನಡ ಪತ್ರಿಕೋದ್ಯಮದ ಆರಂಭದ ಘಟ್ಟವಾದರೂ ಇಲ್ಲಿ ನೆರವೇರಿದ ಕಾರ್ಯಗಳು ಗಮನಾರ್ಹ.

ಕನ್ನಡ ಪತ್ರಿಕೋದ್ಯಮ ನಡೆಯಲ್ಲಿ ಪ್ರಮುಖ ಘಟ್ಟವಾದ ಇದನ್ನು ಕುರಿತು ಶ್ರೀನಿವಾಸ ಹಾವನೂರ ಅವರ ತಮ್ಮ ಹೊಸಗನ್ನಡ ಅರುಣೋದಯ ಎಂಬ ಸಂಶೋಧನಾ ಪ್ರಬಂಧದಲ್ಲಿ ಹೀಗೆ ಹೇಳುತ್ತಾರೆ 'ಕನ್ನಡ ಪತ್ರಿಕೋದ್ಯಮದ ಆರಂಭದ ಹೆಜ್ಜೆಗಳಿವು. ೧೮೬೦-೧೮೮೦ರ ಈ ಅವಧಿಯ ಯಾವುದೇ ವರ್ಷದಲ್ಲಿ ೩-೪ ಪತ್ರಿಕೆಗಳಿಗಿಂತ ಹೆಚ್ಚು ಪತ್ರಿಕೆಗಳಿರಲಿಲ್ಲ. ಆದರೆ ಪತ್ರಿಕೆಯ ಮಹತ್ವ ಪ್ರಯೋಜನಗಳನ್ನು ಆಗಿನ ಕೆಲವರು ಚೆನ್ನಾಗಿ ಮನಗಂಡು ಆ ದಾರಿಯಲ್ಲಿ ಪ್ರಯತ್ನಪಟ್ಟರು. ಪತ್ರಿಕಾ ವ್ಯವಸಾಯದ ಧ್ಯೇಯ ಧೋರಣೆಗಳನ್ನು ರೂಪಿಸಿದರು. ಮುಂದಿನ ನವೋದಯ ಕಾಲದ ಪತ್ರಿಕೋದ್ಯಮಕ್ಕೆ ಸೂಕ್ತವಾದ ಹಿನ್ನೆಲೆ ಒದಗಿಸಿದರು'.[2]

ಇದರ ನಂತರದ ಎರಡನೆಯ ಕಾಲಘಟ್ಟವು ೧೮೮೦ರಿಂದ ೧೯೨೦ರವರೆಗೆ ಮುಂದುವರೆಯುತ್ತದೆ. ಈ ಕಾಲಘಟ್ಟದಲ್ಲಿ ಬಂದಂತಹ ಬಹುತೇಕ ಸಾಹಿತ್ಯ ಪತ್ರಿಕೆಗಳು ಅಲ್ಪಾಯುಷಿಗಳಾಗಿದ್ದವು. ಅವು ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಗಿತ್ತು. ಕಡಿಮೆ ಬಂಡವಾಳವನ್ನು ಒಳಗೊಂಡ ಈ ಪತ್ರಿಕೆಗಳ ಸಂಪಾದಕರು ಪತ್ರಿಕೆಯನ್ನು ಮುನ್ನಡೆಸಲು ಸಮರ್ಥರಾಗಿದ್ದರೂ ಲೇಖನಗಳನ್ನು ಬರೆದು ಕೊಡುವ ಲೇಖಕರ ಸಂಖ್ಯೆಯೇ ಪರಿಮಿತವಾಗಿತ್ತು. ಬಹುತೇಕ ಸಂದರ್ಭಗಳಲ್ಲಿ ಸಂಪಾದಕರುಗಳೇ ಲೇಖನವನ್ನು ಬರೆದುಕೊಡಬೇಕಾಗಿತ್ತು. ಇನ್ನು ಕೆಲವು ಪತ್ರಿಕೆಗಳು ವ್ಯವಹಾರಿಕ ದೃಷ್ಟಿಯಿಂದ ಪ್ರಕಟವಾಗದೆ ಆದರ್ಶಪೂರಿತ ಸದುದ್ದೇಶದಿಂದ ಪ್ರಕಟಗೊಳ್ಳುತ್ತಿದ್ದವು. ಧಾರ್ಮಿಕ ಹಾಗೂ ಶೈಕ್ಷಣಿಕ ವಿಚಾರಗಳಿಗೆ ಹೆಚ್ಚು ಹೆಚ್ಚಿನ ಪ್ರಧಾನ್ಯತೆ ನೀಡುತ್ತಿದ್ದ ಈ ಕಾಲದ ಪತ್ರಿಕೆಗಳು ವರ್ತಮಾನದ ವಿಚಾರಗಳನ್ನು ಸಂಗ್ರಹಿಸಿ ಕೊಡುವುದಕ್ಕಷ್ಟೇ ಸೀಮಿತವಾಗದೆ ಜನರ ತಿಳುವಳಿಕೆಯ ಮಟ್ಟವನ್ನು ಹೆಚ್ಚಿಸುವುದಕ್ಕೆ ಶ್ರಮಿಸಿದವು. ಕ್ರೈಸ್ತ ಧರ್ಮದ ಪ್ರಸಾರ ಹಾಗೂ ಧಾರ್ಮಿಕ ಪ್ರಾಚೀನ ಕೃತಿಗಳ ಟೀಕಾನುವಾದ ಇವೇ ಮೊದಲಾದ ಧಾರ್ಮಿಕ

---

೧. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರೋಣದಯ, ೨೦೦೦, ಪು. ೫೧೩.
೨. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರೋಣದಯ, ೨೦೦೦, ಪು. ೫೧೭.

ವಿಚಾರಗಳನ್ನು ಪರಿಚಯ ಮಾಡಿಸುವುದರ ಜೊತೆಗೆ ವೈಜ್ಞಾನಿಕ, ಔದ್ಯಮಿಕ, ಹಾಗೂ ಪ್ರಪಂಚದ ವಿವಿಧ ಪ್ರದೇಶಗಳ ಹಾಗೂ ಜನಾಂಗಗಳಿಗೆ ಸೇರಿದ ಲೇಖನಗಳನ್ನು ಪ್ರಕಟಿಸುವ ಮೂಲಕ ಜನರ ತಿಳುವಳಿಕೆಯ ಮಟ್ಟವನ್ನು ಹೆಚ್ಚಿಸುವ ಪ್ರಯತ್ನವೂ ಕಂಡು ಬರುತ್ತದೆ. ಈ ಘಟ್ಟದಲ್ಲಿಯೂ ಪತ್ರಿಕೆಗಳ ಸ್ವರೂಪವನ್ನು ಗಮನಿಸಿದರೆ ಸಾಹಿತ್ಯಕ್ಕಾಗಿಯೇ ಮೀಸಲಾಗಿರುವ ಪತ್ರಿಕೆಗಳು ಪ್ರಕಟಗೊಂಡಂತೆ ತೋರುವುದಿಲ್ಲ. "ಆದರೆ ೧೯ನೆಯ ಶತಮಾನದಲ್ಲಿ ಪ್ರಕಟಗೊಂಡ ಪತ್ರಿಕೆಗಳಲ್ಲಿ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟ ಪತ್ರಿಕೆಗಳು ಅನೇಕ ಇವೆ. ಅವು ತಮ್ಮನ್ನು ಹಾಗೆ ಕರೆದುಕೊಳ್ಳದಿದ್ದರೂ ಪರಿಪೂರ್ಣ ಸಾಹಿತ್ಯ ಪತ್ರಿಕೆಯೆಂದು ಕರೆಯಬಹುದಾದ ನಿಯತಕಾಲಿಕೆಗಳು ೧೯ನೆಯ ಶತಮಾನದ ಅಂತಿಮ ಪಾದದಲ್ಲಿ ದಾಖಲಾಗಿವೆ."[೧] ಇವುಗಳಲ್ಲಿ ಪ್ರಮುಖವಾಗಿ ಗಮನಿಸಬೇಕಾದ್ದು ಕರ್ನಾಟಕ ಭಾಷಾ ಸೇವಕ. ಇದು ೧೮೯೧ರಲ್ಲಿ ಪ್ರಾರಂಭಗೊಂಡು ನಂತರ ಕರ್ಣಾಟಕ ಕಾವ್ಯ ಮಂಜರಿ ಎಂಬ ಹೆಸರಿನಿಂದ, ಅನಂತರ ಕರ್ಣಾಟಕ ಕಾವ್ಯ ಕಲಾನಿಧಿ ಎಂಬ ಹೆಸರಿನಿಂದ ಪ್ರಖ್ಯಾತಿ ಪಡೆದ ಪತ್ರಿಕೆ ಹಾಗೂ ಮೈಸೂರು ಗ್ರಾಜುಯೇಟ್ ಟ್ರೇಡಿಂಗ್ ಅಸೋಸಿಯೇಶನ್ (ಜಿ.ಟಿ.ಎ). ಅವರು ಪ್ರಾರಂಭಿಸಿದ ಕರ್ಣಾಟಕ ಗ್ರಂಥಮಾಲ. ಕರ್ಣಾಟಕ ಕಾವ್ಯ ಮಂಜರಿಯಲ್ಲಿ ಪ್ರಾಚೀನ ಕಾವ್ಯಗಳನ್ನು ಪ್ರಕಟಿಸುತ್ತಿದ್ದು. ಇದರಲ್ಲಿಯೇ ಮುದ್ದಣನ ರಾಮಾಶ್ವಮೇಧ ಎಂಬ ಪ್ರೌಢಕಾವ್ಯ ಧಾರವಾಹಿಯಾಗಿ ಮೊತ್ತ ಮೊದಲಿಗೆ ಪ್ರಕಟವಾಯಿತು. ಕರ್ಣಾಟಕ ಗ್ರಂಥ ಮಾಲೆಯಲ್ಲಿ ಇಂಗ್ಲಿಷ್, ಬಂಗಾಲಿ ಹಾಗೂ ಸಂಸ್ಕೃತ ಗ್ರಂಥಗಳು ಅನುವಾದಗೊಂಡು ಪ್ರಕಟವಾಗುತ್ತಿದ್ದವು. ಇದೇ ಕಾಲದಲ್ಲಿಯೇ ಬಂದ 'ಕಾವ್ಯಕಲ್ಪಧ್ರುಮ' ಕನ್ನಡ ಹಾಗೂ ಸಂಸ್ಕೃತ ಭಾಷೆಗಳೆರಡರಲ್ಲೂ ಪ್ರಕಟವಾಗುತ್ತಿದ್ದವು. ಇವುಗಳ ಜೊತೆಯಲ್ಲಿಯೇ ಗಮನಿಸಬೇಕಾದ ಮತ್ತೊಂದು ಪತ್ರಿಕೆ ಧಾರವಾಡದಲ್ಲಿ ೧೮೯೦ರಲ್ಲಿ ಕರ್ಣಾಟಕ ವಿದ್ಯಾವರ್ಧಕ ಸಂಘದಿಂದ ಪ್ರಕಟಣೆಗೊಂಡ ವಾಗ್ಭೂಷಣ (೧೮೯೬). ನಾಡುನುಡಿಗಳ ಸೇವೆಯನ್ನೇ ಉದ್ದೇಶವಾಗಿಟ್ಟುಕೊಂಡ ಈ ಪತ್ರಿಕೆಯು ಹಳೆಗನ್ನಡ ಗ್ರಂಥ ಪರಿಶೋಧನೆ, ಪರಿಷ್ಕರಣೆ ಹೊಸಗನ್ನಡ ಸಾಹಿತ್ಯ ನಿರ್ಮಿತಿ ಇವೇ ಮೊದಲಾದ ತನ್ನ ಕಾರ್ಯಗಳಿಂದ ವಿಶಿಷ್ಟ ಸ್ಥಾನ ಪಡೆದಿದೆ. ಮೈಸೂರು ಕನ್ನಡಿಗರಿಗಿಂತ ವಿಭಿನ್ನ ಸ್ಥಿತಿಯಲ್ಲಿ ಬದುಕುತ್ತಿದ್ದ ಮರಾಠಾ ವಾತಾವರಣದ ನಡುವೆಯೂ ತಮ್ಮತನವನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ, ತಮ್ಮ ನಾಡಿನಲ್ಲಿಯೇ ಅನಾಥರಾಗುವ ಪರಿಸ್ಥಿತಿಯನ್ನು ಅನುಭವಿಸುತ್ತಿದ್ದ ಕನ್ನಡಿಗರಿಗೆ ಧೈರ್ಯ ಹಾಗೂ ಸ್ವಾಭಿಮಾನವನ್ನು ತುಂಬುವ ಕರ್ತವ್ಯವನ್ನು ಮಾಡಿದೆ. ಅಷ್ಟೇ ಅಲ್ಲದೆ ಅದು ಉತ್ತಮವಾದ ಸಾಹಿತ್ಯ ಪತ್ರಿಕೆಯಾಗಿತ್ತೆಂದು ಟಿ.ವಿ. ವೆಂಕಟಾಚಲಶಾಸ್ತ್ರಿಗಳು

---

೧. ನಿರಂಜನವಾನಳ್ಳಿ, ಕನ್ನಡ ಕಲಾ ಸಾಹಿತ್ಯ ಪತ್ರಿಕೆ, ೨೦೦೧, ಪು. ೬೫.

ಅಭಿಪ್ರಾಯಪಟ್ಟಿದ್ದಾರೆ.[೧] 'ಸತ್ಯದೀಪಿಕೆ' (೧೮೯೬) ಸಾಹಿತ್ಯ ಕೃಷಿಯನ್ನು ಮಾಡಿದ ಮತ್ತೊಂದು ಪತ್ರಿಕೆ. ಮಂಗಳೂರಿನಿಂದ ಪ್ರಕಟವಾಗುತ್ತಿದ್ದ ಈ ಪತ್ರಿಕೆ ಮೊದಲು ಮಾಸಪತ್ರಿಕೆಯಾಗಿದ್ದು ಮೂರು ವರ್ಷಗಳ ನಂತರ ವಾರಪತ್ರಿಕೆಯಾಯಿತು. ದೇಶ ವಿದೇಶದ ಸುದ್ದಿಯ ಜೊತೆಯಲ್ಲಿಯೇ ಸಣ್ಣಕತೆ, ಪ್ರಬಂಧ ಹಾಗೂ ಕವನಗಳು ಇದರಲ್ಲಿ ಪ್ರಕಟವಾಗುತ್ತಿದ್ದವು. ಈ ಕಾಲದ ಸುವಾಸಿನಿ (೧೯೦೦) ದಿವಂಗತ ಬೆನಗಲ್ ರಾಮರಾಯರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ ಪತ್ರಿಕೆ. ಕರ್ನಾಟಕದ ವಿವಿಧ ಭಾಗಗಳಿಂದ ಲೇಖಕರು ಈ ಪತ್ರಿಕೆಗೆ ಲೇಖನಗಳನ್ನು ಕಳಿಸುತ್ತಿದ್ದರು. ಇದರಲ್ಲಿ ಬೆನಗಲ್ ರಾಮರಾಯರ 'ರಮಾಮಾಧವ', ಬಿ.ವೆಂಕಟಾಚಾರ್ಯರ 'ಉನ್ಮಾದಿನಿ' ಕಾದಂಬರಿಗಳು, ಪಂಜೆಮಂಗೇಶರಾಯರ ಆರಂಭದ ಸಣ್ಣಕತೆಗಳಾದ 'ನನ್ನ ಚಿಕ್ಕತಾಯಿ' 'ನನ್ನ ಚಿಕ್ಕತಂದೆ' 'ನನ್ನ ಹೆಂಡತಿ' ಇವೇ ಮೊದಲಾದ ಕತೆಗಳು ಪ್ರಕಟವಾಗಿವೆ. ಸಣ್ಣಕಥೆಗಳು, ಕವನಗಳು, ಚಾರಿತ್ರಿಕ ವಿಷಯಾಧಾರಿತ ಕಾದಂಬರಿಗಳು, ಪ್ರಬಂಧ ಇವೇ ಮೊದಲಾದ ಸಾಹಿತ್ಯ ಪ್ರಕಾರಕ್ಕೆ ಇದು ವೇದಿಕೆ ಒದಗಿಸಿ ಕೊಟ್ಟಿದೆ. ಸ್ಪುಟ ವಿಷಯ ಎಂಬ ಸಂಪಾದಕೀಯ, ವಿವಿಧ ವಿಷಯ ಸಂಗ್ರಹ, ಸಂಕ್ಷಿಪ್ತ ಸಮಾಚಾರ, ಹಾಸ್ಯಾರ್ಣವ ಎಂಬ ಸ್ಥಿರ ಶೀರ್ಷಿಕೆಗಳು ಇದರಲ್ಲಿ ಇರುತ್ತಿದ್ದವು. ಮದ್ರಾಸಿನಿಂದ ಪ್ರಕಟವಾಗುತ್ತಿದ್ದ 'ಕನ್ನಡ ನುಡಿಗನ್ನಡಿ' ಪತ್ರಿಕೆ ಸಾಹಿತ್ಯ ರಾಜಕೀಯ, ಸಮಾಜಶಾಸ್ತ್ರ ವಿಜ್ಞಾನ ಕಲೆ ಹಾಗೂ ಧರ್ಮ ಇವುಗಳನ್ನು ಕುರಿತಾದ ಬರಹಗಳನ್ನು ಒಳಗೊಂಡಿರುತ್ತಿತ್ತು. ಈ ಪತ್ರಿಕೆಗಳು ಪೂರ್ಣಪ್ರಮಾಣದ ಸಾಹಿತ್ಯಪತ್ರಿಕೆ-ಗಳಲ್ಲದಿದ್ದರೂ ಸಾಹಿತ್ಯ ಪತ್ರಿಕೆಗಳ ಆರಂಭ ಕಾಲದ ಸ್ವರೂಪ ಹಾಗೂ ಅದರ ಬೆಳವಣಿಗೆ, ಪತ್ರಿಕೆಗಳ ಪರಿಸ್ಥಿತಿ, ಬರಹಗಾರರಿಗೆ ಅವು ನೀಡಿದ ಪ್ರೋತ್ಸಾಹ, ಚಂದಾದಾರರಿಗೆ ಅವು ನೀಡಿದ ಸೌಲಭ್ಯ ಇವೇ ಮೊದಲಾದ ಕಾರಣಗಳಿಂದ ಅವು ಗಮನ ಸೆಳೆಯುತ್ತವೆ. ಸದ್ಬೋಧಚಂದ್ರಿಕೆ ೧೯೦೭ರಲ್ಲಿ ಪ್ರಾರಂಭಗೊಂಡು ಕನ್ನಡ ಸಾಹಿತ್ಯದ ಮೂಲಕ ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಬೆಳಸುವ ಪ್ರಯತ್ನವನ್ನು ಮಾಡಿತು. ನವೋದಯ ಕಾಲದ ಹಲವಾರು ಹಿರಿಯ ಬರಹಗಾರರು 'ಸದ್ಬೋಧ ಚಂದ್ರಿಕೆ'ಯಿಂದಲೇ ಪ್ರೇರಿತರಾದವರು. ಬೆಟಗೇರಿ ಕೃಷ್ಣಶರ್ಮರು ಚಂದ್ರಿಕೆಯ ಕಾದಂಬರಿಗಳನ್ನು ಎರಡೆರಡು ಬಾರಿ ಓದುತ್ತಿದ್ದುದಾಗಿ ಹೇಳಿಕೊಂಡಿದ್ದಾರೆ. ಶ್ರೀರಂಗರಂತೂ ಚಂದ್ರಿಕೆಯನ್ನು ಮುಂಚಿತವಾಗಿ ತಂದುಕೊಡಲೆಂದು ಊರಿನ ಪೋಸ್ಟ್‌ಮನ್ನನಿಗೆ ಚಹದ ಕಾಣಿಕೆ ಆಗಾಗ ನೀಡುತ್ತಿದ್ದರಂತೆ. "ಬಸವರಾಜ ಕಟ್ಟೀಮನಿಯವರು ಕಾದಂಬರಿಕಾರರಾಗಲು ಮೂಲ ಪ್ರೇರಣೆ ಒದಗಿಸಿದೆಯೆನ್ನಲಾದ

---

೧. ವೆಂಕಟಾಚಲಶಾಸ್ತ್ರಿ ಟಿ.ವಿ., ಹೊಸಗನ್ನಡ ಕೆಲವು ನೋಟಗಳು, ೧೯೮೨. ಪು. ೨೭.

ಗಳಗನಾಥರ ಕಾದಂಬರಿ ಪದ್ಮನಯನ 'ಚಂದ್ರಿಕೆ'ಯಲ್ಲೇ ಪ್ರಕಟವಾದದ್ದು.[೧] 'ಶ್ರೀ ಕೃಷ್ಣಸೂಕ್ತಿ' ೧೯೦೫ರಲ್ಲಿ ಕೆರೋಡಿ ಸುಬ್ಬರಾಯರು ಪ್ರಾರಂಭಿಸಿದ ಈ ಪತ್ರಿಕೆಯು ಕಾದಂಬರಿ, ನಾಟಕ, ಬಂಗಾಳದ ಕೃತಿಗಳ ಅನುವಾದ ಮೊದಲಾದವುಗಳ ಕಡೆ ಗಮನ ಹರಿಸಿತ್ತು. ಇದರಲ್ಲಿ ಧಾರ್ಮಿಕ ವಿಚಾರಗಳೇ ಹೆಚ್ಚಾಗಿ ಪ್ರಕಟಗೊಳ್ಳುತ್ತಿದ್ದರೂ ಇದನ್ನು ಧಾರ್ಮಿಕ ಪತ್ರಿಕೆಯೆಂದೇ ಪರಿಗಣಿಸಲಾಗುವುದಿಲ್ಲ. ಇದೇ ಸಂದರ್ಭದಲ್ಲಿ ಬಂದ 'ಅವಕಾಶತೋಷಿಣಿ' ಪತ್ರಿಕೆಯ ಕೊಡುಗೆಯನ್ನು ಮರೆಯುವಂತಿಲ್ಲ. ಈ ಎರಡನೆಯ ಘಟ್ಟದಲ್ಲಿ ಬಂದ ಪತ್ರಿಕೆಗಳ ಸ್ವರೂಪವನ್ನು ಗಮನಿಸಿದಾಗ ನಂತರ ಅವು ಸಾಹಿತ್ಯಕ್ಕಾಗಿಯೇ ಬಂದ ಪತ್ರಿಕೆಗಳಿಗೆ ಭೂಮಿಕೆಯನ್ನು ಸಿದ್ಧಪಡಿಸಿದ ಪತ್ರಿಕೆಗಳಂತೆ ತೋರುತ್ತವೆ. ಅಷ್ಟೇ ಅಲ್ಲದೇ ಇವುಗಳಲ್ಲಿ ಕೆಲವು ಸಾಹಿತ್ಯದ ಕೆಲವೊಂದು ಪ್ರಕಾರಗಳಿಗೆ ಪ್ರಾಮುಖ್ಯತೆ ನೀಡಿ ಅವುಗಳಿಗಾಗಿಯೇ ಮೀಸಲಾಗಿ ಬಂದಿರುವುದನ್ನು ಗಮನಿಸಬಹುದು. ಕನ್ನಡ ಹಾಸ್ಯ ಪತ್ರಿಕೆಗಳಲ್ಲಿ, ಹಾಸ್ಯಕ್ಕಾಗಿಯೇ ಮೀಸಲಾಗಿ ಅತಿ ಹೆಚ್ಚಿನ ಕಾಲ ಪ್ರಕಟಗೊಂಡ ಪತ್ರಿಕೆ 'ವಿಕಟವಿನೋದಿನಿ'. 'ಕಾದಂಬರಿ ಸಂಗ್ರಹ' ಹೆಸರೇ ಸೂಚಿಸುವಂತೆ ಕಾದಂಬರಿಗಳಿಗಾಗಿ ಮೀಸಲಾಗಿ ಬಂದದ್ದು ಇದರಲ್ಲಿ ಬಂಗಾಲಿಯಿಂದ ಭಾಷಾಂತರಗೊಂಡ ಕಾದಂಬರಿಗಳು ಪ್ರಕಟವಾಗುತ್ತಿದ್ದವು. 'ಕವಿತಾ' ಹಾಗೂ 'ಪ್ರಭಾತ' ಎಂಬ ಸಾಹಿತ್ಯ ಪತ್ರಿಕೆಗಳು ಕವನಕ್ಕೇ ಮೀಸಲಾದ ಪತ್ರಿಕೆಗಳಾಗಿದ್ದವು. ಇದೇ ಸುಮಾರಿನಲ್ಲಿ ಗಮನಿಸಬೇಕಾದ ಮತ್ತೊಂದು ಸಾಹಿತ್ಯ ಪತ್ರಿಕೆ 'ಕನ್ನಡ ಕೋಗಿಲೆ'. ಇದು ಮಂಗಳೂರಿನಿಂದ ಪ್ರಕಟವಾಗುತ್ತಿದ್ದರೂ ಕರ್ನಾಟಕದಲ್ಲೆಲ್ಲ ಪ್ರಸಾರ ಹೊಂದಿ ಸಾಹಿತಿಗಳ ವಲಯದಲ್ಲಿ ಪ್ರಸಿದ್ಧಿಗಳಿಸಿತ್ತು. ೧೯೧೬ರಲ್ಲಿ 'ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ' ಪ್ರಾರಂಭಗೊಂಡಿತು. ಕನ್ನಡ ನಾಡುನುಡಿ, ಸಂಸ್ಕೃತಿಗಳ ಪುನರುಜ್ಜೀವನ, ಜ್ಞಾನ ಪ್ರಸಾರ ಕನ್ನಡ ಏಕೀಕರಣದ ಬಗ್ಗೆ ಪ್ರಚಾರ, ವಿದ್ವತ್ ಪ್ರೌಢಿಮೆಯಿಂದ ಕೂಡಿದ ಲೇಖನ ಇವೇ ಮೊದಲಾದ ಉದ್ದೇಶಗಳನ್ನು ಹೊಂದಿದ್ದ ಪತ್ರಿಕೆ. ಇದರಲ್ಲಿ ಪ್ರಕಟವಾಗಿರುವ ಹಲವಾರು ಬರಹಗಳು ನಂತರ ಇಡಿಯಾಗಿ ಗ್ರಂಥಗಳಾಗಿ ಪ್ರಕಟಗೊಂಡಿವೆ.

ಹೀಗೆ ಬೆಳವಣಿಗೆಯ ಹಂತದ ಪತ್ರಿಕೆಗಳನ್ನು ಗಮನಿಸಿದರೆ ಅವುಗಳು ಆರಂಭದಲ್ಲಿ ಯಾವುದೇ ಆಸಕ್ತಿಗೆ ಸೀಮಿತವಾಗದೆ ಒಳ್ಳೆಯ ಜೀವನವನ್ನು ಸಾಗಿಸುವುದಕ್ಕೆ ಅವಶ್ಯಕವಾಗಿ ಬೇಕಾದ ವಿಚಾರಗಳಿಗೆ ಪ್ರಾಮುಖ್ಯ ನೀಡುತ್ತಿದ್ದವು. ಪ್ರಾಚೀನ ಕಾವ್ಯಗಳನ್ನು, ಆಧ್ಯಾತ್ಮದ ವಿಚಾರಗಳನ್ನು ವಿವರಿಸುತ್ತಿದ್ದವು. ಆರಂಭದ ಘಟ್ಟದಲ್ಲಿ ಪತ್ರಿಕೆಗಳನ್ನು ಹೊರತರುವುದು ಪ್ರಮುಖ ವಿಚಾರವಾಗಿದ್ದರೆ ನಂತರದ ದಿನಗಳ ಪತ್ರಿಕೆಗಳಲ್ಲಿ ಏನನ್ನು ಪ್ರಕಟಿಸಬೇಕೆಂಬುದು ಪ್ರಮುಖ ವಿಚಾರವಾಯಿತು.

---

೧. ನಿರಂಜನ ವಾನಳ್ಳಿ, ಕನ್ನಡ ಕಲಾ ಸಾಹಿತ್ಯ ಪತ್ರಿಕೆ, ೨೦೦೧, ಪು. ೭೫.

ಶ್ರೀನಿವಾಸ ಹಾವನೂರ ಅವರು ಹೇಳುವಂತೆ 'ಹತ್ತೊಂಭತ್ತನೆಯ ಶತಮಾನದ ಪತ್ರಿಕೆಗಳನ್ನು ಇಡಿಯಾಗಿ ಪರಿಶೀಲಿಸಿದಾಗ ಅವುಗಳ ಪ್ರಕಟಣೆಯಲ್ಲಿ ಶೈಕ್ಷಣಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಹಿತ್ಯ ಎಂಬ ನಾಲ್ಕು ಬಗೆಯ ಉದ್ದೇಶ ಮುಖ್ಯವಾಗಿ ಕಂಡು ಬರುತ್ತದೆ'[೧]

ಇದಾದ ನಂತರ ಎರಡನೆಯ ಘಟ್ಟದಲ್ಲಿ ಎಂದರೆ ಇಪ್ಪತ್ತನೆಯ ಶತಮಾನದ ಎರಡನೆಯ ದಶಕದವರೆಗೆ ಬಂದ ಪತ್ರಿಕೆಗಳ ಕೊಡುಗೆ ಕನ್ನಡ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಪ್ರಮುಖವಾದದ್ದು. ಅವುಗಳು ಕಥೆ, ಕವನ, ಕಾದಂಬರಿ, ವಿಮರ್ಶೆ ಹೀಗೆ ಎಲ್ಲ ರೀತಿಯ ಬರವಣಿಗೆಗಳಿಗೆ ಆದ್ಯತೆ ನೀಡಿದವು. ನಾಡು ನುಡಿ ಸಂಸ್ಕೃತಿಯ ಬಗ್ಗೆ ಜಾಗೃತಗೊಳಿಸುವ ಕಾರ್ಯ ಮಾಡತೊಡಗಿದವು. ಇವುಗಳ ಸಾಲಿನಲ್ಲೇ ಪ್ರಾರಂಭಗೊಂಡ ಪ್ರಬುದ್ಧ ಕರ್ಣಾಟಕ ಭಾವ ಪ್ರಚೋದಕ ಹಾಗೂ ಬುದ್ಧಿ ಪ್ರಚೋದಕಗಳೆರಡನ್ನೂ ಒಳಗೊಂಡ ಬರಹಗಳಿಂದ ಪ್ರಮುಖ ಸಾಹಿತ್ಯ ಪತ್ರಿಕೆಯಾಗಿ ಬೆಳೆದುದಷ್ಟೇ ಅಲ್ಲದೆ ಕನ್ನಡ ನಾಡುನುಡಿಯ ಬಗ್ಗೆ ವಿಶೇಷ ಕಾಳಜಿಯನ್ನು ಪ್ರದರ್ಶಿಸಿ ಸಮಾಜಮುಖಿಯಾಗಿ ಬೆಳೆದುಬಂದಿತು.

**ಪ್ರಬುದ್ಧ ಕರ್ಣಾಟಕದ ಪ್ರಾರಂಭ**

ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕೇಳುವವರಿಲ್ಲದೇ ಮೂಲೆಗುಂಪಾಗಿದ್ದ ಕನ್ನಡವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಪ್ರಾರಂಭಗೊಂಡ ಕರ್ನಾಟಕ ಸಂಘವು ತನ್ನ ಕಾರ್ಯಚಟುವಟಕೆಗಳಿಗಾಗಿ ವಿದ್ಯಾರ್ಥಿಗಳು ಕೊಡುವ ಹಣವನ್ನು ಚಂದಾ ಎಂದು ಭಾವಿಸಿ ಪತ್ರಿಕೆಯೊಂದನ್ನು ಉಚಿತವಾಗಿ ಕೊಡಲು ಆಲೋಚಿಸಿತು. ಆ ಆಲೋಚನೆಗೆ ಬೇಕಾದ ನೆರವು ಹಾಗೂ ಬೆಂಬಲಗಳು ವಿದ್ಯಾರ್ಥಿಗಳ ಕಡೆಯಿಂದ ದೊರೆಯಿತು. ಎ.ಆರ್ ಕೃಷ್ಣ ಶಾಸ್ತ್ರಿಗಳು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಕನ್ನಡ ಉಪಾಧ್ಯಾಯರಾಗಿ ಹೋದಾಗ ಅಲ್ಲಿ ಕನ್ನಡ ಪರವಾದ ವಾತಾವರಣ ಇರಲಿಲ್ಲ. ಕನ್ನಡ 'ಮನುಷಿ'ಗಳು ವಿದ್ಯಾರ್ಥಿಗಳು ಅನುದಾರಣೆ ಹಾಗೂ ಅಪಹಾಸ್ಯಕ್ಕೆ ಗುರಿಯಾಗುತ್ತಿದ್ದ ಕಾಲ. ಆ ವಿದ್ಯಾರ್ಥಿಗಳಲ್ಲಿ ಕೆಲವರು ಲೇಖನಗಳನ್ನು ಬರೆದು ಅದರಲ್ಲಿ ಅಪೂರ್ವವಾದ ಸಾಮರ್ಥ್ಯವನ್ನು ಪ್ರದರ್ಶಿಸಿದ್ದರು. ಎಸ್.ವಿ.ರಂಗಣ್ಣ, ಸಿ.ಕೆ. ವೆಂಕಟರಾಮಯ್ಯ, ಎನ್ ನೀಲಕಂಠಪ್ಪರಂತಹ ವಿದ್ಯಾರ್ಥಿಗಳ ಬರವಣಿಗೆಗಳು ಎ.ಆರ್. ಕೃಷ್ಣಶಾಸ್ತ್ರಿಗಳ ಗಮನ ಸೆಳೆಯಿತು. ವಿದ್ಯಾರ್ಥಿಗಳಲ್ಲಿರುವ ಪ್ರತಿಭೆ ವ್ಯರ್ಥವಾಗಬಾರದೆಂದು ಆಲೋಚಿಸಿ ಪತ್ರಿಕೆಯನ್ನು ಪ್ರಾರಂಭಿಸುವ ನಿರ್ಧಾರ ತೆಗೆದುಕೊಂಡರು. ಪತ್ರಿಕೆಯೊಂದನ್ನು ಪ್ರಾರಂಭಿಸಿದಾಗ ಅಗತ್ಯವಾಗಿ ಬೇಕಾದ

---

೧. ಶ್ರೀನಿವಾಸ ಹಾವನೂರ, ಹೊಸಗನ್ನಡ ಅರೋಣದಯ, ೨೦೦೦, ಪು. ೪೭೯.

ಲೇಖನಗಳು ವಿದ್ಯಾರ್ಥಿಗಳ ಕಡೆಯಿಂದ ದೊರಯಬಹುದೆಂಬ ಎ.ಆರ್.ಕೃ ಅವರ ಭರವಸೆ ಸುಳ್ಳಾಗಲಿಲ್ಲ. ಪತ್ರಿಕೆ ಪ್ರಾರಂಭಿಸುವ ಮುನ್ನ ಎ.ಆರ್.ಕೃಷ್ಣಶಾಸ್ತ್ರಿಯವರು ತಮ್ಮ ಮಿತ್ರರ ಹಾಗು ಹಿರಿಯರ ಮುಂದೆ ಪ್ರಸ್ತಾಪಿಸಿದಾಗ ಅವರುಗಳಿಂದ ಪ್ರೋತ್ಸಾಹದಾಯಕ ಬೆಂಬಲ ದೊರೆಯಲಿಲ್ಲ. ಸಾಹಿತ್ಯ ಪತ್ರಿಕೆಗಳು ಹುಟ್ಟುವುದು ಸಾಯುವುದು ಸಾಮಾನ್ಯ ಸಂಗತಿಯಾದುದರಿಂದ ಅದರ ಬಗ್ಗೆ ಹೆಚ್ಚಿನ ಆಸಕ್ತಿ ತೋರಲಿಲ್ಲ. ಇದನ್ನು ಕುರಿತು ಡಿ.ವಿ.ಜಿ. ಅವರು ಒಂದೆಡೆ ಹೀಗೆ ಹೇಳಿದ್ದಾರೆ 'ಶ್ರೀಯುತ ಎನ್.ಎಸ್. ಸುಬ್ಬರಾಯರು ಆಗ ಆ ವಿಷಯದಲ್ಲಿ ಅಷ್ಟೇನು ಅಶಾವಾದಿಗಳಾಗಿರಲಿಲ್ಲವೆಂದು ಕೇಳಿದ್ದೇನೆ ನಾನೂ ಕೂಡ ಶಾಸ್ತ್ರಿಗಳಿಗೆ ಹೆಚ್ಚಿನ ಭರವಸೆ ಕೊಟ್ಟ ಹಾಗೆ ಜ್ಞಾಪಕವಿಲ್ಲ. ಆಗ್ಗೆ ಶ್ರಿ ವೆಂಕಟನಾರಾಯಣಪ್ಪನವರು ನಾನು ಇಂತಹ ಒಂದೆರಡು ಪ್ರಯತ್ನಗಳಲ್ಲಿ `ಕೈ ಸುಟ್ಟುಕೊಂಡಿದ್ದೆವು.'[೧] ಹೀಗೆ ಶಾಸ್ತ್ರಿಗಳ ಹಿತೈಷಿಗಳು ಪತ್ರಿಕೆ ಪ್ರಕಟಣೆಯ ಸಮಸ್ಯೆಗಳ ಬಗ್ಗೆ ತಿಳುವಳಿಕೆ ಹಾಗೂ ಎಚ್ಚರಿಕೆ ನೀಡಿದರೂ ಅವರಲ್ಲಿದ್ದ ಕನ್ನಡ ಅಭಿಮಾನ, ದೃಢವಾದ ನಿರ್ಧಾರ, ಅಚಲವಾದ ಶ್ರದ್ಧೆ, ಆತ್ಮ ವಿಶ್ವಾಸ ಇವುಗಳಿಂದಾಗಿ ಅವರು ಎದೆಗುಂದದೆ ಪತ್ರಿಕೆಯನ್ನು ಪ್ರಾರಂಭಿಸಿದರು.

**ಪತ್ರಿಕೆಯ ಹೆಸರು**

ಪತ್ರಿಕೆ ಪ್ರಾರಂಭವಾದಾಗ ಅದಕ್ಕೆ ಯಾವ ಹೆಸರನ್ನು ಇಡಬೇಕೆಂದು ನಿರ್ಧಾರವಾಗದೇ ಗೊಂದಲದಲ್ಲಿದ್ದಾಗಲೇ ಅವರ ಮನಸ್ಸಿಗೆ ಬಂದ ಹೆಸರು ಪ್ರಬುದ್ಧ ಕರ್ಣಾಟಕ. ಇದಕ್ಕೆ ಹಿನ್ನೆಲೆಯೂ ಒಂದಿದೆ. ಪತ್ರಿಕೆಯು ಸಂಸ್ಥಾಪನಾ ಸಂಪಾದಕರಾದ ಎ.ಆರ್. ಕೃಷ್ಣಶಾಸ್ತ್ರಿಗಳು ಹಾಗೂ ಅವರ ಆತ್ಮೀಯರಾದ ಟಿ.ಎಸ್.ವೆಂಕಟಯ್ಯನವರು ಬೆಂಗಳೂರಿನ ರಾಮಕೃಷ್ಣ ಆಶ್ರಮದ ಸಂಪರ್ಕ ಹೊಂದಿದ್ದವರು. ಇವರಿಗೆ ಅಲ್ಲಿನ ಅಧ್ಯಕ್ಷರಾಗಿದ್ದ ನಿರ್ಮಲಾನಂದ ಸ್ವಾಮಿಗಳ ಧಾರ್ಮಿಕ ವಿಚಾರಗಳನ್ನು ಜನರಿಗೆ ತಿಳಿಸಲು 'ಪ್ರಬುದ್ಧ ಕರ್ನಾಟಕ' ಎಂಬ ಪತ್ರಿಕೆ ಹೊರಡಿಸಲು ಸೂಚಿಸಿದ್ದರು. ಈ ವೇಳೆಗಾಗಲೇ ಮಲಯಾಳಂನಲ್ಲಿ 'ಪ್ರಬುದ್ಧ ಕೇರಳಂ' ಎಂಬ ಪತ್ರಿಕೆ ಹಾಗೂ ಇಂಗ್ಲೀಷ್‌ನಲ್ಲಿ 'ಪ್ರಬುದ್ಧ ಭಾರತ' ಎಂಬ ಪತ್ರಿಕೆಗಳು ಪ್ರಕಟವಾಗುತ್ತಿದ್ದವು. ಅಂತಹ ಧಾರ್ಮಿಕ ಪತ್ರಿಕೆ ಹೊರಡಿಸುವುದು ಇವರುಗಳಿಂದ ಸಾಧ್ಯವಾಗದಿದ್ದರೂ ಆ ಹೆಸರು ಇವರ ಮನಸ್ಸಿನಲ್ಲಿ ಹಾಗೆಯೇ ಉಳಿದು ಬಿಟ್ಟಿತ್ತು. ಕರ್ನಾಟಕ ಸಂಘ ಪತ್ರಿಕೆಯನ್ನು ಪ್ರಾರಂಭಿಸುವ ಸಂದರ್ಭದಲ್ಲಿ 'ವಿದ್ಯಾರ್ಥಿ' ಎಂಬ ಹೆಸರಿಡಬೇಕೆಂಬ ಆಲೋಚನೆ ಬಂದಿತ್ತಾದರೂ ಆ ಹೆಸರಿನ ಪತ್ರಿಕೆ ಮಂಗಳೂರಿನಲ್ಲಿ ಪ್ರಕಟವಾಗುತ್ತಿದ್ದುದರಿಂದ ಆ

---

ಡಿ.ವಿ.ಗುಂಡಪ್ಪ

೧. ಸಾಹಿತ್ಯ ಶಕ್ತಿ, ಪು. ೧೧೭(೧೪)1918

ಹೆಸರನ್ನು ಕೈ ಬಿಡಲಾಯಿತು. ಆಗ ಅವರಿಗೆ ತೋರಿದ ಹೆಸರೇ 'ಪ್ರಬುದ್ಧ ಕರ್ನಾಟಕ. ಧಾರ್ಮಿಕ ಪತ್ರಿಕೆಯ ಹೆಸರನ್ನು ವಿದ್ಯಾರ್ಥಿಗಳ ಪತ್ರಿಕೆಗೆ ಇಡುವುದು ಸರಿಯಾದುದೇ? ಎಂಬ ಸಂದೇಹ ಆರಂಭದಲ್ಲಿ ಬಂದರೂ ಬೇರೆ ಹೆಸರು ಸೂಚಿತವಾಗದಿದ್ದುದರಿಂದ ಮತ್ತು ಹೊಳೆಯದಿದ್ದುದರಿಂದ ಅದೇ ಹೆಸರು ಉಳಿದುಕೊಂಡಿತು. 'ಕನ್ನಡ ನಾಡು ಎಚ್ಚೆತ್ತಿದೆ. ಯುವಕ ವಿದ್ಯಾರ್ಥಿಗಳ ಮನಸ್ಸು ವಿಕಸಿತವಾಗುತ್ತಿದೆ ಎಂಬ ಭಾವನೆ ಇದ್ದದ್ದರಿಂದ ಆಮೇಲೆ ಅದೇ ಸರಿ ಎನ್ನಿಸಿತು.[೧]

**ಪತ್ರಿಕೆಯ ಮುಖಪುಟ**

ಪ್ರಬುದ್ಧ ಕರ್ನಾಟಕ ಮುಖಪುಟ ರಾಮಕೃಷ್ಣ ಮಠದಿಂದಲೇ ಪ್ರೇರಿತವಾದದ್ದು. ಎ.ಆರ್.ಕೃಷ್ಣಶಾಸ್ತ್ರಿಗಳು ಅವರ ಸಾಹಿತ್ಯದ ಪ್ರತೀಕವಾಗಿ ರಾಜಯೋಗ, ಜ್ಞಾನಯೋಗ ಕರ್ಮಯೋಗ, ಭಕ್ತಿಯೋಗಗಳನ್ನು ಸೂಚಿಸುವ ಮುದ್ರೆಯನ್ನು ಮನಸಲ್ಲಿಟ್ಟುಕೊಂಡು, ಕನ್ನಡ ನಾಡಿನ ಸೂರ್ಯದೇವನ ಸನ್ನಿಧಿಯಲ್ಲಿ ಆಗಲೇ ಅರಳಿರುವ ಮತ್ತು ಇಂದು ಮೊಗ್ಗಾಗಿ ಮುಂದೆ ಅರಳಬೇಕಾಗಿರುವ ಹೃತ್ಕಮಲಗಳನ್ನು ಸೂಚಿಸಿ ಒಂದು ಚಿತ್ರವನ್ನು ಬರೆದು ವಿದ್ಯಾರ್ಥಿಗಳಿಗೆ ತೋರಿಸಿದಾಗ ಅದು ಸಾರ್ವಾನುಮತದಿಂದ ಒಪ್ಪಿಗೆಯನ್ನು ಪಡೆಯಿತು. ಆರಂಭದ ಕೆಲವು ಸಂಚಿಕೆಗಳಲ್ಲಿ ಮುಖಪುಟದ ಮೇಲೆ ವಿಷಯಸೂಚಿ ಪ್ರಕಟವಾಗುತ್ತಿತ್ತು. ಅಷ್ಟೇ ಅಲ್ಲದೆ ಸಂವತ್ಸರ ಸಂಪುಟ ಸಂಚಿಕೆ ವರ್ಷ ಇವುಗಳ ಮಾಹಿತಿ ಲಭ್ಯವಾಗುತಿತ್ತು. ಅದು ವಿದ್ಯಾರ್ಥಿಗಳಿಗೆ ಒಪ್ಪಿಗೆಯಾದದ್ದು ಮಾತ್ರವಿಲ್ಲದೆ ಅವರ ಪ್ರೀತಿಗೂ ಪಾತ್ರವಾಯಿತು. ನೋಡಿದೊಡನೆಯೇ ಆಹ್ಲಾದ-ಗೊಳಿಸುತ್ತಿದ್ದ ಕನ್ನಡ ಸೂರ್ಯೋದಯದ ಸಂಕೇತ ಮುಖಚಿತ್ರವನ್ನು ಸಿ.ಕೆ. ವೆಂಕಟ-ರಾಮಯ್ಯನವರು ಅಭಿಮಾನದಿಂದ ನೆನಪಿಸಿಕೊಂಡಿದ್ದಾರೆ. ಪ್ರಬುದ್ಧ ಕರ್ನಾಟಕದ ರಕ್ಷಾಪುಟದ ಮೇಲಿನ ಈ ಪಡಿಯಚ್ಚು ಪತ್ರಿಕೆಯು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಬಂದ ನಂತರವೂ ಇದೇ ಬಳಕೆಯಾಗುತ್ತಿದ್ದು ೧೯೪೭ ಸರ್ವಜಿತ್ ಸಂವತ್ಸರದಿಂದ ಅದು ಅಚ್ಚಾಗುವುದು ನಿಂತಿತು. ಅನಂತರ ೧೯೬೮ರ ಐವತ್ತನೆಯ ವರ್ಷದ ನೆನಪಿನ ಸಂಚಿಕೆಯಿಂದ ಪತ್ರಿಕೆಯ ಮುಖಪುಟದ ವಿನ್ಯಾಸ ಬದಲಾಯಿತು. ೧೯೮೪ ರಿಂದ ಸಂಪುಟ ೬೫ ಸಂಚಿಕೆ ೪ರ ಅಮೃತ ಸಂಪುಟ ಹೊರ ಬಂದುದರ ನೆನಪಿನೊಂದಿಗೆ ಮುಖಪುಟದಲ್ಲಿ ಬದಲಾವಣೆಯಾಗಿದೆ.[೨] ಆರಂಭದಲ್ಲಿ ಮುಖಪುಟದ ಮೇಲೆ ವಿಷಯಸೂಚಿ ಸಂವತ್ಸರ ಸಂಪುಟ ಸಂಚಿಕೆ ವರ್ಷಗಳ ವಿವರಗಳು ಇರುತ್ತಿದ್ದವು. ಅನಂತರ ಮುಖಪುಟದ ಹಿಂಭಾಗದಲ್ಲಿ ವಿಷಯ ಸೂಚಕವನ್ನು ನೀಡಿ ಆ

---

೧. ಕೃಷ್ಣಶಾಸ್ತ್ರಿ.ಎ.ಆರ್, ಭಾಷಣಗಳು ಮತ್ತು ಲೇಖನಗಳು, ೧೯೬೦, ಪು. ೨೧೦.

೨. ಮುಖಪುಟದ ವಿನ್ಯಾಸಗಳು ಬದಲಾವಣೆ ಹೊಂದಿರುವುದನ್ನು ಗಮನಿಸಿದ್ದೇನೆ. ಇವುಗಳ ಕೆಲವು ಮಾದರಿಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಸಂಚಿಕೆಯಲ್ಲಿ ಪ್ರಕಟವಾಗಿರುವ ವಿಷಯಗಳನ್ನು, ಲೇಖಕರ ಹೆಸರುಗಳನ್ನು ನೀಡಲಾಗುತ್ತಿತ್ತು. ನಂತರ ಕೆಲವುಬಾರಿ ಲೇಖಕರಿಗೆ ಸೂಚನೆಗಳನ್ನು ಲೇಖನ, ಹಾಗೂ ವಿಮರ್ಶೆಗಾಗಿ ಪುಸ್ತಕಗಳನ್ನು ಯಾರಿಗೆ ಕಳುಹಿಸಬೇಕೆಂಬ ವಿಳಾಸವನ್ನು ಕೊಡುತ್ತಿದ್ದುದೂ ಕಂಡುಬರುತ್ತದೆ. ಇಲ್ಲಿ ಪ್ರಕಟಗೊಳ್ಳುತ್ತಿದ್ದ ವಿಷಯಗಳಲ್ಲಿ ನಿಯಮ-ಬದ್ಧತೆ ಕಂಡುಬರುವುದಿಲ್ಲ. ನಂತರದ ದಿನಗಳಲ್ಲಿ ಆ ಪುಟ ಖಾಲಿಯಾಗಿಯೇ ಉಳಿದುಕೊಂಡಿದೆ. ಹಿಂಬದಿಯ ಪುಟದ ಹೊರಭಾಗದಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಪ್ರಕಟಣೆಗಳ ಬಗ್ಗೆ ವಿವರಗಳು ಆರಂಭದ ದಿನಗಳಲ್ಲಿ ಕಂಡುಬಂದರೆ ನಂತರ ಖಾಲಿಯಾಗಿಯೂ ಅನಂತರ ಮೈಸೂರು ವಿಶ್ವವಿದ್ಯಾಲಯದ ತ್ರೈಮಾಸಿಕ ಪ್ರಕಟಣೆಗಳು ಹಾಗೂ ಅದರ ವಿವರಗಳು, ಮಾಹಿತಿಗಳು ದೊರಕುತ್ತಿದ್ದವು. ಹಿಂಬದಿಯ ಪುಟದ ಒಳಭಾಗದಲ್ಲಿ ಪ್ರಬುದ್ಧ ಕರ್ನಾಟಕಕ್ಕೆ ವಿನಿಮಯವಾಗಿ ಬರುವ ಇಂಗ್ಲೀಷ್ ಪತ್ರಿಕೆಗಳು ವಾರ ಪತ್ರಿಕೆಗಳು, ಮಾಸಪತ್ರಿಕೆಗಳು, ತ್ರೈಮಾಸಿಕ ಪತ್ರಿಕೆಗಳು ಹಾಗೂ ಗ್ರಂಥಮಾಲೆಯ ವಿವರಗಳು ಲಭ್ಯವಾಗುತ್ತಿದ್ದವು.

**ಪತ್ರಿಕೆಯ ಕಾಲ**

ಪ್ರಬುದ್ಧ ಕರ್ನಾಟಕದ ದೃಷ್ಟಿ ಹಾಗೂ ಆಲೋಚನೆಗಳು ಹೊಸ ರೀತಿಯಲ್ಲಿ ಇದ್ದು ಅದು ಪ್ರಕಟವಾಗುವ ಕಾಲ ನಿಯಮವು ಹೊಸದಾಗಿರಬೇಕೆಂಬುದು ಪತ್ರಿಕೆ ಪ್ರಾರಂಭಿಸುವಾಗಿನ ಸಂಪಾದಕರ ಅಭಿಪ್ರಾಯವಾಗಿತ್ತು. ಮೊದಲ ಎರಡು ಸಂಪುಟಗಳಲ್ಲಿ ವರ್ಷದ ಮೂರು ದೊಡ್ಡ ಹಬ್ಬಗಳಾದ ವಿನಾಯಕ, ಯುಗಾದಿ, ದೀಪಾವಳಿಗಳಲ್ಲಿ ಪತ್ರಿಕೆ ಪ್ರಕಟವಾಯಿತು. ಮೂರನೆಯ ಸಂಪುಟದಲ್ಲಿ ಯುಗಾದಿ, ವಿನಾಯಕ, ದೀಪಾವಳಿ ಹಾಗೂ ಕಾಮನ ಹಬ್ಬಗಳಲ್ಲಿ ನಾಲ್ಕು ಸಂಚಿಕೆಗಳು ಪ್ರಕಟವಾದರೆ ನಾಲ್ಕನೆಯ ಸಂಪುಟದಿಂದ ವಿನಾಯಕ, ದೀಪಾವಳಿ, ಸಂಕ್ರಾಂತಿ ಹಾಗೂ ಕಾಮನ ಹಬ್ಬಗಳಲ್ಲಿ ಹೊರಬರಲು ಆರಂಭಿಸಿತು. ದುಂದುಭಿ ಸಂವತ್ಸರದ ನಾಲ್ಕನೆ ಸಂಪುಟದ ಮೂರನೇ ಸಂಚಿಕೆಯಲ್ಲಿ ಇದನ್ನು ಕುರಿತು ಸಂಪಾದಕರು "ಪ್ರಬುದ್ಧ ಕರ್ನಾಟಕವು ಸಂಕ್ರಾಂತಿ ಹಬ್ಬದಲ್ಲಿ ಬರುತ್ತಿರುವುದಕ್ಕೆ ಇದೇ ಮೊದಲು. ಸಂಕ್ರಾಂತಿ ಹಬ್ಬದಲ್ಲಿ ಎಳ್ಳುಬೆಲ್ಲ ತಿಂದು ಒಳ್ಳೆಯ ಮಾತನಾಡಬೇಕಂತೆ ಆದ್ದರಿಂದ ಕನ್ನಡಿಗರು ತಮ್ಮ ಬಳಿಗೆ ಬರುವ ಪ್ರಬುದ್ಧ ಕರ್ನಾಟಕದ ಬಾಲಕನಿಗೆ ಎಳ್ಳು ಸಕ್ಕರೆಯನ್ನು ಕೊಟ್ಟು ತಾವು ತಿಂದು ಒಳ್ಳೆಯ ಮಾತುಗಳನ್ನು ಕೇಳಿ ಒಳ್ಳೆಯ ಮಾತುಗಳನ್ನಾಡಿ ಅವನನ್ನು ಆದರಿಸಿ ಸಂತೋಷಪಡಿಸಿ ಸಂತೋಷ ಪಡುವರೆಂದು ನಂಬುತ್ತೇವೆ"[೧] ಎಂದಿದ್ದಾರೆ. ಈ ಮಾತುಗಳು ತಾವು ಉತ್ತಮವಾದ ವಿಚಾರಗಳನ್ನು

---

೧. ವಸ್ತುಕೋಶ, ಪ್ರಬುದ್ಧ ಕರ್ನಾಟಕ, ಸಂಪುಟ ೪, ಸಂಚಿಕೆ ೧, ಪು. ೬.

ಜನರಿಗೆ ಒದಗಿಸಿಕೊಡಲು ಸಿದ್ಧರಿರುವುದನ್ನು ಅದಕ್ಕೆ ಪ್ರತಿಯಾಗಿ ಅವರಿಂದ ಪ್ರೋತ್ಸಾಹವನ್ನು ನಿರೀಕ್ಷಿಸುತ್ತಿರುವುದನ್ನು ಸೂಚಿಸುತ್ತದೆ. ೧೯೫೦ ರವರೆವಿಗೂ ಇದೇ ರೀತಿ ನಡೆದುಕೊಂಡು ಬಂದು ನಂತರ ಚೈತ್ರ ಆಷಾಡ ಆಶ್ವಯುಜ ಹಾಗೂ ಪುಷ್ಯ ಸಂಚಿಕೆಗಳೆಂದು ಬದಲಾಯಿತು.

ಪ್ರಬುದ್ಧ ಕರ್ನಾಟಕದ ಆರಂಭದ ದಿನಗಳಲ್ಲಿ ಈ ಪತ್ರಿಕೆಯನ್ನು ಮಾಸ ಪತ್ರಿಕೆಯನ್ನಾಗಿ ಮಾಡಬೇಕೆಂಬ ಬೇಡಿಕೆ ಬಂದಿದ್ದರೆ ನಂತರ ಇಂಗ್ಲಿಷ್ ತಿಂಗಳನ್ನು ಅನುಸರಿಸಿ ಮೂರು ತಿಂಗಳಿಗೆ ಒಂದು ಬಾರಿ ಎಂದರೆ ವರ್ಷಕ್ಕೆ ನಾಲ್ಕು ಸಂಚಿಕೆ ತರಬೇಕೆಂಬ ಒತ್ತಡ ಬಂದಿತ್ತು. ಆದರೆ ಸಂಪಾದಕರೇ ಇದಕ್ಕೆ ಒಲವನ್ನು ತೋರಲಿಲ್ಲ. ಪ್ರಬುದ್ಧ ಕರ್ನಾಟಕವು ಆರಂಭದಲ್ಲಿ ವಿದ್ಯಾರ್ಥಿಗಳಿಗೋಸ್ಕರ ಪ್ರಕಟಗೊಂಡ ಪತ್ರಿಕೆ. ಇದರ ಬೆಳವಣಿಗೆ ಹಾಗೂ ಇದಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳಲ್ಲಿ ವಿದ್ಯಾರ್ಥಿಗಳಿಂದ ವರ್ಷದಲ್ಲಿ ಸಂಪೂರ್ಣವಾಗಿ ಎಲ್ಲಾ ತಿಂಗಳುಗಳಲ್ಲಿ ಸಹಕಾರ ಪಡೆಯುವುದು ಅಸಾಧ್ಯವಾಗಿತ್ತು. ವಿದ್ಯಾರ್ಥಿಗಳ ರಜಾ ಅವಧಿಯಲ್ಲಿ ಲೇಖನ ಸಂಗ್ರಹಿಸುವುದು ಪ್ರಕಟಿಸುವುದು, ಹಂಚುವುದು ಕಷ್ಟದ ಕಾರ್ಯವಾಗಿತ್ತು. ಮಾಸಪತ್ರಿಕೆಯಾಗಿ ಅಥವಾ ಇಂಗ್ಲಿಷ್ ಮಾಸದ ಅನ್ವಯ ಪತ್ರಿಕೆಯನ್ನು ಹೊರಡಿಸಲು ಸಿಬ್ಬಂಧಿಗಳ ಕೊರತೆಯಿದ್ದು ಲೇಖನ ಸಾಮಗ್ರಿಗಳನ್ನು ಕಾಲಕಾಲಕ್ಕೆ ಒದಗಿಸುವುದು ಅಸಾಧ್ಯವೆಂಬ ಅರಿವು ಅವರಿಗಿದ್ದ ಕಾರಣ. ಪತ್ರಿಕೆಯ ಪ್ರಕಟಣೆಯ ಕಾಲವನ್ನು ಹೀಗೆ ನಿರ್ಧರಿಸಿಕೊಳ್ಳಲಾಗಿದೆ.

ಪ್ರಬುದ್ಧ ಕರ್ನಾಟಕವು ಹೀಗೆ ಪ್ರಕಟಣೆಯ ಕಾಲವನ್ನು ನಿಗದಿಪಡಿಸಿ–ಕೊಂಡರೂ ಅದು ಹಲವಾರು ಬಾರಿ ಕಾಗದದ ಅಭಾವ, ಮುದ್ರಣದ ತೊಂದರೆ, ಇತ್ಯಾದಿಗಳಿಂದಾಗಿ ಕಾಲಕ್ಕೆ ಸರಿಯಾಗಿ ಪ್ರಕಟಣೆಗೊಳ್ಳದೇ ಇರುವುದಕ್ಕೆ ಕ್ಷಮೆ–ಯಾಚಿಸಿರುವುದೂ ಉಂಟು. ಅಧ್ಯಯನದ ಅವಧಿಯನ್ನು ಗಮನದಲ್ಲಿರಿಕೊಂಡು ಹೇಳುವುದಾದರೆ ಒಂದು ಸಂದರ್ಭವನ್ನು ಹೊರತು ಪಡಿಸಿದರೆ ಕಾಲ ವಿಳಂಬದ ಕಾರಣದಿಂದಾಗಿ ಪತ್ರಿಕೆಯ ಸಂಚಿಕೆ ಪ್ರಕಟವಾಗದೇ ಉಳಿದಿದ್ದು ಕಂಡುಬರುವುದಿಲ್ಲ. ಕೆಲವೊಂದು ಬಾರಿ ಪತ್ರಿಕೆ ತಡವಾಗಿ ಪ್ರಕಟವಾದರೂ ಸಂಪಾದಕರು ಅದಕ್ಕೆ ಕಾರಣಗಳನ್ನು ನೀಡಿ ಸಮರ್ಥಿಸಿಕೊಂಡಿರುವುದು ಉಂಟು. ಸಾಹಿತ್ಯ ಪತ್ರಿಕೆಗಳಲ್ಲಿ ಪ್ರಕಟವಾಗುವ ಲೇಖನಗಳು ದಿನ ನಿತ್ಯದ ಪತ್ರಿಕೆಗಳಲ್ಲಿ ಪ್ರಕಟವಾಗುವ ವರದಿಯಂತಲ್ಲ. ಅದು ದೀರ್ಘಕಾಲ ಉಳಿಯುವಂತಹದು. "ಸಿಕ್ಕಿದ ವಿಷಯವನ್ನು ತುಂಬಿ ಸಕಾಲದಲ್ಲಿ ಪತ್ರಿಕೆಯನ್ನು ಹೊರಡಿಸಬೇಕೆ ಅಥವಾ ಎರಡು ದಿನ ತಡವಾದರೂ ಚಿಂತೆಯಿಲ್ಲ. ಆದಷ್ಟು ಮಟ್ಟಿಗೆ ಒಳ್ಳೆಯ ಲೇಖನಗಳನ್ನು ಸಂಗ್ರಹಿಸಿ ಪ್ರಕಟಿಸಬೇಕೆ? ಎಂಬ ಪ್ರಶ್ನೆಹುಟ್ಟಿದಾಗ ಎರಡನೇ ದಾರಿಯೇ ಸರಿಯಾದುದೆಂದು

ತಡವಾಗಿ ಹೊರಡಿಸುವುದೂ ಕ್ಷಮಾರ್ಹವಾಗುತ್ತದೆ"[1] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುವ ಸಂಪಾದಕರು ಪತ್ರಿಕೆಯ ಪ್ರಕಟಣೆ ತಡವಾದರೂ ಉತ್ತಮ ಗುಣಮಟ್ಟದ ವಿಚಾರಗಳನ್ನು ತನ್ನ ಓದುಗರಿಗೆ ನೀಡಬೇಕೆಂದು ಆಶಿಸಿದ್ದಾರೆ. ಮತ್ತು ಪತ್ರಿಕೆ ತಡವಾಗಲು ಎದುರಾದ ಸಮಸ್ಯೆಗಳನ್ನು ತಮ್ಮ ಓದುಗರ ಗಮನಕ್ಕೆ ತಂದಿದ್ದಾರೆ.

**ಪತ್ರಿಕೆಯ ಗಾತ್ರ**

ಪ್ರಬುದ್ಧ ಕರ್ನಾಟಕದ ಸಂಪಾದಕರು ಆರಂಭದ ದಿನಗಳಲ್ಲಿ ಪ್ರತಿ ಸಂಚಿಕೆಗೆ ನಲವತ್ತು ಪುಟಗಳು ಮೀರದಂತೆ ವರ್ಷಕ್ಕೆ ಮೂರು ಸಂಚಿಕೆಗಳನ್ನು ಹೊರ-ತರಬೇಕೆಂದು ಆಲೋಚಿಸಿದ್ದಾರೆ. ಹಾಗೆಯೇ ಸಂಚಿಕೆಗಳು ನಲವತ್ತು ಪುಟಗಳು ಮೀರದಂತೆ ಎಚ್ಚರವಹಿಸಿದ್ದಾರೆ. ಆದರೆ ನಂತರದ ದಿನಗಳಲ್ಲಿ ಪತ್ರಿಕೆಗೆ ದೊರೆತ ಜನಮನ್ನಣೆ, ಹಾಗೂ ಪತ್ರಿಕೆಯ ಬಗೆಗೆ ತೋರಿದ ಆಸಕ್ತಿ ಇವುಗಳಿಂದಾಗಿ ಅನಿವಾರ್ಯವಾಗಿ ಪತ್ರಿಕೆಯ ಗಾತ್ರವನ್ನು ಹೆಚ್ಚಿಸಲೇ ಬೇಕಾಗಿ ಬಂತು.

ಹೀಗೆ ಪತ್ರಿಕೆಯ ಪುಟಗಳನ್ನು ಹೆಚ್ಚಿಸುವುದು ಸುಲಭದ ಮಾತಾಗಿರಲಿಲ್ಲ. ಆರಂಭದಲ್ಲಿ ಚಂದಾಹಣವಾಗಿ ವಾರ್ಷಿಕ ಕೇವಲ ಒಂದು ರೂಪಾಯಿಯನ್ನಷ್ಟೇ ಪಡೆಯುತ್ತಿದ್ದು ಅಷ್ಟು ಅಲ್ಪ ಮೊತ್ತಕ್ಕೆ ಅದಕ್ಕಿಂತ ಹೆಚ್ಚಿನ ಪುಟಗಳನ್ನು ಒದಗಿಸುವುದು ಕಷ್ಟದ ವಿಚಾರವಾಗಿತ್ತು. ಸಂಪಾದಕರಿಗೆ ಪತ್ರಿಕೆಯ ಗಾತ್ರ ಹೆಚ್ಚಿಸಬೇಕೆಂಬ ಆಶಯವಿದ್ದರೂ ಹಣದ ಅಡಚಣೆಯ ಕಾರಣದಿಂದಾಗಿ ಅದನ್ನು ಕಾರ್ಯ ರೂಪಕ್ಕೆ ತರಲು ಸಾಧ್ಯವಾಗದ ಬಗ್ಗೆ ವಿಷಾದವಿದ್ದು ಅದನ್ನು ಸೂಚಿಸಿರುವುದೂ ಇದೆ. ಪತ್ರಿಕೆ ಪ್ರಾರಂಭವಾಧ ಎರಡನೆಯ ವರ್ಷದಲ್ಲಿಯೇ ಸಂಸ್ಥಾಪಕರು "ಸಂಚಿಕೆಗಳು ಮೂರನ್ನೇ ಇಟ್ಟುಕೊಂಡು ಅವುಗಳ ಪುಟಗಳನ್ನು ಮಾತ್ರ ಒಂದಕ್ಕೆರಡಷ್ಟು ಹೆಚ್ಚಿಸಿ ಒಂದೊಂದು ಸಂಚಿಕೆಯಲ್ಲೂ ಪೂರ್ಣವಾದ ಉಪನ್ಯಾಸಗಳನ್ನು ಕೊಡಬೇಕೆಂದು ಯೋಚಿಸಿದವು. ಇದಕ್ಕೆ ದೊಡ್ಡ ಅಡಚಣೆ ದ್ರವ್ಯ"[2] ಎಂದು ಹೇಳಿಕೊಂಡಿದ್ದಾರೆ. ಚಂದಾದಾರರ ಸಂಖ್ಯೆಯನ್ನೋ ಅಥವಾ ಚಂದಾ ಹಣವನ್ನೋ ಹೆಚ್ಚಿಸಿದಾಗ ಮಾತ್ರ ಸಂಚಿಕೆಗಳ ಪುಟಗಳನ್ನಾಗಲೀ ಸಂಖ್ಯೆಗಳನ್ನಾಗಲೀ ಹೆಚ್ಚಿಸಲು ಸಾಧ್ಯ ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಅವರ ಅಭಿಪ್ರಾಯ ಹೆಚ್ಚು ದಿನ ಉಳಿಯಲಿಲ್ಲ.

ಪ್ರಬುದ್ಧ ಕರ್ನಾಟಕದ ಮೂರನೆ ಸಂಪುಟದಲ್ಲಿಯೇ ಅದರ ಗಾತ್ರ ೨೧೮ ಪುಟಗಳಿಗೆ ಏರಿದರೆ ನಾಲ್ಕನೆಯ ಸಂಪುಟದಲ್ಲಿ ಮುನ್ನೂರೈವತ್ತು ಪುಟಗಳಷ್ಟನ್ನು

---

೧. ವಸ್ತುಕೋಶ, ಪ್ರಬುದ್ಧ ಕರ್ನಾಟಕ, ಸಂಪುಟ ೧೬, ಸಂಚಿಕೆ ೪, ಪು. ೧೧೮.
೨. ವಸ್ತುಕೋಶ, ಪ್ರಬುದ್ಧ ಕರ್ನಾಟಕ, ಸಂಪುಟ ೨, ಸಂಚಿಕೆ ೨, ಪು. ೩೮.

ಮುಟ್ಟಿದೆ. ಪತ್ರಿಕೆಯಲ್ಲಿ ಗಾತ್ರ ಹೀಗೆ ಏರುತ್ತು ಸಾಗಿದರೂ ಅದರಲ್ಲಿ ಪ್ರಕಟಣೆಗಾಗಿ ಬರುತ್ತಿದ್ದ ಎಲ್ಲ ಲೇಖನಗಳಿಗೆ ಅವಕಾಶ ಕೊಡಲು ಸಾಧ್ಯವಾಗದೇ ಹೋಗಿರುವುದೂ ಉಂಟು. ಇದರ ಒತ್ತಡ ಎಷ್ಟು ಹೆಚ್ಚಾಗಿತ್ತೆಂದರೆ ಆರನೆಯ ಸಂಪುಟದಲ್ಲಿ ಸಂಪಾದಕರು ತಮ್ಮ ಅಭಿಪ್ರಾಯ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಿದ್ದ ವಸ್ತುಕೋಶಕ್ಕೆ ಅವಕಾಶ ದೊರಕದೇ ಇರುವುದರ ಬಗ್ಗೆ ಹೇಳಿಕೊಂಡಿದ್ದಾರೆ. ನಂತರದ ದಿನಗಳಲ್ಲೂ ಇದೇ ರೀತಿ ಒತ್ತಡ ಹೆಚ್ಚಾಗುತ್ತಾ ಬಂದು ಸಂಪುಟದ ಗಾತ್ರ ಸಾವಿರ ಪುಟಗಳನ್ನು ಮುಟ್ಟಿರುವ ನಿದರ್ಶನವೂ ಇದೆ. ಈ ಮಧ್ಯೆ ಪ್ರಕಟಣೆಗಾಗಿ ಬರುವ ಲೇಖನಗಳ ಗಾತ್ರ ಹೆಚ್ಚಾದಾಗ ಸಂಪುಟದ ಪುಟಗಳನ್ನು ಸೀಮಿತಗೊಳಿಸಿಕೊಳ್ಳುವ ದೃಷ್ಟಿಯಿಂದ ಲೇಖನಗಳ ಗಾತ್ರವನ್ನು ಕಡಿಮೆ ಮಾಡಿ ಕಳುಹಿಸಿಕೊಡಬೇಕೆಂದು ವಿನಂತಿಸಿರುವುದೂ ಉಂಟು. ಆದರೆ ಅಲ್ಪ ಮೊತ್ತದ ಚಂದಾಹಣಕ್ಕೆ ಗುಣಾತ್ಮಕವಾಗಿರುವ ಹೆಚ್ಚಿನ ಪುಟಗಳನ್ನು ತಮ್ಮ ಚಂದಾದಾರರಿಗೆ ನೀಡಬೇಕೆಂಬ ಅವರ ಆಶಯ ಪತ್ರಿಕೆಗಳ ಗಾತ್ರದಲ್ಲಿ ಪ್ರತಿಬಿಂಬಿತವಾಗಿದೆ.

**ಪ್ರಬುದ್ಧ ಕರ್ನಾಟಕದಲ್ಲಿ ನಿಯತವಾಗಿ ಪ್ರಕಟಗೊಳ್ಳುತ್ತಿದ್ದ ಜನಪ್ರಿಯ ವಿಭಾಗಗಳು**

ಪ್ರಬುದ್ಧ ಕರ್ನಾಟಕದ ಆರಂಭದ ಸಂಚಿಕೆಯನ್ನು ಗಮನಿಸಿದರೆ, ಪ್ರಬುದ್ಧ ಕರ್ನಾಟಕದ ಬಗ್ಗೆ ಸಂಪಾದಕರು ಬರೆದಿರುವ ಲೇಖನ, ಕನ್ನಡ ಸಾಹಿತ್ಯ ಹಾಗೂ ಕವಿಯನ್ನು ಕುರಿತ ಎರಡು ವಿಮರ್ಶೆ, ಸಂಯುಕ್ತಾಪಾಹರಣ ಎಂಬ ಕಾದಂಬರಿ, ಕಾವ್ಯವಲೋಕನ ಮತ್ತು ವಸ್ತುಕೋಶಗಳೆಂಬ ವಿಚಾರಗಳು ಪ್ರಕಟವಾಗಿರುವುದು ಕಂಡು ಬರುತ್ತದೆ. ಸಾಧ್ಯವಾದಷ್ಟು ವಿಭಿನ್ನ ವಿಚಾರಗಳನ್ನು ಜನಗಳಿಗೆ ನೀಡಬೇಕೆಂಬುದೂ, ಅದಕ್ಕಾಗಿ ಬೇರೆ ಬೇರೆ ವಿಭಾಗಗಳನ್ನು ಪ್ರಾರಂಭಿಸಿದರೆ ಪ್ರಯೋಜನವಾಗಬಹುದೆಂಬುದೂ ಅವರ ನಂಬಿಕೆ. ಹೀಗಾಗಿಯೇ ಸಂಪಾದಕರು ನಂತರದ ದಿನಗಳಲ್ಲಿ ಹೊಸ ಹೊಸ ವಿಭಾಗಗಳನ್ನು ತೆರೆದಿದ್ದಾರೆ. ಕವನಗಳು, ಸಾಹಿತ್ಯ ವಿಚಾರ, ವಿಜ್ಞಾನ, ಶಾಸ್ತ್ರ ವಿಚಾರ, ಐತಿಹಾಸಿಕ ಸಂಶೋಧನೆ, ಜೀವನಚರಿತ್ರೆ, ಅರ್ಥಶಾಸ್ತ್ರ, ನಾಟಕ ಕತೆ, ರಾಜನೀತಿ, ಕಾವ್ಯವಲೋಕನ, ವಸ್ತುಕೋಶ, ಸಂಪಾದಕಯ, ಸಾದರ ಸ್ವೀಕಾರ, ಪ್ರಾಚ್ಯಲೇಖನಮಾಲೆ ಎಂಬಂತಹ ವಿಭಾಗಗಳು ಕಂಡುಬಂದರೂ ಇದು ನಿಯತವಾಗಿಲ್ಲ. ಇದ್ದ ವಿಭಾಗಗಳಲ್ಲಿ ಕೆಲವೊಂದು ಹೊರಟುಹೋಗಿವೆ. ಕೆಲವು ಬಾರಿ ಹೊಸ ವಿಭಾಗಗಳು ಸೃಷ್ಟಿಯಾಗಿದ್ದು ಒಂದೇ ರೀತಿಯನ್ನು ಅನುಸರಿಸಿದಂತೆ ಕಂಡುಬರುವುದಿಲ್ಲ. ಆದರೆ ಪ್ರಕಟವಾಗುವ ಎಲ್ಲ ವಿಭಾಗಗಳು ಎಲ್ಲರಿಗೂ ಪ್ರಿಯವಾಗುತ್ತದೆ ಎಂಬ ನಂಬಿಕೆ ಅವರಿಗಿಲ್ಲ. ತಾವು ಪ್ರಕಟಿಸುತ್ತಿರುವ ವಿಭಾಗಗಳಲ್ಲಿ ವೈವಿಧ್ಯತೆ, ಇರುವುದರಿಂದ ವಿಭಿನ್ನ ಆಸಕ್ತಿ ಇರುವ ಓದುಗರಿಗೆ ಪ್ರಿಯವಾಗುಬಹುದೆಂದು ಅವರು ಭಾವಿಸಿರುವುದು ಕಂಡು ಬರುತ್ತದೆ.

ನಾಲ್ಕನೆಯ ಸಂಪುಟದ ನಾಲ್ಕನೆಯ ಸಂಚಿಕೆಯಲ್ಲಿ ಈ ಬಗ್ಗೆ ಪ್ರಸ್ತಾಪಿಸಿ ಪತ್ರಿಕೆಯಲ್ಲಿ ಪ್ರಕಟವಾಗುತ್ತಿರುವ ವಿಭಿನ್ನ ವಿಷಯಗಳು ಮಿಠಾಯಿ ಅಂಗಡಿಯಲ್ಲಿರುವ ವಿಭಿನ್ನ ರೀತಿಯ ಪದಾರ್ಥಗಳ ಹಾಗೆ ಆ ಅಂಗಡಿಯಲ್ಲಿರುವ ಪಾದಾರ್ಥಗಳಲ್ಲಿ ಒಬ್ಬೊಬ್ಬರಿಗೆ ಒಂದೊಂದರಲ್ಲಿ ಆಸಕ್ತಿ ಎಲ್ಲರಿಗೂ ಒಂದೇ ಪದಾರ್ಥ ರುಚಿಸುವುದಿಲ್ಲ. ಪ್ರಬುದ್ಧ ಕರ್ನಾಟಕದ ವಿಚಾರವೂ ಹೀಗೆಯೇ, ಪ್ರಬುದ್ಧ ಕರ್ನಾಟಕದವು ಮಿಠಾಯಿಯಂಗಡಿಯಂತೆ "ನವರಸರುಚಿಕರ"ವಾದ ಅನೇಕತರ ಪದಾರ್ಥಗಳನ್ನು ಕನ್ನಡಿಗರಿಗೆ ಒಪ್ಪಿಸಲು ಪ್ರಯತ್ನಪಡುತ್ತಿದೆ. "ಈ ಅಂಗಡಿಗೆ ಹೆಚ್ಚು ಹೆಚ್ಚು ಜನ ಕನ್ನಡಿಗರು ಒಂದು ವ್ಯಾಪಾರ ಮಾಡಿ ಪ್ರೀತಿ,ಹಿತಗಳನ್ನು ಪಡೆದು ಅಭಿರುಚಿಯನ್ನು ವಿಸ್ತಾರ ಪಡಿಸಿಕೊಂಡು ಆರೋಗ್ಯಶಾಲಿಗಳೂ ಧೃಡಕಾಯರೂ ಆಗುವರೆಂದು ನಂಬುತ್ತೇವೆ"[೧] ಎಂದಿರುವ ಮಾತುಗಳು ತಾವು ತಮ್ಮ ಚಂದಾದಾರರಿಗೆ ಉಪಯುಕ್ತವಾಗಬಹುದಾದ ವಿಭಿನ್ನ ವಿಭಾಗಗಳನ್ನು ಪ್ರಕಟಿಸುತ್ತಿದ್ದು, ಅವರು ತಮ್ಮ ಆಸಕ್ತಿ ಹಾಗೂ ಅಭಿರುಚಿಗೆ ತಕ್ಕಂತೆ ಅದರ ಪ್ರಯೋಜನ ಪಡೆದುಕೊಳ್ಳಬೇಕೆಂಬ ಸಂಪಾದಕರ ಕಾಳಜಿಯನ್ನು ತೋರಿಸುತ್ತದೆ.

**ವಸ್ತುಕೋಶ**

ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗುತ್ತಿದ್ದ ಬಹುತೇಕ ಎಲ್ಲಾ ವಿಭಾಗಗಳೂ ಜನರ ಮೆಚ್ಚುಗೆಯನ್ನು ಗಳಿಸಿದ್ದವಾದರೂ ಅವುಗಳಲ್ಲಿ 'ವಸ್ತು ಕೋಶ' ವಿಭಾಗ ಹೆಚ್ಚಿನ ಗಮನ ಸೆಳೆಯುತ್ತಿತ್ತು. "ಶ್ರೀ ಮಾಸ್ತಿಯವರ 'ಜೀವನ'ವನ್ನು ವಿಶೇಷವಾಗಿ ಅದರ ಸಂಪಾದಕೀಯ ಟಿಪ್ಪಣಿಗಳಿಗಾಗಿ ಓದುತ್ತಿದ್ದಂತೆ ವಿದ್ಯಾರ್ಥಿಗಳಾದ ನಾವು 'ಪ್ರಬುದ್ಧ ಕರ್ನಾಟಕವನ್ನು' ಕಥೆಗಾಗಿ ವಸ್ತುಕೋಶಗಳಿಗಾಗಿ ಓದುತ್ತಿದ್ದವು ಅವು ಅಷ್ಟು ನವೀನವಾಗಿ ಸ್ವಾರಸ್ಯವಾಗಿ ಉಚ್ಚಮಟ್ಟದ್ದಾಗಿರತಿತ್ತು"[೨] ಅಷ್ಟೇ ಅಲ್ಲದೇ ಅವುಗಳು ವೈವಿಧ್ಯತೆಯಿಂದ ಕೂಡಿ ಎಲ್ಲ ಬಗೆಯ ವಿಚಾರಗಳ ಕಡೆಗೂ ಗಮನ ಹರಿಸುತ್ತಿತ್ತು. "ನಾಡು–ನುಡಿ, ಸಂಗೀತ–ಸಾಹಿತ್ಯ, ಚಿತ್ರ–ಶಿಲ್ಪ, ಆಸೆ–ಆಕಾಂಕ್ಷೆ, ಸಮಸ್ಯ–ಸಮಾಧಾನ, ಪರಿಹಾರ, ಅಭಿನಂದನೆ–ಕಂಬನಿ, ರಜತೋತ್ಸವ–ರೋಧನ ಎಷ್ಟು ತೆರವಾದವು"[೩] ಅವುಗಳ ತಲೆ ಬರಹಗಳೇ ಸಂಪಾದಕರು ಗಮನ ಹರಿಸಿರುವ ವಸ್ತು ವಿಶಿಷ್ಟಗಳ ಕಡೆ ಗಮನಸೆಳೆಯುತ್ತದೆ ಕನ್ನಡ ಪುಣ್ಯ 'ದೇಶಭಾಷೆಯಲ್ಲಿ ಪಾಠಪ್ರವಚನಗಳು', 'ಮೀಠಾಯಿ ಅಂಗಡಿ', 'ಸರಸ್ವತಿ ಮನೆಯಲ್ಲಿ ಕಳವು', 'ಲಂಡನ್ ಡೇಲಿ ಪತ್ರಿಕೆ', 'ವೀಣೇಯ ಹುಚ್ಚು ಚಿತ್ರ ಪರಿಚಯ', 'ಹೊಸ ಸಾಹಿತ್ಯದಲ್ಲಿನ ಚಲನ ವಲನ',

---

೧. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ–೪, ಸಂಚಿಕೆ–೪, ಪು. ೨.
೨. ನಾಯಕ ಹಾ.ಮಾ. ತಿಪ್ಪೇರುದ್ರಸ್ವಾಮಿ(ಸಂ.), ಎ.ಆರ್.ಕೃ : ಜೀವನ–ಸಾಧನೆ, ೧೯೭೧, ಪು. ೧೨೪.
೩. ನಾಯಕ ಹಾ.ಮಾ. ತಿಪ್ಪೇರುದ್ರಸ್ವಾಮಿ(ಸಂ.), ಎ.ಆರ್.ಕೃ : ಜೀವನ–ಸಾಧನೆ, ೧೯೭೧, ಪು. ೧೮.

'ಸ್ವಾಗತಾಶಂಸೆ', 'ಕೈಬರಹದ ಪತ್ರಿಕೆಗಳು', 'ಮೈಸೂರಿನ ಪ್ರಯೋಗ', 'ದೊರೆಗಳ ಪಟ್ಟಾಭಿಷೇಕ', 'ಕೈಲಾಸಂ ಅವರ ನಿಧನಕ್ಕಾಗಿ ಕಂಬನಿ', 'ಪ್ರಾಂತ ಭಾಷೆಗಳ ಮುನ್ನಡೆ', 'ಶ್ರೀ ಮನ್ಮಹಾರಾಜದ ಉತ್ತರ ಕರ್ನಾಟಕದ ಪ್ರವಾಸ', 'ತಾಯ್ನಾಡಿಗೆ ತಲೆದೊಡವು', 'ಕನ್ನಡ ಕೂಡಲೇ ಶಿಕ್ಷಣ ಮಾಧ್ಯಮವಾಗಲಿ', 'ಕನ್ನಡವು ಸಿಂಹಾಸನವನ್ನೇರುತಿದೆ'... ಇತ್ಯಾದಿ ಹೀಗೆ ಅದರಲ್ಲಿ ಪ್ರಕಟವಾಗಿರುವ ವಿಚಾರಗಳ ತಲೆ ಬರಹಗಳು ಅವುಗಳ ವೈಶಿಷ್ಟವನ್ನು ಸಾರುತ್ತಿವೆ. ಕನ್ನಡ ನಾಡಿನ ಯಾವುದೇ ಪ್ರಮುಖವಾದ ಘಟನೆಗಳ ವಿವರಣೆ ಇಲ್ಲ ಲಭ್ಯ. ಯಾವುದೇ ವಿಚಾರ ಪ್ರಸ್ತಾಪವಾದರೆ ಅದರಿಂದ ಹೊರಡುವ ಧ್ವನಿ ಒಂದೇ ಅದೇ ಕನ್ನಡಾಭಿಮಾನ.

ಆಚಾರ್ಯ ಪೂಜೆ ಎಂಬ ವಸ್ತುಕೋಶದ ಬರಹದಲ್ಲಿ ಸಂಪಾದಕರು ಆರ್ ನರಸಿಂಹಾಚಾರ್ಯರ ಬಗ್ಗೆ ಪ್ರಸ್ತಾಪಿಸಿ ಅವರು ಕನ್ನಡಕ್ಕಾಗಿ ಮಾಡುತ್ತಿದ್ದ ಕಾರ್ಯ-ಗಳನ್ನು ಪ್ರಶಂಸಿಸಿದ್ದಾರೆ. ಈ ಸಂದರ್ಭದಲ್ಲಿ ಭಿನ್ನ ಭಿನ್ನ ವಿಷಯಗಳಲ್ಲಿ ಪಾಂಡಿತ್ಯ ಪಡೆದಿರುವವರು ಅದನ್ನು ತಮ್ಮ ಮಾತೃಭಾಷೆಯಲ್ಲಿ ತಿಳಿಸಿದರೆ ಉಪಯುಕ್ತ-ವಾಗುವುದೆಂದೂ ಹಾಗೆ ಬರೆಯದೇ ಹೋದರೆ ಅಂತಹ ಪಂಡಿತರಿಂದ ಕನ್ನಡಕ್ಕೆ ಯಾವುದೇ ಬಗೆಯ ಪ್ರಯೋಜನವಿಲ್ಲವೆಂದು ಸಾರುತ್ತಾರೆ. "ಆರು ತಿಂಗಳ ಮಕ್ಕಳೂ ತಮ್ಮ ತಾಯಿಯ ಗುರುತನ್ನು ಮನಸ್ಸಿನಲ್ಲಿ ಅಚ್ಚಳಿಯದೆ ಇಟ್ಟುಕೊಂಡಿದ್ದು ಆ ಚಹರೆಯನ್ನು ಕಂಡರೆ ನಲಿದಾಡುವುದು. ಪ್ರಕೃತದಲ್ಲಿ ನಮ್ಮ ಜನರ ಸ್ಥಿತಿಯು ಶಿಶುಗಳ ಸ್ಥಿತಿಗಿಂತಲೂ ಕಡಿಮೆಯಾಗಿವೆ. ನಮ್ಮ ತಾಯಿಯನ್ನು ನಾವು ಗುರುತಿಸಲು ಆಗದೆ ಹೋದರೆ ಆಕೆಯ ಸೇವೆಯನ್ನು ಮಾಡುವುದೆಂತು"[೧] ಎಂದು ಪ್ರಶ್ನಿಸುತ್ತಾರೆ. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಸಿಗಬೇಕು. ನಮ್ಮ ನಾಡಿನಲ್ಲಿ ನಮ್ಮ ಮಾತೃಭಾಷೆಗೆ ನಮ್ಮಿಂದಲೇ ಆದ್ಯತೆ ಸ್ಥಾನ ಸಿಗದೇ ಹೋದರೆ ಅದನ್ನು ಬೇರೆಯವರಿಂದ ನಿರೀಕ್ಷಿಸಲು ಸಾಧ್ಯವಿಲ್ಲ. "ಕನ್ನಡ ದೇಶದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದೇ ಹೋದರೆ ಮೆಕ್ಸಿಕೋ ದೇಶದವರೋ, ನ್ಯೂಜಿಲ್ಯಾಂಡ್‌ನವರೊ ಕೊಡುತ್ತಾರೆಯೇ"[೨] ಹಾಗಾಗಿ ಕನ್ನಡಿಗರು ಕನ್ನಡದ ಬಗ್ಗೆ ಗೌರವ ಹೊಂದಬೇಕು ಆಗತಾನೆ ನೆಂಟರು, ಇಷ್ಟರು, ಹೋಗುವವರು ಬರುವವರು? ಅವಳಿಗೆ ಗೌರವವಿದ್ದರೆ ತಾನೆ ಆಳು ಕಾಳು ಸಂಭ್ರಮ ಹಾಗೆಯೇ ಕನ್ನಡವೆಂಬ ಯಜಮಾನಿಯನ್ನು ಪುಷ್ಟಿಯಿಂದ, ಆರೋಗ್ಯದಿಂದ ಇರುವಂತೆ ನೋಡಿಕೊಳ್ಳಬೇಕಾದುದು ಕನ್ನಡಿಗರ ಕರ್ತವ್ಯ ಎಂಬುದು ಇನ್ನೊಂದು ವಸ್ತುಕೋಶದಲ್ಲಿ ಬಂದಿರುವ ಆಶಯ. ಹೀಗೆ ವಸ್ತು ಕೋಶದ ವಸ್ತು ಯಾವುದೇ ಆದರೂ ಅದರ ಮೂಲಕ ಓದುಗರ ಜ್ಞಾನ ಪರಿಧಿಯನ್ನು ವಿಸ್ತರಿಸುವ ಮತ್ತು

---

೧. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ-೪, ಸಂಚಿಕೆ-೨, ಪು. ೨.
೨. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ-೭, ಸಂಚಿಕೆ-೨, ಪು. ೭.

ಜೊತೆಯಲ್ಲೇ ಕನ್ನಡಾಭಿಮಾನ ಬೆಳಸುವ ಆಶಯ ಗೋಚರಿಸುತ್ತದೆ. ಆರಂಭದ ಸಂಚಿಕೆಗಳಲ್ಲಿ ಸಂಪಾದಕರ ಅನಿಸಿಕೆ ಅಭಿಪ್ರಾಯಗಳು ಇದರ ಮೂಲಕವೇ ವ್ಯಕ್ತವಾಗುತ್ತಿತ್ತು.

**ಮೊದಲ ಪುಟದ ಕವನ**

ಪ್ರಬುದ್ಧ ಕರ್ನಾಟಕದ ಮೊದಲ ಸಂಪುಟದಲ್ಲಿ ಆರಂಭದ ಪುಟದಲ್ಲಿ ಗದ್ಯ ಲೇಖನವಿದೆ. ನಾಲ್ಕನೆಯ ಸಂಪುಟದ ಮೊದಲನೆಯ ಸಂಚಿಕೆಯಿಂದ ಕವನಗಳು ಪ್ರಕಟವಾಗಲು ಆರಂಭವಾಯಿತು. ಡಿ.ವಿ.ಗುಂಡಪ್ಪನವರ "ವನಸುಮದೊಳೆನ್ನ ಜೀವನವು ವಿಕಸಿಸುವಂತೆ" ಎಂಬ ಸಾಲಿನೊಡನೆ ಪ್ರಾರಂಭವಾಗುವ 'ಪ್ರಾರ್ಥನೆ' ಎಂಬ ಕವನ ಮೊದಲಬಾರಿಗೆ ಇದರಲ್ಲಿ ಪ್ರಕಟವಾಗಿದ್ದು, ಈ ಪದ್ಧತಿಯು ನಲವತ್ತಾರನೆಯ ಸಂಪುಟ ಎಂದರೆ ಸುಮಾರು ನಲವತ್ತೆರೆಡು ವರ್ಷಗಳವರೆಗೆ ಮುಂದುವರೆದುಕೊಂಡು ಬಂದಿದೆ. ಪ್ರಬುದ್ಧ ಕರ್ನಾಟಕದ ಮೊದಲನೆಯ ಪುಟದಲ್ಲಿ ಕವನ ಪ್ರಕಟವಾಗುವುದೆಂದರೆ ಅದು ಅಂದಿನ ಬರಹಾಗರರಿಗೆ ಅಭಿಮಾನದ ಸಂಗತಿಯಾಗಿತ್ತು. ಕವಿಯ ಕವನ ಪ್ರಥಮ ಪುಟದಲ್ಲಿ ಪ್ರಕಟಗೊಂಡರೆ ಅದು ಪ್ರತಿಷ್ಠೆಯ ವಿಚಾರವಾಗುತ್ತಿತ್ತು. ಪಂಪನ ಶತಮಾನೋತ್ಸವವನ್ನು ನಡೆಸಿದ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕದ ಅದಕ್ಕೆ ಸಂಬಂಧಿಸಿದಂತೆ ವಿಶೇಷಾಂಕವನ್ನು ಪ್ರಕಟಿಸಿದೆ. ಈ ಸಂದರ್ಭದಲ್ಲಿ ಪಂಪನ ಬಗ್ಗೆ ಪದ್ಯವೊಂದನ್ನು ಬರೆದುಕೊಡುವಂತೆ ಜಿ. ವರದರಾಜರಾವ್ ಅವರನ್ನು ಕೇಳಿದಾಗ ಅವರು ಅಷ್ಟಪಟ್ಟದಿಯ ಕವನವನ್ನು ನೀಡಿದರು. ಅದು ಪ್ರಬುದ್ಧ ಕರ್ನಾಟಕ ಮೊದಲ ಪುಟದಲ್ಲಿಯೇ ಪ್ರಕಟವಾಯಿತು. ಈ ವಿಚಾರವನ್ನು ಕುರಿತಂತೆ ಅವರು "ಇದನ್ನು ಕಂಡ ಎಷ್ಟೋ ಜನ ನನ್ನ ಗೆಳೆಯರೂ ವಿಶ್ವಾಸವುಳ್ಳ ಹಿರಿಯರೂ ನನಗೆ ಅಭಿವಂದನೆಯನ್ನು ಸಲ್ಲಿಸಿದ್ದುಂಟು. (ಆ ಕಾಲದಲ್ಲಿ ಪ್ರಬುದ್ಧ ಕರ್ನಾಟಕದ ಮೊದಲನೆಯ ಪುಟದಲ್ಲಿ ಪದ್ಯ ಪ್ರಕಟವಾಗುವುದು ಒಂದು ಹೆಮ್ಮೆಯ ಸಂಗತಿಯಾಗಿತ್ತು)"[೧] ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ.

**ಕಾವ್ಯವಲೋಕನ**

ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟವಾಗುತ್ತಿದ್ದ ಜನಪ್ರಿಯ ವಿಭಾಗ. ಇದು ಪ್ರಾರಂಭದಿಂದಲೂ ಪ್ರಕಟಗೊಳ್ಳುತ್ತಿರುವ ವಿಭಾಗ. ಈ ವಿಭಾಗದ ಆರಂಭದ ಸಂಚಿಕೆಯಲ್ಲಿ ಶ್ರೀಮತಿ ತಿರುಮಲಾಂಬಾ ಅವರ ಪೂರ್ಣಕಲಾ ಕಾದಂಬರಿಯ ಬಗ್ಗೆ ವಿಮರ್ಶೆ ಇದೆ. ನಂತರದ ದಿನಗಳಲ್ಲಿ ತಮ್ಮ ಅವಗಾಹನೆಗೆ ಕಳುಹಿಸಿದ ಬಹುತೇಕ

---

೧. ನಾಯಕ ಹಾ.ಮಾ. ತಿಪ್ಪೇರುದ್ರಸ್ವಾಮಿ (ಸಂ.), ಜೀವನ ಮತ್ತು ಸಾಧನೆ, ೧೯೭೧, ಪು. ೭೦.

ಕೃತಿಗಳ ಕಿರುಪರಿಚಯವನ್ನು ಮತ್ತು ಅವುಗಳಲ್ಲಿ ಗುರುತಿಸಬಹುದಾದ ಸ್ವಾರಸ್ಯ ಹಾಗೂ ದೋಷಗಳ ಬಗ್ಗೆ ವಿಮರ್ಶೆಗಳನ್ನು ಮಾಡಿದೆ. ಕಾವ್ಯವಲೋಕದ ಉದ್ದೇಶವೆನೆಂಬುದು ಅದರ ಮೊದಲ ಸಂಚಿಕೆಯಲ್ಲಿ ಪ್ರಕಟಗೊಂಡ 'ಪೂರ್ಣಕಲಾ' ಬಗೆಗೆ ಎ.ಆರ್.ಕೃಷ್ಣಶಾಸ್ತ್ರಿಗಳು ವ್ಯಕ್ತಪಡಿಸಿದ ಅಭಿಪ್ರಾಯ ಹಾಗೂ ನಂತರ ವಸ್ತುಕೋಶದಲ್ಲಿ ಅದನ್ನು ಸಮರ್ಥಿಸಿಕೊಂಡ ಬಗೆಯಲ್ಲಿ ವ್ಯಕ್ತವಾಗಿದೆ. 'ಪೂರ್ಣಕಲಾ' ಎ.ಆರ್. ಕೃಷ್ಣಶಾಸ್ತ್ರಿಗಳಿಂದ ತೀವ್ರವಾದ ಕಟುವಿಮರ್ಶೆಗೆ ಒಳಗಾದ ಕೃತಿ. ಅದು ನೀತಿ ಬೋಧಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ಸಂವಿಧಾನ ಕೌಶಲವಿಲ್ಲದೆ ರಚನೆಗೊಂಡಿರುವುದನ್ನು ಈ ವಿಮರ್ಶೆಯಲ್ಲಿ ಖಂಡಿಸಿದೆ. ಕಾದಂಬರಿಯಲ್ಲಿ ಬರುವ ಸನ್ನಿವೇಶ, ಬಳಕೆಯಾಗಿರುವ ಹೆಸರು ಎಲ್ಲದರಲ್ಲೂ ಕೃತಕತೆ ಇರುವುದನ್ನು ವಿರೋಧಿಸಿದೆ.

ಕನ್ನಡದಲ್ಲಿ ಪ್ರಕಟಗೊಂಡ ಕೃತಿಯೊಂದರ ಬಗ್ಗೆ ಹೀಗೆ ತೀವ್ರವಾಗಿ ಖಂಡಿಸಿರುವುದನ್ನು ಸಮರ್ಥಿಸಿಕೊಳ್ಳುತ್ತಾ 'ಕಾವ್ಯಾವಲೋಕನ'ದ ಉದ್ದೇಶ-ವೇನೆಂಬುದನ್ನು ಸ್ಪಷ್ಟಪಡಿಸಿದೆ. "ಈ ಸಂಚಿಕೆಯನ್ನು ಬಂದಿರುವ ಪೂರ್ಣಕಲಾ ಗ್ರಂಥದ ವಿಮರ್ಶೆಯನ್ನು ನೋಡಿ ಸತಿ ಹಿತ್ಯಷಿಣಿ ಗ್ರಂಥ ಮಾಲೆಯನ್ನು ಮೆಚ್ಚುವ ನಮ್ಮ ಪಾಠಕರನೇಕರಿಗೆ ಮನಸ್ಸು ನೋಯಬಹುದು. ಆದರೆ ಮಾಡುವುದೇನು? ಲೋಕೋ ವಿಭಿನ್ನ ರುಚಿಃ ಎಂದು ಹೇಳೋಣವೇ? ಅಥವಾ ವಿಮರ್ಶೆಯೂ ದಯಾದಾಕ್ಷಿಣ್ಯಗಳಿಲ್ಲದೇ ಅಣ್ಣ ತಮ್ಮಂದಿರು ಮೊದಲುಗೊಂಡು ಎಲ್ಲರು ಮೇಲೆಯೂ ಏಕ ರೀತಿಯಲ್ಲಿ ರಾಜಕೀಯ ಶಾಸನಗಳನ್ನು ಜಾರಿಗೆ ತರತಕ್ಕ ಸರ್ಕಾರದ ಅಧಿಕಾರಿಯಂತಿರುವುದೆಂದು ಹೇಳೋಣವೇ".[೧] ಇದು ಪ್ರಬುದ್ಧ ಕರ್ನಾಟಕದ ತನಗೆ ನಿಗದಿ ಪಡಿಸಿಕೊಂಡ ಕಾರ್ಯಪಡಿಸಿಕೊಂಡ ಕಾರ್ಯಸೂಚಿ. ಕವಿ ಯಾರೇ ಆಗಿರಬಹುದು. ದೊಡ್ಡವರು ಸಣ್ಣವರು ಎಂಬ ಬೇಧವಿಲ್ಲದೆ ಎಲ್ಲರ ಕೃತಿಗಳನ್ನು ಸರಿಸಮವಾಗಿ ಕಾಣಬೇಕು ಹಾಗೂ ವಿಮರ್ಶಿಸಬೇಕು ಎಂಬುದು ಅದರ ಉದ್ದೇಶ.[೨]

ಕಾವ್ಯಾವಲೋಕನದ ಮೂಲಕವಾಗಿ ಕನ್ನಡ ಸಾಹಿತ್ಯದ ಉತ್ತಮವಾದ ಗುಣ ಲಕ್ಷಣಗಳನ್ನು ನಿರ್ಧರಿಸುವ ಕಾರ್ಯವು ನಡೆಯಿತು. ಈ ವಿಭಾಗದಲ್ಲಿ ಸೇವೆ

---

೧. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ-೧, ಸಂಚಿಕೆ-೧, ಪು. ೪೦.

೨. ಈ ರೀತಿಯಾದ ಮಾರ್ಗ ಸೂಚಿಯನ್ನು ಗೊತ್ತು ಪಡಿಸಿಕೊಂಡಿದ್ದರೂ ಬಿ.ಎಂ.ಶ್ರೀಕಂಠಯ್ಯನವರ ಅಶ್ವತ್ಥಾಮನ್ ನಾಟಕದ ಬಗ್ಗೆ ಅಸಮಾಧಾನ ಉಂಟಾಗಿ ಕೆಲವರು ಅದನ್ನು ಕಟುವಾಗಿ ಟೀಕಿಸಿದಾಗ "ಮಾ" ಶ್ರೀಕಂಠಯ್ಯನವರು ಈಗಿನ ಕನ್ನಡ ಆಚಾರ್ಯಪುರುಷರಲ್ಲಿ ಒಬ್ಬರು. ಈ ಗ್ರಂಥವನ್ನು ಬರೆದರು ಅವರು ಎಂದ ಮೇಲೆ ಸ್ವಲ್ಪ ತಾಳ್ಮೆ ಬೇಡವೇ ? ಅದರಲ್ಲಿಯೂ ದೊಡ್ಡದು ಚಿಕ್ಕದು ಪೂಜ್ಯ ಪವಿತ್ರ ಭಾವವಿಲ್ಲದೆ........ ಇದು ಸಾಹಿತ್ಯ ದೃಷ್ಟಿಯಿಂದ ಲಾಭ ನಷ್ಟವೆ ಎಂಬುದನ್ನು ವಿಚಾರ ಮಾಡದೆ, ವೆಂಕಟ ಶೀನ ನಾಣಿ ಮಹಾಶಯವರು ಇಲ್ಲದ ಸಲ್ಲದ ಉದ್ದೇಶಗಳನ್ನು ಆರೋಪಿಸಿ ಮನಬಂದಂತೆ ಮಾತಾಡುವುದು ಸೂಕ್ತವಾಗಿ ತೋರುವುದಿಲ್ಲ (ಪ್ರ.ಕ.ಪು ೮ ೧೧/೪) ಎಂದಿರುವುದು ವಿರೋಧಾಭಾಸವಾಗಿ ತೋರುತ್ತದೆ.

ಸಲ್ಲಿಸಿರುವ ವಿಮರ್ಶಕರ ಸಂಖ್ಯೆ ಹಾಗೂ ಪರಿಚಯಗೊಂಡ ಕೃತಿಗಳ ವ್ಯಾಪ್ತಿ ಬಹಳ ಹಿರಿದು. ಎ.ಆರ್.ಕೃಷ್ಣಶಾಸ್ತ್ರಿ, ಟಿ.ಎಸ್.ವೆಂಕಣಯ್ಯ, ವೀಸೀ, ದೇ.ಜ.ಗೌ., ಸಿಪಿಕೆ, ಹಂಪ ನಾಗರಾಜಯ್ಯ, ಮುಕುಂದರಾವ್, ಕೆ. ಸುಂದರೇಶ್, ಎಲ್. ಗುಂಡಪ್ಪ, ಶಿವರಾಮ ಕಾರಂತ, ಡಿ.ವಿ.ಗುಂಡಪ್ಪ, ಎಸ್.ವಿ.ರಂಗಣ್ಣ, ಅಶ್ವತ್ಥ.ಎಂ.ಆರ್, ಶ್ರೀನಿವಾಸಮೂರ್ತಿ, ಎನ್.ಅನಂತರಂಗಾಚಾರ್, ಜಿ.ಪಿ.ರಾಜರತ್ನಂ, ದ.ರಾ.ಬೇಂದ್ರೆ, ಗೋಪಾಲಕೃಷ್ಣ ಅಡಿಗ, ಇವರೇ ಮೊದಲಾದವರು ನೂರಾರು ಕೃತಿಗಳ ಕಿರುಪರಿಚಯ ಮಾಡಿಕೊಟ್ಟಿದ್ದಾರೆ. ಪತ್ರಿಕೆ ಪ್ರಾರಂಭಗೊಂಡ ಮೊದಲು ಮೂರು ಸಂಪುಟಗಳ ಕಾವ್ಯಾವಲೋಕನ ವಿಭಾಗದಲ್ಲಿ ಒಂದೊಂದು ಗ್ರಂಥಗಳ ಬಗ್ಗೆ ಗಮನ ಹರಿಸಲಾಗಿದೆ. ನಾಲ್ಕನೆಯ ಸಂಪುಟದ ಎರಡನೆಯ ಸಂಚಿಕೆಯಿಂದ ಒಂದಕ್ಕಿಂತ ಅಧಿಕವಾದ ಗ್ರಂಥಗಳು ಕಾವ್ಯವಲೋಕನದಲ್ಲಿ ವಿಮರ್ಶೆಗೆ ಒಳಗಾಗಿದೆ. ಅನಂತರದ ದಿನಗಳಲ್ಲಿ ಕಾವ್ಯವಲೋಕನಕ್ಕೆ ಬರುತ್ತಿದ್ದ ಗ್ರಂಥಗಳ ಸಂಖ್ಯೆ ಅಧಿಕವಾದಾಗ ಎಲ್ಲ ಗ್ರಂಥಗಳನ್ನು ವಿಮರ್ಶೆ ಮಾಡಲಿಕ್ಕೆ ಸಾಧ್ಯವಾಗದೆ ಇರುವುದಕ್ಕೆ ವಿಷಾದ ವ್ಯಕ್ತಪಡಿಸಿ ನಂತರದ ದಿನಗಳಲ್ಲಿ ಸ್ಥಳವಾಕಾಶವಾದಾಗ ಅದನ್ನು ಪ್ರಕಟಿಸುವುದಾಗಿ ಸಮಾಧಾನ ಹೇಳಿರುವುದೂ ಉಂಟು. ಹೊಸಗನ್ನಡ ಸಾಹಿತ್ಯವು ದಿನದಿನಕ್ಕೆ ಬೆಳೆಯುತ್ತ ಅದರಲ್ಲಿ ಬರುತ್ತಿರುವ ಗ್ರಂಥಗಳು ಹೆಚ್ಚುತ್ತಿವೆ. ಸಣ್ಣದು ಪುಟ್ಟದು ಎಲ್ಲವನ್ನು ಲೆಕ್ಕ ಹಾಕಿದರೆ ಸರಾಸರಿ ತಿಂಗಳಿಗೆ ಎಂಟು ಹತ್ತು ನಮ್ಮ ಈ ಪತ್ರಿಕೆಯ ವಿಮರ್ಶೆಗೆಂದೇ ಬರುತ್ತಿವೆ. ಇವೆಲ್ಲಕ್ಕೂ ಹಾಗೆ ಇಂಬುಕೊಟ್ಟು ವಿಮರ್ಶೆಮಾಡುವುದು ಅಸಾಧ್ಯವಾಗಿದೆ. ಈ ಭಾಗದ ವಿಸ್ತಾರದಿಂದ ಇದಕ್ಕಿಂತ ಹೆಚ್ಚು ಉಪಯುಕ್ತವಾದ ಭಾಗಗಳಿಗೂ ಹೊಸಹೊಸವಿಚಾರಗಳಿಗೂ ಸ್ಥಳ ಸಂಕೋಚ ಉಂಟಾಗುತ್ತಿದೆ. ಇವೇ ಮೊದಲಾದ ಕಾರಣಗಳಿಂದ ಈ ಭಾಗವನ್ನು ಇನ್ನು ಸ್ವಲ್ಪ ಸಂಕುಚಿಸಿ ಸಂದಿಗ್ಧೋಪಯೋಗವನುಳ್ಳ ಟೀಕೆ ಟಿಪ್ಪಣಿಗಳನ್ನು ಬಿಟ್ಟು ನಿಶ್ಚಿತೋಪಯೋಗವುಳ್ಳ ವಿಮರ್ಶಾತ್ಮಕ ಪ್ರಬಂಧಗಳನ್ನು ಪ್ರಕಟಿಸಬೇಕೆಂದಿದ್ದೇವೆ.

**ಸಾದರ ಸ್ವೀಕಾರ**

ಕನ್ನಡದಲ್ಲಿ ಹೊಸ ಹೊಸ ಗ್ರಂಥಗಳು ಪ್ರಕಟವಾದರೂ ಯಾವ ಯಾವ ಕೃತಿಗಳು ಪ್ರಕಟವಾದವೆಂಬ ವಿಚಾರ ವಾಚಕರ ಗಮನಕ್ಕೆ ಬರದೇ ಇರುವುದರಿಂದ ಅದನ್ನು ದೊರಕಿಸಿಕೊಡಬೇಕೆಂಬ ಆಲೋಚನೆ ಸಂಪಾದಕರದ್ದು. ಗ್ರಂಥವನ್ನು ಬರೆದಿರುವ ಲೇಖಕರು, ಪ್ರಕಟಿಸಿರುವ ಪ್ರಕಾಶಕರು, ಓದಬೇಕಾದ ವಾಚಕರು ಎಲ್ಲರಿಗೂ ಇದರಿಂದಾಗಿ ನಷ್ಟ ಉಂಟಾಗುತ್ತಿದ್ದು ಅದನ್ನು ದೂರೀಕರಿಸಬೇಕೆಂದು ಆಲೋಚಿಸಿದ್ದಾರೆ. "ಕನ್ನಡದಲ್ಲಿ ಬರೆಯುವುದಿಲ್ಲ. ಬರೆದರೆ ಓದುವುದಿಲ್ಲ ಎಂಬ ಒಂದು ಹೇಳಿಕೆಯೂ ಆಗಾಗ್ಗೆ ಕೇಳಿಬರುತ್ತಿದೆ. ಇದರ ಜೊತೆ 'ಬರೆದದ್ದು

ಗೊತ್ತಾಗುವುದಿಲ್ಲ' ಎಂಬ ವಾಕ್ಯವನ್ನು ಸೇರಿಸಿದರೆ ಪ್ರಕೃತ ಸ್ಥಿತಿಯು ಇನ್ನೂ ಖಚಿತವಾಗುತ್ತದೆ"[೧]. ಇಲ್ಲಿ ಬರೆದದ್ದು ಗೊತ್ತಾಗುವುದಿಲ್ಲ ಎಂದರೆ ಬರೆದದ್ದು ಅರ್ಥವಾಗುವುದಿಲ್ಲ ಎಂಬ ಅರ್ಥವಲ್ಲ. ಯಾವ ಯಾವ ಗ್ರಂಥಗಳು ಪ್ರಕಟ-ಗೊಂಡಿವೆ ಎಂಬುದು ಜನರಿಗೆ ಗೊತ್ತಾಗುವುದಿಲ್ಲ ಎಂಬ ಅರ್ಥ. ಆದುದರಿಂದ ಹೊಸದಾಗಿ ಪ್ರಕಟವಾಗುವ ಪುಸ್ತಕಗಳ ಪಟ್ಟಿಯನ್ನು ಒಳಗೊಂಡ ವಿವರಗಳನ್ನು ನೀಡಿದರೆ ಪುಸ್ತಕ ಕೊಂಡುಕೊಳ್ಳಬೇಕೆನ್ನುವವರಿಗೆ ಸಹಾಯವಾಗುತ್ತದೆ. ಹಾಗಾಗಿ ಅದನ್ನು ದೊರಕಿಸಿಕೊಡಬೇಕೆಂಬುದು ಅವರ ಆಶಯ.

ಕನ್ನಡ ಸಾಹಿತ್ಯ ಪರಿಷತ್ತಿನವರು ಇದೇ ಕಾರ್ಯವನ್ನು ಮಾಡಬೇಕೆಂದು ಯೋಚಿಸಿ, ಗ್ರಂಥಕರ್ತರು, ಪ್ರಕಾಶಕರು, ಪ್ರಕಟಗೊಂಡ ಗ್ರಂಥಗಳ ಒಂದು ಪ್ರತಿಯನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಕಳುಹಿಸಿಕೊಡಬೇಕೆಂದು ಸೂಚಿಸಿದ್ದರು. ಆದರೆ ಇದು ಖರ್ಚಿನ ವಿಷಯವಾದ್ದರಿಂದ ಲೇಖಕರಿಂದ ಹೆಚ್ಚಿನ ಉತ್ತೇಜನ ಸಿಕ್ಕಿರಲಿಲ್ಲ. ಈ ವಿಚಾರವನ್ನು ಅರಿತಿದ್ದ ಸಂಪಾದಕರು ಅದಕ್ಕೆ ಸಲಹೆಯೊಂದನ್ನು ನೀಡಿದ್ದಾರೆ. ಕನ್ನಡ ಗ್ರಂಥಗಳ ಲೇಖಕರಾಗಲೀ ಪ್ರಕಾಶಕರಾಗಲೀ ಖರ್ಚಿನ ಬಾಬ್ತುವಾದ ಗ್ರಂಥಗಳನ್ನು ಕಳುಹಿಸಿಕೊಡುವುದರ ಬದಲಾಗಿ ಗ್ರಂಥದ ಹೆಸರು, ಆಕಾರ, ಪುಟಸಂಖ್ಯೆ, ಲೇಖಕರ ಹೆಸರು, ಪ್ರಕಾಶಕರು, ಬೆಲೆ, ಕಾವ್ಯ, ವಿಷಯ ಇವಿಷ್ಟನ್ನೂ ಸಂಕ್ಷಿಪ್ತವಾಗಿ ತಿಳಿಸಿದರೆ ಅದನ್ನು ಪ್ರಕಟಿಸುವುದಾಗಿ ತಿಳಿಸಿದ್ದಾರೆ. "ಆಗ ಪ್ರಬುದ್ಧ ಕರ್ಣಾಟಕದ ಒಂದು ಸಂಪುಟವನ್ನು ಮುಗುಚಿಹಾಕಿದರೆ ಆ ವರ್ಷದಲ್ಲಿ ಅಚ್ಚಾದ ಮುಖ್ಯವಾದ ಕನ್ನಡ ಗ್ರಂಥಗಳು ತಿಳಿಯುವಂತಾಗುತ್ತದೆ".[೨] ತಮ್ಮ ಸೂಚನೆಯನ್ನು ಸ್ವೀಕರಿಸುವುದರಿಂದ ಇದರಿಂದ ಹೆಚ್ಚಿನ ವೆಚ್ಚವಾಗಿದೆ. ಲೇಖಕ, ಪ್ರಕಾಶಕ, ವಾಚಕ ಎಲ್ಲರಿಗೂ ಅನುಕೂಲವಾಗುತ್ತದೆ, ಲಾಭವಾಗುತ್ತದೆ ಎಂಬ ಅಭಿಪ್ರಾಯ ಸಂಪಾದಕರದ್ದು. ನಂತರದ ದಿನಗಳಲ್ಲಿ ಸಾದರ ಸ್ವೀಕಾರ ಎಂಬ ಹೆಸರಿನಿಂದ ಗ್ರಂಥಗಳ ಪರಿಚಯ ಹಾಗೂ ಅವುಗಳಿಗೆ ಪ್ರಚಾರ ನೀಡುವ ಕಾರ್ಯ ನೆರವೇರಿದೆ.

ಪ್ರಬುದ್ಧ ಕರ್ಣಾಟಕವು ಆರಂಭದ ದಿನಗಳಿಂದಲೂ ಶಿಲ್ಪಕಲೆ, ವಿಜ್ಞಾನ, ಚಿತ್ರಕಲೆ ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ಪ್ರಕಟಿಸಿದೆ. ಅದಕ್ಕೆ ಉತ್ತಮವಾದ ಗುಣಮಟ್ಟದ ಕಾಗದವನ್ನು ಉಪಯೋಗಿಸುತ್ತಿದ್ದು ವಾಚಕರ ಗಮನ ಸೆಳೆಯಲು ಅವು ಸಮರ್ಥವಾಗಿವೆ.

**ಪ್ರಬುದ್ಧ ಕರ್ಣಾಟಕದ ಆರ್ಥಿಕ ಸ್ಥಿತಿ**

---

೧. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ-೧೦, ಸಂಚಿಕೆ-೧, ಪು. ೩.
೨. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ-೧೦, ಸಂಚಿಕೆ-೧, ಪು. ೩.

ಯಾವುದೇ ಪತ್ರಿಕೆ ದೀರ್ಘಕಾಲ ಉಳಿಯಬೇಕಾದರೆ ಅದಕ್ಕೆ ಆರ್ಥಿಕ ಕೊರತೆ ಉಂಟಾಗಬಾರದು. ಹಾಗೆಯೇ ಪ್ರಬುದ್ಧ ಕರ್ನಾಟಕ ಸ್ವಾವಲಂಬಿಯಾಗಲು ಬೇಕಾದ ಅಗತ್ಯ ಮಾರ್ಗಗಳನ್ನು ಸಂಪಾದಕರು ಆಲೋಚಿಸಿದ್ದಾರೆ. ಎಲ್ಲೆಲ್ಲಿ ಸಾಧ್ಯವೋ ಅಂತಹ ಕಡೆಗಳಲ್ಲಿ ಹಣವನ್ನು ಉಳಿತಾಯ ಮಾಡಿ ಪತ್ರಿಕೆಯ ಮೇಲೆ ಹಣದ ಹೊರೆ ಬೀಳದಂತೆ ಪ್ರಯತ್ನಿಸಿದ್ದಾರೆ. ಪತ್ರಿಕೆ ಪ್ರಾರಂಭವಾದಾಗಿನಿಂದ ಅದು ಮೈಸೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಬರುವವರೆಗೂ ತನ್ನ ಖರ್ಚನ್ನು ತಾನೇ ಹುಟ್ಟಿಸಿಕೊಂಡು ಬೆಳೆದು ನಿಂತಿದೆ. ಎ.ಆರ್. ಕೃಷ್ಣಶಾಸ್ತ್ರಿಗಳು ಪ್ರಬುದ್ಧ ಕರ್ನಾಟಕದ ಬೆಳ್ಳಿ ಸಂಚಿಕೆಯಲ್ಲಿ ಪತ್ರಿಕೆಯು ತನ್ನ ಖರ್ಚನ್ನು ತಾನೇ ಸಂಪಾದಿಸಿಕೊಳ್ಳಲು ಅನುಸರಿಸಿದ ವಿಚಾರಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಪ್ರಬುದ್ಧ ಕರ್ನಾಟಕದ ಲೇಖಕರಿಗೆ ಸಂಭಾವನೆಯನ್ನು ಕೊಡುವ ಪರಿಪಾಠವನ್ನು ಅದು ಆರಂಭದಿಂದಲೂ ಬೆಳಸಿಕೊಳ್ಳಲೇ ಇಲ್ಲ. ಸಂಭಾವನೆಯನ್ನು ನೀಡುವುದರಿಂದ ಪರಿಸ್ಥಿತಿ ಉತ್ತಮವಾಗದು ಹಾಗೂ ಬೇಡದ ಲೇಖನಗಳನ್ನು ಪ್ರಕಟಿಸುವುದಕ್ಕೆ ಒತ್ತಡ ಬರಬಹುದು ಎಂಬುದು ಒಂದು ಕಾರಣ. ಆದರೆ ಪತ್ರಿಕೆಯ ಪ್ರಾರಂಭದ ದಿನಗಳಲ್ಲಿ ಸಂಭಾವನೆಯನ್ನು ಕೊಟ್ಟು ಪತ್ರಿಕೆ ನಡೆಸುವುದು ಕಷ್ಟದ ವಿಚಾರವಾಗಿತ್ತು. ಸಂಪಾದಕರೂ ಕೂಡ ಹಣಕಾಸಿಗೆ ಆಸೆಪಡದೆ ಮುದ್ರಣ ಕಾರ್ಯದ ಸಮಸ್ತ ಜವಾಬ್ದಾರಿಯನ್ನು ಎಂದರೆ ಲೇಖನ ಸಂಗ್ರಹಣೆಯಿಂದ ಮುದ್ರಣದವರೆವಿಗೆ ಪರಿಶ್ರಮಪಡುತ್ತಿದ್ದರು. ಗುಮಾಸ್ತರಿಗೆ ೨೫ ರೂಪಾಯಿ ಹಾಗೂ ಆಳಿಗೆ ೧೧ ರೂ ಸಂಬಳ ಕೊಡುವುದನ್ನು ಬಿಟ್ಟರೆ ಉಳಿದವರು ಯಾರೂ ಸಂಭಾವನೆ ಪಡೆಯುತ್ತಿರಲಿಲ್ಲ.

ಪ್ರಬುದ್ಧ ಕರ್ನಾಟಕ ಪ್ರಾರಂಭವಾದಾಗ ಸುಮಾರು ಒಂದು ನೂರು ವಿದ್ಯಾರ್ಥಿಗಳಿಂದ ತಲಾ ಒಂದೊಂದು ರೂಪಾಯಿಯಂತೆ ಚಂದಾ ಹಣವನ್ನು ಸ್ವೀಕರಿಸಲಾಗಿತ್ತು. ನಂತರವೂ ಪತ್ರಿಕೆಯ ಬೆಳವಣಿಗೆಯಲ್ಲಿ ವಿದ್ಯಾರ್ಥಿಗಳಿಂದ ದೊರೆತ ನೆರವು ಅಪಾರ. ಶಿಷ್ಯವೇತನ ಪಡೆಯುತ್ತಿದ್ದ ವಿದ್ಯಾರ್ಥಿಗಳಲ್ಲಿ ಬಹುತೇಕರು ಅದರಲ್ಲಿ ಅಲ್ಪ ಹಣವನ್ನು ಸಹಾಯ ಧನವಾಗಿ ನೀಡುತ್ತಿದ್ದರು. ಕೆಲವೊಂದು ಬಾರಿ ಕಾಲೇಜಿನ ನಾಟಕ ಸಂಘದ ವಿದ್ಯಾರ್ಥಿಗಳು ನಾಟಕವನ್ನು ಅಭಿನಯಿಸಿ ಅದರಿಂದ ಬಂದ ಹಣವನ್ನು ನೀಡುತ್ತಿದ್ದುದೂ ಉಂಟು. ಅಮೆಚೂರ್ ನಾಟಕ ಮಂಡಲಿಯವರು ಪ್ರತಿ ವರ್ಷವೂ ಮೂವತ್ತು ರೂಪಾಯಿಗಳನ್ನು ದಾನ ಮಾಡುತ್ತಿದ್ದು ಅದು ಕರ್ನಾಟಕ ಸಂಘ ಹಾಗೂ ಪತ್ರಿಕೆಗಳೆರಡರ ಅಭಿವೃದ್ಧಿಗಾಗಿ ವಿನಿಯೋಗವಾಗುತ್ತಿತ್ತು. ಶಿಷ್ಯವೇತನವನ್ನು ಪಡೆಯದ ವಿದ್ಯಾರ್ಥಿಗಳಲ್ಲೂ ಹಲವಾರು ವಿದ್ಯಾರ್ಥಿಗಳು ಅಭಿಮಾನದಿಂದ ಹಣದ ಸಹಾಯ ಮಾಡುತ್ತಿದ್ದುದೂ ಉಂಟು. ಆರ್ಥಿಕ ಸಹಾಯ

ಮಾಡಲು ಸಾಧ್ಯವಾಗದಿದ್ದ ಹಲವಾರು ವಿದ್ಯಾರ್ಥಿಗಳು ದೈಹಿಕ ಶ್ರಮದ ಮೂಲಕ ಸಹಾಯ ನೀಡುತ್ತಿದ್ದರು. ಪತ್ರಿಕೆಯು ಪ್ರಕಟಗೊಂಡು ಚಂದಾದಾರರಿಗೆ ಪತ್ರಿಕೆ ತಲುಪುವವರೆವಿಗೆ ನಡೆಯಬೇಕಾದ ಹಲವಾರು ಕಾರ್ಯಗಳು ಇವರುಗಳ ಸಹಾಯದಿಂದ ನಡೆಯುತ್ತಿದ್ದವು.

ಪತ್ರಿಕೆಯು ಪ್ರಕಟಗೊಂಡ ನಂತರ ಅದನ್ನು ಕಾಗದದಲ್ಲಿ ಸುತ್ತುವುದು, ಸ್ಟಾಂಪು ಅಂಟಿಸುವುದು, ಪತ್ರಿಕೆಯ ಚಂದಾದಾರರ ವಿಳಾಸ ಬರೆಯುವುದು, ಮುದ್ರಣಾಲಯದಿಂದ ಬಂದ ಪತ್ರಿಕೆಗಳನ್ನು ಜೋಡಿಸುವುದು ಹೀಗೆ ಹಲವು ಹತ್ತು ರೀತಿಯ ಕೆಲಸಗಳು ಕಾಸಿಲ್ಲದೇ ನಡೆಯುತ್ತಿದ್ದವು. ಚಂದಾದಾರರ ಮನೆಗಳು ಹತ್ತಿರವಿದ್ದರೆ ಮನೆ ಮನೆಗೆ ತಲುಪಿಸುವ ಕಾರ್ಯಗಳು ಖರ್ಚಿಲ್ಲದೆ ಸಾಗುತ್ತಿದ್ದವು ಅಂಚೆಯ ವೆಚ್ಚ ಹೆಚ್ಚಾಗಬಾರದೆಂದು ದೃಷ್ಟಿಯಿಂದ ಆರಂಭದ ದಿನಗಳಲ್ಲಿ ಎ.ಆರ್.ಕೃಷ್ಣಶಾಸ್ತ್ರಿಗಳು ಮೈಸೂರಿನಲ್ಲೂ, ಟಿ.ಎಸ್.ವೆಂಕಣಯ್ಯನವರು ಬೆಂಗಳೂರಿ–ನಲ್ಲೂ "ಸಂಚಿಕೆಗಳನ್ನು ಮನೆ ಮನೆಗೆ ತೆಗೆದುಕೊಂಡು ಹೋಗಿ ಕೊಟ್ಟು ವರ್ಷವೆಲ್ಲ ಕಾದು ಕೊನೆಗೆ ಚಂದಾಕೇಳಿ ಆಗ ಬಾ ಈಗ ಬಾ ಎನ್ನಿಸಿಕೊಂಡು ಮಾರವಾಡಿ ನಕ್ಷತ್ರಿಕ ಎನ್ನಿಸಿಕೊಂಡು ದುಡ್ಡು ಸಂಪಾದನೆ ಮಾಡಿಯಾಯಿತು"[೧]

ಪತ್ರಿಕೆಯ ಸಂಪಾದಕರು ಪತ್ರಿಕೆಗೆ ಹಣ ಉಳಿಸಲು ನಿಸ್ಪೃಹರಾಗಿ ತಾವು ದುಡಿದು ಉಳಿದವರನ್ನೂ ಅದರಲ್ಲಿ ತೊಡಗಿಸುತ್ತಿದ್ದರು. ಈ ವಿಚಾರವನ್ನು ಕುರಿತಂತೆ ಪ್ರಸಿದ್ಧ ಕಥೆಗಾರರಾದ ಅಶ್ವತ್ಥರವರು ತಮ್ಮ ಲೇಖನವೊಂದರಲ್ಲಿ ಪ್ರಸ್ತಾಪಿಸಿದ್ದಾರೆ. ಒಂದು ಬಾರಿ ಅಶ್ವತ್ಥರವರು ಶ್ರಾವಣದಲ್ಲಿ ಪಡಿ ಬೇಡಲು ವೆಂಕಣಯ್ಯನವರ ಮನೆಗೆ ಬಂದಾಗ ಅವರು ಪಡಿ ನೀಡಿ ನಂತರ ಅವರೊಡನೆಯೇ ಹೊರಟರು. ಅದಕ್ಕೆ ಕಾರಣವನ್ನು ಅಶ್ವತ್ಥರವರು ವಿಚಾರಿಸಿದಾಗ "ತಾವು ಪಡಿ ಬೇಡುವುದಕಲ್ಲ ಪಡಿ ಕೊಡೋಕೆ ಹೊರಟಿದ್ದೇನೆ, ಪಡಿ ಕೊಡೋದು ಎಂದರೆ ಪ್ರಬುದ್ಧ ಕರ್ನಾಟಕ ಪತ್ರಿಕೆಯನ್ನು ಮನೆ ಮನೆಗೆ ಹಂಚೋದು ಆದಷ್ಟು ಅಂಚೆ ಖರ್ಚು ಉಳಿಯಲಿ"[೨] ಎಂದು ಹೇಳಿದರು. ಅಶ್ವತ್ಥರವರಿಗೆ ಇದರಲ್ಲಿ ಆಸಕ್ತಿ ಉಂಟಾಗಿ ತಾವು ಪತ್ರಿಕೆಯನ್ನು ಹಂಚುವ ಕೆಲಸ ಮಾಡುವುದಾಗಿ ಹೇಳಿದರು. ಇದಕ್ಕೆ ಪ್ರತಿಯಾಗಿ ಅವರಿಗೆ ದೊರಕುತ್ತಿದ್ದುದು ಕಲ್ಲುಸಕ್ಕರೆ ಹಾಗೂ ಕಲ್ಲುಸಕ್ಕರೆಯಂತಹವ ಮಾತುಗಳು. ಇಂತಹ ನಿದರ್ಶನಗಳು ಹಲವಾರು. ಪ್ರಬುದ್ಧ ಕರ್ನಾಟಕಕ್ಕೆ ಆರ್ಥಿಕ ಹೊರೆ ತಪ್ಪಿಸಲು ಯಾರ್‍ಯಾರಿಂದ ಹೇಗ್ಹೇಗೆ ಕೆಲಸ ತೆಗೆದುಕೊಳ್ಳಬಹುದು ಎಂಬ ಸಂಪಾದಕರ ವಿವೇಚನೆಯಿಂದಾಗಿ ಆರ್ಥಿಕ ಸಮಸ್ಯೆ ಕಾಡಲಿಲ್ಲ.

---

೧. ಕೃಷ್ಣಶಾಸ್ತ್ರಿ.ಎ.ಆರ್, ಭಾಷಣಗಳು ಮತ್ತು ಲೇಖನಗಳು, ೧೯೬೦, ಪು. ೨೨೪.
೨. ಕುವೆಂಪು (ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೧೩.

ಪ್ರಬುದ್ಧ ಕರ್ನಾಟಕದ ಉತ್ತಮ ಅಭಿರುಚಿಯ, ಸಾಹಿತ್ಯಾಸಕ್ತರ ಪತ್ರಿಕೆಯಾದುದರಿಂದ ಅದರ ಪ್ರಸಾರ ಅತಿಯಾಗಿರಲಿಲ್ಲ. ಜಾಹೀರಾತುಗಳು ಸಾಮಾನ್ಯವಾಗಿ ಪತ್ರಿಕೆಯ ಹೆಸರು, ಅದರ ಪ್ರಚಾರ-ಪ್ರಮಾಣ, ಪತ್ರಿಕೆಗಳು ಹೊರಬೀಳುವ ಅಂತರ, ಚಂದಾದಾರರ ಸಂಖ್ಯೆ ಎಂಬಿತ್ಯಾದಿ ಅಂಶಗಳನ್ನು ಅವಲಂಬಿಸಿರುತ್ತವೆ. ಪ್ರಬುದ್ಧ ಕರ್ನಾಟಕದ ಪ್ರಸಾರದ ಸಂಖ್ಯೆ ಹೆಚ್ಚಿಲ್ಲವಾದ್ದರಿಂದ ಅದಕ್ಕೆ ಜಾಹಿರಾತುಗಳು ಸಿಕ್ಕುತ್ತಿರಲಿಲ್ಲ, ಸಿಕ್ಕರೂ ಅವುಗಳಿಂದ ಬರುವ ಆದಾಯ ಕಮ್ಮಿಯಾಗಿರುತ್ತಿತ್ತು. ವರ್ಷಕ್ಕೆ ನಾಲ್ಕು ಸಂಚಿಕೆಗಳು ಮಾತ್ರ ಹೊರಬರುತ್ತಿದ್ದವು. ಚಂದದಾರರ ಸಂಖ್ಯೆ ಒಂದು ಸಾವಿರವನ್ನು ದಾಟದ ಕಾರಣ ಜಾಹೀರಾತುಗಳೇ ಬರುತ್ತಿರಲಿಲ್ಲ. ಬಂದವುಗಳಲ್ಲೂ ಕೆಲವು ಸಂಕೋಚ ತರುವಂತೆ ಇರುತ್ತಿದ್ದುದರಿಂದ ಇನ್ನೂ ಕೆಲವು ಕಡಿಮೆ ದರ ಕೊಡಲು ಇಚ್ಛಿಸುತ್ತಿದ್ದುದರಿಂದ ಜಾಹೀರಾತುಗಳೇ ಬೇಡವೆಂಬ ನಿರ್ಧಾರ ಸಂಪಾದಕರದ್ದಾಗಿತ್ತು. ಒಂದು ಬಾರಿ ಮಾತ್ರ ಶ್ರೀಗಂಧ ಸಾಬೂನಿನ ಜಾಹಿರಾತು ಪ್ರಕಟಣೆ ಮಾಡಿ ೭೫ ರೂ.ಗಳನ್ನು ಸಂಪಾದನೆ ಮಾಡಿದ್ದುಂಟು.

ಪ್ರಬುದ್ಧ ಕರ್ನಾಟಕದ ತನ್ನ ಆರ್ಥಿಕ ಸುಧಾರಣೆಗಾಗಿ ಕಂಡುಕೊಂಡ ಇನ್ನೊಂದು ಮಾರ್ಗವೆಂದರೆ ಪತ್ರಿಕೆಯ ವಿನಿಮಯ ಮಾರ್ಗ.[೧] ಅಂದರೆ ಪ್ರಬುದ್ಧ ಕರ್ನಾಟಕವನ್ನು ಕಳುಹಿಸಿ ಅದಕ್ಕೆ ಬದಲಾಗಿ ಬೇರೆಯ ಉತ್ತಮವಾದ ಪತ್ರಿಕೆಗಳನ್ನು ಪಡೆಯುವ ಕ್ರಮ. ಈ ರೀತಿಯಾಗಿ ವಿನಿಮಯವಾಗಿ ಪಡೆದ ಪತ್ರಿಕೆಗಳನ್ನು ಬೆಂಗಳೂರಿನ ವಿಶ್ವವಿದ್ಯಾನಿಲಯದ ಗ್ರಂಥಾಲಯಕ್ಕೆ ನೀಡಿದರೆ ಅದು ವರ್ಷಕ್ಕೆ ೫೦ ರೂಪಾಯಿಗಳನ್ನು ಕೊಡುತ್ತಿತ್ತು. ನಂತರ ಅದು ತೊಂಭತ್ತು ರೂಪಾಯಿಗಳಿಗೆ ಏರಿತು. ವಿನಿಮಯ ದೃಷ್ಟಿಯಿಂದ ಪ್ರಬುದ್ಧ ಕರ್ನಾಟಕಕ್ಕೆ ಬರುತ್ತಿದ್ದ ಪತ್ರಿಕೆಗಳನ್ನು ವಿಶ್ವವಿದ್ಯಾನಿಲಯದ ಸಂಘಕ್ಕೆ ಕೊಡುವುದರ ಬಗ್ಗೆ ಆಕ್ಷೇಪಣೆಗಳು ಬಂದದ್ದೂ ಉಂಟು. ಇದಕ್ಕೆ ಸಂಬಂಧಿಸಿದಂತೆ ನಡೆದ ಘಟನೆ ಕುತೂಹಲಕಾರಿಯಾಗಿದೆ. ೧೯೩೬ ರಲ್ಲಿ ಅ.ನ.ಸುಬ್ಬರಾಯರು 'ಕಲಾ' ಎಂಬ ಮಾಸಪತ್ರಿಕೆಯನ್ನು ಆರಂಭಿಸಿದ್ದರು. ಅದು ನಂತರದ ದಿನಗಳಲ್ಲಿ ಪ್ರಬುದ್ಧ ಕರ್ನಾಟಕಕ್ಕೆ ವಿನಿಮಯ ಪತ್ರಿಕೆಯಾಗಿ ಬರತೊಡಗಿತು. ಒಂದು ಬಾರಿ ಸೆಂಟ್ರಲ್ ಕಾಲೇಜಿನ ಯೂನಿಯನ್ನಿನ ವಾಚನಾಲಯದಲ್ಲಿ ಅ.ನ.ಸುಬ್ಬರಾವ್ ತಮ್ಮ 'ಕಲಾ' ಪತ್ರಿಕೆಯನ್ನು ಕಂಡರು. ಆದರೆ ಕಲಾ ಪತ್ರಿಕೆಯ ಚಂದಾದಾರರ ಪಟ್ಟಿಯಲ್ಲಿ ಯೂನಿಯನ್ನಿನ ಹೆಸರಿರಲಿಲ್ಲ. ಇವರಿಗೆ ಆಶ್ಚರ್ಯವಾಗಿ

---

೧. ಈ ಪದ್ಧತಿಯು ಆರಂಭಗೊಂಡ ದಿನಗಳಿಂದಲೇ ಇದ್ದು ಮೊದಲ ಸಂಪುಟದಲ್ಲೇ ವಿನಿಮಯವಾಗಿ ತಮ್ಮ ಪತ್ರಿಕೆಗಳನ್ನು ಕಳುಹಿಸಿಕೊಟ್ಟ ಪತ್ರಿಕೆಯವರಿಗೆ ಸಂಪಾದಕರು ಕೃತಜ್ಞತೆ ತಿಳಿಸಿದ್ದಾರೆ. ವಿನಿಮಯ ರೂಪದಲ್ಲಿ ಬರುತ್ತಿದ್ದ ಪುಸ್ತಕ ಹಾಗೂ ಗ್ರಂಥಗಳ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

ಅದು ಹೇಗೆ ಅಲ್ಲಿಗೆ ಬಂದಿತೆಂದು ವಿಚಾರಿಸಲಾಗಿ ಪ್ರಬುದ್ಧ ಕರ್ನಾಟಕದ ಪತ್ರಿಕೆಯಿಂದ ಬಂದಿರುವುದಾಗಿ ತಿಳಿಯಿತು. ಇದು ನ್ಯಾಯದ ಮಾರ್ಗವಲ್ಲ ಅಪಮಾರ್ಗ ಎಂದು ಅವರಿಗೆ ಅನಿಸಿತು. ಅದೇ ಉದ್ವೇಗದಲ್ಲಿ ಅವರು ಪ್ರಬುದ್ಧ ಕರ್ನಾಟಕಕ್ಕೆ ಕಟುವಾಗಿ ಪತ್ರ ಬರೆದು ಹಾಕಿದರು. ಇದನ್ನು ಕಂಡ ತಕ್ಷಣ ಸಂಪಾದಕರಾಗಿದ್ದ ಎ.ಆರ್.ಕೃಷ್ಣಶಾಸ್ತ್ರಿಗಳು ಅ.ನ.ಸುಬ್ಬರಾಯರ ಬಳಿ ಬಂದು ಅವರನ್ನು ಸಮಾಧಾನ ಪಡಿಸಲು ಯತ್ನಿಸಿದರು. ಆದರೆ ಎ.ಆರ್.ಕೃಷ್ಣಶಾಸ್ತ್ರಿಗಳ ಮಾತಿನಿಂದ ಸುಬ್ಬರಾಯರು ತೃಪ್ತಿಗೊಳ್ಳಲಿಲ್ಲ. ಈ ವಿಷಯ ತಿಳಿದ ಟಿ.ಎಸ್.ವೆಂಕಣ್ಣಯ್ಯನವರು ಅ.ನ. ಸುಬ್ಬರಾಯರನ್ನು ಭೇಟಿಮಾಡಿ ವಿನಿಮಯವಾಗಿ ಬಂದ ಪತ್ರಿಕೆಗಳನ್ನು ಯಾವ ಕಾರಣಕ್ಕಾಗಿ ಯುನಿಯನ್ ವಾಚಾನಾಲಯಕ್ಕೆ ಕೊಡಬೇಕಾಯಿತು ಎಂಬುದನ್ನು ವಿವರಿಸಿದರು. ಕರ್ನಾಟಕದ ನಾನಾ ಕಡೆಗಳಿಂದ ಸುಮರು ೬೦ ಕ್ಕೂ ಮಿಗಿಲಾದ ಪತ್ರಿಕೆಗಳು ವಿನಿಮಯ ಪತ್ರಿಕೆಗಳಾಗಿ ಬರುತ್ತಿದ್ದವು. ಆದರೆ ಅಧ್ಯಾಪಕರು ಅದರಿಂದ ಪಡೆದುಕೊಳ್ಳುತ್ತಿದ್ದ ಪ್ರಯೋಜನ ಅತ್ಯಲ್ಪ. ಅದರ ಬದಲಾಗಿ ಯೂನಿಯನ್ ರೀಡಿಂಗ್ ರೂಮಿನ ಮೇಜಿನ ಮೇಲಿದ್ದರೆ ಕೆಲವರಾದರು ಅದರ ಪ್ರಯೋಜನ ಪಡೆದುಕೊಳ್ಳಬಹುದು. ಅಷ್ಟೇ ಅಲ್ಲದೇ ಈ ಬಗೆಯ ಪ್ರಯೋಜನವಿರುವುದರಿಂದ ಬರುವ ಅತ್ಯಲ್ಪ ದ್ರವ್ಯ ಪತ್ರಿಕೆಯ ಏಳಿಗೆಗೆ ಸಹಾಯವಾಗುವುದೆಂಬುದನ್ನು ವಿವರಿಸಿ ಅವರನ್ನು ಸಮಾಧಾನ ಪಡಿಸಿದರು. ಉದ್ದೇಶ ಒಳ್ಳೆಯದಾಗಿದ್ದು ಪತ್ರಿಕೆಯ ಬೆಳವಣಿಗೆಗೆ ಇದರಿಂದ ಸಹಾಯವಾಗಿದೆ ಎಂಬುದು ಅವರಿಗೆ ಮನವರಿಕೆಯಾದ ನಂತರ ತಮ್ಮ ವ್ಯವಹಾರದಿಂದ ಯಾರಿಗಾದರೂ ನೋವಾಗಿದ್ದರೆ ಕ್ಷಮಿಸ ಬೇಕೆಂದು ಕೇಳಿಕೊಂಡರು. ಇದರಿಂದಾಗಿ ಉಂಟಾಗಿದ್ದ ಅಸಮಾಧಾನ ದೂರವಾಯಿತು.

ಚಂದಾದಾರರು ಹೆಚ್ಚಾದಷ್ಟೂ ಪತ್ರಿಕೆಗೆ ಬಲ ಹೆಚ್ಚಾದಂತೆ. ಪತ್ರಿಕೆಯ ಅಭಿವೃದ್ಧಿಯಲ್ಲಿ ಇವರ ಪಾತ್ರ ಬಹಳ ಹಿರಿದು. ಹಾಗಾಗಿಯೇ ಪತ್ರಿಕೆಗೆ ಚಂದಾದಾರರನ್ನು ಹೆಚ್ಚಿಸಲು ಹಲವಾರು ರೀತಿಯ ಪ್ರಯತ್ನಗಳನ್ನು ಪ್ರಬುದ್ಧ ಕರ್ನಾಟಕದ ಸಂಪಾದಕರು ಮಾಡಿದ್ದಾರೆ. ಪತ್ರಿಕೆಯನ್ನು ಸಾಕಷ್ಟು ಹಾಗೂ ಎಷ್ಟೆಷ್ಟು ಪುಷ್ಟಿಗೊಳಿಸಬಹುದೋ ಅಷ್ಟೂ ಪುಷ್ಟಿಗೊಳಿಸಿ, ಸುಂದರಗೊಳಿಸಿ ಚಂದಾದಾರರನ್ನು ಸೆಳೆಯಲು ಯತ್ನಿಸಿದರು. ಪ್ರಬುದ್ಧ ಕರ್ನಾಟಕ್ಕೆ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳಷ್ಟೇ ಅಲ್ಲದೇ ಕರ್ನಾಟಕದ ಅನೇಕ ಪ್ರಾಂತಗಳ ದೇಶಾಭಿಮಾನಿಗಳನ್ನು ಹಾಗೂ ಕನ್ನಡಾಭಿಮಾನಿಗಳನ್ನು ಚಂದಾದಾರರನ್ನಾಗಿಸಿದರು. ಆರಂಭದ ಸಂಪುಟ-ಗಳಲ್ಲಿ ಪ್ರಕಟವಾಗಿರುವ ಕರ್ನಾಟಕ ಸಂಘದ ಧಾತೃಗಳು ಹಾಗೂ ಪೋಷಕರ ಪಟ್ಟಿಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಬೆಂಗಳೂರು ಶಿವಮೊಗ್ಗ,

ಮೈಸೂರು, ಚಿತ್ರದುರ್ಗ, ಕಡೂರು, ತುಮಕೂರು, ಹಾಸನ, ಧಾರವಾಡ, ಬೊಂಬಾಯಿ, ಕಾರವಾರ, ಗದಗ, ಕೊಡಗು, ಮದ್ರಾಸು, ಇವೇ ಮೊದಲಾದ ಪ್ರಾಂತ್ಯಗಳ ಧಾತೃಗಳು ಇರುವುದನ್ನು ಗಮನಿಸಬಹುದು.[೧] ತಮ್ಮ ಪತ್ರಿಕೆ ಕರ್ನಾಟಕದ ಎಲ್ಲೆಯನ್ನು ದಾಟಿ ದೂರದ ಕಲ್ಕತ್ತ, ಮೊದಲಾದ ಪ್ರದೇಶಗಳವರೆವಿಗೆ ಹರಡಿದ್ದಕ್ಕೆ ಸಂಪಾದಕರು "ಕಾಲು ಬಂದ ಮಗುವಿನಂತಾಗಿ ಅದು ಕಲ್ಕತ್ತೆಯವರೆವಿಗೂ ಹೋಗುತ್ತಿರುವುದನ್ನು ತಿಳಿಸಲು ಸಂತೋಷಿಸುವೆವು"[೨] ಎಂದು ಆನಂದವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಪ್ರಕಟಗೊಂಡಿರುವ ಪಟ್ಟಿಯನ್ನು ಗಮನಿಸಿದರೆ ಅದರಲ್ಲಿ ಹಿಂದೂಗಳಷ್ಟೇ ಅಲ್ಲದೇ ಬೇರೆ ಮತದವರ ಹೆಸರುಗಳೂ ಕಂಡು ಬಂದಿದೆ. ತನ್ನ ಚಂದಾದಾರರಲ್ಲಿ ಹೀಗೆ ಬೇರೆ ಮಾತೃಭಾಷೆಯ ಜನಗಳು ಇರುವುದಕ್ಕೆ ಸಂಪಾದಕರು ಸಂತೋಷ ವ್ಯಕ್ತಪಡಿಸಿ ಅವರುಗಳು ನೀಡಿದ ಸಹಕಾರವನ್ನು ಶ್ಲಾಘಿಸಿರುವುದೂ ಉಂಟು. "ನಮ್ಮ ಧಾತೃಗಳಲ್ಲಿ ಕೆಲವರು ಮಹಮದೀಯರು. ಇವರ ಈ ಕಾರ್ಯವು ಧರ್ಮವೂ ನ್ಯಾಯವು ಸ್ತುತ್ಯವೂ ಆಗಿದೆ. ದೇಶ ಸೇವೆಗೂ ಭಾಷಾಸೇವೆಗೂ ಹೊರಟಿರುವ ಕರ್ನಾಟಕದ ಸಂಘಕ್ಕೆ ವಿಚಾರ ಪರರಾದ ನಮ್ಮ ಮಹಮ್ಮದೀಯ ಭ್ರಾತೃಗಳು ಬೆಂಬಲವಾಗಬೇಕಾದ್ದೇ.......... ಅವರೇನು ಮೈಸೂರು ದೇಶದ ಪ್ರಜೆಗಳಲ್ಲವೇ? ಕನ್ನಡ ನಾಡಿನ ಜನಗಳಲ್ಲವೇ? ಕನ್ನಡ ಮಾತನ್ನು ಬಲ್ಲವರಲ್ಲವೇ"[೩] ಎಂದು ಹೇಳುತ್ತಾ ಅವರನ್ನು ಹುರಿದುಂಬಿಸುವ ಹಾಗೂ ಪ್ರೋತ್ಸಾಹಿಸುವ ಕಾರ್ಯ ಮಾಡಿದ್ದಾರೆ. ಕನ್ನಡ ನಾಡಿನಲ್ಲಿರುವ ಯಾವುದೇ ಜಾತಿ ಪಂಗಡದವರಾಗಲೀ ಕನ್ನಡದ ಪರವಾದ ಕಾರ್ಯಗಳಲ್ಲಿ ಭಾಗವಹಿಸಿವುದರ ಮೂಲಕ ಸೇವೆ ಮಾಡಬಹುದೆಂಬ ಸೂಚನೆ ಅಲ್ಲಿದೆ.

ಪ್ರಬುದ್ಧ ಕರ್ನಾಟಕಕ್ಕೆ ರಾಜ್ಯದ ನಾನಾ ಕಡೆಗಳಲ್ಲಿ ದೊರೆತ ಜನಬೆಂಬಲ ಗಮನಾರ್ಹ. ಇದಕ್ಕೆ ಬೇರೆ ಬೇರೆ ಪ್ರಾಂತಗಳಲ್ಲಿದ್ದವರೂ ಚಂದಾದಾರರನ್ನು ಒದಗಿಸಿಕೊಡಲು ಸಹಕಾರವನ್ನು ನೀಡಿದ್ದಾರೆ. ಮೈಸೂರು ಪ್ರಾಂತ್ಯದ ಕಡೆ ಅಲ್ಲಿನ ವಿದ್ಯಾರ್ಥಿಗಳ ಬೆಂಬಲ ದೊರಕಿಸಿಕೊಟ್ಟ ಎನ್.ಎಸ್. ನಾರಾಯಣ ಶಾಸ್ತ್ರಿಗಳಿಗೆ, ಧಾರವಾಡ ಪ್ರಾಂತ್ಯದಲ್ಲಿ ಸುಮಾರು ೧೦೦ ಮಂದಿ ಪೋಷಕರನ್ನು ಚಂದಾದಾರರನ್ನು ಸಂಪಾದಿಸಿಕೊಟ್ಟ ಆರ್.ಬಿ. ಪೋತದಾರ್ ಅವರನ್ನು ನಾಲ್ಕನೆಯ ಸಂಪುಟದಲ್ಲಿ ಸಂಪಾದಕರು ವಿಶೇಷವಾಗಿ ಸ್ಮರಿಸಿದ್ದಾರೆ. ಇದೇ ಬಗೆಯಲ್ಲಿ ಪ್ರಬುದ್ಧ ಕರ್ನಾಟಕದ ಹದಿನೈದನೆಯ ಸಂಪುಟದಲ್ಲಿ. ಎನ್.ಅನಂತರಂಗಾಚಾರ್ಯರು ಹೊಸ ಚಂದಾದಾರರನ್ನು ಒದಗಿಸಿಕೊಟ್ಟಿದ್ದಕ್ಕಾಗಿ ಅವರಿಗೆ ಸಂಪಾದಕರಿಂದ ವಿಶೇಷ ಕೃತಜ್ಞತೆ ಸಂದಿದೆ.

---

೧. ಅನುಬಂಧದಲ್ಲಿ ಪ್ರಬುದ್ಧ ಕರ್ನಾಟಕ ಪ್ರಕಟಿಸುತ್ತಿದ್ದ ಪೋಷಕರಪಟ್ಟಿಯ ಮಾದರಿಯನ್ನು ನೀಡಿದೆ.
೨. ಪ್ರಬುದ್ಧ ಕರ್ನಾಟಕ, ಸಂಪುಟ ೨, ಸಂಚಿಕೆ ೩, ಪು. ೩೮.
೩. ಪ್ರಬುದ್ಧ ಕರ್ನಾಟಕ, ಸಂಪುಟ ೪, ಸಂಚಿಕೆ ೩, ಪು. ೯.

ಪ್ರಬುದ್ಧ ಕರ್ನಾಟಕ ಡೆಮ್ಮಿ ಆಕಾರದಲ್ಲಿದ್ದರೂ ಅದರಿಂದ ಪುನರ್ ಮುದ್ರಿತ ಪ್ರತಿಗಳನ್ನು ಕ್ರೌನ್ ಆಕಾರದಲ್ಲಿ ಪ್ರಕಟಿಸಿ ಪುಸ್ತಕಗಳನ್ನು ಮಾಡಿ ಆ ಪುಸ್ತಕಗಳ ಆಸೆಯನ್ನು ತೋರಿಸಿ ಚಂದಾದಾರರನ್ನು ಆಕರ್ಷಿಸುತ್ತಿದ್ದರು. ಇಂಗ್ಲೀಷ್ ಗೀತೆಗಳು, ಗದಾಯುದ್ಧ ನಾಟಕ, ಕನ್ನಡ ಸಾಹಿತ್ಯ ಚರಿತ್ರೆಯ ಕೆಲವು ಭಾಗಗಳು, ಸುಬ್ಬಣ್ಣ, ನಿವೇದನ ಮುಂತಾದವುಗಳೆಲ್ಲ ಹೀಗೆಯೇ ಪ್ರಕಟವಾದ ಗ್ರಂಥಗಳು. ಇಂತಹ ಹಲವಾರು ಕಾರ್ಯಗಳ ಮೂಲಕ ಪ್ರಬುದ್ಧ ಕರ್ನಾಟಕದ ಹಣದ ಕೊರತೆಯಿಂದ ಎಂದೂ ನಿಲ್ಲದಂತೆ ನೋಡಿಕೊಂಡ ಕಾರ್ಯ ತತ್ಪರತೆ ಸಂಪಾದಕರದ್ದು.

**ಸಂಪಾದಕರುಗಳ ಸೇವೆ**

ಪತ್ರಿಕೆಗಳ ಬೆಳವಣಿಗೆಯಲ್ಲಿ ಸಂಪಾದಕರ ಪಾತ್ರ ಹಿರಿದು. ಲೇಖನಗಳನ್ನು ಬರೆಯಿಸುವುದು, ಅವರಿಂದ ಅದನ್ನು ತರಿಸಿಕೊಳ್ಳುವುದು, ಶ್ರೇಷ್ಠವಾದವುಗಳನ್ನು ಆರಿಸಿಕೊಳ್ಳುವುದು, ಅದಕ್ಕೊಂದು ಸ್ಪಷ್ಟ ರೂಪವನ್ನು ಕೊಡುವುದು, ಮುದ್ರಣಕ್ಕೆ ಸಿದ್ಧಗೊಳಿಸುವುದು, ಪತ್ರಿಕೆ ಮುದ್ರಣಗೊಂಡ ನಂತರ ಚಂದಾದಾರರಿಗೆ ತಲುಪಿಸುವುದು. ಅವರಿಂದ ಕಷ್ಟಪಟ್ಟು ಚಂದಾಹಣ ವಸೂಲು ಮಾಡುವುದು ಅಗತ್ಯವೆನಿಸಿದಾಗ ಕೊರತೆ ಇರುವ ಜಾಗವನ್ನು ತುಂಬುವುದಕ್ಕಾಗಿ ಲೇಖನಗಳನ್ನು ಬರೆದು ಸೇರಿಸುವುದು. ಹೀಗೆ ಹಲವಾರು ಜವಾಬ್ದಾರಿಯ ಈ ಕಾರ್ಯಗಳ ನಿರ್ವಹಣೆ ಕಷ್ಟದಾಯಕ. ಅದು ಪತ್ರಿಕೆಯ ಆರಂಭದ ದಿನಗಳಾದರಂತೂ ಈ ಕಾರ್ಯ ಬಾಹುಳ್ಯದ ಹಾವಳಿ ದುಪ್ಪಟ್ಟು. ಇಂತಹ ಹತ್ತು ಹಲವು ಕರ್ತವ್ಯಗಳನ್ನು, ಸಮಸ್ಯೆ ಎಂದು ಪರಿಗಣಿಸದೆ ಪತ್ರಿಕೆಯ ಸಂಸ್ಥಾಪಕರಾಗಿ, ಸಂಪಾದಕರಾಗಿ ಸೇವೆ ಸಲ್ಲಿಸಿದ ಎ.ಆರ್.ಕೃಷ್ಣಶಾಸ್ತ್ರಿಗಳು, ಇವುಗಳಾವುದನ್ನೂ ಲೆಕ್ಕಿಸದೆ ಪತ್ರಿಕೆಯನ್ನು ಆರಂಭದಿಂದಲೂ ಶ್ರೇಷ್ಠಮಟ್ಟದಲ್ಲಿಯೇ ಉಳಿಯುವಂತೆ ಮಾಡಿ ಅದನ್ನು ಪ್ರೌಢಾವಸ್ಥೆಗೆ ತಲುಪುವ-ವರೆವಿಗೂ ಕಾಪಾಡಿ ಬೆಳೆಸಿದ್ದು ಮಹತ್ತರವಾದ ಸಂಗತಿಯೇ. ಇವರು ೧೯೧೯ ರಿಂದ ೧೯೩೭ರವರೆವಿಗೆ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರಲ್ಲದೆ ಅದು ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟ ನಂತರವೂ ೧೯೪೩ರವರೆವಿಗೆ ಸ್ವತಂತ್ರವಾಗಿ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ೧೯೩೭-೧೯೩೯ರ ಅವಧಿಯಲ್ಲಿ ಮಾತ್ರ ಟಿ.ಎಸ್.ವೆಂಕಣ್ಣಯ್ಯನವರ ಜೊತೆಯಲ್ಲಿ ಜಂಟಿಯಾಗಿ ಸಂಪಾದಕತ್ವದ ಜವಾಬ್ದಾರಿ-ಯನ್ನು ನಿರ್ವಹಿಸಿದ್ದಾರೆ. "ತಮ್ಮ ಸಂಪಾದಕತ್ವದ ಅವಧಿಯಲ್ಲಿ ಯಾವುದೇ ಒಂದು ಸೀಮಿತ ದೃಷ್ಟಿಯ ಒಂದು ಪ್ರಕಾರದ ಪತ್ರಿಕೆಯಾಗದ ಹಾಗೆ, ಸಾಮಾನ್ಯ ದರ್ಜೆಗೆ ಇಳಿಯದ ಹಾಗೆ ಸಂಶೋಧನಾತ್ಮಕ, ವಿಮರ್ಶಾತ್ಮಕ ಹಾಗೂ ಸೃಜನಶೀಲ ಸಾಹಿತ್ಯದ ಸರ್ವಾಂಗೀಣ ಪತ್ರಿಕೆಯಾಗುವಂತೆ ಅದನ್ನು ಕಟ್ಟಿ ಬೆಳಸಿ ಶಾಸ್ತ್ರಿಗಳು ವಿಶೇಷ ಕೀರ್ತಿಗೆ ಭಾಜನರಾದರು."[೧] ಈ ಕಟ್ಟಿ ಬೆಳೆಸುವ ಕಾರ್ಯದಲ್ಲಿ ಆರಂಭದಿಂದಲೂ ಇವರಿಗೆ

---

೧. ನಾಯಕ ಹಾ.ಮಾ., ತಿಪ್ಪೇರುದ್ರಸ್ವಾಮಿ.ಹೆಚ್(ಸಂ), ಎ.ಆರ್.ಕೃ. ಜೀವನ-ಸಾಧನೆ, ೧೯೭೧. ಪು. ೧೦೫.

ಸಹಕಾರ ನೀಡಿ ಜೊತೆಯಾಗಿ ನಿಂತವರು ಟಿ.ಎಸ್.ವೆಂಕಣಯ್ಯನವರು. ದ.ರಾ.ಬೇಂದ್ರೆಯವರ ಅಭಿಪ್ರಾಯದಂತೆ "ಪ್ರಬುದ್ಧ ಕರ್ಣಾಟಕಕ್ಕೆ ಕೃಷ್ಣಶಾಸ್ತ್ರಿಗಳು ತಂದೆ, ವೆಂಕಣಯ್ಯನವರು ತಾಯಿ. ಇವರಿಬ್ಬರ ಮಮತೆಯಲ್ಲಿ ಬೆಳೆದ ಪ್ರಬುದ್ಧ ಕರ್ಣಾಟಕ ಆಧುನಿಕ ಕನ್ನಡ ಸಾಹಿತ್ಯ ಬೆಳವಣಿಗೆಗೆ ಅತ್ಯಂತ ಪ್ರೋತ್ಸಾಹ ಹಾಗೂ ಉತ್ತೇಜನಗಳನ್ನು ನೀಡಿದೆ."[೧] ಇವರಿಬ್ಬರಲ್ಲಿಯೂ ತಮ್ಮ ತಮ್ಮ ಸ್ವಂತ ಶಕ್ತಿಗಳು ವಿಶೇಷವಾಗಿದ್ದರೂ ಇಬ್ಬರೂ ಏಕೀಭವಿಸಿ ಕನ್ನಡಕ್ಕಾಗಿ ಸಾಧಿಸಿದ ಸೇವೆ ಒಬ್ಬೊಬ್ಬರಿಂದಲೇ ಎಂದಿಗೂ ಆಗುತ್ತಿರಲಿಲ್ಲ. ವಿವೇಕ ಆಲೋಚನೆ ಯಾರದು? ಕಾರ್ಯ ತತ್ಪರತೆ ಯಾರದು? ಕನ್ನಡದಲ್ಲಿ ದಾಕ್ಷಿಣ್ಯಪರರು ಯಾರು? ಎಳೆಯ ಸಾಹಿತಿಗಳನ್ನು, ಹೊಸ ಲೇಖಕರನ್ನು ಹುರುಪುಗೊಳಿಸುತ್ತಿದ್ದವರು ಯಾರು?"[೨] ಎಂಬ ವಿಚಾರ ಕಂಡು ಹಿಡಿಯುವುದು ಕಷ್ಟದ ಕೆಲಸವಾದರೂ ಈ ಎಲ್ಲ ಪರಿಶ್ರಮಗಳ ಫಲ ದಕ್ಕುತ್ತಿದ್ದುದು ಕನ್ನಡಿಗರಿಗೆ ಮಾತ್ರ. ಅವರಿಬ್ಬರೂ ಒಬ್ಬರಿಗೊಬ್ಬರು ಆರಂಭದಿಂದಲೂ ಪೂರಕವಾಗಿದ್ದರೂ. ಒಬ್ಬೊಬ್ಬರದು ಒಂದೊಂದು ರೀತಿಯ ಕೌಶಲ್ಯ. ಪತ್ರಿಕೆಗೆ ಲೇಖನ ಸಂಪಾದಿಸುವ ಕಲೆ ವೆಂಕಣಯ್ಯನವರ ಹಿರಿಮೆ. ಪತ್ರಿಕೆಗಳಿಗೆ ಲೇಖನದ ಅಭಾವವಾದಾಗಲೆಲ್ಲಾ ದೊಡ್ಡ ಸಂತೋಷಕೂಟವನ್ನೇರ್ಪಡಿಸಿ ಆದರದ ಮಾತು-ಗಳನ್ನಾಡಿ ನೆರೆದವರು ಅವರ ದಾಕ್ಷಿಣ್ಯಕ್ಕೆ ಒಳಗಾಗಿ ತಾವೇ ಲೇಖನಗಳನ್ನು ಒದಗಿಸುವ ಸನ್ನಿವೇಶವನ್ನು ಕಲ್ಪಿಸುವುದು ವೆಂಕಣಯ್ಯನವರ ಮಾರ್ಗ. ಆದರೆ ಶಾಸ್ತ್ರಿಗಳದ್ದು ಖಂಡಿತವಾದಿ ಸ್ವಭಾವ. ತನಗೆ ಸರಿ ಎನಿಸಿದ್ದನ್ನು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುವ ಸ್ವಭಾವದವರು. ತಮ್ಮ ಈ ಸ್ವಭಾವವನ್ನು ಕುರಿತು ಕೃಷ್ಣಶಾಸ್ತ್ರಿಗಳೇ ಹೀಗೆ ಹೇಳಿಕೊಂಡಿದ್ದಾರೆ. "ಸಂಪಾದಕನಾಗಿ ನಾನು ಲೇಖನಗಳನ್ನು ಆರಿಸಿಕೊಳ್ಳು-ವುದರಲ್ಲೂ ಅವುಗಳಿಗೆ ರೂಪು ಕೊಡುವುದರಲ್ಲಿಯೂ ನಿಷ್ಠುರತೆಗಾಗಿ ನಾನು ಎಷ್ಟೋ ದುರ್ಜನನಾಗಿದ್ದೇನೆ. ದೂರಿಗೆ ಒಳಗಾಗಿದ್ದೇನೆ. ಆದರೆ ಎಂದೂ ಇಂದಿಗೂ ಕೂಡ ಪಶ್ಚಾತ್ತಾಪ ಪಟ್ಟಿಲ್ಲ. ಹುರುಳಿಲ್ಲದ ಕೆಲಸಗಳನ್ನು ನಾನು ನಿರ್ದಾಕ್ಷಿಣ್ಯವಾಗಿ ಮಾಡಿದ್ದೇನೆ".[೩] ಕೃಷ್ಣಶಾಸ್ತ್ರಿಗಳ ಈ ಸೂತ್ರ ಎಲ್ಲರಿಗೂ ಅನ್ವಯಿಸುವಂತಹದು. ಪತ್ರಿಕೆಯ ವಿಷಯದಲ್ಲಿ ತಾವು ಹಾಕಿಕೊಂಡ ನಿಯಮ ಚೌಕಟ್ಟನ್ನು ಮೀರಿದ ಯಾರ ಲೇಖನವಾದರೂ ಈ ಮಾನದಂಡಕ್ಕೆ ಒಳಗಾಗಲೇ ಬೇಕು. ಇದರಿಂದ ಹಲವಾರು ಬಾರಿ ಹಿರಿಯರಿಂದ ಅನ್ನಿಸಿಕೊಂಡಿದ್ದೂ ಉಂಟು. ಲೇಖನ ಬರೆದವರು ಹಿರಿಯ-ರಾಗಿರಬಹುದು ಅಥವಾ ಕಿರಿಯರಾಗಿರಬಹುದು ಎಲ್ಲರಿಗೂ ಒಂದೇ ಬಗೆಯ ಮಾನದಂಡ. ಅವರ ಮುಖ್ಯವಾದ ಉದ್ದೇಶ ಸಾಹಿತ್ಯದ ಮಟ್ಟ ಏರಬೇಕು. ಅಭಿರುಚಿಯ ಗುಣ ಬೆಳೆಯಬೇಕು. ಪತ್ರಿಕೆಯ ಗೌರವ ಹೆಚ್ಚಾಗಬೇಕು.

---

೧. ನಾಯಕ ಹಾ.ಮಾ., ತಿಪ್ಪೇರುದ್ರಸ್ವಾಮಿ.ಹೆಚ್(ಸಂ), ಎ.ಆರ್.ಕೃ. ಜೀವನ-ಸಾಧನೆ, ೧೯೭೧, ಪು. ೫.
೨. ಕುವೆಂಪು (ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೭೪.
೩. ಕೃಷ್ಣಶಾಸ್ತ್ರಿ ಎ.ಆರ್. ಭಾಷಣಗಳು ಮತ್ತು ಲೇಖನಗಳು, ೧೯೬೦, ಪು. ೨೧೭.

ಮಾಸ್ತಿ ವೆಂಕಟೇಶ ಅಯ್ಯಂಗಾರರು 'ಸುಬ್ಬಣ್ಣ' ಕಾದಂಬರಿಯನ್ನು ಬರೆದು ಪ್ರಕಟಣೆಗಾಗಿ ಕಳುಹಿಸಿದ ಸಂದರ್ಭದಲ್ಲಿ ನಡೆದ ಪ್ರಸಂಗ ಇಲ್ಲಿ ಉಲ್ಲೇಖಾರ್ಹ. ಇದು ಹಿರಿಯರಿಂದ ಆಗ್ರಹಕ್ಕೆ ಒಳಗಾದ ಪ್ರಸಂಗವಲ್ಲದಿದ್ದರೂ ಪತ್ರಿಕೆಯಲ್ಲಿ ಪ್ರಕಟವಾಗಬೇಕಾದ ಬರವಣಿಗೆಗಳಿಗೆ ಕೃಷ್ಣಶಾಸ್ತ್ರಿಗಳು ಹಾಕಿಕೊಂಡಿದ್ದ ಮಾನದಂಡದ ಪರಿಯನ್ನು ಪರಿಚಯಿಸುತ್ತದೆ.

" 'ಸುಬ್ಬಣ್ಣ' ಕತೆಯ ಹಸ್ತಪ್ರತಿ ಮೊದಲು ಮಿತ್ರರಿಗೆ ಹೋದಾಗ, ಸುಬ್ಬಣ್ಣ ನೀಲ ಇವರ ಸಂಬಂಧವನ್ನು ಕುರಿತ ಭಾಗ, ಸುಬ್ಬಣ್ಣ ಲಲಿತಮ್ಮನ ಮನಸ್ಸು ಒಂದುಗೂಡಿದ್ದನ್ನು ವರ್ಣಿಸುವ ಶಯ್ಯಾಗಾರದ ವರ್ಣನೆ ಇವು ಪ್ರಬುದ್ಧ ಕರ್ಣಾಟಕ ನಡೆಸಿಕೊಂಡು ಬಂದಿದ್ದ ಒಂದು ವಿನಯದ ಎಲ್ಲೆಯಿಂದ ಆಚೆಗೆ ಬೀಳುತ್ತದೆ ಎಂದು ಅವರು ಅಂಜಿದರು".[೧] ಅದು ಪ್ರಬುದ್ಧ ಕರ್ಣಾಟಕ ಅಲ್ಲಿಯವರೆಗೆ ಪಾಲಿಸಿಕೊಂಡು ಬಂದಿದ್ದ ನೀತಿಯನ್ನು ಮೀರಿದಂತಾಗುತ್ತದೆ ಎಂದು ಅದನ್ನು ಪ್ರಕಟಿಸಿಲ್ಲ. ಮಾಸ್ತಿಯವರಿಗೆ ಕಥೆಯ ಆ ಭಾಗಗಳನ್ನು ಬಿಡಲು ಇಷ್ಟವಿರಲಿಲ್ಲ. ಮೂರು ವರ್ಷಗಳ ನಂತರ ಮತ್ತೆ ಕಥೆಯನ್ನು ಪ್ರಕಟಣೆಗೆ ಕಳುಹಿಸುವ ಆಸೆ ಮಾಸ್ತಿ–ಯವರಿಗಾಯಿತು. ಶಯ್ಯಾಗಾರದ ಕಥನದಲ್ಲಿ ಒಂದು ಪದವನ್ನು ಮಾತ್ರ ತೆಗೆದು ಬೇರೆ ಪದವನ್ನು ಹಾಕಿ ಕಳುಹಿಸಿದಾಗ ಸಂಪಾದಕರು ಅದನ್ನು ಒಪ್ಪಿ ಪ್ರಕಟಿಸಿದರು. ಪತ್ರಿಕೆಯಲ್ಲಿ ಪ್ರಕಟಿಸಬೇಕಾದ ಲೇಖನ, ಕಥೆ, ಕವನ ಇವುಗಳು ಯಾವುದೇ ಆಗಿರಲಿ ಸಂಪಾದಕರಾದ ಶಾಸ್ತ್ರಿಗಳು ಅನುಸರಿಸುತ್ತಿದ್ದ ಮಾರ್ಗ ಮಾನದಂಡ ಎಲ್ಲರಿಗೂ ಒಂದೇ ಆಗಿತ್ತು. ಹೀಗಾಗಿ ಪತ್ರಿಕೆ ತನ್ನ ಗುಣಮಟ್ಟದ ಜೊತೆ ಎಂದೂ ರಾಜಿಯಾಗಲೇ ಇಲ್ಲ. ಅಷ್ಟೇ ಅಲ್ಲದೆ ಪತ್ರಿಕೆಯ ಹೊರ ರೂಪಕ್ಕೂ ಶಾಸ್ತ್ರಿಗಳು ನೀಡುತ್ತಿದ್ದ ಆದ್ಯತೆ ಗಮನಾರ್ಹ. ನಮ್ಮ ಪತ್ರಿಕೆ ಬೇರೆ ಭಾಷೆಯ ಯಾವುದೇ ಪತ್ರಿಕೆಗಳಿಗಿಂತ ಯಾವುದರಲ್ಲೂ ಕಮ್ಮಿ ಇರಬಾರದು. ಪತ್ರಿಕೆಗೆ ಬಳಸುವ ಕಾಗದವಾಗಲೀ ಹೊರ ಪುಟವಾಗಲೀ, ಮುದ್ರಣದ ಕ್ರಮವಾಗಲೀ, ಅಕ್ಷರ ವಿನ್ಯಾಸವಾಗಲೀ ಉತ್ಕೃಷ್ಟವಾಗಿಯೇ ಇರಬೇಕು. ಆಗ ಮಾತ್ರ ಉಳಿದ ಪತ್ರಿಕೆಗಳ ಜೊತೆ ಸರಿಸಾಟಿಯಾಗಿ ನಿಲ್ಲಲು ಸಾಧ್ಯ ಎಂಬುದು ಶಾಸ್ತ್ರಿಗಳ ಅಭಿಪ್ರಾಯವಾಗಿತ್ತು. ಪ್ರಬುದ್ಧ ಕರ್ಣಾಟಕದ ಓದುಗರ ಬಳಗವೂ ಇದನ್ನೇ ಅಪೇಕ್ಷಿಸುತ್ತಿತ್ತು. ಒಮ್ಮೆ ಮೈಸೂರಿನ ಅನಾಮಧೇಯನೊಬ್ಬ ಕಿಡಿಗೇಡಿತನಕ್ಕಾಗಿಯೋ ಅಥವಾ ನಿಜವಾಗಿಯೋ ಪ್ರಬುದ್ಧ ಕರ್ಣಾಟಕ ತನ್ನ ಮೊದಲ ಸಂಚಿಕೆಗಳಷ್ಟು ಸುಂದರವಾಗಿ ಬರುತ್ತಿಲ್ಲವೆಂದು ಆಪಾದಿಸಿ ಮೂಗು ಪತ್ರ ಬರೆದಾಗ ಅದಕ್ಕೆ ಶಾಸ್ತ್ರಿಗಳು ಕೊಟ್ಟ ಉತ್ತರ ಪತ್ರಿಕೆಯ ಸ್ವರೂಪದ ಬಗ್ಗೆ ಶಾಸ್ತ್ರಿಗಳಿಗಿದ್ದ ಅಭಿಪ್ರಾಯ ತಿಳಿಸುತ್ತದೆ. ಮೂಗು ಪತ್ರವು ಪ್ರತಿ ಸಲ

---

೧. ಕುವೆಂಪು (ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೩೪.

ಪ್ರಬುದ್ಧ ಕರ್ಣಾಟಕವನ್ನು ಓದಲು ತೆಗೆದುಕೊಂಡರೆ ಹೊರಗೆ ನೋಡುವುದಕ್ಕೆ ಎಷ್ಟೋ ಆನಂದವಾಗುತ್ತಿತ್ತು. ಈಗಲಾದರೋ ರಟ್ಟಿನ ಬಣ್ಣ ಮಾಸಿದೆ, ರಟ್ಟು ಬಲು ತೆಳ್ಳಗಿದೆ ನೋಡುವುದಕ್ಕೆ ಅಂದ ಇಲ್ಲ ಎಂಬ ಆಪಾದನೆಗಳನ್ನು ಮಾಡಿದಾಗ ಶಾಸ್ತ್ರಿಗಳು "ನಮ್ಮ ಮಗು ಚೆನ್ನಾಗಿ ಉಟ್ಟುತೊಟ್ಟು ಇರಬೇಕೆಂಬುದು ಪರರಿಗಿಂತಲೂ ನಮಗೆ ಹೆಚ್ಚಾಗಿ ಆಸೆ ಇದೆ. ಅದಕ್ಕೆ ದುಡ್ಡು ವೆಚ್ಚವಾಗುವುದೆಂದು ಹಿಂತೆಗೆಯುವಂತಿಲ್ಲ. ಆದರೆ ದುಡ್ಡು ಕೊಟ್ಟರೂ ದೊಡ್ಡಪ್ಪ ಕೊಡ ಎನ್ನುವ ಹಾಗೆ ಮಾರುವವರಲ್ಲಿ ಒಳ್ಳೆಯ ವಸ್ತು ಸಿಕ್ಕದೇ ಹೋದರೆ ಮಾಡುವುದೇನು? ಮಾಸಲು ನಿಜ ಆದರೆ ಹೋದ ಸಂಚಿಕೆಗಿಂತ ಶುಭ್ರವಾಗಿದೆ. ರಟ್ಟು ಬಲು ತೆಳುವಲ್ಲ ಇಷ್ಟೇಕೆ ರಟ್ಟಿಗೆ ಖರ್ಚು ಎಂದರೂ ನಾವು ಮಾಡುತ್ತಿದ್ದೇವೆ"[೧] ಎಂದು ಹೇಳಿ ಪತ್ರಿಕೆಯನ್ನು ಸುಂದರವಾಗಿ ತರಲು ಪ್ರಯತ್ನಿಸಿದರೂ ಆಗದೇ ಇರುವ ಅಂಶದ ಕಡೆ ಓದುಗರ ಗಮನಸೆಳೆದಿದ್ದಾರೆ. ಬಂದಿರುವುದು ಮೂಗರ್ಜಿಯೇ ಆದರೂ ಅದು ಎತ್ತಿದ ಅಸಮಾಧಾನಗಳಿಗೆ ಉತ್ತರ ನೀಡಿದ್ದಾರೆ. ಅಶ್ವಿನೀ ದೇವತೆಗಳಲ್ಲಿ ಒಬ್ಬರಾದ ವೆಂಕಣಯ್ಯನವರು ಕೃಷ್ಣಶಾಸ್ತ್ರಿಗಳ ಸ್ವಭಾವ ಹಾಗೂ ಗುಣಗಳನ್ನು ಕುರಿತು ಅದರಲ್ಲೂ ಅವರ ನಿಷ್ಠುರಪರತೆಯನ್ನು ಕುರಿತು "ಕೃಷ್ಣನ ಕೈಯಲ್ಲೇ ಪತ್ರಿಕೆ ಇದ್ದರೆ ಅದು ಹೆಚ್ಚು ದಿನ ಉಳಿಯಲಾರದು ಅವನ ಸಂಪಾದಕೀಯಗಳಿಂದ ಅನೇಕರು ಸಿಟ್ಟಿಗೆದಿದ್ದಾರೆ. ಅವನೋ ಸಾಚಾ ಮನುಷ್ಯ ಖಂಡಿತವಾದಿ ಎನ್ನಬೇಕಾದ ವಿಚಾರವನ್ನು ಎಂದೇ ಎನ್ನುತ್ತಾನೆ. ಅವನ ಪ್ರಕೃತಿಯನ್ನು ಬದಲಾಯಿಸಲು ಅಸಾಧ್ಯ ಬದಲಾಯಿಸಲೂ ಬಾರದು"[೨] ಎಂದಿದ್ದಾರೆ. ಈ ರೀತಿಯ ವಿಭಿನ್ನ ಸ್ವಭಾವದ ಇವರಿಬ್ಬರು ಒಂದಾದದ್ದು ಮಾತ್ರ ಆಧುನಿಕ ಕನ್ನಡ ಬೆಳವಣಿಗೆಯ ದೃಷ್ಟಿಯಿಂದ ಮಹತ್ತರವಾದ ವಿಚಾರ "ಒಬ್ಬರು ಮೌನದಿಂದ ಒಬ್ಬರು ಮಾತಿನಿಂದ ಮನಸ್ಸನ್ನು ವ್ಯಕ್ತಪಡಿಸುವರು. ಒಬ್ಬರು ಸೌಜನ್ಯಮೂರ್ತಿ ಮತ್ತೊಬ್ಬರು ಸಹಜವಾದ ರಸಭಾವಗಳಿಗೆ ಜೀವನದಲ್ಲಿ ಎಡೆಕೊಡುವರು ಸಾಮಾನ್ಯವಾಗಿ ಇಂತಹ ಇಬ್ಬರು ಇವರಂತೆ ಗೆಳೆಯರಾಗುವುದು ಅಪೂರ್ವವೆನ್ನಬೇಕು"[೩] ಇಂತಹ ಗೆಳೆಯರಿಬ್ಬರ ದುಡಿಮೆಯ ಫಲವಾಗಿ ಪ್ರಬುದ್ಧ ಕರ್ಣಾಟಕ ಸದೃಢವಾಗಿ ಬೆಳೆದು ನಿಂತಿತು.

೧೯೪೨ರಿಂದ ೧೯೪೭ನೇ ಮೂರನೇ ಸಂಚಿಕೆಯವರೆಗೆ ವಿ.ಸೀತಾರಾಮಯ್ಯ-ನವರು ಸಂಪಾದಕತ್ವದ ಹೊಣೆ ಹೊತ್ತಿದ್ದರು. ಕಥೆ, ಕವನ, ನಾಟಕ, ಪ್ರವಾಸ, ಭೇಟಿ, ಸಭೆ, ಸಮ್ಮೇಳನ, ಉಪನ್ಯಾಸ, ವಾಚನ, ವ್ಯಾಖ್ಯಾನಗಳ ಮೂಲಕ ನಾಡು-ನುಡಿಗಾಗಿ

---

೧. ವಸ್ತುಕೋಶ, ಪ್ರಬುದ್ಧ ಕರ್ಣಾಟಕ, ಸಂಪುಟ ೯, ಸಂಚಿಕೆ ೩, ಪು.
೨. ಕುವೆಂಪು (ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೬೭.
೩. ಕುವೆಂಪು (ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೩೨.

ದುಡಿದ ವಿ.ಸಿ.ಯವರು ಪ್ರಬುದ್ಧ ಕರ್ನಾಟಕದ ಸರ್ವತೋಮುಖ ಬೆಳವಣಿಗೆಯಲ್ಲಿ ಪ್ರಮುಖಪಾತ್ರ ವಹಿಸಿದ್ದಾರೆ. ಇವರ ಕಾಲದಲ್ಲಿಯೇ ಪತ್ರಿಕೆ ಹಲವಾರು ಬಗೆಯ ಲೇಖನಗಳನ್ನು ಒಳಗೊಂಡು ಮೈತುಂಬಿಕೊಂಡು ಹೊರಬೀಳುತ್ತಿತ್ತು. ಅಂಕಿ-ಅಂಶಗಳೆಂಬ ಹೊಸ ಭಾಗವೊಂದು ಪ್ರಾರಂಭವಾಯಿತು. ಲೇಖನಗಳ ವೈವಿಧ್ಯ ಹೆಚ್ಚಿತು. "ಪತ್ರಿಕೆಗಳವರು ಭಾಷಣಕಾರರು, ಸಾರ್ವಜನಿಕ ಜೀವನಕ್ಕೂ ಲೋಕ ವ್ಯವಹಾರಕ್ಕೂ ಸಂಬಂಧಪಟ್ಟ ಸಂಗತಿಗಳಲ್ಲಿ ಆಸಕ್ತರಾಗಿರುವವರು ನ್ಯಾಯ ವಿಧೇಯರ ಸಭೆ ಪ್ರತಿನಿಧಿ ಸಭೆಗಳವರು ಮುಂತಾದವರಿಗೆ ಇದರಿಂದ ಸ್ವಲ್ಪ ಉಪಯೋಗವಾದರೆ ನಮ್ಮ ಶ್ರಮ ಸಾರ್ಥಕ"[೧] ಎಂಬ ಆಶಯದೊಡನೆ ಈ ಹೊಸ ವಿಭಾಗವು ಆರಂಭವಾಯಿತು. ಈ ವಿಭಾಗವು ಪ್ರಯೋಜನಕಾರಿ ಎಂಬ ಅಂಶ ಗೊತ್ತಾದರೆ ನಂತರದ ದಿನಗಳಲ್ಲಿ ವಿಶೇಷ ಬಗೆಯ ವಿವರಾಂಶಗಳನ್ನು ಪ್ರಕಟಿಸುವ ಆಲೋಚನೆಯ ಜೊತೆಗೆ, ಜನಗಳ ಸಹಕಾರ ದೊರೆತರೆ ಮೂರು ತಿಂಗಳ ಅವಧಿಯಲ್ಲಿ ಭಾರತದಲ್ಲಿ ಹಾಗೂ ಹೊರಗೆ ನಡೆವ ಮಹಾ ಸಂಘಟನೆಗಳ ವರದಿಯನ್ನು ಮಾಡಿಕೊಡಬೇಕೆಂಬ ಉದ್ದೇಶವನ್ನು ಸಂಪಾದಕರು ಹೊಂದಿದ್ದಂತೆ ತೋರುತ್ತದೆ. ಅಷ್ಟೇ ಅಲ್ಲದೆ ವಿ.ಸೀ.ಯವರು ಸಂಪಾದಕರಾಗಿದ್ದಾಗ ಹಲವಾರು ತರುಣ ಬರಹಗಾರರನ್ನು ಪ್ರೋತ್ಸಾಹಿಸಿ ಬೆಳೆಸಿದ್ದಾರೆ. ಬಿ.ಪಿ.ರಾಧಾಕೃಷ್ಣ ಅವರು ವಿಚಾರವನ್ನು ನೆನಪಿಸಿಕೊಳ್ಳುತ್ತಾ "ಇದೇ ಸುಮಾರಿಗೆ ಕನ್ನಡ ನಾಡಿನ ಚಿನ್ನದ ಗಣಿಗಳು ಎಂಬ ವೈಜ್ಞಾನಿಕ ಪ್ರಬಂಧವೊಂದನ್ನು ಪ್ರಕಟನೆಗೆಂದು ಪ್ರಬುದ್ಧ ಕರ್ನಾಟಕಕ್ಕೆ ನಾನು ಕಳುಹಿಸಿಕೊಟ್ಟಿದೆ. ಲೇಖನವನ್ನು ಎಚ್ಚರಿಕೆಯಿಂದ ತಿದ್ದಿ ಕೈ ಬಿಡಬೇಕಾದ ಭಾಗಗಳನ್ನು ಸೂಚಿಸಿ ಲೇಖನವನ್ನು ಪರಿಷ್ಕರಿಸಲು ಸೂಚನೆಕೊಟ್ಟು ಕೆಲವು ಉತ್ತೇಜನಕ ಮಾತುಗಳನ್ನು ಬರೆದು ವಿ.ಸಿ. ಹಿಂದಕ್ಕೆ ಕಳುಹಿಸಿಕೊಟ್ಟರು. ಅವರು ಸೂಚಿಸಿದ ತಿದ್ದುಪಡಿಗಳನ್ನು ನಾನು ಮಾಡಿದ್ದೇನೆಯೋ ಇಲ್ಲವೋ ಎಂಬುದನ್ನು ತಾಳೆ ನೋಡಿ ಮುಂದಿನ ಒಂದು ಸಂಚಿಕೆಯಲ್ಲಿ ಪ್ರಕಟಿಸಿದರು. ನಾನು ಕಳುಹಿಸಿದ್ದ ಚಿತ್ರವನ್ನು ಮುದ್ರಿಸುವುದಕ್ಕೆ ವಿಶೇಷವಾದ ಬೆಲೆಬಾಳುವ ಕಾಗದವನ್ನು ಉಪಯೋಗಿಸಿದ್ದರು. ನನ್ನ ಆ ಚೊಚ್ಚಲು ಬರವಣಿಗೆ ಅಷ್ಟು ಸರ್ವಾಂಗ ಸುಂದರವಾಗಿ ಹೊರಬಿದ್ದುದನ್ನು ಕಂಡು ನನಗಾದ ಸಂತೋಷ ಅಷ್ಟಿಷ್ಟಲ್ಲ. ವಿ.ಸೀ.ಯವರಿಂದ ನನಗೆ ಹೀಗೆ ಪ್ರೋತ್ಸಾಹ ದೊರೆಯಿತು. ಪ್ರಬುದ್ಧ ಕರ್ನಾಟಕದ ಬರಹಗಾರರ ಪಂಕ್ತಿಯಲ್ಲಿ ನಾನೂ ಸೇರಿದೆನೆಂದು ಹೆಮ್ಮೆ ಪಟ್ಟುಕೊಂಡೆ. ನನ್ನಂತೆಯೇ ಇತರ ಎಷ್ಟೋ ಮಂದಿ ತರುಣರು ಬೆಳಕಿಗೆ ಬಂದರು.[೨] ಇವರು

---

೧. ಸಂಪಾದಕೀಯ ಪ್ರಕ., ಸಂಪುಟ ೨೭, ಸಂಚಿಕೆ ೪, ಪು. ೧೫೨.
೨. ಬಿ.ಪಿ.ರಾಧಾಕೃಷ್ಣ, ಸಾರ್ಥಕ ಬದುಕು, ೧೯೯೭, ಪು. ೮೭-೮೮.

ಪ್ರಬುದ್ಧ ಕರ್ಣಾಟಕದ ಸಂಪಾದಕರಾಗಿದ್ದಾಗ ಈ ಪತ್ರಿಕೆಯ ಘನತೆ ಗೌರವಗಳಿಗೆ ತಕ್ಕಂತೆ ಇದನ್ನು ನಡೆಸಿಕೊಂಡು ಬಂದರು. ಇವರ ಸಂಪಾದಕತ್ವದಲ್ಲಿಯೇ ಪ್ರಬುದ್ಧ ಕರ್ಣಾಟಕ ಬೆಳ್ಳಿಯ ಸಂಚಿಕೆ ಹೊರಬಂದಿತು. ಸಾಹಿತ್ಯದ ವಿವಿಧ ಮಗ್ಗುಲುಗಳ ಪರಿಚಯ ದೊರಕಿಸಿಕೊಟ್ಟ ಈ ಸಂಚಿಕೆ ಸಾಹಿತ್ಯವಲಯದಲ್ಲಿ ವಿಶೇಷವಾಗಿ ಗಮನಸೆಳೆಯಿತು.



೧೯೪೭ನೇ ಇಸವಿಯಲ್ಲಿ ಕೆ.ವಿ.ರಾಘವಾಚಾರ್ ಕೇವಲ ಒಂದು ಸಂಚಿಕೆಗೆ ಸಂಪಾದಕರಾಗಿದ್ದ ನಂತರ ಪ್ರಬುದ್ಧ ಕರ್ಣಾಟಕಕ್ಕೆ ಒಬ್ಬರು ಸಂಪಾದಕರ ಜೊತೆಯಲ್ಲಿ ಇನ್ನೊಬ್ಬರು ಸಂಪಾದಕರ ಸೇವೆ ದೊರೆಯಲಾರಂಭಿಸಿತು. ಎನ್.ಅನಂತ-ರಂಗಾಚಾರ್ ಮತ್ತು ಟಿ.ಎಸ್.ಶಾಮರಾವ್ (೧೯೪೮-೧೯೫೩), ಎಸ್.ವಿ.ಪರಮೇಶ್ವರ ಭಟ್ಟ ಮತ್ತು ದೇ.ಜವರೇಗೌಡ (೧೯೫೩-೧೯೫೫), ಎಸ್.ವಿ.ಪರಮೇಶ್ವರ ಭಟ್ಟ ಮತ್ತು ಉ.ಕ.ಸುಬ್ಬರಾಯಾಚಾರ್(೧೯೫೫-೫೭)ರ ಅವಧಿಯಲ್ಲಿ ಸಂಪಾದಕರಾಗಿ ಸೇವೆಸಲ್ಲಿಸಿದ್ದಾರೆ. ಎನ್.ಅನಂತರಂಗಾಚಾರ್ ಮತ್ತು ಟಿ.ಎಸ್.ಶಾಮರಾವ್ ಅವರ ಅವಧಿಯಲ್ಲಿ ಪತ್ರಿಕೆಯ ಪ್ರಕಟಣೆಯ ಕಾಲದಲ್ಲಿ ಬದಲಾವಣೆಯಾಯಿತು. ಅಲ್ಲಿಯವರೆವಿಗೆ ವಿನಾಯಕ ದೀಪಾವಳಿ, ಸಂಕ್ರಾಂತಿ ಹಾಗೂ ಕಾಮನ ಸಂಚಿಕೆಗಳೆಂದು ಪ್ರಕಟವಾಗುತ್ತಿದ್ದು ಚೈತ್ರ, ಆಷಾಡ, ಆಶ್ವಯುಜ ಹಾಗೂ ಪುಷ್ಯ ಸಂಚಿಕೆಗಳೆಂದು ಬದಲಾಯಿತು. ಅನಂತರ ಎಸ್.ವಿ.ಪರಮೇಶ್ವರ ಭಟ್ಟ ಹಾಗೂ ದೇ.ಜವರೇಗೌಡರ ಕಾಲದಲ್ಲಿ ಪ್ರಬುದ್ಧ ಕರ್ಣಾಟಕ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ದೇ.ಜವರೇಗೌಡರು ಎರಡು ವರ್ಷಗಳ ಕಾಲ ಎಸ್.ವಿ.ಪರಮೇಶ ಭಟ್ಟರ ಜೊತೆ ಸಂಪಾದಕರಾಗಿ ದುಡಿದ ನಂತರ ಪ್ರಚಾರೋಪನ್ಯಾಸ ಶಾಖೆಯ ಕಾರ್ಯದರ್ಶಿಗಳಾಗಿ ಸೇವೆಸಲ್ಲಿಸಲು ಹೊರಟ ಸಂದರ್ಭದಲ್ಲಿ ಎ.ಆರ್.ಕೃಷ್ಣಶಾಸ್ತ್ರಿಗಳು ಅವರ ಶಿಷ್ಯರೊಬ್ಬರಿಗೆ ಬರೆದ ಪತ್ರದಲ್ಲಿ "Under Sri S.V.Parameshwara Bhatt and Sri D.Javaregowda's Editorship Prabhudda Karnataka is steadily improving. It is long time since I saw an issue running to 200 pages. The articles are varying with one another in point of scholarship and information"[೧] ಎಂಬ ಅಭಿಪ್ರಾಯಪಡಿಸಿರುವುದು ಇವರುಗಳ ಅವಧಿಯಲ್ಲಿ ಪತ್ರಿಕೆಯು ಮೈತುಂಬಿ-ಕೊಂಡು ವಿದ್ವತ್ ಪ್ರಧಾನವಾದ ಹಾಗೂ ಗಮನಾರ್ಹವಾದ ಲೇಖನಗಳಿಂದ ಎಲ್ಲರ ಒಲವು ಗಳಿಸಿದ್ದನ್ನು ಸೂಚಿಸುತ್ತದೆ. ಇವರ ನಂತರ ಎಸ್.ವಿ.ಪರಮೇಶ್ವರ ಭಟ್ಟ ಹಾಗೂ ಉ.ಕ.ಸುಬ್ಬರಾಯಾಚಾರ್ ಅಧಿಕಾರ ವಹಿಸಿಕೊಂಡು ಪತ್ರಿಕೆಯನ್ನು ಮುನ್ನಡೆಸಿದ್ದಾರೆ. ಸ್ವತಂತ್ರ ಹೋರಾಟದ ಸಂದರ್ಭದಲ್ಲಿ ಸಕ್ರಿಯರಾಗಿದ್ದು, ವಿದ್ಯಾರ್ಥಿ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೩೭, ಸಂಚಿಕೆ ೧, ಪು. ೨೫೩.

ಕ್ಷೇಮಾಧಿಕಾರಿಯೂ ಆಗಿದ್ದ ಉ.ಕ. ಸುಬ್ಬರಾಮಾಚಾರ್ ಅವರ ಸೇವೆಯನ್ನು ಕುರಿತಂತೆ ಅವರ ಜೊತೆಯಲ್ಲಿಯೇ ದುಡಿದ ಎಸ್.ವಿ.ಪರಮೇಶ್ವರ ಭಟ್ಟರು "ನಾನು ಪ್ರಬುದ್ಧ ಕರ್ಣಾಟಕದ ಸಹ ಸಂಪಾದಕನಾಗಿದ್ದಾಗ ಉ.ಕ.ಸುಬ್ಬರಾಯಾಚಾರ್ ಅವರೂ ಸಹ ಸಂಪಾದಕರಾಗಿದ್ದರು. ಲೇಖನಗಳನ್ನು ಓದಿ ಜೊತೆಗೂಡಿಸುವುದು, ವೆಸ್ಲಿ ಪ್ರೆಸ್ಸಿಗೆ ಓಡಾಡುವುದು, ಫ್ರೂಫ್ ತಿದ್ದುವುದು, ಸಂಪಾದಕೀಯಗಳನ್ನು ಬರೆಯುವುದು, ಕೊನೆಗೆ ಪ್ರತಿಗಳು ಅಚ್ಚಿನ ಮನೆಯಿಂದ ಬಂದ ನಂತರ ಕುವೆಂಪು ಅವರಿಗೆ ಒಂದು ಪ್ರತಿಯನ್ನು ತಲುಪಿಸುವುದು, ಎಲ್ಲವನ್ನು ಅವರೇ ನೋಡಿ-ಕೊಳ್ಳುತ್ತಿದ್ದರು. ಇಂತಹವರ ಜೊತೆ ಕೆಲಸ ಮಾಡುವುದು ನನ್ನಂತಹ ಅಲಸಿಗನಿಗೆ ಆನಂದದಾಯಕ ತಾನೆ"[೧] ಎಂದಿದ್ದಾರೆ. ಈ ಮಾತುಗಳು ಉ.ಕ.ಸುಬ್ಬರಾಯರ ಕಾರ್ಯತತ್ಪರತೆ, ಚುರುಕುತನ ಪತ್ರಿಕೆಯ ಮೇಲಿನ ಪ್ರೀತಿ, ಜವಾಬ್ದಾರಿಯನ್ನು ನಿರ್ವಹಿಸಿದ ಬಗ್ಗೆ ಎಲ್ಲವನ್ನೂ ತಿಳಿಸುತ್ತದೆ. ಹೀಗೆ ಸಂಪಾದಕರುಗಳು ಪ್ರಬುದ್ಧ ಕರ್ಣಾಟಕದ ಬೆಳವಣಿಗೆಯಲ್ಲಿ ನೀಡಿದ ಬೆಂಬಲ ಸಹಕಾರ ಗಮನಾರ್ಹವಾದದ್ದು. ೧೯೩೨ರಲ್ಲಿ ಪತ್ರಿಕೆಯು ಮೈಸೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಒಳಪಟ್ಟ ನಂತರ ಅದು ಕನ್ನಡ ಗ್ರಂಥ ಪ್ರಕಾಶನ ಸಮಿತಿಯ ಮೇಲ್ವಿಚಾರಣೆಯಲ್ಲಿ ನಡೆಯಬೇಕೆಂದೂ ಶ್ರೀಮಾನ್ ಬಿ.ಎಂ.ಶ್ರೀಕಂಠಯ್ಯನವರು ಮುಖ್ಯ ಸಂಪಾದಕರಾಗಿಯೂ ಶ್ರೀಮಾನ್ ಟಿ.ಎಸ್.ವೆಂಕಣಯ್ಯ ಮತ್ತು ಎ.ಆರ್.ಕೃಷ್ಣಶಾಸ್ತ್ರಿಗಳು ಸಂಪಾದಕರಾಗಿಯೂ, ತೀ.ನಂ.ಶ್ರೀಕಂಠಯ್ಯ, ಕೆ.ವಿ.ಪುಟ್ಟಪ್ಪ, ವಿ.ಸೀತಾರಾಮಯ್ಯ ಇವರುಗಳ ಸಂಪಾದಕ ಸಮಿತಿಯ ಇತರ ಸದಸ್ಯರುಗಳು ಎಂದು ನೇಮಕ ಮಾಡಲಾಗಿತ್ತು. ಆನಂತರದ ದಿನಗಳಲ್ಲಿ ಎ.ಆರ್.ಕೃಷ್ಣಶಾಸ್ತ್ರಿಗಳು (೧೯೪೩-೪೬) ಕೆ.ವಿ.ಪುಟ್ಟಪ್ಪ (೧೯೪೬-೫೯)ರವರು ಪ್ರಧಾನ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ.

**ಸಮಕಾಲೀನ ಪತ್ರಿಕೆಗಳಿಗೆ ಸ್ಪಂಧನ ಸಹಾಯ, ಮಾರ್ಗದರ್ಶನ**

ಪ್ರಬುದ್ಧ ಕರ್ನಾಟಕವು ತನ್ನ ಜನಪ್ರಿಯಯತೆಯನ್ನು ಹೆಚ್ಚಿಸಿಕೊಳ್ಳುತ್ತಾ ಎಲ್ಲರಿಂದ ಆದರಕ್ಕೆ ಪಾತ್ರವಾಗುತ್ತಿದ್ದ ಸಮಯದಲ್ಲೇ ಅದು ತನ್ನ ಸುತ್ತ ಮುತ್ತಲು ಪ್ರಕಟಗೊಳ್ಳುತ್ತಿದ್ದ ವಿವಿಧ ಪತ್ರಿಕೆಗಳ ಕಡೆಗೂ ಗಮನ ಹರಿಸಿದೆ. ಹಲವಾರು ಪತ್ರಿಕೆಗಳ ವಿಚಾರಗಳನ್ನು ಆದರ ವೈಶಿಷ್ಟ್ಯಗಳನ್ನು ಕನ್ನಡಿಗರು ಅದರಿಂದ ಹೇಗೆ ಪ್ರಯೋಜನ ಪಡೆಯಬಹುದೆಂಬ ಅಂಶವನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದೆ. ಪತ್ರಿಕೆಯನ್ನು ಪ್ರಾರಂಭಿಸುವುದು ಹಣ ಸಂಪಾದನೆ ಮಾಡುವುದಕ್ಕಿಂತ ಕನ್ನಡ ಭಾಷೆಯ ಸೇವೆಯನ್ನು ಮಾಡಬೇಕೆಂಬ ಆಶಯದಿಂದಾಗಿದ್ದರೆ ಅಂತಹ ಪತ್ರಿಕೆಗಳಿಂದ

---

೧. ಸುಜನಾ(ಸಂ.), ನೀರವ ಸಾಧಕ, ೧೯೯೭, ಪು. ೧೮೨.

ಕನ್ನಡಿಗರಿಗೆ ಪ್ರಯೋಜನ ಹೆಚ್ಚು ಎಂಬುದನ್ನು ಅರಿತಿರುವ ಪ್ರಬುದ್ಧ ಕರ್ನಾಟಕ ಜವಾಬ್ದಾರಿಯುತವಾದ ಪತ್ರಿಕೆಯಾಗಿ ತನ್ನ ಉದ್ಧಾರವನ್ನಷ್ಟೇ ಪರಿಗಣಿಸದೆ ತನ್ನ ಸಮಕಾಲೀನ ಪತ್ರಿಕೆಗಳೂ ಉಳಿಯಬೇಕು ಬೆಳೆಯಬೇಕು ಎಂಬ ಕಾಳಜಿಯನ್ನು ಆಗಿಂದ್ದಾಗೆ ವ್ಯಕ್ತ ಪಡಿಸಿರುವುದನ್ನು ಗಮನಿಸಬಹುದು. ಪತ್ರಿಕೆಗಳು ತನ್ನ ಉಳಿವಿಗಾಗಿ ಯಾವ ವಿಷಯಗಳಿಗೆ ಆದ್ಯತೆ ನೀಡಬೇಕು? ಯಾವುದರ ಮೂಲಕ ವಾಚಕರ ಸಂಖ್ಯೆಯನ್ನು ಅಭಿವೃದ್ಧಿಗೊಳಿಸಿಕೊಳ್ಳಬಹುದು ಎಂಬುದರ ಬಗ್ಗೆ ಸಲಹೆಯೂ ಇದರಲ್ಲಿದೆ. ಕೇವಲ ಪತ್ರಿಕೆಗಳ ಅಭಿವೃದ್ಧಿಯಷ್ಟೇ ಅಲ್ಲದೇ ವಾಚಕರಿಗೂ ಪತ್ರಿಕೆಗಳ ಪ್ರಯೋಜನಗಳನ್ನು ಹೇಗೆ ಪಡೆದುಕೊಳ್ಳಬಹುದೆಂಬ ಸಲಹೆ ಸೂಚನೆಗಳು ಇಲ್ಲಿವೆ.

ಹಬ್ಬ ಹರಿದಿನ ಹಾಗೂ ವಿಶೇಷ ಸಂದರ್ಭಗಳಲ್ಲಿ ವಿಶೇಷ ಸಂಚಿಕೆಗಳನ್ನು ಹೊರತರಬೇಕಾಗಿ ಬಂದಾಗ ಪತ್ರಿಕೆಗಳು ಯಾವ ಅಂಶಗಳ ಕಡೆ ಗಮನ ಹರಿಸಬೇಕು ಎಂಬಂತಹ ಸೂಕ್ಷ್ಮ ವಿಚಾರಗಳ ಬಗ್ಗೆಯೂ ಸಲಹೆಯನ್ನು ನೀಡಿದೆ. "ಈ ವರೆವಿಗೆ ಪ್ರಕಟವಾಗಿರುವ ವಿಶೇಷ ಸಂಚಿಕೆಗಳಲ್ಲಿ ಹಲವನ್ನು ನೋಡಿದರೆ ದಿನಚರಿಯ ಸಾಮಾನ್ಯ ಸಂಚಿಕೆಗಳೇ ಬೃಹದಾಕಾರವನ್ನು ತಾಳಿ ಬರುತ್ತಿರುವಂತೆ ಕಂಡುಬರುತ್ತದೆ. ವಿಶೇಷ ಸಂಚಿಕೆಗೆ ಬೇಕಾದ ವಿಶಿಷ್ಟತೆಗಳು ಇಲ್ಲಿ ಕಾಣುತ್ತಿಲ್ಲ."[೧] ಎಂಬ ವಿಷಾದವನ್ನು ವ್ಯಕ್ತಪಡಿಸಿರುವುದಷ್ಟೇ ಅಲ್ಲದೆ ವಿಶಿಷ್ಟವಾದ, ನಿರ್ದಿಷ್ಟವಾದ ಉದ್ದೇಶವನ್ನು ಇಟ್ಟುಕೊಂಡು ಅದಕ್ಕೆ ಅನುಗುಣವಾಗಿ ವಿಶೇಷ ಸಂಚಿಕೆಗಳಲ್ಲಿ ಲೇಖನಗಳನ್ನು ಪ್ರಕಟಿಸುವುದು ಒಳ್ಳೆಯದು ಎಂದು ಅಭಿಪ್ರಾಯ ಪಟ್ಟಿದೆ. ಉದಾಹರಣೆಗೆ ಕವಿಯೊಬ್ಬನ ವಿಷಯದಲ್ಲಿ ಬೇರೆ ಬೇರೆ ಅಂಶಗಳ ಬಗ್ಗೆ ವಿದ್ವಾಂಸರುಗಳಿಂದ ಲೇಖನ ಬರೆಸಿ ವಿಶೇಷ ಸಂಚಿಕೆ ಹೊರಡಿಸಬಹುದು. ಇದರ ವೈಶಿಷ್ಟ್ಯವೇನೆಂದರೆ ನಿರ್ದಿಷ್ಟ ವಿಷಯದ ಸಮಗ್ರ ಪ್ರತಿಪಾದನೆ ಅಲ್ಲಿರುವುದರಿಂದ ಆ ವಿಷಯದ ಮಾತು ಬಂದಾಗಲೆಲ್ಲ ಸಂಚಿಕೆಯ ಉಪಯೋಗ ಇದ್ದೇ ಇರುತ್ತದೆ. ಆದುದರಿಂದ ಸಂಪಾದಕರುಗಳು ಈ ಬಗ್ಗೆ ಯೋಚಿಸಬೇಕೆಂಬುದು ಪ್ರಬುದ್ಧ ಕರ್ನಾಟಕದ ಆಶಯ. ಇಷ್ಟೇ ಅಲ್ಲದೆ ಪ್ರಬುದ್ಧ ಕರ್ನಾಟಕದ ಆರಂಭದ ದಿನಗಳಲ್ಲಿ ಪ್ರಕಟಗೊಂಡಿರುವ ಇತರ ಪತ್ರಿಕೆಗಳ ಬಗೆಗಿನ ಅದರ ಅಭಿಪ್ರಾಯಗಳೂ ಕೂಡ ಬಲು ಮೌಲ್ಯಯುಕ್ತವಾಗಿದೆ. ಎಂ. ವೆಂಕಟಕೃಷ್ಣಯ್ಯನವರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ ಮೈಸೂರು ಪೌರ ಸಾಮಾಜಿಕ ಪತ್ರಿಕೆ(೪-೪)ಯ ಬಗ್ಗೆ ಪ್ರಸ್ತಾಪಿಸುತ್ತಾ, ಧರ್ಮ, ಪ್ರಜಾ ಸ್ವಾತಂತ್ರ್ಯ, ದೇಶ ಹಿತ ದೇಶ ವಾತ್ಸಲ್ಯ, ರಾಜಭಕ್ತಿ ಮುಂತಾದವುಗಳಿಗೆ ಹೊಡೆದಾಡುತ್ತಿರುವುದು ತಿಳಿದ ವಿಷಯ. ಹೀಗೆ ಉಪಯುಕ್ತವಾದ ನಾನಾ ವಿಧವಾದ ಸಂಗತಿಗಳನ್ನು ಒಟ್ಟಿಗೆ

---

೧. ವಸ್ತುಕೋಶ, ಪ್ರಕ., ಸಂಪುಟ ೧೪, ಸಂಚಿಕೆ ೪, ಪು. ೬.

ಸೇರಿಸಿಕೊಂಡ ಕೆಲಸವನ್ನು ಯಾವ ಕನ್ನಡ ಮಾಸಪತ್ರಿಕೆಯೂ ಮಾಡುತ್ತಿಲ್ಲ[೧]. ಇಂತಹ ಕಾರ್ಯಗಳು ನಡೆಯಬೇಕು. ಇದು ಉಭಯತ್ರಯರಿಗೂ ಲಾಭ ಉಂಟುಮಾಡುತ್ತದೆ ಎಂಬುದು ಅವರ ಅಭಿಪ್ರಾಯ. ಈ ಪೌರ ಪತ್ರಿಕೆಯ ಆರನೇ ಸಂಪುಟದ ಎರಡನೇ ಸಂಚಿಕೆಯಲ್ಲಿ ಸುಮಾರು ೩೨ಕ್ಕಿಂತ ಹೆಚ್ಚು ವಿಷಯಗಳು ಪ್ರಕಟಗೊಂಡಿದ್ದು ಅದು ಸಂಗ್ರಹಯೋಗ್ಯವಾಗಿದೆ. ಇಂತಹ ಸೌಲಭ್ಯವನ್ನು ಪಡೆಯಲಿಕ್ಕಾದರೂ ಹೆಚ್ಚು ಹೆಚ್ಚು ಜನರು ಅದಕ್ಕೆ ಚಂದಾದಾರರಾಗಬೇಕೆಂದು ಹೇಳುವುದರ ಮೂಲಕ ಪ್ರಬುದ್ಧ ಕರ್ನಾಟಕವು ಆ ಪತ್ರಿಕೆಯ ಪರವಾಗಿ ನಿಂತಿದೆ.

"ಕರ್ನಾಟಕ ಜನ ಜೀವನ ಮತ್ತು ಅರ್ಥ ಸಾಧಕ ಪತ್ರಿಕೆ"ಯನ್ನು ಕುರಿತಾಗಿ, ಈ ಪತ್ರಿಕೆಯಲ್ಲಿ ನಮ್ಮ ಕಸುಬು, ನಮ್ಮ ಕೆಲಸಗಾರರು, ಮೈಸೂರು ರಾಜಕೀಯ ವ್ಯವಸ್ಥೆ, ಮೈಸೂರು ಭೂ ವ್ಯವಸಾಯ ಎಂಬಂತಹ ಹಲವಾರು ವಿಚಾರಗಳು ಪ್ರಕಟವಾಗಿರುವುದನ್ನು ಗಮನಿಸಿ "ಇಂತಹ ಲೇಖನಗಳನ್ನು ಸತತವಾಗಿ ಓದುತ್ತಿದ್ದರೆ ಸ್ಕೂಲು ವಿದ್ಯಾಭ್ಯಾಸವನ್ನು ವಿಶೇಷವಾಗಿ ಪಡೆಯದವರೂ ಕೂಡ ತಮ್ಮ ಸ್ವಂತಕ್ಕೆ ಮತ್ತು ದೇಶಕ್ಕೆ ಹಿತವಾಗಬಹುದಾದ ಅಂಶಗಳನ್ನು ಸಂಗ್ರಹಿಸಬಹುದು"[೨] ಎಂದು ಹೇಳಿ ಅದು ಮಾಡಿರುವ ಕಾರ್ಯಗಳಿಗೆ ಬೆಂಬಲವನ್ನು ಸೂಚಿಸಿದೆ. ಪತ್ರಿಕೆಗಳಲ್ಲಿ ಬರುವ ಲೇಖನಗಳು ಸುಲಭ ಗ್ರಾಹ್ಯವಾದರೆ ವಾಚಕರ ದೃಷ್ಟಿಯಿಂದ ಪ್ರಯೋಜನಕಾರಿ ಎಂಬುದು ಪ್ರಬುದ್ಧ ಕರ್ನಾಟಕ ಅಭಿಪ್ರಾಯ.

'ಶಿವಾನುಭವ' ಮತಧರ್ಮ ಇವುಗಳಿಗೆ ಸಂಬಂಧಿಸಿದ ಪತ್ರಿಕೆ. ಇಂತಹ ಪತ್ರಿಕೆಗಳೂ ಕನ್ನಡ ಜನತೆಯ ದೃಷ್ಟಿಯಿಂದ ಹೇಗೆ ಸಹಕಾರಿಯಾಗಬಲ್ಲದು ಎಂಬ ಅಂಶದ ಕಡೆ ಪ್ರಬುದ್ಧ ಕರ್ನಾಟಕ ಗಮನ ಸೆಳೆಯುತ್ತದೆ. ಪ್ರಾಚೀನ ಕಾಲದಿಂದಲೂ ಕನ್ನಡ ಸಾಹಿತ್ಯದ ಬೆಳವಣಿಗೆಯನ್ನು ಗಮನಿಸಿದರೆ ಅದು ಮತಗಳ ಬೆಂಬಲವನ್ನು ಕಾಲದಿಂದ ಕಾಲಕ್ಕೆ ಪಡೆಯುತ್ತಲೇ ಬಂದಿದೆ ಇಂತಹ ಸಂದರ್ಭದಲ್ಲಿ ಕರ್ನಾಟಕದ ಇತಿಹಾಸದಲ್ಲಿ ತಮ್ಮವರು ಎಷ್ಟರ ಮಟ್ಟಿಗೆ ಭಾಗಿಗಳಾಗಿರುವವರು ಎಂಬುದನ್ನು ಕನ್ನಡಿಗರ ಮುಂದೆ ತರಬೇಕೆಂಬ ಉದ್ದೇಶದಿಂದ ಕೆಲವು ಗ್ರಂಥಗಳು ಪತ್ರಿಕೆಗಳು ಪ್ರಕಟಗೊಂಡವು. ಅಂತಹ ಪತ್ರಿಕೆಗಳಲ್ಲಿ ಶಿವಾನುಭವವೂ ಒಂದು ವೀರಶೈವ ಕವಿಗಳ ಹಾಗೂ ಮಹಾಪುರುಷರ ಜೀವನ ಚರಿತ್ರೆಯನ್ನು ಕನ್ನಡಿಗರಿಗೆಲ್ಲ ತಿಳಿಸಬೇಕೆಂಬ ಉದ್ದೇಶದಿಂದ ಪ್ರಕಟವಾಗುತ್ತಿದ್ದಂತೆ ಕಂಡುಬರುತ್ತದೆ. ಇಂತಹ ಪತ್ರಿಕೆಗಳನ್ನು ಮುನ್ನಡೆಸುವ ಸಂದರ್ಭದಲ್ಲಿ ಪೌರಾಣಿಕ, ಐತಿಹಾಸಿಕ ವಿಚಾರಗಳಿಗೆ ಚ್ಯುತಿ ಬರದಂತೆ ಸಮತೋಲನವಾಗಿ ಬರೆಯುವ ಕರ್ತವ್ಯ ನಿರ್ವಹಿಸಬೇಕು ಇದರಿಂದ

---

೧. ಕಾವ್ಯಾವಲೋಕನ, ಪ್ರಕ., ಸಂಪುಟ ೪, ಸಂಚಿಕೆ ೪, ಪು. ೧೫.
೨. ಕಾವ್ಯಾವಲೋಕನ, ಪ್ರಕ., ಸಂಪುಟ ೪, ಸಂಚಿಕೆ ೪, ಪು. ೧೫.

ಚಂದಾದಾರರಿಗೆ ಹಾಗೂ ಪತ್ರಿಕೆಗೆ ಎರಡೂ ಬಗೆಯಲ್ಲಿ ಅನುಕೂಲ ಉಂಟಾಗುತ್ತದೆ. ಹಾಗಾಗದೆ ಅದು ಕೇವಲ ಮತಪ್ರಚಾರದ ದೃಷ್ಟಿಯಿಂದ ಪ್ರಾರಂಭವಾದರೆ ಅದು ಸಮಾಜಕ್ಕೆ ಹಾನಿಕರ. 'ಧರ್ಮವಾಗಲಿ ಕರ್ಮವಾಗಲಿ ಪಂಗಡಗಳನ್ನು ಸೃಷ್ಟಿಗೊಳಿಸುತ್ತಾ ಹೋಗುವುದು ಈಗಿನ ಕಾಲಕ್ಕೆ ಅಷ್ಟು ಶ್ರೇಯಸ್ಕರವಲ್ಲ'[೧] ಎಂಬುದು ಸಂಪಾದಕರ ಸ್ಪಷ್ಟ ನಿಲುವು. ಜಯಕರ್ನಾಟಕ ಎಂಬ ಮಾಸ ಪತ್ರಿಕೆ ಪ್ರಾರಂಭಗೊಂಡಾಗ ಅದು ಯಾವುದೇ ಒಂದು ವಿಷಯಕ್ಕೆ ಸೀಮಿತವಾಗದೆ ಧರ್ಮ, ರಾಜಕಾರಣ, ಸಮಾಜಶಾಸ್ತ್ರ, ಇತಿಹಾಸ, ಭೌತಶಾಸ್ತ್ರ ಇವೇ ಮೊದಲಾದ ಎಲ್ಲಾ ವಿಷಯಗಳ ಕಡೆಗೂ ಗಮನ ಹರಿಸಲು ಆಲೋಚಿಸಿರುವುದನ್ನು ಕುರಿತು ಅದರ ಸಾಧ್ಯಾಸಾಧ್ಯತೆಗಳನ್ನು ವಿಶ್ಲೇಷಿಸಿದೆ. ಇಂತಹ ದೊಡ್ಡ ಆಶಯಗಳನ್ನು ಹೊತ್ತ ಪತ್ರಿಕೆಗಳನ್ನು ನಡೆಸುವುದೆಂದರೆ ಅದು ಆನೆ ಸಾಕಿದಂತೆ ಎಂದು ಅಭಿಪ್ರಾಯ ಪಟ್ಟಿದೆ. ಆನೆ ಸಾಕುವುದೆಂದರೆ ಅದಕ್ಕೆ ಆಹಾರ ಒದಗಿಸುವುದು ಕಷ್ಟ, ಅದಕ್ಕೆ ತಕ್ಕ ಕೆಲಸ ಒದಗಿಸುವುದೂ ಕಷ್ಟ. ಅಂತಹ ಕಷ್ಟ ಈ ಪತ್ರಿಕೆಗೆ ಬರಬಾರದೆಂದು ಬಯಸಿದೆ. ಈ ಪತ್ರಿಕೆಯಲ್ಲಿ ಪ್ರಕಟವಾಗಿರುವ ಬರಹಗಳನ್ನು ಗಮನಿಸಿ "ಇದರಲ್ಲಿ ನಾನಾ ಪ್ರಾಂತ್ಯದ ಜನರು ಬರೆಯುತ್ತಿರುವುದರಿಂದಲೂ ಧಾರವಾಡದ ಮಾತಿನ ವೈಲಕ್ಷಣಗಳು ಬಹುಮಟ್ಟಿಗೆ ಕಡಿಮೆಯಾಗಿರುವುದರಿಂದಲೂ ಇದರಿಂದ ಕನ್ನಡ ಭಾಷೆಯ ಏಕೀಕರಣಕ್ಕೆ ಸ್ವಲ್ಪವಾದರೂ ಸಾಧಕವಾಗಬಹುದು"[೨] ಎಂದು ಅಭಿಪ್ರಾಯಪಟ್ಟಿದೆ. ಈ ಬರಹ ಪ್ರಕಟಗೊಂಡ ಕಾಲ ೧೯೨೩ ಎಂದಾಗ ಇಂತಹ ಪತ್ರಿಕೆಗಳ ಅಗತ್ಯತೆ ಹಾಗೂ ಅವುಗಳ ಪರಿಚಯ ಕನ್ನಡಿಗರಿಗೆ ಎಷ್ಟು ಪ್ರಮುಖವಾದ ಅಂಶವಾಗಿತ್ತು ಎಂಬುದನ್ನು ಗಮನಿಸಬಹುದು.

'ಕರ್ನಾಟಕ ಚಂದ್ರಿಕೆ' ಎಂಬ ಮಾಸ ಪತ್ರಿಕೆ ಕುರಿತಾಗಿ ಇದು ಕನ್ನಡದಲ್ಲಿ ಕರ್ನಾಟಕ ಕಾವ್ಯ ಕಲಾನಿಧಿ ಹಾಗೂ ಕಾವ್ಯ ಮಂಜರಿಯಂತಹ ನವೀನ ಗ್ರಂಥಗಳ ಪ್ರಕಾಶನಕ್ಕೆ ಕಾರಣವಾದ ಪತ್ರಿಕೆ. ಆದರೆ ಈ ಪತ್ರಿಕೆ ಈಗ ಸಾಕಷ್ಟು ಜನಗಳ ಬೆಂಬಲವಿಲ್ಲದೆ ಒಣಗುತ್ತಿದೆ. ಅವುಗಳಿಗೆ ಜೀವನ್ನೀರನ್ನೆರೆದರೆ ನಾಲ್ಕೂ ಕಾಲ ಬದುಕಿ ಫಲ ನೀಡುತ್ತದೆ. ಒಣಗಿದ ನಂತರ ಅದಕ್ಕೆ ಅಮೃತವನ್ನೇ ಎರೆದರೂ ಅದು ಪುನಃ ಚಿಗುರಲು ಸಾಧ್ಯವಿಲ್ಲ. ಆದ್ದರಿಂದ ಅದು ಬಾಡಿಹೋಗುವ ಮೊದಲು ಅದಕ್ಕೆ ತಕ್ಕ ಪ್ರೋತ್ಸಾಹ ಕನ್ನಡಿಗರಿಂದ ದೊರೆಯಬೇಕು ಎಂದಿರುವ ಪತ್ರಿಕೆಯು ಹೊಸ ಗಿಡಗಳನ್ನು ಹಾಕಿ ಬೆಳೆಸಿ ಫಲ ನಿರೀಕ್ಷಿಸುವ ಬದಲು ಇರುವುದನ್ನೇ ಉಳಿಸಿಕೊಳ್ಳುವುದು ಉಚಿತ ಎಂಬ ಕಳಕಳಿಯನ್ನು ವ್ಯಕ್ತಪಡಿಸಿದೆ.

---

೧. ಕಾವ್ಯಾವಲೋಕನ, ಪ್ರಕ., ಸಂಪುಟ ೧೦, ಸಂಚಿಕೆ ೭, ಪು. ೨೨.
೨. ವಸ್ತುಕೋಶ, ಪ್ರಕ., ಸಂಪುಟ ೪, ಸಂಚಿಕೆ ೩, ಪು. ೧೧.

'ಬೆಳಗಾಂವ ಸ್ಕೂಲ ಬೋರ್ಡ್ ಗ್ಯಾಝಿಟ್' ಎಂಬ ಪತ್ರಿಕೆಯು ಪ್ರಕಟಣೆಯ ಉದ್ದೇಶವನ್ನು ಗ್ರಹಿಸಿರುವ ಸಂಪಾದಕರು ಕನ್ನಡದಲ್ಲಿ ಶಿಕ್ಷಣ ವಿಚಾರ ಪ್ರಕಟಣೆಗಾಗಿ ಹೊರಟಿರುವ ಪತ್ರಿಕೆಗಳು ಬಲು ಕಡಿಮೆ. ಇವು ಶಾಸ್ತ್ರೀಯ ವಿಚಾರಗಳಾದುದರಿಂದ ಶುಷ್ಕವಾಗಿರುತ್ತವೆ. ಪಾಠದ ಟಿಪ್ಪಣಿ, ವೇಳಾ ಪತ್ರಿಕೆಗಳು, ಮಾದರಿ ಪಾಠದಂತಹ ವಿಚಾರಗಳನ್ನು ಬಿಟ್ಟು "ಆಧುನಿಕ ಪಾಶ್ಚಾತ್ಯ ಪತ್ರಿಕೆ ಮತ್ತು ಗ್ರಂಥಗಳಲ್ಲಿ ಶಿಕ್ಷಣ ವಿದ್ಯಾಭ್ಯಾಸಗಳ ವಿಚಾರವಾಗಿ ಸಂಶೋಧನೆ ನಡೆಸಿ ಬರೆಯುತ್ತಿರುವ ವಿಷಯಗಳನ್ನು ತಿಳಿಸುತ್ತಲೂ ಸಚಿತ್ರವಾಗಿ ರಂಜಕವಾಗಿಯೂ ನಡೆಸುವುದಾದರೆ ಅಂಥ ಪತ್ರಿಕೆಗಳ ಅವಶ್ಯಕತೆ ಇದೆ ಉಪಯೋಗವಿದೆ"[೧] ಇಂತಹ ಪತ್ರಿಕೆಗಳು ಶಿಕ್ಷಕರಿಗೆ ಹಾಗೂ ವಿದ್ಯಾರ್ಥಿಗಳಿಬ್ಬರಿಗೂ ಪ್ರಯೋಜನಕಾರಿಯಾಗುತ್ತದೆ. ಆದುದರಿಂದ ಅಂತಹ ವಿಷಯಗಳಿಗೆ ಆದ್ಯತೆ ನೀಡಲಿ ಎಂಬ ಸಲಹೆಯನ್ನು ನೀಡಿದೆ.

'ಅರುಣ ಕಮಲ' (೮-೪) The National High School Magzine ಈ ಪತ್ರಿಕೆಗಳು ನಾಡಿನ ವಿವಿಧ ಭಾಗಗಳು ಹೈಸ್ಕೂಲುಗಳಿಂದ ಪ್ರಕಟಗೊಂಡ ಪತ್ರಿಕೆಗಳು. ಇವುಗಳಲ್ಲಿ ಪ್ರಕಟಗೊಂಡಿರುವ ಲೇಖನಗಳಲ್ಲಿ ಇಂಗ್ಲೀಷ್ ಬರವಣಿಗೆಳೇ ಹೆಚ್ಚಿನ ಸ್ಥಾನ ಪಡೆದಿರುವುದನ್ನು ಗಮನಿಸಿ ಪ್ರಬುದ್ಧ ಕರ್ನಾಟಕ ಯುವ ಬರಹಗಾರರ ಕಿವಿ ಹಿಂಡಿದೆ- 'ಅನ್ಯ ಭಾಷೆಯಲ್ಲಿ ಬರೆದು ಜಹಗೀರು ಹಾಕಿಸಿಕೊಳ್ಳುವುದಕ್ಕಿಂತ ಸ್ವಭಾಷೆಯಲ್ಲಿ ಮುಲುಕಿ ತಪ್ಪು ಮಾಡುವುದು ಕ್ಷೇಮಕರ'.[೨] ಇಂಥ ಪತ್ರಿಕೆಯಲ್ಲಿ ಸಾಧ್ಯವಾದ ಲೇಖನಗಳನ್ನೆಲ್ಲಾ ಕನ್ನಡದಲ್ಲಿಯೇ ಬರೆದು ಇಂಗ್ಲೀಷಿಗಿಂತ ಕನ್ನಡಕ್ಕೆ ಹೆಚ್ಚು ಸ್ಥಳವನ್ನು ಪ್ರಾಶಸ್ತ್ಯವನ್ನು ಕೊಡುವುದು ಯುಕ್ತವಾಗಿ ತೋರುತ್ತದೆ. ದೇಶಭಾಷೆಯನ್ನು ಅರಿಯದವರಿಗೆ ಆಂಗ್ಲ ಭಾಷೆಯಲ್ಲಿ ವಿಷಯ ತಿಳಿಸುವುದು ತಪ್ಪೇನಿಲ್ಲ. ಆದರೆ ಅದಕ್ಕೇ ಪ್ರಾಶಸ್ತ್ಯ ದೊರೆತು ಕನ್ನಡ ಮೂಲೆಗುಂಪಾಗಬಾರದೆಂಬುದು ಸಂಪಾದಕರ ಕಳಕಳಿ.

'ಹೊಸ ಆರ್ಥಿಕ ಪತ್ರಿಕೆ' (೪-೨) ಡಿ. ವಿ. ಗುಂಡಪ್ಪನವರ ಸಂಪಾದಕತ್ವದಲ್ಲಿ ಪ್ರಕಟವಾಗಲು ಆರಂಭಿಸಿದಾಗ ಅದನ್ನು ಅನುವು ಮಾಡಿಕೊಟ್ಟ ಮೈಸೂರು ಸರ್ಕಾರಕ್ಕೆ ಕೃತಜ್ಞತೆಯನ್ನು ಪ್ರಬುದ್ಧ ಕರ್ನಾಟಕ ಸಲ್ಲಿಸಿದ ಅಂತಹ ಸಮರ್ಥರಾದ ಸಂಪಾದಕರ ವಶಕ್ಕೆ ಪತ್ರಿಕೆ ಬಂದ ಕಾರಣ, ಅದು ಕೇವಲ ಆರ್ಥಿಕ ವಿಚಾರಗಳಿಗಷ್ಟೇ ಸೀಮಿತವಾಗದೇ ಬೇರೆ ಬೇರೆ ವಿಚಾರಗಳ ಕಡೆಗೂ ಗಮನ ಹರಿಸಲು ಯೋಚಿಸಿದರೂ ಅದನ್ನು ಸಮರ್ಥಿಸಿದೆ ಪತ್ರಿಕೆಯು ಈ ಹಿಂದೆ ಒಂದು ಪತ್ರಿಕೆ ಹಲವಾರು ವಿಷಯಗಳ ಕಡೆ ಗಮನ ಹರಿಸುವುದನ್ನು ವಿರೋಧಿಸಿದ್ದೂ ಉಂಟು. ಹಿರಿಯರ ಪ್ರಶ್ನೆ ಬಂದಾಗ ಅದರಲ್ಲಿ ನೀತಿಯಲ್ಲಿ ದ್ವಂದ್ವ ಕಾಣಿಸಿಕೊಂಡಿದೆ.

---

೧. ಕಾವ್ಯಾವಲೋಕನ, ಪ್ರ.ಕ., ಸಂಪುಟ ೮, ಸಂಚಿಕೆ ೭, ಪು. ೧೬.
೨. ವಸ್ತುಕೋಶ, ಪ್ರ.ಕ., ಸಂಪುಟ ೮, ಸಂಚಿಕೆ ೪, ಪು. ೩೪.

ನಂಜನಗೂಡು ತಿರುಮಲಮ್ಮನವರ ಸಂಪಾದಕತ್ವದಲ್ಲಿ ಹೊರ ಬಂದ 'ಸನ್ಮಾರ್ಗದರ್ಶಿ' (೪-೧) ವಿದ್ಯಾರ್ಥಿಗಳ ಶ್ರೇಯೋಭಿವೃದ್ಧಿಯನ್ನು ಬಯಸುತ್ತಿರು-ವುದರಿಂದ ತಿಳಿಗನ್ನಡದ ಈ ಪತ್ರಿಕೆಯ ಉದ್ದೇಶ ಈಡೇರಲಿ ಎಂದು ಹುರಿದುಂಬಿಸುವ ಮೂಲಕ ಪ್ರೋತ್ಸಾಹ ನೀಡಿದೆ. 'ಕನ್ನಡಿಗರ ಜ್ಞಾನದೀಪಿಕೆ' ಎಂಬ ಪತ್ರಿಕೆಯ ಪ್ರಕಟಣೆಯ ಉದ್ದೇಶವೂ ಜನ ಸಾಮಾನ್ಯರ ಜ್ಞಾನಾಭಿವೃದ್ಧಿಯನ್ನೇ ಗುರಿಯಾಗಿ ಇರಿಸಿಕೊಂಡಿರಿವುದರಿಂದ ಅದಕ್ಕೂ ಬೆಂಬಲ ಸೂಚಿಸಿದೆ. ಇದರಲ್ಲಿ ರಾಜಕೀಯ ವಿಚಾರಗಳಾಗಲೀ ಜಾತಿ ಮತಗಳ ಗುಣಾವಗುಣಗಳಾಗಲಿ ಪ್ರಧಾನ ಅಂಶವಾಗಿರದೆ ನಾಗರೀಕ ತತ್ವ, ಭರತ ಖಂಡದ ಮತಸಿದ್ಧಾಂತಗಳು, ಇವೇ ಮೊದಲಾದ ವಿಷಯಗಳ ಮೇಲೆ ಲೇಖನ ಇರುವುದನ್ನು ಗಮನಿಸಿ "ಈ ಲೇಖನಗಳ ಪ್ರತಿಪಾದ್ಯ ವಿಷಯವನ್ನು ಸರಣಿಯನ್ನು ನೋಡಿದರೆ ಇವುಗಳನ್ನು ದೇಶ ಹಿತೈಷಿಗಳಾದ ಮತ್ತು ಇಂಗ್ಲೀಷನ್ನು ಬಲ್ಲ ವಿದ್ವಾಂಸರಾದವರು ಬರೆಯುತ್ತಿರುವಂತೆ ತೋರುತ್ತದೆ ಆದರೆ ಹಿತವಾದ ವಿಷಯಗಳು ಪ್ರಿಯವಾಗಿ ಇಲ್ಲದಿದ್ದರೆ ಜನತೆಗೆ ಅದು ರುಚಿಕರವಾಗಿರುವುದಿಲ್ಲ. ಹಿತವಾದುದನ್ನು ಪ್ರಿಯವಾಗಿರುವಂತೆ ಹೇಳುವುದು ಕಷ್ಟ".[೧] ಆದುದರಿಂದ ಬರವಣಿಗೆಯಲ್ಲಿ ಹಿಡಿತ ಸಾಧಿಸುವುದು ಮತ್ತು ಮನಮುಟ್ಟುವಂತೆ ವಿಷಯಗಳನ್ನು ಬರೆಯುವುದು ಉಚಿತ ಎಂಬ ಮಾರ್ಗದರ್ಶನ ನೀಡಿದೆ.

ಬೆನಗಲ್ ರಾಮರಾಯರ ಸಂಪಾದಕತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ 'ಸುವಾಸಿನಿ' ಎರಡೇ ವರ್ಷ ನಡೆದು ನಂತರ ನಿಂತು ಹೋಗಿ ಪುನಃ ಪ್ರಾರಂಭಗೊಂಡ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕದ ಸಂಪಾದಕರು. "ಜನ ಸಾಮಾನ್ಯರನ್ನೂ ಹೆಂಗಸರು ಮಕ್ಕಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ವಿಶೇಷವಾಗಿ ಅವರಿಗೆ ರಂಜಕವಾಗುವಂತೆಯೂ ಅರ್ಥವಾಗುವಂತೆಯೂ ಬರೆದ ಲೇಖನಗಳನ್ನು ಪ್ರಕಟಿಸುವ ಉದ್ದೇಶದಿಂದ ಈ ಪತ್ರಿಕೆಯನ್ನು ಪುನರುಜ್ಜೀವನಗೊಳಿಸುವಂತೆ ಕಾಣಿಸುತ್ತಿದೆ"[೨] ಈ ಸಂದರ್ಭದಲ್ಲಿ ಪತ್ರಿಕೆಯು ಹಿಂದೆ ಆದಂತೆ ಅಲ್ಪಾಯುಷಿಯಾಗಿರದೆ ದೀರ್ಘಕಾಲ ಬಾಳಲಿ ಕನ್ನಡಿಗರಿಗೆ ಉಪಯುಕ್ತವಾಗಲಿ ಎಂದು ಆಶಿಸಿದ್ದಾರೆ. ಪ್ರಬುದ್ಧ ಕರ್ನಾಟಕ ಕೇವಲ ತನ್ನ ಉದ್ದಾರವನ್ನಷ್ಟೆ ಬಯಸದೆ ಗುಣಾತ್ಮಕವಾಗಿರುವ ಎಲ್ಲ ಪತ್ರಿಕೆಗಳ ಒಳಿತನ್ನೇ ಆಶಿಸುತ್ತಿರುವುದನ್ನು ಇಲ್ಲಿ ಗಮನಿಸಬಹುದು.

'ಜೀವನ' ಹಾಗೂ 'ಪಂಡಿತ ಮಂಡಲ' ಪತ್ರಿಕೆಗಳು ಹೊಸದಾಗಿ ಪ್ರಾರಂಭಗೊಂಡ ಸಂದರ್ಭದಲ್ಲೂ ಅದಕ್ಕಾಗಿ ಬೇಸರಿಸದೆ ಪ್ರಬುದ್ಧ ಕರ್ನಾಟಕ ಸಂಪಾದಕ ಮಂಡಳಿಯ ಪರವಾಗಿ ಸ್ವಾಗತವನ್ನು ಬಯಸುತ್ತಾರೆ. ಪಂಡಿತ ಮಂಡಲ ಪತ್ರಿಕೆಗಳಲ್ಲಿ ಬಂದಿರುವ ವಿಮರ್ಶೆಗಳನ್ನು ಗಮನಿಸಿ ಯಾವುದೇ ಗ್ರಂಥವಾಗಲೀ

---

೧. ವಸ್ತುಕೋಶ, ಪ್ರಕ., ಸಂಪುಟ-೪, ಸಂಚಿಕೆ-೨. ಪು. ೬.
೨. ಕಾವ್ಯಾವಲೋಕನ, ಪ್ರಕ., ಸಂಪುಟ ೭, ಸಂಚಿಕೆ ೩. ಪು. ೮.

ಅವುಗಳಲ್ಲಿರುವ ಒಳ್ಳೆಯ ಅಂಶಗಳನ್ನಾಗಲಿ ಬಿಟ್ಟು ಕೇವಲ ತಪ್ಪುಗಳನ್ನಷ್ಟೆ ಹುಡುಕಿ ತೆಗೆಯುವುದರಿಂದ ಯಾವ ಬಗೆಯ ಸಾರ್ಥಕತೆಯೂ ಇಲ್ಲ ಕನ್ನಡ ಹಾಗೂ ಸಂಸ್ಕೃತ ಭಾಷೆಯ ಅಭಿವೃದ್ಧಿಯನ್ನೇ ಗುರಿಯಾಗಿ ಇರಿಸಿಕೊಂಡು ಸಣ್ಣ ತಪ್ಪುಗಳನ್ನೇ ಹಿರಿದು ಮಾಡಬೇಕಾದ ಅವಶ್ಯಕತೆ ಇಲ್ಲ. ಅಂತಹ ದೃಷ್ಟಿ ಧೋರಣೆಯಿಂದ ಪತ್ರಿಕೆಗಾಗಲಿ ಸಾಹಿತಿಗಾಗಲೀ ಯಾವುದೇ ರೀತಿ ಪ್ರಯೋಜನವಿಲ್ಲ ಎಂದಿದ್ದಾರೆ. ಹೊಸ ಪತ್ರಿಕೆಗಳು ಬಂದಾಗ ಸ್ವಾಗತ ಕೋರಿರುವ ಸಂಪಾದಕರು ಅದರಲ್ಲಿರುವ ತಪ್ಪು ಒಪ್ಪುಗಳನ್ನು ಸ್ಫುಟವಾಗಿ ಹೇಳಿ ಅದು ಮುನ್ನಡೆಯಬೇಕಾದ ಹಾದಿಯನ್ನು ತೋರಿಸಿದ್ದಾರೆ.

'ನವ ಜೀವನ' (೪–೨) ಎಂಬ ಸಚಿತ್ರ ಪುಸ್ತಕ ರೂಪದ ವಾರಪತ್ರಿಕೆ ಪ್ರಕಟಗೊಂಡಾಗ ರಂಗಭೂಮಿ(೭–೩) ಎಂಬ ನಾಟ್ಯ ಕಲಾ ವಿಚಾರವಾಗಿ ಸಚಿತ್ರ ಮಾಸ ಪತ್ರಿಕೆಯೊಂದು ಪ್ರಾರಂಭವಾದಾಗ ಈ ತೆರನಾದ ಪತ್ರಿಕೆಗಳ ವೈಶಿಷ್ಟ್ಯಗಳ ಬಗ್ಗೆ ಗಮನಸೆಳೆದಿದ್ದಾರೆ. ರಂಗಭೂಮಿ ಕುರಿತಾಗಿ ಉತ್ತಮವಾದ ನಾಟಕಗಳ ಶ್ರೇಷ್ಠ ಪ್ರದರ್ಶನಗಳಿಂದಲೂ ನಾಟಕಾಭಿರುಚಿಯನ್ನು ಹುಟ್ಟಿಸಿರುವುದರಿಂದಲೂ ಉತ್ತಮ ನಾಟಕ ರಚನೆಗೆ ಉತ್ತೇಜನವನ್ನು ಕೊಡತಕ್ಕ ಭಾರವು ಹೀಗೆ ಒಂದಲ್ಲ ಇನ್ನೊಂದು ರೀತಿಯಲ್ಲಿ ರಂಗಭೂಮಿಯ ತಲೆಯ ಮೇಲೆ ಬಿದ್ದಿದೆ. ಆದರೆ ಅದು ಒಬ್ಬರಿಂದ ಆಗತಕ್ಕ ಕೆಲಸವಲ್ಲ. ಅದಕ್ಕೆ ಧನ ಜನ ಲೇಖನ ಸಹಾಯಗಳು ಬಹುವಾಗಿ ದೊರೆಯಬೇಕು. ಕನ್ನಡಿಗರು ಈ ವಿಷಯವನ್ನು ಮನಸ್ಸಿನಲ್ಲಿಟ್ಟು ಈ ಪತ್ರಿಕೆಗೆ ಸ್ವಾಗತ ಕೊಟ್ಟು ಅದರ ಆಯುರಾರೋಗ್ಯ ಭಾಗ್ಯಗಳನ್ನು ಕಾಪಾಡಿಕೊಂಡು ಬರುವರೆಂದು ನಂಬಿದ್ದೇವೆ".[೧] ಇದು ಹೊಸ ಬಗೆಯ ಚಿಂತನೆಗಳಿಗೆ ಪ್ರಯೋಗಗಳಿಗೆ ಪ್ರಬುದ್ಧ ಕರ್ನಾಟಕ ಪತ್ರಿಕೆಯಿಂದ ಸ್ವಾಗತ ದೊರೆಯುತ್ತಿದ್ದ ಪರಿ ಇದು.

ಪ್ರಬುದ್ಧ ಕರ್ನಾಟಕ ಹೀಗೆ ಭಿನ್ನ ಭಿನ್ನ ಪ್ರದೇಶದ ವಿವಿಧ ಅಭಿರುಚಿಯ ಪತ್ರಿಕೆಗಳ ಕಡೆ ಗಮನ ಹರಿಸಿರುವಂತೆಯೇ ಕೈ ಬರಹಗಳ ಪತ್ರಿಕೆಗಳ ಬಗ್ಗೆಯೂ ತನ್ನ ಗಮನ ಹರಿಸಿದೆ. ಪ್ರಬುದ್ಧ ಕರ್ನಾಟಕದ ದೃಷ್ಟಿಯಲ್ಲಿ ಯಾವ ಪತ್ರಿಕೆಯೂ ಕನಿಷ್ಠವಲ್ಲ. ಕನ್ನಡದ ಏಳಿಗೆಗಾಗಿ ದುಡಿಯುವ ಎಲ್ಲಾ ಪತ್ರಿಕೆಗಳೂ ಅದರ ದೃಷ್ಟಿಯಲ್ಲಿ ಶ್ರೇಷ್ಠವಾದದ್ದು. ಬರೆದವರಿಗೆ ತಮ್ಮ ಬರಹಗಳನ್ನು ನಾಲ್ಕಾರು ಜನ ಓದಲಿ ಎಂಬ ಆಸೆ ಸಾಮಾನ್ಯ. ಆದರೆ ಮುದ್ರಣದ ಸೌಲಭ್ಯ ಎಲ್ಲರಿಗೂ ಲಭಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಕೊಂಚ ಆಸಕ್ತಿ ಹಾಗೂ ನಕಲು ಮಾಡುವ ಪರಿಶ್ರಮ ವ್ಯಯಿಸಿದರೆ ತಮ್ಮ ತಮ್ಮಲ್ಲೇ ಪ್ರಚಾರ ಮಾಡಿಕೊಳ್ಳಲು ಸಾಧ್ಯ. ಪ್ರಬುದ್ಧ ಕರ್ನಾಟಕ ತನ್ನ ಗಮನಕ್ಕೆ ಬಂದ ಇಂತಹ ಪತ್ರಿಕೆಗಳ ಬಗ್ಗೆ ಹದಿನೈದನೇ ಸಂಪುಟದ ವಸ್ತು ಕೋಶದಲ್ಲಿ ಗಮನ

---

೧. ಕಾವ್ಯಾವಲೋಕನ, ಪ್ರಕ., ಸಂಪುಟ ೭, ಸಂಚಿಕೆ ೩, ಪು. ೩.

ಹರಿಸಿದೆ 'ಮೈಸೂರು ನಗರವೊಂದರಲ್ಲೇ ಇಂತಹ ನಾಲ್ಕು ಪತ್ರಿಕೆಗಳು ಹೊರಡುವ ಸಂಗತಿ ನಮಗೆ ತಿಳಿಯ ಬಂದಿದೆ'[೧] ಎಂದು ಹೇಳಿ ಬಾಲ ಕನ್ನಡ ಸೇವಾ ಮಂಡಲಿಯವರು ಹೊರಡಿಸುತ್ತಿದ್ದ 'ಮಧುರ ಕರ್ನಾಟಕ' ಮಹಾರಾಜ ಕಾಲೇಜಿನ ತರುಣರು ಪ್ರಾರಂಭಿಸಿದ್ದ 'ರೋಹಿಣಿ' ಸಂಸ್ಕೃತ ಪಾಠಶಾಲೆಯ ಮಕ್ಕಳು ಹೊರಡಿಸುತ್ತಿದ್ದ 'ಸಂಸ್ಕೃತ ಕನ್ನಡ ಪತ್ರಿಕೆ' ಇವುಗಳ ಕಡೆ ಗಮನ ಸೆಳೆಯುತ್ತಾರೆ. ಇಂತಹ ಪತ್ರಿಕೆಗಳು ವಿದ್ಯಾರ್ಥಿಗಳಲ್ಲಿ ಅಡಗಿರುವ ಶಕ್ತಿಯನ್ನು ಅರಳುವಂತೆ ಮಾಡುವುದರಲ್ಲಿ ಹೇಗೆ ಯಶಸ್ವಿಯಾಗುತ್ತದೆ, ಅವರಿಗೆ ಹೇಗೆ ಪ್ರೋತ್ಸಾಹ ದೊರಕಿಸಿಕೊಡುತ್ತದೆ ಎಂಬಂತಹ ವಿಚಾರಗಳ ಕಡೆ ಚರ್ಚಿಸಿದೆ. ಈ ಬಗೆಯ ಪತ್ರಿಕೆಗಳು ಕೇವಲ ಮನೋರಂಜಕವಾಗಿರದೆ ಬೇರೆ ಭಾಷೆಯ ಪ್ರಬಂಧಗಳನ್ನು ತರ್ಜುಮೆ ಮಾಡಿ ಪ್ರಕಟಿಸುವ ಮೂಲಕ, ಚಿತ್ರಕಲೆ ಬಲ್ಲವರು ಆ ಸಂಚಿಕೆಯಲ್ಲಿ ಬಂದಿರುವ ಲೇಖನಗಳ ಮೇಲೆ ಚಿತ್ರ ಬರೆಯುವುದರ ಮೂಲಕ ಅಥವಾ ಸ್ವತಂತ್ರವಾಗಿ ಚಿತ್ರ ಬರೆಯುವುದರ ಮೂಲಕ, ಆ ಪತ್ರಿಕೆಗಳಿಗೆ ಕಳೆ ಬರುವಂತೆ ಮಾಡಬಹುದು ಎಂಬಂತಹ ಸಲಹೆಯನ್ನು ನೀಡಿದ್ದಾರೆ. ನಂತರದ ದಿನಗಳಲ್ಲೂ ಪ್ರಬುದ್ಧ ಕರ್ನಾಟಕ ಕೈ ಬರಹದ ಪತ್ರಿಕೆಗಳ ಗಮನ ಹರಿಸಿ ಅದರ ಮುಖಪುಟದ ಮಾದರಿಯನ್ನು ಪ್ರಕಟಿಸಿ ಅವುಗಳಿಗೆ ಪ್ರಚಾರ ಪ್ರೋತ್ಸಾಹ ನೀಡಿರುವುದೂ ಉಂಟು.

ಹೀಗೆ ಪ್ರಬುದ್ಧ ಕರ್ನಾಟಕ ತನ್ನ ಸುತ್ತ ಮುತ್ತಲಿನ ಸ್ಥಿತಿಗತಿಗಳನ್ನು ಗಮನಿಸಿದೆ. ಇದು ನೀಡುತ್ತಿದ್ದ ನೆರವು ಹಾಗೂ ಪ್ರೋತ್ಸಾಹದ ಮಾತುಗಳು ಎಷ್ಟೋ ಪತ್ರಿಕೆಗಳಿಗೆ ಸ್ಫೂರ್ತಿಯನ್ನು ಹಾಗೂ ಪತ್ರಿಕೆಗಳನ್ನು ನಡೆಸಬೇಕೆಂಬ ಛಲವನ್ನು ಹುಟ್ಟುಹಾಕುತ್ತಿತ್ತು. ಕೆಲವು ಪತ್ರಿಕೆಗಳಂತೂ ತಮಗೆ ಎದುರಾದ ತೊಂದರೆ ಅಡಚಣೆಗಳನ್ನು ಪ್ರಬುದ್ಧ ಕರ್ನಾಟಕದ ಜೊತೆಯಲ್ಲಿ ಹಂಚಿಕೊಂಡು ಅದರ ಸಹಾಯ ಹಸ್ತವನ್ನು ಅಪೇಕ್ಷಿಸುತ್ತಿದ್ದುದೂ ಉಂಟು. "ಜ್ಞಾನಾಂಜನ ಹಾಗೂ ಮಧುರವಾಣಿಯ ಸಂಪಾದಕರು ಪ್ರಬುದ್ಧ ಕರ್ನಾಟಕದ ಸಂಪಾದಕರಿಗೆ ಪತ್ರ ಬರೆದು ತಮ್ಮ ತೊಂದರೆಯನ್ನು ಹೇಳಿಕೊಂಡಾಗ ಸಂಪಾದಕರು ಅವುಗಳ ನೋವಿಗೆ ಸ್ಪಂಧಿಸಿದ್ದಾರೆ. ಸಮಸ್ಯೆಗಳನ್ನು ಬಗೆಹರಿಸುವ ಕಡೆ ಯೋಚನೆ ಮಾಡಿದ್ದಾರೆ." ಮಾಸ ಪತ್ರಿಕೆಗಳ ಮೂಲಕ ದ್ರವ್ಯಾರ್ಜನೆ ಮಾಡುವ ಮಾತು ಹಾಗಿರಲಿ ಆ ಪತ್ರಿಕೆಗಳನ್ನು ಹೊರಡಿಸುವ ಖರ್ಚೂ ಹುಟ್ಟದೇ ಹೋದರೆ ಪತ್ರಿಕಾಕರ್ತರು ಭಾಷಾ ಸೇವೆಯನ್ನು ಬಿಟ್ಟು ಸಾಲ ಕೊಟ್ಟವರ ಸೇವೆಗೆ ಹೊರಡಬೇಕಾಗುತ್ತದೆ. ಕನ್ನಡಿಗರು ಇದನ್ನು ತಮ್ಮ ಉದಾರ ಮನಸ್ಸಿಗೆ ತಂದುಕೊಳ್ಳಬೇಕು. ಈ ವರ್ಷದ ಸಾಹಿತ್ಯ ಸಮ್ಮೇಳನವಾದಾಗ ಕನ್ನಡ ಮಾಸ ಪತ್ರಿಕೆಗಳ ಸಂಪಾದಕರೆಲ್ಲರೂ ಒಟ್ಟಾಗಿ ಸೇರಿ ಈ ವಿಚಾರವನ್ನು

---

೧. ವಸ್ತುಕೋಶ, ಪ್ರ.ಕ. ಸಂಪುಟ ೧೫, ಸಂಚಿಕೆ ೨, ಪು. ೧೧೪.

ಸಾಹಿತ್ಯ ಪರಿಷತ್ತಿನ ಮುಂದಿಟ್ಟು ಕಷ್ಟ ನಿವಾರಣೆಯಾಗುವ ಉಪಾಯವನ್ನು ಕಂಡು ಹಿಡಿಯುವರೆಂದು ನಂಬುತ್ತೇವೆ"[೧] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಸಮಸ್ಯೆಗಳು ಎದುರಾದಾಗ ಅದಕ್ಕೆ ಶಾಶ್ವತವಾದ ಪರಿಹಾರ ಕಂಡುಹಿಡಿಯುವುದು ಪ್ರಬುದ್ಧ ಕರ್ನಾಟಕದ ದಾರಿಯಾಗಿತ್ತೆ ಹೊರತು ತಾತ್ಕಾಲಿಕವಾದ ಉಪಶಾಂತಿಯಲ್ಲ.

ಇದೆ ಸಂದರ್ಭದಲ್ಲಿ ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಿಂದ ಕರ್ಣಾಟಕದ ಬೇರೆ ಬೇರೆ ಪ್ರಾಂತ್ಯಗಳಿಂದ ಹೆಚ್ಚು ಹೆಚ್ಚು ಪತ್ರಿಕೆಗಳು ಪ್ರಕಟವಾಗುತ್ತಿದ್ದು, ಸೀಮಿತವಾಗಿದ್ದ ಕನ್ನಡನಾಡಿಗೆ ಇಷ್ಟೊಂದು ಪತ್ರಿಕೆಗಳ ಅವಶ್ಯಕತೆ ಇದೆಯೇ ಎಂಬುದರ ಬಗ್ಗೆಯೂ ಗಮನ ಹರಿಸಿದೆ. ಮಂಗಳೂರು ಪ್ರಾಂತ್ಯದಿಂದ ಪ್ರಕಟವಾಗುತ್ತಿದ್ದ ಶ್ರೀ ಕೃಷ್ಣಸೂಕ್ತಿಯ ಪ್ರಕಟಣೆ ನಿಂತು ಹೋಗಿತ್ತು. ಹೀಗೆಯೇ ನಿಂತು ಹೋಗಿದ್ದ 'ಸುವಾಸಿನಿ' ಪುನಃ ಪ್ರಕಟಣೆ ಪ್ರಾರಂಭಸಿತು ಅದರ ಜೊತೆಯಲ್ಲೇ 'ಉದಯ ಭಾರತ' 'ಕರ್ಣಾಟಕ ಕೇಸರಿ' 'ಜಯ ಕರ್ಣಾಟಕ' 'ನವ ಕರ್ಣಾಟಕ' ಜೊತೆಯಲ್ಲಿ ಹೊಸ ಹೊಸ ಪತ್ರಿಕೆಗಳು ಪ್ರಕಟಗೊಳ್ಳುವ ಸಾಧ್ಯತೆಗಳು ಹೆಚ್ಚಾಗಿದ್ದವು. ಕನ್ನಡ ಸಾಹಿತ್ಯ ಪತ್ರಿಕೆಗಳನ್ನು ಸಾಹಿತ್ಯಭಿಮಾನಿಗಳು ಪ್ರಾರಂಭಿಸುವುದೇನೋ ಸಂತಸದ ವಿಷಯ. ಆದರೆ "ಎಲ್ಲ ದೋಸೆಗೂ ತೂತಿರುವ ಹಾಗೆ ಕನ್ನಡ ಪತ್ರಿಕೆಗೂ ಕಾಲುಕುಂಟು".[೨] ನಾಲ್ಕಾರು ಪತ್ರಿಕೆಗಳು ಹೀಗೆ ಒಟ್ಟಿಗೆ ಪ್ರಾರಂಭಗೊಂಡು ಏಳಿಗೆಯನ್ನು ಪಡೆಯಲು ಸಾಧ್ಯವಾಗದೇ ನಾಶವಾಗೋದು ಉಚಿತವೇ ಅಥವಾ ಕನ್ನಡದ ಅಭಿಮಾನ ಬೆಳೆಸಲು ಕೆಲವೇ ಪತ್ರಿಕೆಗಳಿಗೆ ಉಳಿದೆಲ್ಲ ಪತ್ರಿಕೆಗಳು ಬಲ ತುಂಬುವುದು ಉಚಿತವೇ ಎಂದು ಯೋಚಿಸಿಕೊಂಡಾಗ ಒಂದೊಂದೇ ಕಾಲಿನ ನಾಲ್ಕು ಮಂಚಗಳಿಗಿಂತಲೂ ನಾಲ್ಕು ಕಾಲಿನ ಒಂದು ಮಂಚವೇ ಉತ್ತಮವೆಂದು ಅಭಿಪ್ರಾಯ ಪಟ್ಟಿದೆ. ಆದರೆ ಹೊಸ ಆಲೋಚನೆ ಹೊಸ ಅಭಿರುಚಿ, ಹೊಸ ಆಸಕ್ತಿಯ ಪತ್ರಿಕೆಗಳ ವಿಚಾರ ಬಂದಾಗ ಅದು ಎಂದೂ ಪ್ರೋತ್ಸಾಹದ ಮಾತುಗಳನ್ನೇ ಆಡಿ ಬೆಂಬಲ ಸೂಚಿಸಿದೆ.

ಹೀಗೆ ಪ್ರಬುದ್ಧ ಕರ್ನಾಟಕವು ತನ್ನ ಸುತ್ತ ಮುತ್ತ ಪ್ರಕಟಗೊಳ್ಳುತ್ತಿದ್ದ ಪತ್ರಿಕೆಗಳನ್ನು ಗಮನಿಸಿತು. ಅವುಗಳ ಸಾಮರ್ಥ್ಯವನ್ನು ಗುರುತಿಸಿತು. ಅವುಗಳ ಬೆಳವಣಿಗೆಗೆ ತನ್ನಿಂದ ಆಗಬಹುದಾದ ಪ್ರೋತ್ಸಾಹವನ್ನು ನೀಡಿತು. ಆ ಪತ್ರಿಕೆಗಳು ಮುಂದೆ ಎಂದಾದರೊಂದು ದಿನ ತನಗೆ ಪ್ರತಿಸ್ಪರ್ಧಿಯಾಗಬಹುದು ಎಂಬ ಅನುಮಾನವನ್ನು ಹೊಂದದೆ ಅವುಗಳ ಬೆಳವಣಿಗೆಯ ಕಡೆ ಗಮನ ಹರಿಸಿತು. ಪ್ರಬುದ್ಧ ಕರ್ನಾಟಕದ ಸಮಕಾಲೀನ ಪತ್ರಿಕೆಗಳ, ವಿಶೇಷತೆಗಳ ಬಗ್ಗೆ ಅಧ್ಯಯನ

---

೧. ವಸ್ತುಕೋಶ, ಪ್ರ.ಕ., ಸಂಪುಟ ೨, ಸಂಚಿಕೆ ೧, ಪು. ೩೯.
೨. ವಸ್ತುಕೋಶ, ಪ್ರ.ಕ., ಸಂಪುಟ-೯, ಸಂಚಿಕೆ-೧, ಪು. ೨.

ಮಾಡಬೇಕೆನ್ನುವವರಿಗೆ ಈ ಪತ್ರಿಕೆಯಲ್ಲಿ ಪ್ರಕಟಗೊಂಡಿರುವ ವಸ್ತುಕೋಶ ಹಾಗೂ ಸಂಪಾದಕೀಯಗಳು ಸೂಕ್ತವಾದ ಮಾರ್ಗವನ್ನು ತೋರಿಸುತ್ತವೆ. ಕನ್ನಡ ಪತ್ರಿಕೆಗಳ ಇತಿಹಾಸವನ್ನು ಬರೆಯಲು ಯತ್ನಿಸುವವರಿಗೆ ವಿಶೇಷ ಮಾಹಿತಿಯನ್ನು ಒದಗಿಸುವ ಭಂಡಾರದಂತೆ ತೋರುತ್ತವೆ.

**ಪತ್ರಿಕೆಯ ಆಶಯ**

ಪ್ರಬುದ್ಧ ಕರ್ಣಾಟಕದ ಆರಂಭದ ಸಂಚಿಕೆಯ ಪ್ರಸ್ತಾವನೆಯ ಲೇಖನವನ್ನು ಗಮನಿಸಿದರೆ ಪತ್ರಿಕೆಯು ಪ್ರಾರಂಭಗೊಂಡ ಉದ್ದೇಶವೇನು? ಅದರ ಆಶಯವೇನು? ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತದೆ. ಸಾಹಿತ್ಯ ಪತ್ರಿಕೆಯಾಗಿಯೇ ಸಾಹಿತ್ಯ ವಲಯದಲ್ಲಿ ಗುರುತಿಸಲ್ಪಡುತ್ತಿರುವ ಈ ಪತ್ರಿಕೆಯ ವ್ಯಾಪ್ತಿ ಅಷ್ಟಕ್ಕೆ ಮಾತ್ರ ಸೀಮಿತಗೊಂಡಿದೆಯೇ? ಎಂಬುದನ್ನು ಅರಿಯಲು ಪತ್ರಿಕೆಯು ಕಾಲದಿಂದ ಕಾಲಕ್ಕೆ ವ್ಯಕ್ತಪಡಿಸುತ್ತಾ ಬಂದಿರುವ ಅದರ ಆಶಯಗಳನ್ನು ಗಮನಿಸುವುದು ಅಗತ್ಯವಾಗುತ್ತದೆ. ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡ ಸಂದರ್ಭದಲ್ಲಿ ಅನೇಕ ಪತ್ರಿಕೆಗಳು ಕನ್ನಡದಲ್ಲಿ ಪ್ರಕಟಗೊಳ್ಳುತ್ತಿದ್ದವಾದರೂ ಇದು ಅವುಗಳಿಗಿಂತ ಹೇಗೆ ವಿಭಿನ್ನವಾಗಿರಲು ಪ್ರಯತ್ನಿಸಿತೆಂಬುದು ಅದರ ಆರಂಭದ ಸಂಚಿಕೆಯ ಪ್ರಸ್ತಾವನೆ ತಿಳಿಸುತ್ತದೆ. ಪತ್ರಿಕೆಯು ಆರಂಭದಲ್ಲಿ ವರ್ಷಕ್ಕೆ ಮೂರು ಬಾರಿ ಪ್ರಕಟಗೊಳ್ಳಬೇಕೆಂದೂ ಈ ಸಂದರ್ಭದಲ್ಲಿ ಅದರ ಸಾಮರ್ಥ್ಯ ಯೋಗ್ಯತೆ ಇವುಗಳನ್ನು ಅರಿತುಕೊಳ್ಳಲು ಸಾಧ್ಯವಾದರೆ "ಅದರೆ ಖಾಯಂ ಕೆಲಸ ಕೊಟ್ಟು ಕನ್ನಡ ಸೇವೆಗೆ ಅದನ್ನು ಗೊತ್ತು ಮಾಡಬೇಕೆಂದೂ ನಿಶ್ಚಯಿಸಿದ್ದೇವೆ. ಆದರೆ ಸೇವಕನು ಮಾಡುವ ಕೆಲಸವೇನು? ಅದನ್ನು ಸೇವಕನು ಸೇವೆಯೂ ಸ್ಪಷ್ಟವಾಗಿ ಮೊದಲೇ ತಿಳಿದುಕೊಳ್ಳುವುದು ಅವಶ್ಯಕ" ಎನ್ನುವುದರ ಮೂಲಕ ಸಂಪಾದಕರು ಸ್ಪಷ್ಟಪಡಿಸಿದ್ದಾರೆ.

ಪತ್ರಿಕೆಯು ಪ್ರಾರಂಭವಾಗುವ ಸಂದರ್ಭದಲ್ಲಿ ಕೆಲವರಿಂದ ಪಂಡಿತರಲ್ಲದ ಜನಸಾಮಾನ್ಯರಿಗೆ ಬೇಕಾಗಿರುವ ಸಂಗತಿಗಳನ್ನೇನಾದರೂ ಅದರಲ್ಲಿ ಬರೆಯುತ್ತ ಬರಬೇಕು ಎಂಬ ಸಲಹೆ ಬಂದರೂ ಜನಸಾಮಾನ್ಯರು ಎಂದರೆ ಯಾರು? ಅವರುಗಳ ಆಸಕ್ತಿಯ ಕ್ಷೇತ್ರ ಯಾವುದು ಎಂಬುದು ಗೊಂದಲದ ವಿಷಯವಾದ ಕಾರಣ ಹಾಗೂ ಯಾವ ಸಂಗತಿಗಳಿಗೆ ಆದ್ಯತೆ ನೀಡಬೇಕು ಎಂಬುದು ಸ್ಪಷ್ಟವಾಗದ ಕಾರಣ ಪತ್ರಿಕೆಯು ಅತ್ತ ಕಡೆ ಗಮನ ಹರಿಸಲಿಲ್ಲ. ಅಂದಿನ ಸಂದರ್ಭದಲ್ಲಿ ಸಾಹಿತ್ಯ ಜನಪ್ರಿಯ ಪ್ರಕಾರಗಳಿದ್ದ ಕಥೆ, ಕಾದಂಬರಿಗಳನ್ನು ಕುರಿತು ಜನರಿಗೆ ವಿಶೇಷವಾದ ಆಸಕ್ತಿ ಇದ್ದು ಅವುಗಳಿಗೆ ಹೆಚ್ಚಿನ ಆದ್ಯತೆ ನೀಡಲು ಯೋಚಿಸಿದರೂ ವಾಚಕರಲ್ಲಿ ಅದೇ ಆಸಕ್ತಿ ಮುಂದುವರೆಯುವುದೋ ಇಲ್ಲವೋ ಎಂಬುದು ಅನುಮಾನದ ವಿಷಯವಾಗಿತ್ತು. ಬೇರೆ ವಿಷಯಗಳಿಗೆ ಆದ್ಯತೆ ನೀಡುವುದನ್ನು ಕುರಿತಾಗಿಯೂ

ಇಂತಹದೇ ಗೊಂದಲ ಉಂಟಾಗಿತ್ತು. ಇದನ್ನು ಕುರಿತಂತೆ "ಕಥೆಗಳು ಬೇಜಾರಾಗಿವೆ ಅಲ್ಲದೆ ಬರಿಯ ಸಿಹಿಯನ್ನೇ ತಿನ್ನುವುದೂ ಮೈಗೆ ಒಳ್ಳೆಯದಲ್ಲ. ಮತ ವಿಷಯದಲ್ಲೂ ಔದಾಸೀನ್ಯ, ವಿಜ್ಞಾನ ವಿಷಯಗಳು ಬೇಕಿಲ್ಲ. ಸಮಾಜ ಸಂಸ್ಕಾರದ ವಿಚಾರ ನಾಲ್ಕು ದಿನ ಗದ್ದಲವಾಯಿತು. ಈಗ ಅದರ ಸದ್ದೇ ಇಲ್ಲ. ರಾಜಕೀಯ ವಿಚಾರಗಳು ಅರ್ಥವಾಗುವುದಿಲ್ಲ. ಅಲ್ಲದೆ ಅವುಗಳಲ್ಲಿ ಪ್ರವೇಶ ಮಾಡುವುದಕ್ಕೆ ನಮಗೆ ಯೋಗ್ಯತೆಯಾಗಲೀ ಸಾಮರ್ಥ್ಯವಾಗಲೀ ಇರುವುದಿಲ್ಲ. ನಮಗೆ ಅಲ್ಪಸ್ವಲ್ಪ-ವಾದರೂ ಕೈ ಬಾಯಿ ಆಡುವ ವಿಷಯಗಳೆಂದರೆ ಭಾಷಾಸಾಹಿತ್ಯದ ವಿಚಾರಗಳು"[೧] ಎಂದಿರುವ ಸಂಪಾದಕರು ಪತ್ರಿಕೆಯನ್ನು ಉತ್ತಮವಾದ ಸಾಹಿತ್ಯ ಪತ್ರಿಕೆಯನ್ನಾಗಿ ಹೊರತರಬೇಕೆಂಬ ಆಶಯವನ್ನು ಹೊಂದಿದ್ದಾರೆ.

ಉತ್ತಮ ಸಾಹಿತ್ಯಕ್ಕೆ ಎಲ್ಲ ಕಾಲದಲ್ಲಿಯೂ ಮಾನ್ಯತೆ ಗೌರವಗಳು ದೊರಕುವುದರಿಂದ ಅದನ್ನು ಬೆಳೆಸುವ, ಜನಗಳಿಗೆ ದೊರಕಿಸಿಕೊಡುವ ನಿಟ್ಟಿನಲ್ಲಿ ಮುಂದುವರೆಯಬೇಕೆಂಬುದು ಸಂಪಾದಕರ ಆರಂಭದ ಆಶಯವಾಗಿದೆ. "ಸಾಹಿತ್ಯವು ಜನಗಳಿಗೆ ಬೇಕಿಲ್ಲವೆಂದು ನಾವು ನಂಬಲಾರೆವು ಇದರಲ್ಲಿ ಅವರಿಗೆ ಇರುವ ಆಸಕ್ತಿಯಿಂದಲೇ ಉತ್ತಮವಾದ ಸಾಹಿತ್ಯಕ್ಕೆ ಶಾಶ್ವತವಾಗಿ ನಿಲ್ಲುವ ಸಾಮರ್ಥ್ಯ ಬಂದಿದೆ"[೨] ಎನ್ನುವ ಸಂಪಾದಕರು ಕನ್ನಡ ಭಾಷೆಯಲ್ಲಿ ಉತ್ತಮವಾದ ಸಾಹಿತ್ಯ ರಚನೆಗೆ ಆದ್ಯತೆ ಕೊಡುವುದರ ಕಡೆ ಗಮನಸೆಳೆಯುತ್ತಾರೆ. ನೋಡಲು ಸುಕೋಮಲವಾದ ಕುಸುಮಾಯುಧದಂತೆ ತೋರುವ ಆದರೆ ಪರಿಣಾಮದಲ್ಲಿ ಉಕ್ಕಿನ ಖಡ್ಗಕ್ಕಿಂತ ಹರಿತವಾಗಿ ಕಾರ್ಯ ನಿರ್ವಹಿಸುವ ಸಾಹಿತ್ಯ ನಿರ್ಮಾಣಕ್ಕೆ ಪ್ರೋತ್ಸಾಹ ನೀಡುವ ಕಾರ್ಯವನ್ನು ಪ್ರಬುದ್ಧ ಕರ್ಣಾಟಕದ ಮೂಲಕ ನೀಡಲು ಉದ್ದೇಶಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಮಾಡಬೇಕೆಂದಿರುವ ಕಾರ್ಯಗಳ ಬಗ್ಗೆ ತಿಳಿಸುತ್ತಾ "ಈಗ ನಮಗೆ ವ್ಯವಸಾಯದ ಕಾಲವೇ ಹೊರತು ಫಲ ಬಿಡುವ ಕಾಲವಲ್ಲ" ಆದ್ದರಿಂದ ಮುಂದಕ್ಕೆ ಉತ್ತಮ ಕಾವ್ಯಗಳು ಸಾಧ್ಯವಾಗುವಂತೆ ಈಗಿನಿಂದ ಉಳುಮೆ ಮಾಡಬೇಕು"[೩] "ನಮ್ಮ ಮುಖ್ಯ ಕೆಲಸವೆಂದರೆ ಕಾವ್ಯ ಸೃಷ್ಟಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸಿ-ಕೊಡುವುದು"[೪] "ಇಂಗ್ಲೀಷ್ ಭಾಷೆಯಲ್ಲಿ ದೊರಕುವ ಪ್ರಪಂಚದ ಸಾಹಿತ್ಯ ಸಾರವನ್ನು ಕನ್ನಡಕ್ಕೆ ತಂದು ಒದಗಿಸಿಕೊಳ್ಳುವುದಲ್ಲದೆ ಆ ಸಾಹಿತ್ಯವನ್ನೆಲ್ಲ ತುಲನ ಪೂರ್ವಕವಾಗಿ ಬುದ್ಧಿಯಿಂದ ವಿಚಾರ ಮಾಡಿಕೊಳ್ಳಬೇಕು"[೫] "ಬಂಗಾಳಿ ಭಾಷೆಯಲ್ಲಿ ಶ್ರುತಿ ಸ್ಮೃತಿ

---

೧. ವಸ್ತುಕೋಶ, ಪ್ರಕ., ಸಂಪುಟ–೧, ಸಂಚಿಕೆ–೧, ಪು. ૩.
೨. ವಸ್ತುಕೋಶ, ಪ್ರಕ., ಸಂಪುಟ–೧ ಸಂಚಿಕೆ–೧, ಪು. ೪
೩. ವಸ್ತುಕೋಶ, ಪ್ರಕ., ಸಂಪುಟ–೧ ಸಂಚಿಕೆ–೧, ಪು. ೫
೪. ವಸ್ತುಕೋಶ, ಪ್ರಕ., ಸಂಪುಟ–೧, ಸಂಚಿಕೆ–೧, ಪು. ೫.
೫. ವಸ್ತುಕೋಶ, ಪ್ರಕ., ಸಂಪುಟ–೧, ಸಂಚಿಕೆ–೧, ಪು. ೬

ಉಪನಿಷತ್ತು ಧರ್ಮಶಾಸ್ತ್ರ ಮುಂತಾದ ಗ್ರಂಥಗಳ ಭಾಷಾಂತರಗಳು ದೊರಕುತ್ತವೆ ಇಂಥ ಕೆಲಸಗಳನ್ನು" ಪ್ರಬುದ್ಧ ಕರ್ಣಾಟಕದ ಕೈಯಿಂದ ಮಾಡಿಸಬೇಕೆಂದಿದ್ದೇವೆ"[೧] ಎಂಬ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಹೊಸ ಬಗೆಯ ಸಾಹಿತ್ಯ ಪ್ರಕಾರಗಳು ಇನ್ನೂ ರೂಪುಗೊಳ್ಳದ ಕಾಲದಲ್ಲಿ ಅದಕ್ಕೆ ಬೇಕಾದ ವೇದಿಕೆ ನಿರ್ಮಿಸಿಕೊಡುವ ಸಾಮಗ್ರಿ ಒದಗಿಸುವ, ಬೇರೆ ಭಾಷೆ-ಗಳಲ್ಲಿರುವ ಉತ್ತಮವಾದ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿಕೊಡುವ ಹಾಗೂ ವಿಮರ್ಶೆಯ ಮಾರ್ಗವನ್ನು ಸೃಷ್ಟಿಸಿಕೊಡುವ ಉದ್ದೇಶ ಇಲ್ಲ ಸ್ಪಷ್ಟವಾಗಿ ವ್ಯಕ್ತವಾಗಿದೆ ಇವುಗಳ ಜೊತೆಯಲ್ಲೇ ಪ್ರಬಂಧಗಳನ್ನು ಹೇಗೆ ಬರೆಯಬೇಕು ಹಾಗೂ ಯಾವ ಶೈಲಿಯಲ್ಲಿ ಬರೆಯಬೇಕು ಎಂಬುದನ್ನು ತಿಳಿಸಿಕೊಡುವ, ಹಾಗೂ ಬರೆದಿದ್ದುದ್ದನ್ನು ಪ್ರಕಟಿಸುವ ಮೂಲಕ ಬರಹಗಾರರಲ್ಲಿ ಆತ್ಮ ವಿಶ್ವಾಸವನ್ನು ತುಂಬುವ ಕಾರ್ಯವನ್ನು ಮಾಡುವ ಆಲೋಚನೆ ವ್ಯಕ್ತವಾಗಿದೆ. ಇದು ಮೊದಲನೆಯ ಸಂಚಿಕೆಯಲ್ಲಿ ವ್ಯಕ್ತವಾಗಿರುವ ಆಶಯವಾದರೆ, ನಾಲ್ಕನೆಯ ಸಂಪುಟದ ವೇಳೆಗೆ ಸಾಹಿತ್ಯಕ್ಕೆ ಸೀಮಿತವಾಗಬೇಕೆಂದಿದ್ದ ಪತ್ರಿಕೆಯಲ್ಲಿ ಮೈಸೂರು ಶಿಲ್ಪಕಲೆಯ ವೈಭವವನ್ನು ಲೇಖನವೊಂದು ಪ್ರಕಟವಾಗಿದೆ ಇದನ್ನು ಕುರಿತಂತೆ ಪ್ರಬುದ್ಧ ಕರ್ಣಾಟಕದಲ್ಲಿ ಸಂಪಾದಕರು "ಇದುವರೆವಿಗೂ ಭಾಷಾ ಸಾಹಿತ್ಯ ವಿಚಾರವನ್ನೇ ಪ್ರಕಟಿಸುತ್ತಿದ್ದೆವು. ಈಚೆಗೆ ಮೈಸೂರು ಶಾಸನ ಇಲಾಖೆಯ ಚಿತ್ರಕಲಾ ಸಹಾಯಕರಾದ ಬಿ. ವೆಂಕೋಬ-ರಾವ್ ಅವರ ಅಮೋಘವಾದ ಸಹಾಯವೂ ಸಹಾನುಭೂತಿಯೂ ದೊರೆತು ಸಚಿತ್ರವಾದ ಶಿಲ್ಪವಿಚಾರಗಳನ್ನು ಪ್ರಕಟಿಸಲು ತೊಡಗಿದೆವು"[೨] ಎಂದು ಹೇಳಿದ್ದಾರೆ. ಸಾಹಿತ್ಯಕ್ಕಷ್ಟೇ ಅಲ್ಲದೆ ಶಿಲ್ಪಕಲೆಯ ಕಡೆಗೂ ತಮ್ಮ ಗಮನ ಹರಿದಿರುವುದರ ಬಗ್ಗೆ ಇಲ್ಲಿ ಸೂಚನೆ ಇದೆ ಹಾಗೂ ಇದೇ ತರಹದ ನೆರವು ಬೇರೆ ಬೇರೆ ಕಡೆಯಿಂದಲೂ ದೊರೆತರೆ ಐದನೆಯ ಸಂಪುಟದಿಂದ "ಪ್ರಪಂಚ ಪರಿಚಯ" ಎಂಬ ಹೊಸ ವಿಭಾಗವನ್ನು ಪ್ರಾರಂಭಿಸುವ ಆಲೋಚನೆಯನ್ನು ಇದೇ ಸಂಚಿಕೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಪ್ರಪಂಚ ಜ್ಞಾನವನ್ನು ಉಂಟು ಮಾಡುವ ಅನೇಕ ಲೇಖನಗಳು ನಾನಾ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದು ಅವುಗಳನ್ನು ಕನ್ನಡಿಗರಿಗೆ ಶೇಖರಿಸಿ ಕೊಡಬೇಕೆಂದೂ, ಕನ್ನಡದ ಯಾವ ಪತ್ರಿಕೆಯೂ ಈ ಕಾರ್ಯವನ್ನು ಮಾಡದೇ ಇರುವುದರಿಂದ ಇಂತಹ ಪ್ರಯತ್ನಗಳು ಕನ್ನಡಿಗರಿಗೆ ಪ್ರಯೋಜನಕ್ಕೆ ಬರುತ್ತದೆ ಎಂಬುದು ಸಂಪಾದಕರ ಆಶಯ ಪ್ರಸ್ತುತಿ"ಯಲ್ಲಿ ಕನ್ನಡಿಗರ ಅಭಿಮಾನಕ್ಕೆ ಪಾತ್ರವಾಗುತ್ತಿರುವ ಪ್ರಬುದ್ಧ

---

೧. ವಸ್ತುಕೋಶ, ಪ್ರ.ಕ., ಸಂಪುಟ-೧, ಸಂಚಿಕೆ-೧, ಪು. ೬.
೨. ವಸ್ತುಕೋಶ, ಪ್ರ.ಕ., ಸಂಪುಟ-೫ ಸಂಚಿಕೆ-೧, ಪು. ೧

ಕರ್ನಾಟಕವು ಈ ಕೆಲಸಕ್ಕೆ ಕೈ ಹಾಕಿದರೆ ಉಪಯೋಗವಾಗಲಾರದೇ?[೧] ಎಂದು ಆಲೋಚಿಸಿರುವ ಸಂಪಾದಕರು ಈ ವಿಭಾಗದಲ್ಲಿ ಐತಿಹಾಸಿಕ, ಆರ್ಥಿಕ, ವೈಜ್ಞಾನಿಕ ಮುಂತಾದ ಅಂಶಗಳನ್ನು ಪತ್ರಿಕಾ ಲೇಖನಗಳಿಂದ ಸಂಗ್ರಹಿಸಿ ನೀಡಬೇಕೆಂದು ನಿರ್ಧರಿಸಿದ್ದಾರೆ. ಇದು ಪತ್ರಿಕೆಯು ಆರಂಭವಾದಾಗ ಹೊಂದಿದ್ದ ಆಶಯಗಳಿಗಿಂತ ಭಿನ್ನವಾಗಿರುವಂತೆ ಕಂಡು ಬಂದರೂ ಈ ಬದಲಾದ ಪತ್ರಿಕೆಯ ಸ್ವಭಾವ ಸ್ವರೂಪಗಳಲ್ಲಿ ಬದಲಾಯಿಸುವ ಉದ್ದೇಶವಿಲ್ಲವೆಂದೂ ಒಂದು ವರ್ಷ ಈ ಹೊಸದಾರಿಯಲ್ಲಿ ಹೋಗಿ ನೋಡಿ ಅದರಿಂದ ಏನು ಫಲ ಬರುತ್ತದೆಂಬುದನ್ನು ಪರೀಕ್ಷೆ ಮಾಡಿ ನೋಡಿ ಅನಂತರ ಅದನ್ನು ಯಾವ ಸ್ವರೂಪದಲ್ಲಿ ಮುಂದುವರೆಸಬೇಕು ಎಂಬುದರ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಆಲೋಚಿಸಿದ್ದಾರೆ. ಈ ವಿಭಾಗಕ್ಕೆ "ಪ್ರಪಂಚ ಪರಿಚಯ" ಎಂಬ ಹೆಸರನ್ನು ಇಡಬೇಕೆಂದು ಯೋಚಿಸಿದಾಗ ಅದಕ್ಕೆ "ಜಯಕರ್ನಾಟಕ" ಪತ್ರಿಕೆಯವರಿಂದ ವಿರೋಧ ವ್ಯಕ್ತವಾಯಿತು. ಪ್ರಪಂಚ ಪರಿಚಯವನ್ನು ಅವರೂ ಮಾಡಿಕೊಡುತ್ತಿದ್ದುದರಿಂದ ಅಸಮಾಧಾನವನ್ನು ವ್ಯಕ್ತಪಡಿಸಿದಾಗ ಸಂಪಾದಕರು ಅದಕ್ಕೆ ಬದಲಾಗಿ 'ಜ್ಞಾನ ಮತ್ತು ವಿಜ್ಞಾನ' ಎಂಬ ಹೊಸ ಹೆಸರಿನ ವಿಭಾಗವನ್ನು ಪ್ರಾರಂಭಿಸಿದರು. ಯಾವ ಹೆಸರಿನಿಂದಲೇ ಆಗಲಿ ಯಾವ ವಿಧವಾಗಿಯೇ ಆಗಲಿ ಒಳ್ಳೆಯ ಕೆಲಸ ನಡೆಯಬೇಕೆಂಬುದು ಅವರ ಉದ್ದೇಶವಾಗಿರುವಂತೆ ತೋರುತ್ತದೆ. ಪೊಳ್ಳು ಪ್ರತಿಷ್ಠೆಗಳನ್ನು ಮುಂದು ಮಾಡಿ ಮರೆಯುವುದಕ್ಕಿಂತಲೂ ಕನ್ನಡಿಗರಿಗೆ ಒಳಿತಾಗುವ ವಿಚಾರಗಳ ಕಡೆ ಗಮನ ಹರಿಸುವುದು ಅವಶ್ಯಕವೆಂದು ಪರಿಗಣಿಸಿದ್ದಾರೆ.

ಪ್ರಬುದ್ಧ ಕರ್ನಾಟಕ ಸಾಹಿತ್ಯದ ವಿಚಾರಗಳನ್ನಷ್ಟೇ ಅಲ್ಲದೆ ಬೇರೆಯ ವಿಚಾರಗಳ ಕಡೆಗೂ ಗಮನ ಹರಿಸಲು ಆರಂಭಿಸಿದಾಗ ಇದು ಅದರ ಸಮಕಾಲೀನ ಪತ್ರಿಕೆಗಳಲ್ಲಿ ಕೆಲವಕ್ಕೆ ಅದು ಸರಿ ಕಂಡು ಬರಲಿಲ್ಲ. ಸಾಹಿತ್ಯ ಪತ್ರಿಕೆಯಾಗಿ ಜನರ ಗಮನ ಸೆಳೆದಿರುವ ಪತ್ರಿಕೆ ಬೇರೆ ವಿಷಯಗಳ ಕಡೆಗೂ ಗಮನ ಹರಿಸಿದರೆ ಅದರಿಂದಾಗಿ ತಮ್ಮ ಪತ್ರಿಕೆಗಳ ಪ್ರಸರಣ, ಮಾಹಿತಿ ಸಂಗ್ರಹಣ, ಇತ್ಯಾದಿ ವಿಚಾರಗಳಲ್ಲಿ ತಮಗೆ ಸಮಸ್ಯೆ ತಲೆದೋರಬಹುದೆಂಬ ಶಂಕೆ ಅವುಗಳ ಸಂಪಾದಕರಿಗೆ ತಲೆದೋರಿತು ಹಾಗಾಗಿಯೇ ಪ್ರಬುದ್ಧ ಕರ್ನಾಟಕ ಸಾಹಿತ್ಯ ಪತ್ರಿಕೆಯಾಗಿಯೇ ಇರಬೇಕೆಂದು ಅವರುಗಳ ಅಭಿಪ್ರಾಯವಾಗಿತ್ತು. ರಂಗಭೂಮಿ ಎಂಬ ಪತ್ರಿಕೆಗೆ ಪ್ರಬುದ್ಧ ಕರ್ನಾಟಕದ ಉದ್ದೇಶ ರಂಗಭೂಮಿಯ ಕಡೆಗೂ ಹರಿಯಬಹುದೇನೋ ಎಂಬ ಶಂಕೆ ಉಂಟುಮಾಡಿದಾಗ ಅದು ತನ್ನ ಪತ್ರಿಕೆಯ 'ಚಕಮಕಿಕಿಡಿ' ಎಂಬ ವಿಭಾಗದಲ್ಲಿ ಪ್ರಬುದ್ಧ ಕರ್ನಾಟಕವನ್ನು ಕಟುವಾಗಿ ಟೀಕಿಸಿದೆ. ರಂಗಭೂಮಿಯ

---

೧. ವಸ್ತುಕೋಶ, ಪ್ರಕ., ಸಂಪುಟ–೪, ಸಂಚಿಕೆ–೪, ಪು. ೩.

ಸ್ಕಾಟ್‌ಲೆಂಡಿನ ಪ್ರಸಿದ್ಧ ನಕಲಿಕಾರ ಹ್ಯಾರಿಲಾಡಂನಿಗೆ ವಾರಕ್ಕೆ ಎರಡು ಸಾವಿರ ಪೌಂಡು ಎಂಬ ವಿಚಾರವನ್ನು ಕೇಳಿದ ಪ್ರಬುದ್ಧ ಕರ್ಣಾಟಕಕ್ಕೆ ವಿಷಮ ಶೀತ ಜ್ವರ ಬರಬಹುದೆಂದೂ ಆದುದರಿಂದ ರಂಗಭೂಮಿಯ ಇಂತಹ ವಿಚಾರಗಳಿಗೆ ಗಮನ ಹರಿಸುವುದು ಬೇಡ ಎಂದು ವ್ಯಂಗ್ಯವಾಡಿದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದ ಸಂಪಾದಕರು "ಜ್ಞಾನ ಪ್ರಪಂಚವು ಬಹು ವಿಸ್ತಾರವಾದದ್ದು, ಅನಂತವಾದದ್ದು, ಅದೆಲ್ಲವನ್ನೂ ನಾವು ಹಿಡಿಯಲ್ಲಿ ಅಡಗಿಸಿಕೊಂಡುಬಿಡುತ್ತೇವೆಂದೇನೂ ಹೊರಟಿಲ್ಲ.... ಕೆಲವು ಪತ್ರಿಕೆಗಳು ಎಲ್ಲಾ ವಿಚಾರಗಳನ್ನೂ ತಿಳಿಸುತ್ತೇವೆಂದು ಹೊರಡುವಂತೆ ರಂಗಭೂಮಿಯೂ ಹೊರಟಿಲ್ಲ. ನಾವೂ ಹೊರಟಿಲ್ಲ.... ಕಾರ್ಯಕ್ಷೇತ್ರಗಳನ್ನು ನಿಯಮಿಸಿಕೊಳ್ಳದೆ ಮಾಡುವಷ್ಟು ಕೃಷಿಯನ್ನು ಚೆನ್ನಾಗಿ ಮಾಡದೆ ಮೇಲೆ ಮೇಲೆ ಓಡಾಡಿದರೆ ಸಿಕ್ಕುವುದು ಬರಿಯ ಕಸವೇ"[೧] ಎನ್ನುವುದರ ಮೂಲಕ ಪತ್ರಿಕೆಯು ಸಾಹಿತ್ಯ ಪತ್ರಿಕೆಯಾಗಿಯೇ ಉಳಿಯಲು ಆಶಿಸಿದೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ ಆದರೆ ಪ್ರಕಟಗೊಳ್ಳುತ್ತಿದ್ದ ಬರಹಗಳನ್ನು ಗಮನಿಸಿದರೆ ಇದೇ ಅಂಶಕ್ಕೆ ಸಮರ್ಥನೆ ದೊರೆಯುವುದಿಲ್ಲ.

ಕನ್ನಡ ಸಾಹಿತ್ಯ ಲೋಕದ ಉತ್ಕೃಷ್ಟವಾದ ಬರಹಗಳನ್ನು ಕನ್ನಡಿಗರಿಗೆ ಪರಿಚಯಿಸಿಕೊಡಬೇಕೆಂಬ ಆಶಯ ಮೊದಲನೆಯ ಸಂಚಿಕೆಯಲ್ಲಿ ವ್ಯಕ್ತವಾದರೆ ಕನ್ನಡ ನಾಡಿನಲ್ಲೇ ಹುಟ್ಟಿ ಅರ್ಹತೆಯಿದ್ದೂ ಅಜ್ಞಾತರಾಗಿಯೇ ಉಳಿದು ಕನ್ನಡ ಸಾಹಿತ್ಯ ಸೇವೆ ಮಾಡಿರುವವರನ್ನು ಗುರುತಿಸಿ ಕನ್ನಡಿಗರಿಗೆ ಪರಿಚಯ ಮಾಡಿಕೊಡಬೇಕೆಂಬ ಆಶಯ ಹನ್ನೊಂದನೆಯ ಸಂಪುಟದಲ್ಲಿದೆ. ಕವಿಚರಿತೆಯನ್ನು ರಚಿಸುವ ಸಂದರ್ಭದಲ್ಲಿ ಉಂಟಾಗುತ್ತಿರುವ ಗೊಂದಲಗಳಿಗೆ ನಮ್ಮ ನಾಡಿನಲ್ಲಿ ಇರುವ ಇಂತಹ ಅಲಕ್ಷಿತ ಬರಹಗಾರರ ಬಗ್ಗೆ ಉಂಟಾಗಿರುವ ತಿಳುವಳಿಕೆಯ ಕೊರತೆಯು ಒಂದು ಕಾರಣವಾಗಿರಬಹುದೆಂದು ಗುರುತಿಸುವ ಸಂಪಾದಕರು ಅಂತಹವರನ್ನು ಗಮನಿಸಿ ಅವರ ಬಗ್ಗೆ ಲೇಖನಗಳನ್ನು ಪ್ರಕಟಿಸಬೇಕೆಂದು ಆಲೋಚಿಸಿದ್ದಾರೆ ಹುಲ್ಲಹಳ್ಳಿ ರಾಮಣ್ಣವರ ಬಗ್ಗೆ ಲೇಖನವೊಂದನ್ನು ಪ್ರಕಟಿಸಿ ಕವಿಯಾಗಿ, ಕಲಾರಾಧಕರಾಗಿ, ಕೀರ್ತನಕಾರರಾಗಿ ಸೇವೆ ಸಲ್ಲಿಸಿದ ಇವರನ್ನು ಪರಿಚಯ ಮಾಡಿಕೊಡುವ ಪ್ರಯತ್ನ ಮಾಡಿದ್ದಾರೆ. "ಇವರು ಮಹಾಕವಿಗಳಲ್ಲಿ ಸುಪ್ರಸಿದ್ಧ ಪುರುಷರಲ್ಲ ಆದರೂ ಅವರ ಕಾಲಕ್ಕಾದರೂ ತಕ್ಕ ಮಟ್ಟಿಗೆ ಪ್ರಸಿದ್ದರಾಗಿದ್ದವರೇ! ಆದರೆ ಮುಂದಿನ ಪೀಳಿಗೆಯವರಿಗೆ ಇಂತಹವರ ಬಗ್ಗೆ ಮಾಹಿತಿಗಳೇ ಲಭ್ಯವಿಲ್ಲದೇ ಹೋಗುತ್ತದೆ" ಆದುದರಿಂದ ಇಂತಹವರ ಬಗ್ಗೆ ತಿಳಿದಿರುವವರು ಮಾಹಿತಿ ನೀಡಬೇಕೆಂದು ಇದರಿಂದ ಕವಿಚರಿತೆ ಬರೆಯುವ ಸಂದರ್ಭದಲ್ಲಿ ಅಲ್ಪವಾದರೂ ಮಾಹಿತಿ ದೊರೆತಂತಾಗುತ್ತದೆಂದೂ

---

೧. ವಸ್ತುಕೋಶ. ಪ್ರಕ., ಸಂಪುಟ–೯, ಸಂಚಿಕೆ–೪, ಪು. ೪.

ಅಭಿಪ್ರಾಯಪಟ್ಟಿದ್ದಾರೆ. ಸಾಹಿತ್ಯದೊಡನೆ ಅನ್ವೇಷಣೆ ಸಂಶೋಧನೆ ಇವುಗಳ ಕಡೆಗೂ ಪ್ರಬುದ್ಧ ಕರ್ಣಾಟಕದ ಆಸಕ್ತಿ ಸಾಗಿರುವುದನ್ನು ಗಮನಿಸಬಹುದು.

ಪ್ರಬುದ್ಧ ಕರ್ಣಾಟಕಕ್ಕೆ ಇಪ್ಪತ್ತೈದು ವರ್ಷಗಳು ತುಂಬಿದ ಸಂದರ್ಭದಲ್ಲಿ ಪತ್ರಿಕೆಯ ಸಂಪಾದಕೀಯದಲ್ಲಿ ಅದರ ಕಾರ್ಯದೃಷ್ಟಿಯು ಹೇಗೆ ವಿಸ್ತಾರಗೊಂಡಿದೆ ಎಂಬುದನ್ನು ತಿಳಿಸಿದೆ. ವಿಶ್ವವಿದ್ಯಾಲಯದ ವ್ಯಾಪ್ತಿಗೆ ಬಂದ ನಂತರ ಅದರ ವ್ಯಾಪ್ತಿ, ಆಶಯ, ಉದ್ದೇಶ ಇವುಗಳಲ್ಲಿ ಬದಲಾವಣೆ ಕಂಡಿದೆ. ವಿಶ್ವವಿದ್ಯಾನಿಲಯದ ಪತ್ರಿಕೆಯಾದ ನಂತರ ಅದರ ದೃಷ್ಟಿಯೂ ವ್ಯವಹಾರವೂ, ಹೊಣೆಗಾರಿಕೆಯೂ ಮಾರ್ಪಟ್ಟವು, ವಿಸ್ತಾರಗೊಂಡವು. ವಿಶ್ವವಿದ್ಯಾಲಯದಲ್ಲಿ ಇರುವ ವಿವಿಧ ವಿದ್ಯಾರಂಗಕ್ಷೇತ್ರಗಳ ವಿಚಾರಗಳು ಪ್ರಕಟಗೊಳ್ಳತೊಡಗಿದವು. "ಹೊಸಕಾಲದ ವಿದ್ಯೆ, ಕಲೆ, ಜ್ಞಾನ, ವಿಜ್ಞಾನ, ಕಾರ್ಯಶಿಲ್ಪ, ಸಂಸ್ಕೃತಿ ಆದರ್ಶಗಳು ತೊಳಲು ಇವೆಲ್ಲದರ ಪರಿಚಯವನ್ನು ಮಾಡಿಕೊಟ್ಟು ಕನ್ನಡಿಗರಿಗೆ ಇಂದಿನ ಪ್ರಪಂಚದ ರೂಪುರೇಖೆಗಳು. ಸುವೇದ್ಯವಾಗುವಂತೆ ಅದು ಕೆಲಸ ಮಾಡಬೇಕಾಗಿದೆ"[೧] ಎಂಬ ಉದ್ದೇಶ ಪತ್ರಿಕೆಯ ಸಂಪಾದಕರದ್ದಾಯಿತು. ಈ ಪತ್ರಿಕೆಯು ಕೇವಲ ವಿಶ್ವವಿದ್ಯಾನಿಲಯದ ಪತ್ರಿಕೆಯಾಗದೆ ಸಮಗ್ರವಾಗಿ ಕನ್ನಡ ನಾಡಿನ ಪತ್ರಿಕೆಯಾಗಿ ಕನ್ನಡ ಭಾಷೆಯಷ್ಟೇ ತಿಳಿದ ಆದರೆ ಬೇರೆ ಭಾಷೆಗಳ ಪರಿಚಯವಿಲ್ಲದವರಿಗೆ ಆ ಭಾಷೆಗಳಲ್ಲಿರುವ ಸ್ವಾರಸ್ಯವನ್ನು ಸತ್ವವನ್ನು ಒದಗಿಸಿಕೊಡುವ ಉದ್ದೇಶ ಕಂಡುಬರುತ್ತದೆ. ಕನ್ನಡಿಗರು ವಿಶ್ವದ ಆಗುಹೋಗುಗಳ ಕಡೆ ಗಮನಿಸುತ್ತಿದ್ದು ಕನ್ನಡದಲ್ಲಿ ಕನ್ನಡಿಗರಿಗಾಗಿ ಅವರ ಸಂದೇಶಗಳನ್ನು ವಿಚಾರಗಳನ್ನು ಸಂಗ್ರಹಿಸಿಕೊಡುವ ಮತ್ತು ಬೇರೆಬೇರೆ ದೇಶಗಳಲ್ಲಿ ವೈಜ್ಞಾನಿಕವಾಗಿ ಸಾಹಿತ್ಯಿಕವಾಗಿ ಏನೆಲ್ಲಾ ಕಾರ್ಯಗಳು ನಡೆಯುತ್ತವೆಯೋ ಅದರ ತಿಳುವಳಿಕೆಯನ್ನು ಜನರಿಗೆ ಒದಗಿಸಿಕೊಡಬೇಕೆಂಬ ಆಶಯ ವ್ಯಕ್ತವಾಗಿದೆ. "ಪ್ರಪಂಚದ ನಡುವೆ ನಿಂತು ಎಲ್ಲಾ ಪ್ರಭಾಗಳನ್ನು ರೂಢಿಸಿಕೊಂಡು ತನ್ನ ಜೀವಕ್ಕೆ ಶಾಂತಿ ಕಾಂತಿ ಸಂಪುಷ್ಟಿಗಳನ್ನು ಒದಗಿಸಿಕೊಂಡು ಬಾಳುವ ಒಕ್ಕಲಾಗುವಂತೆ ಕನ್ನಡ ದೇಶವನ್ನು ಮಾಡಲು ತನ್ನ ರೀತಿಯಲ್ಲಿ ಶ್ರಮಿಸುವುದು ಪ್ರಬುದ್ಧ ಕರ್ಣಾಟಕದ ಕೆಲಸ".[೨] ಇದು ಪ್ರಬುದ್ಧ ಕರ್ಣಾಟಕದ ಬದಲಾದ ಆಶಯ. ಪತ್ರಿಕೆಯ ಆರಂಭದ ದಿನಗಳಲ್ಲಿ ಪ್ರಕಟಗೊಳ್ಳುತ್ತಿದ್ದ ಜ್ಞಾನ-ವಿಜ್ಞಾನ ವಿಭಾಗವನ್ನು ನೆನಪಿಗೆ ತರುವುದಾದರೂ ಅದಕ್ಕಿಂತಲೂ ವಿಸ್ತೃತವಾದ ಉದ್ದೇಶ ವ್ಯಾಪ್ತಿಯನ್ನು ಇದು ವ್ಯಕ್ತಪಡಿಸುತ್ತದೆ ಕನ್ನಡದ ಅಧ್ಯಾಪಕರಾಗಿದ್ದರೂ ಅರ್ಥಶಾಸ್ತ್ರ ಎಂ.ಎ.ಯಲ್ಲಿ ಸ್ವರ್ಣ ಪದಕ ಪಡೆದಿದ್ದ ವಿ. ಸೀತಾರಾಮಯ್ಯನವರ ಕಾಲದಲ್ಲಿ ಪ್ರಾರಂಭವಾದ ಅಂಕಿ-ಅಂಶವೆಂಬ ವಿಭಾಗ ಸಾರ್ವಜನಿಕರು,

---

೧. ಸಂಪಾದಕೀಯ, ಪ್ರ.ಕ., ಸಂಪುಟ-೨೫, ಸಂಚಿಕೆ-೧, ಪು. ೧೨೮.
೨. ಸಂಪಾದಕೀಯ, ಪ್ರ.ಕ., ಸಂಪುಟ-೨೫, ಸಂಚಿಕೆ-೧, ಪು. ೧೩೦.

ಪತ್ರಿಕೆಯವರು, ಭಾಷಣಕಾರರು ಇವರೇ ಮೊದಲಾದವರಿಗೆ ವಿಶೇಷ ಮಾಹಿತಿಯನ್ನು ದೊರಕಿಸಿಕೊಡಬಲ್ಲ ಭಾಗವಾಗಿತ್ತು. ಸಾಹಿತ್ಯದ ಜೊತೆಯಲ್ಲೇ ವಿವಿಧ ವಿಷಯಗಳ ಈ ಖರಾರುವಕ್ಕಾದ ಮಾಹಿತಿ ದೊರಕಿಸಿಕೊಡುವುದರಿಂದ ಕನ್ನಡದ ಬರಹಗಳಿಗೆ ಹೊಸ ಮಾರ್ಗ ಹಾಗೂ ನಿಖರತೆಯನ್ನು ಒದಗಿಸಿಕೊಡಬಹುದೆಂದು ಆಶಯ ಸಂಪಾದಕರಿಗಿದ್ದು, ಅದು ಮೂಲದ ಸಾಹಿತ್ಯ ಪತ್ರಿಕೆಯಾಗಿಯೇ ಇರಬೇಕೆಂಬ ಆಶಯಕ್ಕಿಂತ ಭಿನ್ನವಾಗಿರುವುದನ್ನು ಗಮನಿಸಬಹುದು.

ಹೀಗೆ ಪ್ರಬುದ್ಧ ಕರ್ಣಾಟಕದ ಭಿನ್ನ ಭಿನ್ನವಾದ ಆಶಯಗಳು ಬೇರೆ ಬೇರೆ ಸಂದರ್ಭಗಳಲ್ಲಿ ವ್ಯಕ್ತವಾಗಿರುವುದಾದರೂ ಅವುಗಳೆಲ್ಲದರ ಹಿಂದೆ ಇರುವ ಉದ್ದೇಶ ಕನ್ನಡ ನಾಡು-ನುಡಿಗೆ ಅಭಿವೃದ್ಧಿಗೆ ತನ್ನ ಶಕ್ತಿಯನ್ನು ವಿನಿಯೋಗಿಸುವುದು ಎಂಬುದನ್ನು ಮರೆಯುವಂತಿಲ್ಲ.

****

## ಅಧ್ಯಾಯ – ೩

# ಕನ್ನಡ ನಾಡಿನ ಅಭಿವೃದ್ಧಿ

ಕವಿರಾಜಮಾರ್ಗದ ಉಲ್ಲೇಖದ ಪ್ರಕಾರ ಕನ್ನಡ ನಾಡು ದಕ್ಷಿಣ ಕಾವೇರಿಯಿಂದ ಗೋದಾವರಿಯವರೆಗೆ ಹರಡಿದ್ದ ನಾಡು. ನಂಜುಂಡ ಕವಿಯ ರಾಮನಾಥ ಚರಿತ್ರೆಯಲ್ಲೂ ಈ ವಿಷಯದ ಪ್ರಸ್ತಾಪವಿದೆ. ಕವಿರಾಜಮಾರ್ಗಕಾರನ ಪ್ರಕಾರ ಕನ್ನಡ ನಾಡು ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು, ರಾಯಚೂರು ಜಿಲ್ಲೆಯ ಕೊಪ್ಪಲ, ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ, ಬೆಳಗಾವಿ ಜಿಲ್ಲೆಯ ಒಂಕುಂದ ಇವುಗಳ ನಡುವೆ ತಿರುಳು ಕನ್ನಡದ ಪ್ರದೇಶವಿತ್ತು. ಶಾಸನಗಳು ಹಾಗೂ ಸಾಹಿತ್ಯ ಸ್ಥಳನಾಮಗಳು ಇವೇ ಮೊದಲಾದವುಗಳ ಆಧಾರದ ಹಿನ್ನೆಲೆಯಲ್ಲಿ ಹೇಳುವುದಾದರೆ ಅದು ಹಿಂದಿನ ಹೈದರಬಾದ್ ಸಂಸ್ಥಾನದ ಪಶ್ಚಿಮ ಭಾಗ. ಹಿಂದಿನ ಮದರಾಸು ಪ್ರಾಂತ್ಯ ವೆಂಗಿಮಂಡಲ, ಗೋದಾವರಿ ಕೃಷ್ಣಾನದಿಗಳು ಹರಿಯುವ ಜಿಲ್ಲೆಗಳು, ಮಹಾರಾಷ್ಟ್ರದ ಕೆಲವು ಭಾಗಗಳು, ನೀಲಗಿರಿ, ಕೊಯಮತ್ತೂರು, ಸೇಲಂ ಜಿಲ್ಲೆಗಳಲ್ಲಿ ಇದ್ದುದಾಗಿ ತಿಳಿದುಬರುತ್ತದೆ.

ಕನ್ನಡ ಮಾತನಾಡುತ್ತಿದ್ದ ಈ ಪ್ರದೇಶಗಳಿಗೆ ಬಳಸುತ್ತಿದ್ದ ಕರ್ನಾಟಕ ಎಂಬ ಪದದ ಬಗೆಗೆ ಸಾಕಷ್ಟು ಚರ್ಚೆಗಳು ನಡೆದಿವೆ. ಗುಂಡರ್ಲಿಟನ ಪ್ರಕಾರ ದಕ್ಷಿಣ ದಖ್ಖನ್ನಿನ ನೆಲ ಕಪ್ಪು ಮಣ್ಣಿನ ಭೂಮಿಯಾಗಿದೆ. ಆದ್ದರಿಂದ ಕರ+ನಾಟ+ಆಗಮ್ ಎಂದರೆ ಕಪ್ಪು ನಾಡಿನ ಒಳಭಾಗ ಎಂಬುದು ಇದರ ಅರ್ಥವಾಗಿದೆ. ಅಷ್ಟೆ ಅಲ್ಲದೆ ಕರುನಾಡು ಎಂಬುದಕ್ಕೆ ಎತ್ತರವಾದ ನಾಡು, ಎತ್ತರವಾದ ಪ್ರದೇಶ, ಸುಗಂಧಭರಿತ ಪ್ರದೇಶ, ಭಾವನೆಗಳನ್ನು ಒಡಮೂಡಿಸುವ ಪ್ರದೇಶ ಎಂಬ ಅರ್ಥಗಳು ಇವೆ. ಈ ಕರ್ನಾಟಕ ಎಂಬ ಪದ ದೇಶ ಮತ್ತು ಭಾಷೆಗಳಿಗೆ ಅನ್ವಯಿಸಿದ ಬಗೆಯನ್ನು ಖಚಿತವಾಗಿ ಗೊತ್ತುಮಾಡುವುದು ಇನ್ನೂ ಸಾಧ್ಯವಾಗಿಲ್ಲ. ಕರ್ನಾಟಕ ಎಂಬ ಶಬ್ದದ ಅರ್ಥದ ವಿಚಾರವಾಗಿ ವಿವಿಧ ಅಭಿಪ್ರಾಯಗಳು ವ್ಯಕ್ತವಾಗಿರುವಂತೆಯೇ ಶಬ್ದ ರೂಪ ಮುಖ್ಯವಾಗಿ ಕರ್ನಾಟಕ – ಕರ್ಣಾಟಕ ಎಂಬ ರೂಪಗಳ ವಿಚಾರದಲ್ಲೂ ಬಹುವಾಗಿ ಚರ್ಚೆ ನಡೆದಿದೆ. ಅದೇನೆ ಇದ್ದರು ೨೦೦೦ ವರ್ಷಗಳ ದೀರ್ಘವಾದ ಇತಿಹಾಸ ಹೊಂದಿರುವ ಕರ್ನಾಟಕದ ಪ್ರದೇಶ ಸಾಂಸ್ಕೃತಿಕವಾಗಿಯೂ, ಪ್ರಾಕೃತಿಕವಾಗಿಯೂ ಮಾತ್ರವಲ್ಲದೆ, ರಾಜಕೀಯವಾಗಿಯೂ ಅಖಂಡವಾದದ್ದು. ಹೀಗೆ ಅಖಂಡವಾಗಿದ್ದ ಕನ್ನಡನಾಡಿನ ವಿಸ್ತೀರ್ಣ ಎಷ್ಟು ಇತ್ತು ಎಂಬುದು ಸ್ಪಷ್ಟವಾಗಿ ತಿಳಿದಿಲ್ಲ. ಆದರೆ ಕೆಲವು ಕಾಲ ಘಟ್ಟಗಳಲ್ಲಾದರೂ ಉತ್ತರದಲ್ಲಿ ಔರಂಗಬಾದ್ ಮುಂಬಾಯಿ ಭಾಗದಿಂದ ದಕ್ಷಿಣದಲ್ಲಿ ನೀಲಗಿರಿಯವರೆಗೂ ಪೂರ್ವದಲ್ಲಿ ಅನಂತಪುರ ಕರ್ನೂಲಗಳವರೆಗೂ ಕನ್ನಡ ಭಾಷೆ ಪ್ರಚಾರದಲ್ಲಿತ್ತು ಎಂಬುದಕ್ಕೆ ಸೂಚನೆಗಳು

ದೊರಕುತ್ತದೆ. ಆದರೆ ರಾಜಕೀಯ ಕಾರಣಗಳಿಂದಾಗಿ ಅಖಂಡವಾಗಿದ್ದ ಕರ್ನಾಟಕ ಛಿದ್ರವಾಯಿತು. ಬ್ರಿಟಿಷರ ಆಡಳಿತ ಭಾರತದಲ್ಲಿ ಸ್ಥಿರಗೊಂಡ ನಂತರ ಕರ್ನಾಟಕದ ಏಕತೆಯಲ್ಲಿ ಮತ್ತಷ್ಟು ಬಿರುಕು ಕಾಣಿಸಿಕೊಂಡಿತ್ತು. ಭಾಷಾವಾರು ಪ್ರಾಂತ್ಯಗಳ ರಚನೆಯ ಭಾವನೆ ಸುಮಾರು ಎಲ್ಲಾ ಕಡೆಯಲ್ಲೂ ಕಾಣಿಸಿಕೊಂಡ ಕಾರಣದಿಂದಾಗಿ ಒಂದೊಂದು ಭಾಷಾ ವರ್ಗದವರು ಪ್ರತ್ಯೇಕ ಪ್ರಾಂತ್ಯ ನಿರ್ಮಾಣದ ಕನಸನ್ನು ಕಾಣಲು ಆರಂಭಿಸಿದರು.

ಕನ್ನಡ ನಾಡಿನ ಪ್ರಜ್ಞಾವಂತರ ಪತ್ರಿಕೆಯಾದ ಪ್ರಬುದ್ಧ ಕರ್ನಾಟಕವು ಜನಗಳ ಈ ಭಾವನೆಗಳಿಗೆ ಸ್ಪಂದಿಸಿದೆ. ಅದಕ್ಕೆ ಪೂರಕವಾದ ವೇದಿಕೆಯನ್ನು ಕಲ್ಪಿಸಿಕೊಡುವ ಪ್ರಯತ್ನವನ್ನು ಮಾಡಿದೆ. ಅಂದಿನ ಪರಿಸ್ಥಿತಿಯಲ್ಲಿ ಕನ್ನಡ ನಾಡು ಒಂದುಗೂಡಬೇಕಾದರೆ ಆಧುನಿಕ ಶಿಕ್ಷಣದ ಕಾರಣದಿಂದಾಗಿ ವಿದ್ಯಾವಂತರ ಅವಜ್ಞೆತೆಗೆ ಕಾರಣವಾಗಿದ್ದ ಕನ್ನಡನಾಡು ಹಾಗೂ ಕನ್ನಡ ನುಡಿಯ ಬಗ್ಗೆ ಅಭಿಮಾನ ಮೂಡಿಸುವ ಕಾರ್ಯ ಆಗಬೇಕಾಗಿತ್ತು. ಹಾಗೆ ಅಭಿಮಾನ ಮೂಡಬೇಕಾದರೆ ಕನ್ನಡಿಗನಿಗೆ ತನ್ನ ನಾಡಿನ ಪರಂಪರೆ, ಇತಿಹಾಸ, ಕೀರ್ತಿ, ವೈಭವ ಇವುಗಳ ಬಗೆಗೆ ಅರಿವು ದೊರೆಯಬೇಕಾಗಿತ್ತು. ಪ್ರಾಚೀನ ಕಾಲದಿಂದಲೂ ಪ್ರಖ್ಯಾತಿ ಪಡೆದ ಪಟ್ಟಣಗಳ ಪರಿಚಯ ಕನ್ನಡಿಗರಿಗೆ ಅಗತ್ಯವಾಗಿ ಬೇಕಾಗಿತ್ತು. ಆ ಸ್ಥಳಗಳ ಖ್ಯಾತಿಯನ್ನು ಅಲ್ಲಿಯ ವೈಶಿಷ್ಟ್ಯಗಳನ್ನು ತಿಳಿಸಿಕೊಡುವುದರ ಮೂಲಕ ಕನ್ನಡಿಗರ ಗಮನ ಸೆಳೆಯಬೇಕಾಗಿತ್ತು. ಅಷ್ಟೇ ಅಲ್ಲದೆ ಆಧುನಿಕ ಕಾಲದಲ್ಲಿಯೂ ನಾಡಿನ ವಿವಿಧ ಪ್ರದೇಶಗಳಲ್ಲಿರುವ ಪ್ರೇಕ್ಷಣೀಯ ಸ್ಥಳಗಳ ವಿವರಣೆಗಳನ್ನು ನೀಡುವುದರ ಮೂಲಕ, ಆ ಸ್ಥಳಗಳ ಬಗ್ಗೆ ಆಸಕ್ತಿ ಮೂಡಿಸುವುದರ ಮೂಲಕ, ಪ್ರಾಕೃತಿಕ ಸೊಬಗನ್ನು ಹೊಂದಿರುವ ಸ್ಥಳಗಳ ಪರಿಚಯ ಮಾಡಿಕೊಡುವುದರ ಮೂಲಕ; ಭಿನ್ನ ಭಿನ್ನ ಪ್ರದೇಶಗಳಲ್ಲಿದ್ದ ಕನ್ನಡಿಗರಿಗೆ ಪರಸ್ಪರ ಅರಿತುಕೊಳ್ಳಲು ಅನುವು ಮಾಡಿಕೊಡಬೇಕಾಗಿತ್ತು. ಭಿನ್ನ ಭಿನ್ನವಾಗಿ ಬೇರೆ ಬೇರೆ ಆಡಳಿತಕ್ಕೆ ಒಳಪಟ್ಟಿದ್ದ ಅಂದಿನ ಕನ್ನಡ ಜನತೆಯಲ್ಲಿ ನಾವೆಲ್ಲರೂ ಒಂದೇ ನಾಡಿಗೆ ಸಂಬಂಧಿಸಿದವರು ಎಂಬ ಭಾವನೆ ಬೆಳೆಯುವುದಕ್ಕೆ ಇಂತಹ ಕಾರ್ಯಗಳು ಅವಶ್ಯಕವಾಗಿ ಆಗಬೇಕಾಗಿತ್ತು. ಬೇರೆ ಬೇರೆ ಪ್ರಾಂತ್ಯಗಳಲ್ಲಿದ್ದ ಕೆಲವು ಪತ್ರಿಕೆಗಳಲ್ಲಿ ಈ ರೀತಿಯ ಕಾರ್ಯಗಳು ನೇರವೇರುತ್ತಿದ್ದವು. ಮೈಸೂರು ಪ್ರಾಂತ್ಯದ ಪ್ರಭಾವಶಾಲಿ ಪತ್ರಿಕೆಯಾದ ಪ್ರಬುದ್ಧ ಕರ್ನಾಟಕವು ಈ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಅದರ ಮೂಲಕ ಕನ್ನಡಿಗರ ಗಮನವನ್ನುಸೆಳೆದಿದೆ. ಒಂದು ನಾಡಿನ ಬೆಳವಣಿಗೆಯಲ್ಲಿ ಅಭಿಮಾನ ಮೂಡಿಸುವಲ್ಲಿ ಇಂಥ ಸ್ಥಳಗಳ ಪರಿಚಯವು ಅತಿ ಅವಶ್ಯಕವಾದ ವಿಷಯವಾಗುತ್ತದೆ.

ಈ ಭಾವನೆಯನ್ನು ಬೆಳೆಯಲು ಸಹಕಾರಿಯಾಗುವಂತೆ ಕನ್ನಡ ನಾಡಿನ ಪ್ರಾಂತ್ಯಗಳನ್ನು ಪರಿಚಯಿಸುವ ಹಾಗೂ ಅವುಗಳಲ್ಲಿನ ಭೌಗೋಳಿಕ ವೈಶಿಷ್ಟ್ಯಗಳನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದೆ. ಕನ್ನಡ ನಾಡು ಛಿದ್ರವಾಗಿದ್ದ ಸಂದರ್ಭದಲ್ಲಿ ಕನ್ನಡನಾಡಿನಾದ್ಯಂತ ನಡೆಯುತ್ತಿದ್ದ ಕನ್ನಡ ನಾಡಿನ ಏಕೀಕರಣದ ಹೋರಾಟಕ್ಕೆ ಬೆಂಬಲವನ್ನು ಸೂಚಿಸಿದೆ. ಅದಕ್ಕೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸುವ ಮೂಲಕ, ಇದಕ್ಕೆ ಸಂಬಂಧಿಸಿದಂತೆ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಮಾಡಿದ ಭಾಷಣಗಳನ್ನು ಮುದ್ರಿಸುವ ಮೂಲಕ, ಕಥೆ, ಕವನ, ನಾಟಕ ಇವುಗಳ ಮೂಲಕ ಓದುಗರಲ್ಲಿ ಸ್ಫೂರ್ತಿಯನ್ನು ತುಂಬಿದೆ. ಏಕೀಕರಣಕ್ಕೆ ಸಂಬಂಧಿಸಿದಂತೆ ಕಾಲದಿಂದ ಕಾಲಕ್ಕೆ ನಾಡಿನಾದ್ಯಂತ ನಡೆಯುತ್ತಿದ್ದ ಚಳುವಳಿಗಳು, ಅದರ ಪರಿಣಾಮಗಳು, ಸಮಿತಿಗಳ ನೇಮಕ, ಅವುಗಳ ಅಭಿಪ್ರಾಯ, ಅವುಗಳ ಸಾಧಕ–ಬಾಧಕಗಳ ಬಗೆಗೆ ಗಮನ ಸೆಳೆದಿದೆ. ಭಾಷಾವಾರು ಪ್ರಾಂತ್ಯಗಳ ರಚನೆಯಲ್ಲಿ ಯಾವ ಯಾವ ಪ್ರದೇಶಗಳು ಕರ್ನಾಟಕಕ್ಕೆ ಸೇರಬೇಕು ಎಂಬಂತಹ ವಿಷಯಗಳ ಬಗೆಗೆ ಚರ್ಚಿಸಿ ಏಕೀಕರಣಕ್ಕೆ ಸಂಬಂಧಿಸಿದಂತೆ ತನ್ನ ಬದ್ಧತೆಯನ್ನು ಪ್ರದರ್ಶಿಸಿದೆ. ಕನ್ನಡನಾಡು ಸಂಪೂರ್ಣವಾಗಿ ಅಭಿವೃದ್ಧಿ ಹೊಂದಬೇಕಾದರೆ ಆರ್ಥಿಕವಾಗಿ ಬಲಗೊಳ್ಳಲು ಅನುಸರಿಸಬೇಕಾದ ಮಾರ್ಗಗಳ ಬಗೆಗೆ ಚರ್ಚೆಮಾಡಿದೆ. ಕನ್ನಡ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಉಳಿಸಿಕೊಳ್ಳುವ ಬಗೆಯನ್ನು ಕುರಿತು ಚಿಂತಿಸಿದೆ. ಯಾವ ಸಂದರ್ಭದಲ್ಲಿ ಯಾವ ವಿಷಯಕ್ಕೆ ಆದ್ಯತೆ ನೀಡಬೇಕೆಂಬುದನ್ನು ಅರಿತುಕೊಂಡು ಹಾಗೂ ಅದರಿಂದ ನಾಡಿನ ಮೇಲಾಗುವ ಪರಿಣಾಮಗಳನ್ನು ಪ್ರಕಟಿಸುವ ಮೂಲಕ ನಾಡಿನ ಸಮಗ್ರ ಅಭಿವೃದ್ಧಿಯ ಕಡೆಗೆ ಗಮನ ಹರಿಸಿದೆ. ರಾಜಕೀಯವಾಗಿ ಮಾತ್ರವಲ್ಲದೆ ಸಾಂಸ್ಕೃತಿಕವಾಗಿ ಕನ್ನಡಿಗರು, ಕನ್ನಡ ಹಾಗೂ ಕನ್ನಡ ಭಾಷೆ ಹೊಂದಬೇಕಾದ ಅನಿವಾರ್ಯತೆಯನ್ನು ಪ್ರತಿಪಾದಿಸಿದೆ. ಇದರ ಮೂಲಕ ಕನ್ನಡ ನಾಡಿನ ಏಕೀಕರಣ, ಕನ್ನಡ ನಾಡಿನ ಬಗೆಗೆ ಅಭಿಮಾನ, ಕನ್ನಡ ನಾಡಿನ ಸಂಸ್ಕೃತಿಯ ರಕ್ಷಣೆ, ಕನ್ನಡ ನಾಡಿಗೆ ಒದಗಬೇಕಾದ ಆರ್ಥಿಕ ಸಬಲತೆ ಇಂತಹ ವಿಷಯಗಳ ಕಡೆ ಗಮನ ಹರಿಸಿದೆ.

**ಕನ್ನಡ ನಾಡು**

ಕನ್ನಡ ನಾಡಿಗೆ ಪ್ರಾಚೀನ ಪರಂಪರೆಯಿದೆ. ಕಾವೇರಿಯಿಂದ ಗೋದಾವರಿ–ವರೆಗೆ ಹರಡಿದ್ದ ನಾಡು ಎಂಬ ಹೆಗ್ಗಳಿಕೆಯಂತೆ ವಿಶಾಲವಾಗಿ ಹರಡಿದ್ದ ನಾಡು ಇದಾಗಿದೆ. ಭಾರತದಲ್ಲಿಯಷ್ಟೇ ಅಲ್ಲದೆ ವಿಶ್ವದಾದ್ಯಂತ ಕೀರ್ತಿ ಹರಡಿದ ಹಲವಾರು ಪಟ್ಟಣಗಳು ಕನ್ನಡ ನಾಡಿನಲ್ಲಿದ್ದವು. ನಾಡಿನ ಪ್ರಾಚೀನತೆಯನ್ನು ಎತ್ತಿ ಹಿಡಿಯುವ ಗ್ರೀಕ್ ಪ್ರಹಸನ, ಶಿಲಪ್ಪದಿಗಾರಂಗಳಂತಹ ಕೃತಿಗಳಲ್ಲಿ ಕನ್ನಡ ನಾಡಿನ ಪ್ರಸ್ತಾಪವಿದೆ.

ಪೌರಾಣಿಕ ಹಿನ್ನೆಲೆಯಿಂದ ಕೂಡಿದ ಈ ನಾಡಿನಲ್ಲಿ ಪ್ರಾಗೈತಿಹಾಸಿಕ ಕಾಲದಿಂದಲೂ ಮಾನವನ ಅಸ್ತಿತ್ವದ ಕುರುಹುಗಳು ದೊರೆತಿವೆ. ಕರ್ನಾಟಕದ ಮುಖ್ಯ ನದಿಗಳಾದ ಕೃಷ್ಣ, ಕಾವೇರಿ, ತುಂಗಭದ್ರ ನದಿಗಳ ಬಯಲು ಪ್ರದೇಶಗಳಲ್ಲಿ ಶಿಲಾಯುಗದ ಮಾನವನ ನೆಲೆಗಳನ್ನು ಗುರುತಿಸಬಹುದು. ಸಿಂಧೂ ನಾಗರಿಕತೆಯೊಂದಿಗೆ ಕರ್ನಾಟಕದ ಸಂಬಂಧ ಇದ್ದಿರಬಹುದೆಂದು ಕೆಲವರು ಊಹಿಸಿದ್ದಾರೆ. ಉತ್ತರದಲ್ಲಿ ಸಾಮ್ರಾಜ್ಯ ಸ್ಥಾಪಿಸಿ ಭಾರತದ ಮೊದಲ ಸಾಮ್ರಾಜ್ಯ ನಿರ್ಮಾಪಕನೆಂದು ಪ್ರಖ್ಯಾತಿಯನ್ನು ಪಡೆದ ಚಂದ್ರಗುಪ್ತ ಮೌರ್ಯನ ಮರಣವು ಶ್ರವಣಬೆಳಗೊಳದಲ್ಲಿ ಆಯಿತೆಂಬುದು ಇತಿಹಾಸಕಾರರ ಅಭಿಪ್ರಾಯ. ಅಶೋಕನ ಕಾಲದಲ್ಲಿ ಕರ್ನಾಟಕವು ಮೌರ್ಯ ಸಾಮ್ರಾಜ್ಯದ ಭಾಗವಾಗಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ.

ಅಶೋಕನ ಕಾಲದಲ್ಲಿ ಕರ್ನಾಟಕವು ಕರ್ಣಾಟಕದ ರಾಜವಂಶಗಳಾದ ಬಾದಾಮಿಯ ಚಾಲುಕ್ಯರು ಹಾಗೂ ಮಳಖೇಡದ ರಾಷ್ಟ್ರಕೂಟರ ಕಾಲದ ಕರ್ನಾಟಕವು ಉತ್ತರದಲ್ಲಿ ನರ್ಮದಾ ನದಿಯವರೆಗೆ ಹಬ್ಬಿತ್ತು. ಕನ್ನಡ ನಾಡಿನ ವಿಸ್ತೀರ್ಣವನ್ನು ಕುರಿತಂತೆ ಹೇಳುವುದಾದರೆ "ಕನ್ನಡನಾಡು ಉತ್ತರದಲ್ಲಿ ಗೋದಾವರಿ ನದಿಯವರೆಗೆ ಹಬ್ಬಿದೆ. ದಕ್ಷಿಣದಲ್ಲಿ ಕಾವೇರಿಯವರೆಗೆ ಹರಡಿದೆ. ಪಶ್ಚಿಮದಲ್ಲಿ ಅದನ್ನು ಅರಬ್ಬೀ ಸಮುದ್ರ ಮೀಯಿಸುತ್ತಿದೆ. ಪೂರ್ವದಲ್ಲಿ ಗೋದಾವರೀ ಮಂಜಿರಾನದಿಗಳ ಸಂಗಮ ಸ್ಥಾನದಿಂದ ನೀಲಗಿರಿಯವರೆಗೂ ಅದು ಕೈ ಚಾಚಿದೆ. ಬ್ರಿಟಿಷ್ ಕರ್ನಾಟಕವೊಂದೇ ಒರಿಸ್ಸಾ ಪ್ರಾಂತಕ್ಕಿಂತಲೂ ಇತರ ಅನೇಕ ಸಂಸ್ಥಾನಗಳಿಗಿಂತಲೂ ವಿಸ್ತಾರವಾಗಿದೆ."[೧] ಭೌಗೋಳಿಕವಾಗಿ ಕರ್ನಾಟಕವನ್ನು ಕರಾವಳಿ ಪ್ರದೇಶ, ಸಹ್ಯಾದ್ರಿ ಪರ್ವತ ಪ್ರದೇಶ, ಮಲೆನಾಡು ಪ್ರದೇಶ, ಉತ್ತರ ಬಯಲು ಪ್ರದೇಶ, ದಕ್ಷಿಣ ಬಯಲು ಪ್ರದೇಶ ಎಂದು ಗುರುತಿಸಬಹುದು. ಈ ಎಲ್ಲಾ ಪ್ರದೇಶಗಳಲ್ಲಿ ಇಂದಿಗೂ ತಮ್ಮ ಐತಿಹಾಸಿಕ ಹಾಗೂ ಭವ್ಯ ಸಾಂಸ್ಕೃತಿಕ ಪರಂಪರೆಯನ್ನು ಸಾರುವ ಅನೇಕ ಪಟ್ಟಣಗಳು ಇವೆ. ಬಿ.ಎಂ.ಶ್ರೀಕಂಠಯ್ಯ ಅವರ "ಕನ್ನಡ ತಾಯ್ ನೋಟ" ಎಂಬ ಕವನದಲ್ಲಿ ಕನ್ನಡ ನಾಡಿನ ಕೆಲವು ಪಟ್ಟಣಗಳ ಹಾಗೂ ಕನ್ನಡ ನಾಡಿನ ಭೌಗೋಳಿಕ ವಿಶೇಷತೆಯ ಪ್ರಸ್ತಾಪವಿದೆ. ವಿಜಯ ನಗರ ಸಾಮ್ರಾಜ್ಯದ ಆರು ನೂರು ವರ್ಷದ ಹಬ್ಬದ ಆಚರಣೆಯ ಸಂದರ್ಭದಲ್ಲಿ ರಚನೆಗೊಂಡ ಕವನ ಇದು. ವಿಜಯನಗರದ ಉತ್ಸವದಲ್ಲಿ ಪಾಲ್ಗೊಳ್ಳುವ ಮುನ್ನ ಕವಿಗಳು ಹಲವಾರು ಸ್ಥಳಗಳಿಗೆ ಭೇಟಿ ನೀಡಿಬಂದಿದ್ದರು. ಅವರು ಯಾವ ಯಾವ ಸ್ಥಳಗಳಿಗೆ ಭೇಟಿ ಕೊಟ್ಟಿದ್ದರು ಎಂಬ ವಿಷಯ ಕುರಿತಂತೆ ವಿ.ಸೀತಾರಾಮಯ್ಯನವರು "ಅವರ ಜೊತೆಯಲ್ಲಿ ನಾನೂ ಆಗ ೮-೧೦ ದಿನಗಳವರೆಗೆ ಇದ್ದೆ. ಮೈಸೂರಿನಿಂದ

---

೧. 'ವಸ್ತುಕೋಶ' ಪ್ರಕ., ಸಂಪುಟ ೨೭, ಸಂಚಿಕೆ ೪, ಪು. ೧೫೦

ಹೊರಟವರು ಕೊಡಗು, ಮಂಗಳೂರು, ಉಡುಪಿ, ಕಾರವಾರ, ಗೋಕರ್ಣ ಇವುಗಳನ್ನೆಲ್ಲಾ ಸುತ್ತಿಕೊಂಡು ಗದುಗಿಗೆ ಬಂದು ಗೆಳೆಯರಾದ 'ಮೋಹನರಾವ್ ಕರಿಕಟ್ಟಿ' ಅವರ ಮನೆಯಲ್ಲಿದ್ದು..... ಅಲ್ಲಿಂದ ಹುಯಿಲುಗೋಳ ನಾರಾಯಣರಾಯರು ಗೊತ್ತು ಮಾಡಿ ತಂದಿದ್ದ ಬಸ್ಸಿನಲ್ಲಿ ಹಂಪೆಗೆ ಹೋದವು.[೧] ಈ ರೀತಿ ಹಂಪೆಗೆ ಹೋದ ಕವಿಗಳು ಆ ವಿಚಾರವನ್ನು ತಮ್ಮ ನಾಡಿನ 'ಅಣ್ಣ ತಂಗಿಯರ ಹಿರಿಯರ ಕಿರಿಯರ' ಮುಂದೆ ಕವನದ ಮೂಲಕ ನಿವೇದಿಸಿಕೊಳ್ಳುತ್ತಾರೆ. ಅವರಿಗೆ ತಾವು ಸುತ್ತಿ ಬಂದ ನಾಡು ಅವರಿಗೆ ಹೆಮ್ಮೆ ಎನಿಸುತ್ತದೆ.

**"ಏನು ಚೆಲುವಿನ ನಾಡು। ಚೆಲುವು ಚೆಲ್ಲುವಾ ನಾಡು । ಕನ್ನಡ ನಾಡು**
**ಏನು ಚಿನ್ನದ ನಾಡು । ನಮ್ಮೊಲಮೆಯ ನಾಡು । ನಮ್ಮಿನಿಯ ನಾಡು... ಕಾವೇರಿಯಿಂದ**
**ಗೋದಾವರಿಯವರೆಗೆ ಚಾಚಿರುವ ನಾಡು... ನಮ್ಮದು...**[೨] ಎಂದು ಅಭಿಮಾನ ಪಡುತ್ತಾರೆ. ತಾವು ಹಾದು ಬಂದ ತಾಣಗಳನ್ನು ನೆನಪಿಸಿಕೊಳ್ಳುತ್ತಾರೆ. ತಮ್ಮ ನಾಡಿನ ಬಗ್ಗೆ ಅದರ ಭೌಗೋಳಿಕ ವಿಶೇಷತೆಯ ಬಗ್ಗೆ ಚಿಂತಿಸುತ್ತಾರೆ. ಕರುನಾಡಿನ ಕಪ್ಪು ಮಣ್ಣು ಅವರ ಗಮನ ಸೆಳೆಯುತ್ತದೆ. ಕರಿಮಣ್ಣಿನ ಪ್ರದೇಶಗಳು ಅವರಿಗೆ ವಿಶಿಷ್ಟವೆನಿಸುತ್ತದೆ. ಆ 'ಕಪ್ಪು' 'ತಪ್ಪು' ಎನಿಸದೆ ಅದೇ ಅವರಿಗೆ ವಿಶೇಷವಾಗಿ ತೋರುತ್ತದೆ. ಅದನ್ನೇ ಅಭಿಮಾನದ ವಿಷಯವನ್ನಾಗಿ ಸ್ವೀಕರಿಸಿ ಕರಿನಾಡಿನ ಕಪ್ಪನ್ನು ಪ್ರಶಂಸಿಸುತ್ತಾರೆ. ಕಪ್ಪನ್ನೂ ಒಪ್ಪಿತ ವಿಷಯವನ್ನಾಗಿಸುವ ಜಾಣ್ಮೆ ತೋರುತ್ತಾರೆ. ಕಪ್ಪಿನ ವಿಶಿಷ್ಟತೆಗಳ ಬಗ್ಗೆ ಗಮನ ಸೆಳೆಯುತ್ತಾರೆ.

**"ಕೆಳಗೆ ಬೆಳೆ ಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು**
**ಕಾರ್ ಮೋಡಗಳು ಕಪ್ಪು ಹೊಳೆಕೆರೆಯ ಮಡು ಕಪ್ಪು, ತಾಯ್ ಕಾಲ್ ತೊಳೆವ**
**ಉಪ್ಪು ಕಡಲದು ಕಪ್ಪು ಜನ ಕಪ್ಪು ಏನೆಂದೆ? ತಪ್ಪು, ತಪ್ಪು!**
**ಮೂಡ ಪಡವಲು ತಿರುಗು-ಬಡಗ ತೆಂಕಲು ತಿರುಗು ಕರ್ನಾಟಕದಲ್ಲಿ,**
**ನಿಮ್ಮೂರ ಹೆಣ್ಣುಗಳ ಕಣ್‌ನೋಟ ತಣ್‌ನೋಟ ಕರ್ಪು, ಬಲುಕರ್ಪು**
**ಕರ್ಪೋ ಬಿಳ್ಪೋ ಕಾಣೆ ಕನ್ನಡದ ಕಣ್ಣೋಟ ಕೂರ್ಪು ಆರ್ಪು।**
**ಓ ತಾಯೆ, ಕನ್ನಡ ಪೆರ್‌ತಾಯಿ ನಮ್ಮಮ್ಮ ದೇವಿ ಸಮ್ರಾಜ್ಞಿ**
**ಸುಳಿಗುರುಳು ನಗೆಗಣ್ಣು ಏನು ಕಪ್ಪೇ ನಿನಗೆ-ಮುತ್ತಿಡುವ ಕಪ್ಪು...**[೩]

ಹೀಗೆ ಕಪ್ಪು ಮನ ಸೆಳೆಯುವ ಬಣ್ಣವಾಗಿ ಮಾರ್ಪಡುತ್ತದೆ. ಬಿ.ಎಂ.ಶ್ರೀಕಂಠಯ್ಯನವರು ಕನ್ನಡ ನಾಡನ್ನು ಸುತ್ತಾಡಿ ಬಂದವರು. ಅವರು ಕನ್ನಡ

---

೧. ನಾಯಕ ಹಾ.ಮಾ. (ಸಂ.), ಶ್ರೀ ಸಾಹಿತ್ಯ, ೧೯೮೩, ಪು. ೨೭.
೨. ಬಿ.ಎಂ.ಶ್ರೀಕಂಠಯ್ಯ, ಸಂಪುಟ ೧೮, ಸಂಚಿಕೆ ೩, ಪು. ೧.
೩. ಬಿ.ಎಂ.ಶ್ರೀಕಂಠಯ್ಯ, ಸಂಪುಟ ೧೮, ಸಂಚಿಕೆ ೩, ಪು. ೨.

ನಾಡಿನ ಕರಿ ಮಣ್ಣಿನ ಬಗ್ಗೆ, ಕರಿ ಬಣ್ಣದ ಬಗ್ಗೆ ಬಲ್ಲವರು. ಭೌಗೋಳಿಕವಾಗಿ ಅದನ್ನು ಹತ್ತಿರದಿಂದ ಕಂಡವರು. ಬಿ.ಎಂ.ಶ್ರೀ ಅವರ ಈ ತಿರುಗಾಟದ ಹಿಂದೆ ಉದ್ದೇಶವಿತ್ತು. ಹರಿದು ಹಂಚಿಹೋಗಿದ್ದ ಕನ್ನಡ ನಾಡು ಏಕೀಕರಣವಾಗುವ ತನಕವೂ ಕನ್ನಡಿಗರು ಎಂದರೆ ಕನ್ನಡ ನಾಡಿನ ಎಲ್ಲ ಕಡೆಯವರೂ ಒಬ್ಬರೊಂದಿಗೊಬ್ಬರು ಸೇರಬೇಕು ಒಂದು ಪ್ರದೇಶದವರು ಮತ್ತೊಂದು ಪ್ರದೇಶದವರೊಡನೆ ಮುಕ್ತವಾಗಿ ಬೆರೆತು ಅಭಿಪ್ರಾಯ ವಿನಿಮಯ ಮಾಡಿಕೊಳ್ಳಬೇಕು ಎಂಬ ಆಶಯ ಅವರಿಗಿತ್ತು. ನಾಡಿನ ಏಕೀಕರಣದ ಸಂದರ್ಭದಲ್ಲಿ ಇಂತಹ ಭೇಟಿಗಳು ಮಹತ್ವದ್ದಾಗಿರುತ್ತದೆ ಎಂಬ ಅಭಿಪ್ರಾಯ ಅವರದ್ದು "ಏಕೀಕೃತ ಕರ್ನಾಟಕ ದೊರೆಯುವವರೆಗೆ ಸಾಹಿತಿಗಳಾದರೋ, ಸಾಹಿತ್ಯ ಪರಿಷತ್ತಿನವರಾದರೋ ಸಾಂಸ್ಕೃತಿಕವಾಗಿಯೂ ಒಂದು ಭಾಗದವರು ಮತ್ತೊಂದು ಭಾಗದವರೊಡನೆ ಸಂಪರ್ಕ ಇಟ್ಟುಕೊಳ್ಳಬೇಕು. ಇದರಿಂದ ಏಕೀಕರಣ ಸುಲಭವಾಗುತ್ತದೆ. ಈ ಉದ್ದೇಶದಿಂದಲೇ ಬಿ.ಎಂ.ಶ್ರೀಯವರು ಕನ್ನಡ ನಾಡಿನ ಹೆಜ್ಜೆ ಹೆಜ್ಜೆ ನೆಲವನ್ನು ಅಳೆದು ಅಳೆದು ಸಾಂಸ್ಕೃತಿಕ ಬಾಂಧವ್ಯವನ್ನು ಸ್ಥಾಪಿಸಿದರು. ಅವರಷ್ಟು ಹೆಚ್ಚಾಗಿ ಚೆನ್ನಾಗಿ ಕನ್ನಡನಾಡನ್ನು ಸುತ್ತಿದವರು ಮತ್ತಾರೂ ಇರಲಾರರು"[೧] ಎಂಬುದು ಗೊರೂರು ರಾಮಸ್ವಾಮಿ ಅವರ ಅಭಿಪ್ರಾಯ.

ಬಿ.ಎಂ.ಶ್ರೀ ಅವರ ಕವನದ ಈ ಭಾಗ ಕನ್ನಡ ನಾಡಿನ ಭೌಗೋಳಿಕ ಲಕ್ಷಣದ ಕಿರುಪರಿಚಯ ಮಾಡಿಕೊಟ್ಟರೆ, ಕುವೆಂಪು ಅವರ 'ಸಾಹಿತ್ಯ ಪ್ರಚಾರ'ದಲ್ಲಿ ಮಲೆನಾಡಿನ ಸೊಬಗು ಹಾಗೂ ಅಲ್ಲಿನ ಹಸಿರು ಪರಿಸರದ ಪರಿಚಯವಿದೆ. "ಮಲೆನಾಡು ಸೊಬಗಿನ ಬೀಡು, ಸಿಡಿಲು ಮಿಂಚುಗಳ ನಾಡು, ಸಾಲು ಸಾಲಾಗಿ ಎದ್ದಿರುವ ಬೆಟ್ಟಗಳು, ಮಲೆ ಮಾಲೆಯಾಗಿ ಬೆಳೆದಿರುವ ಕಾಡುಗಳು ಅಲ್ಲಲ್ಲಿ ಬನ, ಬೆಟ್ಟಗಳ ನಡುವೆ ಹರಿಯುವ ಹೊಳೆ ತೊರೆಗಳು, ಕಾಡಿನ ಮೇಲೆ ಮಲಗುವ ಬಿಸಿಲು ಬೆಳದಿಂಗಳು ವಿಧ ವಿಧವಾಗಿ ಇಂಚರಗೈವ ಸಾವಿರಾರು ಬಣ್ಣದ ಹಕ್ಕಿಗಳು, ಅನವರತ ಶ್ಯಾಮಲ ವನ ಶ್ರೇಣಿಗಳಿಂದ ಆವೃತವಾದ ಧೀರ ಸಹ್ಯಾದ್ರಿ ಪರ್ವತಗಳ ಕಂದರ ಮಾರ್ಗಗಳಲ್ಲಿ ಮಂಜುಳನಾದದಿಂದ ಪ್ರವಹಿಸುವ ತುಂಗಭದ್ರೆ ಶರಾವತಿಯರು"[೨] ಎಂಬ ವಿವರಣೆಗಳು ಮಲೆನಾಡಿನ ಭೌಗೋಳಿಕ ಪರಿಸರವನ್ನು ಪರಿಚಯ ಮಾಡಿಕೊಟ್ಟಿದೆ. ಹಾಗೂ ಅಲ್ಲಿನ ಸೌಂದರ್ಯವನ್ನು ಕಣ್ಣಿಗೆ ಕಟ್ಟುವಂತೆ ಮಾಡಿದೆ.

ಇದೇ ರೀತಿಯಲ್ಲಿ ನಮ್ಮ ನಾಡಿನ ವೈಶಿಷ್ಟ್ಯವಾದ ಕರಾವಳಿಯ ಕಡಲಿನ ಸೊಬಗಿನ ವಿವರಣೆಯನ್ನು ನೀಡುವುದರಲ್ಲಿ ಎಂ.ಗೋವಿಂದಪೈರವರ 'ಕಡಲಿಗೆ' ಕವನ ಯಶಸ್ವಿಯಾಗಿದೆ.

---

೧. ಹಂಪನಾಗರಾಜಯ್ಯ (ಪ್ರಧಾನ ಸಂ.), ಶ್ರೀ ಉತ್ಸವ, ೧೯೮೬, ಪು. ೨೦೮.
೨. ಕುವೆಂಪು, ಪ್ರಕ. ಸಂಪುಟ ೧೨, ಸಂಚಿಕೆ ೩, ಪು. ೨.

**ಉರುಳುರುಳು ಹೊರಳು ಹೊರಳಾಡು ನೀಲಾಂಭೋದಿ**

**ಗುಡುಗಂತೆ ಗುಡುಗಾಡು ಸಿಡಿಲಂತೆ ಸಿಡಿಲಾಡು**

**ಭುವಿಯ ನದ್ದಿಸಲೆದ್ದು ಬಾರ ಅದ್ದದೆ ಬಾರ**

**ಶಾಂತನೋ ಸಮ್ಮುಲಾಸ ಭ್ರಾಂತನೋ ಲಯ ಭಾಸ...**[೧]

ಎನಿಸುತ್ತದೆ. ಅಲ್ಲಿ ಕೇಳಿಬರುವ ಭೋರ್ಗರೆತ ಅದರ ಹದಿನಾಲ್ಕು ರತ್ನಗಳನ್ನು ಸುರರು ಕಸಿದುಕೊಂಡುದಕ್ಕೆ ನರಳಿದಂತೆ ತೋರುತ್ತದೆ. ಆದಿಕಾಲದಿಂದಲೂ ಜಗತ್ತಿನ ಅವಿಭಾಜ್ಯ ಅಂಗವಾಗಿರುವ ಅನೇಕ ಸಾಮ್ರಾಜ್ಯಗಳನ್ನು, ಸಂಸ್ಕೃತಿಗಳನ್ನು ಈ ಕಡಲು ಕಂಡಿವೆ.

**ನಿನ್ನೊಳಗೆ ಜೀವಾಳಿ, ಸಸ್ಯಾಳಿ, ರತ್ನಾಳಿ ಇದೆ**

**ಧರೆಯೊಳಾವಾವ ಸಚರಾಚರ ಸೃಷ್ಟಿ ಇದೆ ಯದರ**

**ಪ್ರತಿಸೃಷ್ಟಿ ನಿನ್ನೊಳಿದೆ....**[೨]

ಎಂದು ಅದರ ವೈಶಿಷ್ಟ್ಯವನ್ನು ಗುರುತಿಸುತ್ತಾರೆ. ಕಡಲು ಎಂದರೇನು ಅದು ಹೇಗಿದೆ ಎಂಬುದರ ವಿವರಣೆಯನ್ನು ನೀಡುತ್ತಾರೆ. ಸಾಗರವನ್ನೇ ಕಾಣದ ಸಾಮಾನ್ಯ ಜನರಲ್ಲಿ ಆ ಪ್ರದೇಶ ಆಸಕ್ತಿಯನ್ನು ಮೂಡಿಸುತ್ತದೆ.

ಕಲ್ಬುರ್ಗಿಯಲ್ಲಿ ನಡೆದ ೩೩ ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಉತ್ತಂಗಿ ಚನ್ನಪ್ಪನವರು ಕಲ್ಬುರ್ಗಿಯನ್ನು ಕುರಿತಂತೆ "ಇಂದಿನ ಕನ್ನಡ ನಾಡನ್ನೊಳಗೊಂಡ ಪ್ರಾಚೀನತಮವಾದ ದಕ್ಷಿಣದ ತಪ್ಪಲು ನಿಸರ್ಗ ಸೌಂದರ್ಯದ ನೆಲೆವೀಡಾಗಿದೆ. ಪೂರ್ವ ಪಶ್ಚಿಮ ಘಟ್ಟಗಳ ನಡುವಲ್ಲಿ ವಿಸ್ತೀರ್ಣವಾಧ ಒಂದು ಬಯಲು ಕಂಗೊಳಿಸುತ್ತದೆ. ಇದೇ ಇಲ್ಲಿ ನಿಸರ್ಗ ಸೌಂದರ್ಯ"[೩] ಎಂದು ಪ್ರಸ್ತಾಪಿಸಿ ಅನುಪಮವಾದ ಅನುಭವ ಮಂಟಪದ ನಿರ್ಮಾಣದ ಈ ಸ್ಥಳದ ಸಮೀಪದಲ್ಲೇ ಸ್ಥಾಪಿತವಾಗುವುದಕ್ಕೆ ಬಹುಶಃ ಇದೇ ನಿಸರ್ಗ ಸೌಂದರ್ಯ ಪ್ರೇರೇಪಿಸಿತ್ತೇನೋ ಎಂಬ ಭಾವನೆಯನ್ನು ಉಂಟು ಮಾಡುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ಕರ್ನಾಟಕದ ಅಪಾರವಾದ ಈ ಬಯಲಸೀಮೆಯ ಚೆಲುವನ್ನು ಅವರು ಮನಸಾರೆ ಮೆಚ್ಚಿಕೊಂಡು, ಕಲ್ಬುರ್ಗಿಯ ನೆಲೆಗಟ್ಟಿನ ಮೇಲೆ ನಿಂತುಕೊಂಡು ಇಂದಿಗೂ ಅದನ್ನು ಮನದಣಿಯೇ ನಿರೀಕ್ಷಿಸಬಹುದು. ವೀರಶೈವ ವಚನ ಸಾಹಿತ್ಯದಲ್ಲಿ ಕಂಡುಬರುವ ಬಯಲು, ನಿರ್ವಯಲು, ಶೂನ್ಯ, ನಿಶೂನ್ಯ ಮುಂತಾದ ಶಬ್ದಗಳು ಈ ನಿಸರ್ಗ ಸೌಂದರ್ಯದ

---

೧. ಗೋವಿಂದ ಪೈ, ಪ್ರ.ಕ. ಸಂಪುಟ ೨೮, ಸಂಚಿಕೆ ೨, ಪು. ೨.
೨. ಗೋವಿಂದ ಪೈ, ಪ್ರ.ಕ. ಸಂಪುಟ ೨೮, ಸಂಚಿಕೆ ೨, ಪು. ೪.
೩. ಸಂಪಾದಕೀಯ, ಪ್ರ.ಕ., ಸಂಪುಟ ೩೦, ಸಂಚಿಕೆ ೪, ಪು. ೧೨೮.

ಪರಿಣಾಮವನ್ನು ಸಾರುತ್ತಿವೆ ಎಂದು ಅಭಿಪ್ರಾಯಪಡುತ್ತಾರೆ. ಪ್ರಬುದ್ಧ ಕರ್ನಾಟಕ ಇಂತಹ ವಿಷಯಗಳಿಗೆ ನೀಡಿರುವ ಆದ್ಯತೆ, ನಾಡಿನ ವಿವಿಧ ಪ್ರದೇಶಗಳ ಸೌಂದರ್ಯದ ವಿಶಿಷ್ಟತೆಯನ್ನು ಕನ್ನಡಿಗರಿಗೆ ನೀಡಬೇಕೆಂಬ ಅದರ ಆಶಯವನ್ನು ಪ್ರತಿಬಿಂಬಿಸುತ್ತದೆ. ಪ್ರಬುದ್ಧ ಕರ್ಣಾಟಕದಲ್ಲಿ ಕಂಡುಬರುವ ಇಂತಹ ವಿವರಣೆಗಳು ಭೌಗೋಳಿಕವಾಗಿ ಭಿನ್ನವಾಗಿದ್ದ ಕರ್ನಾಟಕದ ವಿವಿಧ ಭಾಗಗಳ ಜನರಲ್ಲಿ ಪರಸ್ಪರ ಆಸಕ್ತಿ ಹುಟ್ಟಿಸುವುದಕ್ಕೆ ಸಹಕಾರಿಯಾಗಿದೆ.

**ಕನ್ನಡ ನಾಡಿನ ಶಿಲ್ಪ ಕಲೆ**

ರಾಜಕೀಯ ಕಾರಣಗಳಿಂದಾಗಿ ಕನ್ನಡ ನಾಡು ಹರಿದು ಹಂಚಿ ಹೋಗಿದ್ದರೂ ಕನ್ನಡ ನಾಡಿನ ಮನಸ್ಸುಗಳು ಒಂದಾಗಿದ್ದವು. ಇಲ್ಲಿನ ಹಲವು ಅರಸು ಮನೆತನಗಳವರ ಆಸೆಯ ಫಲವಾಗಿ ಹಲವಾರು ಪಟ್ಟಣಗಳು ವೈಭವವನ್ನು ಮೈ ತುಂಬಿಕೊಂಡು ಸತ್ವಯುತವಾಗಿ ಬೆಳೆದು ನಿಂತಿದ್ದಷ್ಟೇ ಅಲ್ಲದೆ ತಮ್ಮ ಶಿಲ್ಪಕಲೆ, ವೈಭವ, ಸಂಪತ್ತು, ಸಮೃದ್ಧಿ ಇವುಗಳಿಗೆ ಹೆಸರುವಾಸಿಯಾಗಿದ್ದವು. ಇಲ್ಲಿ ಬಾಳಿ ಹೋದ ಶಾತವಾಹನರು, ಕದಂಬರು, ಚಾಲುಕ್ಯರು, ಹೊಯ್ಸಳರು, ಗಂಗರು, ಚೋಳರು, ವಿಜಯನಗರದ ಅರಸರು ಇವರೆಲ್ಲರ ಅದ್ಭುತವಾದ ವಾಸ್ತುಶಿಲ್ಪದ ಮಾದರಿಗಳು ಕನ್ನಡ ನಾಡಿನ ಹಲವಾರು ಸ್ಥಳಗಳಲ್ಲಿ ಪ್ರತಿಬಿಂಬಿಸುತ್ತಿವೆ. ಆದರೆ ಕಾಲಕ್ರಮೇಣ ಶತ್ರುಗಳ ದಾಳಿಗಳಿಂದಲೋ, ಕಾಲನ ಹಾವಳಿಯಿಂದಲೋ ಶಿಥಿಲಾವಸ್ಥೆಯನ್ನು ಮುಟ್ಟಿದ ಇವುಗಳು ಒಂದಾನೊಂದು ಕಾಲದ ತಮ್ಮ ವೈಭವದ ಪಳಿಯುಳಿಕೆಗಳನ್ನು ಪ್ರದರ್ಶಿಸುತ್ತಾ ಹಾಳು ಪಟ್ಟಣಗಳಾಗಿ ಉಳಿದು ನಿಂತಿವೆ. ಅವುಗಳ ಇತಿಹಾಸವನ್ನು ಅರಿಯದೆ ಕನ್ನಡ ನಾಡು ಹಿಂದೊಮ್ಮೆ ಇಂತಹ ಪಟ್ಟಣಗಳಿಗೆ ನೆಲೆಯಾಗಿತ್ತು ಎಂಬುದನ್ನು ಮನಸ್ಸಿಗೆ ತಂದುಕೊಳ್ಳದೆ, ಕೀಳರಿಮೆಯಿಂದ ಬಾಳುತ್ತಿದ್ದ ಕನ್ನಡಿಗರಿಗೆ ಆತ್ಮವಿಶ್ವಾಸವನ್ನು ತುಂಬುವಂತಹ ಪ್ರದೇಶಗಳ ಪರಿಚಯವನ್ನು ಮಾಡಿಕೊಡುವ ಪ್ರಯತ್ನವನ್ನು ಪ್ರಬುದ್ಧ ಕರ್ನಾಟಕ ಮಾಡಿದೆ. ಬಳ್ಳಿಗಾವೆ, ಬೇಲೂರು, ತುಮಕೂರು, ತಲಕಾಡು, ಶ್ರೀರಂಗಪಟ್ಟಣ, ಬನವಾಸಿ, ಗೊಮ್ಮಟಗಿರಿ, ಸೋಮನಾಥಪುರ ಇಂತಹ ಹತ್ತು ಹಲವಾರು ಪ್ರದೇಶಗಳಲ್ಲಿ ಕನ್ನಡ ನಾಡಿನ ಅನೇಕ ಸಂಪ್ರದಾಯಗಳಿಗೆ ಸೇರಿದ ಶಿಲ್ಪಕಲೆಗಳು ಅರಳಿ ನಿಂತಿವೆ. ಇಂತಹ ಅದ್ಭುತವಾದ ಶಿಲ್ಪಗಳ ಕಡೆಗೆ ಗಮನ ಸೆಳೆಯಲು ಪ್ರಬುದ್ಧ ಕರ್ಣಾಟಕವು ಬಿ.ವೆಂಕೋಬರಾವ್ ಅವರ "ಮೈಸೂರು ದೇಶದ ವಾಸ್ತುಶಿಲ್ಪ" ಎಂಬ ಲೇಖನವನ್ನು ಒಂಬತ್ತು ಸಂಚಿಕೆಗಳಲ್ಲಿ ಪ್ರಕಟಿಸಿದೆ. ಈ ಲೇಖನಗಳು ಕರ್ನಾಟಕದ ವಿವಿಧ ಪ್ರದೇಶಗಳಲ್ಲಿರುವ ಶಿಲ್ಪ ಕಲೆಗಳನ್ನು ಅವುಗಳ ಮಾದರಿಯನ್ನು ಅವು ಯಾವ ರೀತಿಗೆ ಸೇರಿದ್ದವೆಂಬುದನ್ನು ಗುರುತಿಸಿ ಅದರಲ್ಲೂ ಕರ್ನಾಟಕದ ವೈಶಿಷ್ಟ್ಯವನ್ನು ಬಿಂಬಿಸುವ ಹೊಯ್ಸಳ ರೀತಿಯ ವಾಸ್ತುಶಿಲ್ಪದ ಬಗ್ಗೆ

ಗಮನ ಸೆಳೆಯುತ್ತದೆ ಹಾಗೂ ಕರ್ನಾಟಕದಲ್ಲಿ ಮಾತ್ರ ಕಂಡುಬರುವ ಮತ್ತು ಯಾವ ರೀತಿಯಿಂದಲೂ ಬೆರಕೆಯಾಗದ ಶುದ್ಧ ಭಾರತೀಯ ಕಲೆಯಾಗಿರುವ ಹೊಯ್ಸಳರ ವಾಸ್ತು ರೀತಿಯ ಅಸಾಧಾರಣ ಲಕ್ಷಣಗಳ ಬಗ್ಗೆ ಪರಿಚಯ ಮಾಡಿಕೊಟ್ಟಿದೆ. ಅಲ್ಲದೆ ಇಂತಹ ಲೇಖನಗಳನ್ನು ಬರೆಯುತ್ತಿರುವುದರ ಉದ್ದೇಶವೇನೆಂಬುದರ ಸೂಚನೆಯೂ ಅಲ್ಲಲ್ಲಿ ದೊರೆಯುತ್ತದೆ. ಚಾಲುಕ್ಯರಿಂದ ಮೊದಲು ಸ್ವತಂತ್ರಗೊಂಡ ಹೊಯ್ಸಳ ದೊರೆಯೆಂದರೆ ವಿಷ್ಣುವರ್ಧನ. ಆತ ಕಟ್ಟಿಸಿದ ಬೇಲೂರು ಚನ್ನಕೇಶವನ ದೇವಾಲಯ ತನ್ನ ವೈಭವದ ಕಾರಣದಿಂದ ನಮ್ಮ ನಾಡಿನಲ್ಲಷ್ಟೇ ಅಲ್ಲದೆ ವಿದೇಶಿಯರ ಗಮನವನ್ನೂ ಸೆಳೆದಿದೆ. ಭವ್ಯವಾದ ಕಟ್ಟಡ, ಮನೋಹರವಾದ ಶಿಲ್ಪ. ವಿಧವಿಧವಾದ ಚಿತ್ರಕೆಲಸಗಳು, ಸೂಕ್ಷ್ಮವಾದ ಗಹನವಾದ ಕೆತ್ತನೆಯಿಂದ ಕೂಡಿದ ಸುಂದರವಾದ ಕಂಬಗಳು, ಚಿತ್ರ ಪಟಿಕೆಗಳು, ಒಂದರಂತೆ ಬರುವ ಪಟ್ಟಿಗಳಲ್ಲಿ ಸಾಲು ಸಾಲಾಗಿ ಕಡೆದಿರುವ ಚಿತ್ರ ಕೆಲಸ, ಹಕ್ಕಿಗಳು, ಪ್ರಾಣಿಗಳು ಅಥವಾ ನರ್ತಕ ನರ್ತಕಿಯರು ಎಲ್ಲವೂ ಜೀವಕಳೆಯಿಂದ ತುಂಬಿ ಅನೇಕ ರೀತಿಯಲ್ಲಿ ಚಿತ್ರಿತವಾಗಿ ಆಶ್ಚರ್ಯವನ್ನುಂಟುಮಾಡುತ್ತವೆ. ಪ್ರಪಂಚದಲ್ಲಿರುವ ನಾನಾ ಬಗೆಯ ವಾಸ್ತುಶಿಲ್ಪದ ರೀತಿಯನ್ನು ಪರಸ್ಪರ ಹೋಲಿಸಿ ವ್ಯಾಸಂಗ ಮಾಡಿರುವ ವಿದ್ವಾಂಸರು ಈ ಹೊಯಿಸಳ ರೀತಿಯು ಸ್ವತಂತ್ರವಾಗಿದ್ದು ಯಾವುದರಿಂದಲೂ ಪ್ರಭಾವಿತವಾಗದೆ ಶುದ್ಧವಾಗಿರು-ವುದನ್ನೂ ಹಾಗೂ ಅದರಲ್ಲಿರುವ ನಯಗಾರಿಕೆಯನ್ನು ಕಲಾವೈಭವವನ್ನು ಕಂಡು ಹೊಗಳಿದ್ದಾರೆ. ಇಂದಿಗೂ ನಾವು ಇಂತಹ ಶಿಲ್ಪಕಲೆ ನಮ್ಮ ನಾಡನಲ್ಲೇ ಇದೆ. ಇದು ನಮ್ಮದು ಎಂದು ಹೆಮ್ಮೆಯಿಂದ ಹೇಳಿಕೊಳ್ಳಲು ಅನುವು ಮಾಡಿಕೊಟ್ಟಿದೆ. ಬಿ.ವೆಂಕೋಬರಾವ್ ಅವರು ಹೇಳುವಂತೆ "ಪ್ರಪಂಚದಲ್ಲೆಲ್ಲಾ ಹೀಗೆ ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಿಕೊಟ್ಟಿರುವ ಇಂಥ ವಸ್ತುಗಳನ್ನು ದೇಶದಲ್ಲಿ ಕಿಂಚಿತ್ತಾದರೂ ಅಭಿಮಾನವಿರತಕ್ಕ ಪ್ರತಿಯೊಬ್ಬನೂ ಅಲಕ್ಷ್ಯ ಮಾಡದೆ ಅವು ಉಳಿಯವಂತೆಯೂ ಅವುಗಳಲ್ಲಿ ನಮ್ಮ ಜನರೆಲ್ಲರೂ ಆದರವನ್ನು ವಹಿಸುವಂತೆಯೂ ಈ ಕಲೆ ಸಂಕರವಾಗದಂತೆಯೂ ಶುದ್ಧವಾಗಿ ಉಳಿಯುವಂತೆ ಮಾಡುವುದು ಕರ್ತವ್ಯವಾಗಿದೆ.[೧] ಯಾವುದೇ ದೇಶದ ನಾಗರೀಕತೆಗೆ ಅದರ ಸುಖ ಸಂಪತ್ತುಗಳಿಗೆ ಈ ದೇಶದ ಕುಶಲಕಲಾ ಪರಿಸ್ಥಿತಿಯನ್ನು ಹೆಗ್ಗುರುತಾಗಿ ಇಟ್ಟುಕೊಳ್ಳಬಹುದು. ಏಕೆಂದರೆ ಇವು ಬೆಳೆಯಬೇಕಾದರೆ ಆ ನಾಡಿನ ಜನ ಸ್ವತಂತ್ರವಾಗಿದ್ದು ಕುಶಲತೆ ಅವಕಾಶ ಐಶ್ವರ್ಯ ಮುಂತಾದವು ಯಥೇಚ್ಛವಾಗಿದ್ದಾಗ ಮಾತ್ರ ಇದು ಸಾಧ್ಯವಾಗುತ್ತದೆ. ನಮ್ಮ ಕನ್ನಡನಾಡಿನ ಕುಶಲ ಕಲೆಯನ್ನು ಪರಿಗಣಿಸಿದರೆ ಅವು ದೇಶದಲ್ಲಿಯೇ ವಿಶೇಷವಾಗಿ ತೋರುತ್ತದೆ. ಇಂತಹ ಕುಶಲ ಕಲೆಗಳ ಬಗ್ಗೆ ನಾವು ಅಭಿಮಾನ ತಳೆಯಬೇಕು.

---

೧. ಬಿ.ವೆಂಕೋಬರಾವ್, ಪ್ರಕ. ಸಂ. ೬, ಸಂಚಿಕೆ ೩, ಪು. ೮೭.

"ಏಕೆಂದರೆ ನಮ್ಮ ಮೈಸೂರು ದೇಶದಲ್ಲಿ ಇಂದಿಗೂ ದೃಢವಾಗಿದ್ದು ಪ್ರಾಚೀನ ಶಿಲ್ಪಗಳ ವಾಸ್ತು ವಿದ್ಯಾಕುಶಲತೆಯನ್ನು ಉದ್ದೇಶಿಸುತ್ತಿರುವ ಸುಂದರವಾದ ಪುರಾತನ ಗುಡಿಗೋಪುರಗಳಂತಹ ಕಟ್ಟಡಗಳು ಅಖಂಡ ಭರತ ಖಂಡದೊಳಗಾಗಿಯೇ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು."[೧] ಆದರೆ ಇಂತಹ ಪ್ರದೇಶಗಳು ತಮ್ಮ ವೈಭವವನ್ನು ಉಳಿಸಿಕೊಳ್ಳಲಾರದೆ ಖಿಲವಾದಾಗ, ಅವುಗಳ ಶುಷ್ಕವಾದ ಶಿಲೆಯಾಗಿರದೆ ಅವು ಕಲೆಯ ಬಲೆಯಗಳಂತೆ ತೋರುತ್ತದೆ. ನಯನ ಮನೋಹರವಾಗಿ ಗಮನ ಸೆಳೆಯುತ್ತದೆ. ಗಂಟೆಯ ದನಿಗಳಿಲ್ಲದ ಜಾಗಟೆಯೇ ಶಬ್ದಗಳಿಲ್ಲದ ಇಂತಹ ಸ್ಥಳಗಳು ಯಾವುದೋ ಹಾಳು ಬಿದ್ದ ದೇಗುಲವಲ್ಲ. ಕನ್ನಡ ನಾಡಿನ ವೈಭವವನ್ನು, ಸಂಸ್ಕೃತಿಯನ್ನು ದರ್ಶಿಸುವ ದರ್ಪಣಗಳು. ಹಾಗಾಗಿಯೇ ಕವಿ ಕುವೆಂಪು ಅವರು ಸೋಮನಾಥಪುರದಲ್ಲಿರುವ ದೇವಾಲಯವನ್ನು ಕಂಡಾಗ ಬಾಗಿಲಲ್ಲೆ ಕೈ ಮುಗಿದು ಒಳಗೆ ಬರುವಂತೆ ಕೇಳಿಕೊಳ್ಳುತ್ತಾರೆ. "ಕಂಬನಿಯ ಮಾಲೆಯನು ಎದೆಯ ಬಟ್ಟಲಿಟ್ಟು ಧನ್ಯತೆಯ ಕುಸುಮಗಳ ಅರ್ಪಿಸಿಲ್ಲಿ" ಎಂದು ಕೋರಿಕೊಳ್ಳುತ್ತಾರೆ. ನಮ್ಮ ನಾಡಿನಲ್ಲಿರುವ ಇಂತಹ ಸ್ಥಳಗಳು ಕನ್ನಡಿಗರ ಎದೆಯಲ್ಲಿ ಉಕ್ಕಿಸುವ ಭಾವನೆಗಳನ್ನೇ ಈ ಸಾಲುಗಳು ಸಾರುತ್ತವೆ.

**ಕನ್ನಡನಾಡಿನ ಐತಿಹಾಸಿಕ ಸ್ಥಳಗಳ ಪರಿಚಯ ಹಾಗೂ ಉದ್ದೇಶ**

ಕನ್ನಡ ನಾಡಿನ ಭವ್ಯತೆಯನ್ನು ಸಾರುವ ಪ್ರದೇಶಗಳಲ್ಲಿ ಬಳ್ಳಿಗಾವೆಯೂ ಒಂದು. ಒಂದು ಕಾಲದಲ್ಲಿ ಕರ್ನಾಟಕದ ರಾಜಧಾನಿಯಾಗಿದ್ದು ಈಗ ಶಿವಮೊಗ್ಗ ತಾಲ್ಲೂಕು ಶಿರಾಳ ಕೊಪ್ಪದ ಬಳಿ 'ಹಳೆಯ ಹಳ್ಳಿ'ಯಾಗಿ ಉಳಿದಿರುವ ಗ್ರಾಮ. ಎಚ್.ತಿಪ್ಪಯ್ಯನವರಿಂದ ರಚಿತವಾಗಿರುವ 'ಬೆಳಗಾವಿ' ಕವನ ಆ ಸ್ಥಳದ ಬಗ್ಗೆ ಕುತೂಹಲ ಮೂಡಿಸುತ್ತದೆ. ಬೆಳಗಾವಿ ಅಥವಾ ಬಳ್ಳಿಗಾವೆ ಅನೇಕ ಶಾಸನಗಳಲ್ಲಿ ಉಕ್ತವಾಗಿರುವ ಬಹು ಪ್ರಸಿದ್ಧವಾದ ವಿದ್ಯಾಕೇಂದ್ರ. ಪ್ರಾಚೀನ ಕರ್ನಾಟಕದಲ್ಲಿ ಬಹುಮುಖ್ಯ ವಿದ್ಯಾಕೇಂದ್ರವಾಗಿ ಬಹುಕಾಲ ತನ್ನ ಕೀರ್ತಿಯನ್ನು ಮೆರೆದಿದ್ದ ಸ್ಥಳ. ಇದು ಅನೇಕ ಶಾಸ್ತ್ರಗಳ ಕೇಂದ್ರ ಬಿಂದುವಾಗಿದ್ದುದು ಮಾತ್ರವಲ್ಲದೆ ಮಾನವ ಸೇವೆಗೆ ಮೀಸಲಾಗಿದ್ದ ಸ್ಥಳವಾಗಿತ್ತು. "ದೀನರಿಗೂ ಅನಾಥರಿಗೂ ಕುಂಟ ಕುರುಡ ಹೆಳವರಿಗೂ ಅಲ್ಲಿ ಆಶ್ರಯ ಲಭಿಸುತ್ತಿತ್ತು. ಇನ್ನೊಂದು ಮುಖ್ಯವಾದ ಅಂಶವೆಂದರೆ ರೋಗದಿಂದ ನರಳುತ್ತಿದ್ದವರಿಗೆ ಅಲ್ಲಿ ಚಿಕಿತ್ಸೆ ದೊರೆಯುತ್ತಿತ್ತೆಂಬ ಮಾತು"[೨] ಹೀಗೆ ಮಾನವತೆಯ ನೆಲಗಟ್ಟಿನ ಮೇಲೆ ನಿರ್ಮಾಣಗೊಂಡಿದ್ದ ಕೇಂದ್ರ. ಇಂತಹ ಕೇಂದ್ರವನ್ನು ಕವಿ ಸಂದರ್ಶಿಸಿದಾಗ ಅವರ ಮನವು

---

೧. ಬಿ.ವೆಂಕೋಬರಾವ್, ಪ್ರ.ಕ. ಸಂ. ೫, ಸಂಚಿಕೆ ೧, ಪು. ೭.
೨. ಎಚ್.ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೬೮, ಪು. ೨೨೪.

**ಕರ್ಣಾಟಕ ಸಾಮ್ರಾಜ್ಯದೈಸಿರಿಯ ಶ್ರೀ ನಿಲಯೆ**
**ಸಕಲ ವಿದ್ಯಾವಾಸೆ ಸರ್ವಸಂಪದ್‌ಭರಿತೆ**
**ಸುಗುಣಗಣ ಸದ್ಮೆ – ಎಂದನಿಪ ಔನ್ನತ್ಯದಿಂ**
**ಬೆಳಗಿರ್ದ ಬೆಳಗಾವಿ – ಕನ್ನಡದ ಸಿರಿಯಕರು**
**ವಾಗಿರ್ದ ಓ ವೃದ್ಧ ತಾಪಸಿಯೆ ನಿನಗೇಕೆ**
**ಇಂದು ಈ ವೈಧವ್ಯ ವೇದನೆಯು .....**[೧] ಎಂದು ಪರಿತಪಿಸುತ್ತದೆ. ಆ ಸ್ಥಳದ ಬಗ್ಗೆ ಅದರ ವೈಭವದ ಬಗ್ಗೆ ತಿಳಿದುಕೊಳ್ಳಲು ಬಯಸುತ್ತದೆ. ಹಾಗಾಗಿಯೇ ಅಲ್ಲಿನ ದೇಗುಲದಲ್ಲಿ ಭವ್ಯವಾದ ಬಸವನನ್ನು ಕಂಡಾಗ

**ಹಿಂದಿನಾ ವೈಭವದ ಸಂಸ್ಕೃತಿಯ ಭಾರದಿಂ**
**ಬಿರಿಯುತಿಹೆಯೇನು? ಒಂದೆರಡು ಸವಿನೆನಪುಗಳ**
**ನೊರೆಯಲಾರೆಯ ನೀನು..........**[೨] ಎಂದು ಬೇಡಿಕೊಳ್ಳುತ್ತಾರೆ. ಬಸವ ನಿಧಾನವಾಗಿ ತನ್ನ ಕಥೆ ಹೇಳಲು ತೊಡಗುತ್ತದೆ. ನಾನು ಈಗ ಇರುವ ಈ ಪಾಳುದೇಗುಲವು ಹಿಂದೆ ಹೀಗೆ ಇರಲಿಲ್ಲ. ಇದರ ವೈಭವವನ್ನು ಇದರ ವರ್ಣನೆಯನ್ನು ಕೇಳಿಯೇ ಶತ್ರುರಾಜರು ಬಸವಳಿದು ಹೋಗುತ್ತಿದ್ದರು ಎಂಬುದನ್ನು ವಿವರಿಸುವುದರೊಡನೆ ತನ್ನ ಹಾಗೂ ರಾಜನ ಕುಟುಂಬದವರೊಡನಿದ್ದ ಮಧುರ ಬಾಂಧವ್ಯದ ಬಗ್ಗೆ ಹೇಳಿಕೊಳ್ಳುತ್ತದೆ ಅಂದಿನ ವೈಭವವನ್ನು ನೆನಪಿಸಿಕೊಳ್ಳುತ್ತ

**ಅಂದಿನಾ ದಿನಗಳನು ನೆನೆದು ಚಪ್ಪರಿಸುವೆನು ನಿಂದಿಹೆನು**
**ಮುಂಬರುವ ದಿನಗಳನು ನೆಮ್ಮಿ, ಓ ಕುವರರಿರಾ**
**ನಿಮ್ಮೆದೆಯ ಕನ್ನಡದ ಶಕ್ತಿ ಮಿಂಚಂ ನೆಚ್ಚಿ"**[೩]

ಎಂದು, ಕನ್ನಡಿಗರ ಮೇಲಿಟ್ಟಿರುವ ನಂಬಿಕೆಯನ್ನು ತಾನು ಹಿಂದಿನ ವೈಭವವನ್ನು ಮತ್ತೆ ಗಳಿಸಿಕೊಳ್ಳಬಲ್ಲೆ ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತದೆ. ಅದನ್ನು ಹೇಳು ಹೇಳುತ್ತಲೇ ಅದರ ನೆನಪಿನಲ್ಲೇ ಮೌನವಾಗಿ ನಿಂತುಬಿಡುತ್ತದೆ. ಕನ್ನಡದ ಕುವರರು ಮುಂದಿನ ದಿನಗಳಲ್ಲಿ ತನಗೆ ಹಿಂದಿನಾ ವೈಭವವನ್ನು ಮರಳಿ ದೊರಕಿಸಿ ಕೊಡುವರೆಂಬ ನಂಬಿಕೆ ಆ ಬಸವನದ್ದು.

ಕುವೆಂಪು ಅವರ 'ಶ್ರೀ ಗೊಮ್ಮಟ ಮಹಾಮಸ್ತಾಭಿಷೇಕ ಪ್ರಗಾಥ' ಎಂಬ ಕವನ ವಿಶ್ವವಿಖ್ಯಾತ ಶ್ರವಣ ಬೆಳಗೊಳದ ಗೊಮ್ಮಟನ ಮಹಾಮಸ್ತಾಭಿಷೇಕ ಕುರಿತ

---

೧. ಎಚ್.ತಿಪ್ಪಯ್ಯ, ಪ್ರ.ಕ. ಸಂ. ೩೪, ಸಂಚಿಕೆ ೧, ಪು. ೬೬.
೨. ಎಚ್.ತಿಪ್ಪಯ್ಯ, ಪ್ರ.ಕ. ಸಂ. ೩೪, ಸಂಚಿಕೆ ೧, ಪು. ೬೮.
೩. ಎಚ್.ತಿಪ್ಪಯ್ಯ, ಪ್ರ.ಕ. ಸಂ. ೩೪, ಸಂಚಿಕೆ ೧, ಪು. ೬೯.

ಕವನವಲ್ಲ. ಮೈಸೂರಿಗೆ ಸುಮಾರು ೧೫ ಮೈಲಿ ದೂರದಲ್ಲಿರುವ ಗೊಮ್ಮಟ-ಗಿರಿಯಲ್ಲಿ ಬಹುಕಾಲದಿಂದಲೂ ಅರಣ್ಯದಲ್ಲಿ ಅಜ್ಞಾತವಾಸದಲ್ಲಿದ್ದ ಗೊಮ್ಮಟನ ಮಸ್ತಾಭಿಷೇಕದ ಕವಿತೆ. ಈ ಸ್ಥಳದ ಜೀರ್ಣೋದ್ಧಾರವಾದ ಬಳಿಕ ನಡೆದ ಪ್ರಥಮ ಮಹಾಮಸ್ತಾಭಿಷೇಕದ ಸಂದರ್ಭದಲ್ಲಿ ಭೇಟಿ ನೀಡಿದ ಕವಿ ಗೊಮ್ಮಟನನ್ನು ಈ ಲೋಕಕ್ಕೆ ಆಹ್ವಾನಿಸುತ್ತಾರೆ. ಶತ ಶತಮಾನದ ಮೌನಮುದ್ರೆಯನ್ನು ಒಡೆದು ಅನುಗ್ರಹಿಸಲು ಉದ್ಧರಿಸಲು ಕೇಳಿಕೊಳ್ಳುತ್ತಾರೆ. ಅವರ ಮನಸ್ಸು ಕನ್ನಡ ನಾಡಿನ ಮತ್ತೊಂದು ಜೈನ ಕೇಂದ್ರವಾದ ಶ್ರವಣ ಬೆಳಗೊಳದಲ್ಲಿ "ಕನ್ನಡ ನಾಡಿಗೆ ಕಣ್ಣಾಗಲ್ ಪೆರ್ಮೆಯ ಪೆರ್ ಬಂಡಾಯ ಕಲ್‌ಕಲ್ಪಿ" ರೂಪುಗೊಂಡ ಸನ್ನಿವೇಶವನ್ನು ನೆನೆಯುತ್ತದೆ.

**ಕನ್ನಡ ದಾದಿಯ ಕಬ್ಬಿಗನಾ ಪಂಪಂ**
**ತನ್ನಾದಿಯ ಪುರಾಣದೊಳೊರೆದನು ನಿನ್ನಧ್ಯಾತ್ಮದ ಪೆಂಪಂ**
**ಧೈರ್ಯದ ಔದಾರ್ಯದ ಮೈತ್ರಿಯ ಮೇಣ್ ತ್ಯಾಗದ ಗುಣ್ಪಂ**
**ಆದನಾಲಿಸಿದಾ ಕವಿಕಲಿ ಚಾವುಂಡೇಶಂ**[೧]........

ಗೊಮ್ಮಟನ ಭವ್ಯಮೂರ್ತಿಯನ್ನು ನಿರ್ಮಾಣ ಮಾಡಬೇಕೆಂದು ಯೋಚಿಸು-ತ್ತಿರುವಾಗಲೇ

**ಕಂಡನ್ ಕಲ್ವೆಟ್ಟಿನ ಕೋಡಂ**
**ಬಯ್ಗಿನ ಬಾನ್ಗಿದಿರೆದ್ದುದು ಆ ಶ್ರವಣನ ಗಿರಿಚೂಡಂ**
**ಭೀಮಂ, ರುದ್ರಂ ಆಕಾಶೋನ್ನತ ಗೂಢಂ....**[೨]

ನೋಡುತ್ತಾ ನೋಡುತ್ತಾ ಅಲ್ಲಿಯೇ ಗೊಮ್ಮಟನ ಮೂರ್ತಿಯನ್ನು ಕೆತ್ತಿಸಬೇಕೆಂದು ನಿರ್ಧಾರ ಮಾಡಿಕೊಂಡನು ಬಾನಿನವರೆಗೆ ಎತ್ತರಕ್ಕೆ ಬೆಳೆದಿದ್ದ ಭವ್ಯಭೀಕರ ಕಲ್ಲನ್ನು ನೋಡುತ್ತಿದ್ದಂತೆ ಆತನ ಮನದಲ್ಲಿ ಸುಂದರ ಮೂರ್ತಿಯ ಚಿತ್ರವೊಂದು ಸುಳಿದು ಹೋಯಿತು.

**"ಕೊರೆಯುವ ವೋಲ್, ಕರೆಯುವ ವೋಲ್ ನೋಡಿದನಾ ಕಲ್‌ಗುಂಡನ್**
**ಕಾಣ್ಕೆಯೇ ಕಂಡರಿಸಿರದ ವೋಲ್ ಮೂಡಿದನಾ ಗೊಮಟೇಶಂ"**[೩]

ಗೊಮ್ಮಟನ ವಿಗ್ರಹದ ನಿರ್ಮಾಣದ ಹಿಂದೆ ಪಂಪನ ಆದಿಪುರಾಣದ ಪ್ರೇರಣೆಯನ್ನೂ ಕವಿಯಾದ ಕಲಿಯಾದ ಚಾವುಂಡರಾಯನ ಕಲ್ಪನಾ ಶಕ್ತಿ ಎಂತಹ ಸುಂದರ ವಿಗ್ರಹಕ್ಕೆ ಕಾರಣವಾಯಿತೆಂಬುದನ್ನು ವಿವರಿಸುವುದರ ಜೊತೆಗೆ ಇಂತಹ ಗೊಮ್ಮಟನ

---

೧. ಕುವೆಂಪು, ಪ್ರ.ಕ. ಸಂ. ೩೩, ಸಂಚಿಕೆ ೩, ಪು. ೨.
೨. ಕುವೆಂಪು, ಪ್ರ.ಕ. ಸಂ. ೩೩, ಸಂಚಿಕೆ ೩, ಪು. ೨.
೩. ಕುವೆಂಪು, ಪ್ರ.ಕ. ಸಂ. ೩೩, ಸಂಚಿಕೆ ೩, ಪು. ೨.

ವಿಗ್ರಹಗಳು ಕನ್ನಡ ನಾಡಿನ ಜನತೆಗೆ, ರೋಷ ದ್ವೇಷ ಅಹಂಕಾರ ಕೀರ್ತಿ ಲೋಭ ಇವುಗಳನ್ನು ತೊರೆದ ಬದುಕಿನ ಹಿರಿಯ ಮಟ್ಟವನ್ನು ಮುಟ್ಟಬೇಕು ಎಂಬ ಸಂದೇಶವನ್ನು ಬಿತ್ತುತ್ತಿರುವಂತೆ ಕಂಡುಬರುತ್ತದೆ. ಎಲ್ಲವನ್ನೂ ತೊರೆದು ನಿರ್ಲಿಪ್ತನಾಗಿ ನಿಂತಿರುವ ಗೊಮ್ಮಟನ ಇಂತಹ ತಾಣಗಳು ಕೂಡ ಕನ್ನಡಿಗರ ಭಾವನೆಗಳನ್ನು ಪ್ರಚೋದಿಸುವಲ್ಲಿ ಯಶಸ್ವಿಯಾಗುತ್ತವೆ. "ಈ ಗೊಮಟೇಶ್ವರ ಮೂರ್ತಿ ಶಿಲ್ಪಗಳಿರುವ ಕಡೆಗಳೆಲ್ಲ ಬಹು ಧಾರ್ಮಿಕ ಸಾಹಿತ್ಯ ಹುಟ್ಟಿದೆ. ಸ್ಥಳ ಪುರಾಣಗಳು ವರ್ಣಕ ಸಾಹಿತ್ಯ, ಸ್ತುತಿರೂಪ ಪದ್ಯಮಾಲೆ, ಜನಪದ ಹಾಡುಗಳು ಎಲ್ಲವೂ ಧರ್ಮ ಪ್ರಚೋದನೆಯಿಂದ ಹುಟ್ಟಿದ್ದವು".[೧] ಆಧುನಿಕ ಕನ್ನಡ ಸಾಹಿತ್ಯವನ್ನು ಗಮನಿಸಿದರೆ ಗೊಮ್ಮಟನು ಕುವೆಂಪು, ಡಿ.ವಿ.ಗುಂಡಪ್ಪ, ರಾಜರತ್ನಂ ಇವರುಗಳಿಗೆ ಸ್ಫೂರ್ತಿಯನ್ನು ನೀಡಿ ತಮ್ಮ ವಿಚಾರಧಾರೆಯನ್ನು ಹೊರಗೆಡವಲು ಸಹಕಾರಿಯಾಗಿದ್ದಾನೆ.

'ಬಾರ್ಕೂರು' ತುಳು ನಾಡಿನ ಪ್ರಸಿದ್ಧ ಸ್ಥಳ. ತುಳುನಾಡಿನ ಪ್ರಸಿದ್ಧ ದೊರೆ ಅಳುಪರ ರಾಜಧಾನಿಯಾಗಿದ್ದ ಸ್ಥಳ. ಹೊಯಿಸಳರ ಉಪರಾಜಧಾನಿಯಾಗಿದ್ದ ಇದು ವಿಜಯನಗರ ಅರಸರ ಕಾಲದ ಪ್ರಮುಖ ಪಟ್ಟಣ. ಕೆಳದಿ ನಾಯಕರ ಆಳ್ವಿಕೆಗೂ ಒಳಪಟ್ಟ ಪಟ್ಟಣ. ಈಗ ಇಲ್ಲಿ ಎರಡು ಕೋಟೆಗಳ ಅವಶೇಷಗಳು ಮಾತ್ರ ಕಾಣಸಿಗುತ್ತದೆ. ಇರುವ ಮೂರು ಜೈನಬಸದಿಗಳು ಒಂದಾನೊಂದು ಕಾಲದಲ್ಲಿ ಅಲ್ಲಿ ವಿಜೃಂಭಿಸಿದ್ದ ಜೈನ ಧರ್ಮಕ್ಕೆ ಸಾಕ್ಷಿಗಳಂತೆ ನಿಂತಿವೆ. ಪೇಜವಾರ ಸದಾಶಿವರಾವ್ ಅವರ 'ಲಕ್ಕಣ' ಕವನದಲ್ಲಿ ಈ ಲಕ್ಕಣನಿಗೆ ಆಶ್ರಯ ನೀಡಿದ್ದ ಬಾರ್ಕೂರಿನ ವರ್ಣನೆ ಇದೆ.

**"ತೌಳವ ವಿಭವದ ವಸವನುಟ್ಟು**
**ಬಿಂಕದಿ ನಿಂತಿದೆ ಬಾರ್ಕೂರು**
**ಭೂಪತಿ ಪಾಂಡ್ಯ ದಿಗಂಬರ ಜೈನರ**
**ಮಾತೆಯ ವಿಜಯದ ತವರೂರು**
**ನಾಡಿಗರೊಲುಮೆಯ ಸೊಗದೂರು**
**ಕಲಿಗಳಲಿ, ಕಲೆಗಳಲ್ಲಿ**
**ಕಾಂತಿಯ ಕಲಶವು ಬಾರ್ಕೂರು**
**ಶಿಲ್ಪದ ಹುಟ್ಟೂರು**[೨]

ಕಲಕಲ ನಾದದಿ ನಲಿಯುತಿಹ ಸೀತೆಯ ದಡದ ಮೇಲಿರುವ ಜಿನ ಚೈತ್ಯಾಲಯ, ಕಲ್ಲಿನಲ್ಲೇ ಕಾವ್ಯವನ್ನು ಕೆತ್ತಿದಂತೆ ಇರುವ ಮಂಟಪ, ಬಸದಿಗಳು,

೧. ಶಮನ, ಪ್ರಕ., ಸಂಪುಟ ೩೦, ಸಂಚಿಕೆ ೪, ಪು. ೮೨.
೨. ಪೇಜಾವರ ಸದಾಶಿವರಾವ್, ಪ್ರಕ. ಸಂಪುಟ ೧೪, ಸಂಚಿಕೆ –೪, ಪು. ೫–೬.

ಗುರುಮಠವು ಸ್ತಂಭಗಳು ಇವೆಲ್ಲವೂ ಒಂದಾನೊಂದು ಕಾಲದ ಗತವೈಭವವನ್ನು ಸಾರುತ್ತಾ ನಿಂತಿವೆ. 'ಗತವೈಭವಗಳ ಸವಿನೆನಪು ಭಾವನೆಯೂಟಕೆ ಸವಿ ತಿನಿಸು' ಆಗಿ ಮಾರ್ಪಟ್ಟಿದೆ. ಅದು ಹಿಂದೆ ಇದ್ದ ಚೆಲುವಾದ ಕನಸಿನಂತೆ ತೋರುತ್ತದೆ ಕಾಲದ ಕಡಲಿನ ತೆರೆಗಳ ಹೊಡತಕೆ ಸಿಲುಕಿದ ಈ ನಾಡು ಇಂದು ಸುಡುಗಾಡಾದಂತೆ ಕಾಣುತ್ತಿದೆ. ಹಾಗಾಗಿಯೇ ಕವಿಗೆ "ಇದು ತುಳು ನಾಡಿನ ಹಂಪೆ, ಈಗದು ಕೊಳೆ ಕೊಂಪೆ"ಯಂತೆ ಅನಿಸುತ್ತದೆ. ಇಂತಹ ನಾಡು ಕವಿಗಳ ಕೊರಗಿಗೆ ಕಲಿಗಳ ಮರುಕಕ್ಕೆ ಕಾರಣವಾಗುತ್ತದೆ. ಕನ್ನಡಿಗರಲ್ಲಿ ಕಿಚ್ಚುಹೆಚ್ಚುತ್ತದೆ.

'ತುಮಕೂರು' ಬೆಂಗಳೂರಿಗೆ ಸಮೀಪವಿರುವ ಪ್ರದೇಶ ಪುರಾಣ ಯುಗದಿಂದ ಪ್ರಸಿದ್ಧಿ ಪಡೆದಿರುವ ಈ ಪ್ರದೇಶದ ಬಗ್ಗೆ ಜನರಿಗೆ ಇರುವ ತಿಳುವಳಿಕೆ ಅತ್ಯಲ್ಪ. ಪುರಾಣ ಕಾಲದಿಂದ ಪ್ರಸಿದ್ಧಿ ಪಡೆದಿರುವ ಬಗ್ಗೆ ಇರುವ ಕಥೆಗಳು, ಕನ್ನಡ ಸಾಹಿತ್ಯ ಚರಿತ್ರೆ, ಶಾಸನ ಇವುಗಳೆಲ್ಲವನ್ನೂ ಅಭ್ಯಾಸ ಮಾಡಿ ಕನ್ನಡಿಗರಿಗೆ ಈ ಪಟ್ಟಣದ ಪರಿಚಯ ಮಾಡಿಕೊಡುವ ಪ್ರಯತ್ನ ಎ.ಶ್ರೀಕಂಠಯ್ಯನವರ ತುಮಕೂರಿನ ಇತಿಹಾಸ ಎಂಬ ಲೇಖನದಲ್ಲಿದೆ. ಅಷ್ಟೇ ಅಲ್ಲದೆ ಆ ಪಟ್ಟಣದ ಇಂದಿನ ಒಕ್ಕಲುತನ ವಿದ್ಯಾಸಂಸ್ಥೆ, ಉದ್ಯಾನವನ, ವಿಶ್ರಾಂತಿ ಮಂದಿರ ಇವುಗಳ ಬಗ್ಗೆಯೂ ಮಾಹಿತಿ ಇಲ್ಲಿ ದೊರೆಯುತ್ತದೆ. ಈ ಲೇಖನದ ಉದ್ದೇಶ ಕುರಿತಂತೆ ಲೇಖಕರು "ಯಾವ ಜನರಲ್ಲಿಯೇ ಆಗಲಿ ಸ್ವಾಭಿಮಾನಿ ಮತ್ತು ದೇಶಾಭಿಮಾನ ಉಲ್ಬಣಗೊಳ್ಳಬೇಕಾದರೆ ನಮ್ಮ ಸುತ್ತ ಮುತ್ತಣ ಸನ್ನಿವೇಶದ ಪರಿಚಯವು ಮೊದಲಾಗಬೇಕು. ಈ ಪರಿಚಯ ದ್ವಾರಾ ನಮ್ಮ ತಿಳುವಳಿಕೆಯನ್ನು ವಿಸ್ತರಿಸಿಕೊಳ್ಳುವುದಕ್ಕೆ ಹೆಚ್ಚು ಅನುಕೂಲ-ವುಂಟಾಗುವುದು"[೧] ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಳ್ಳುತ್ತಿದ್ದ ಪಟ್ಟಣ ಪರಿಚಯಗಳಂತಹ, ಲೇಖನಗಳ ಉದ್ದೇಶ ಏನೆಂಬುದು ನಮಗೆ ಇಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ.

ತುಮಕೂರಿಗೆ ಸಮೀಪದಲ್ಲೇ ಇರುವ ಕೈದಾಳ ಪ್ರಾಚೀನ ಕಾಲದ ಪ್ರಸಿದ್ಧವಾದ ನಗರ. ಇಲ್ಲಿ ಶಿಲ್ಪಚಾತುರ್ಯವನ್ನು ತೋರುವ ದೇವಸ್ಥಾನಗಳಿವೆ. ನಾಡಿಗಾಗಿ ಮಡಿದ ವೀರ ಯೋಧರ ವೀರಗಲ್ಲುಗಳಿವೆ. ಬೌದ್ಧ, ಜೈನ, ಹಿಂದೂ ಜನಾಂಗದವರು ಸಮತಾಭಾವದಿಂದ ಬಾಳಿದ ಸ್ಥಳ ಇದು. ಒಂದಾನೊಂದು ಕಾಲದಲ್ಲಿ ಇಲ್ಲಿ ದುರ್ಗಮವಾದ ಕೋಟೆಯಿತ್ತು, ಅರಮನೆಯಿತ್ತು, ಸೈನ್ಯವಿತ್ತು, ಧನಕನಕ ವಾಹನಗಳಿದ್ದವು. ಉದ್ಯಾನವನ ಕಲ್ಯಾಣಿ ಎಲ್ಲವನ್ನೂ ಹೊಂದಿ ಶ್ರೇಷ್ಠ ದೊರೆಗಳಿಂದ ಆಳ್ವಿಕೆಗೊಂಡ ಸ್ಥಳವಾಗಿತ್ತು. ನಾಡಿನ ಸೇವೆಗಾಗಿ ಸಜ್ಜಾಗಬೇಕೆಂಬ ಸ್ಫೂರ್ತಿಯನ್ನೂ ನಾಡಿನ ಜನತೆಯನ್ನೂ ಎಚ್ಚರಿಸುವ ಈ ಸ್ಥಳದಲ್ಲಿ ಇಂದು "ಅರಮನೆಯು

---

೧. ಎ.ಶ್ರೀಕಂಠಯ್ಯ, ಪ್ರಕ., ಸಂಪುಟ ೨೪, ಸಂಚಿಕೆ ೧, ಪು. ೩೫.

ನೆಲಸಮವಾಗಿದೆ. ಕೋಟೆಯು ಮಣ್ಣುಗುಡ್ಡೆಯಾಗಿದೆ. ಯಾವ ಪ್ರದೇಶದಲ್ಲಿ ರಾಜ್ಯ-ಲಕ್ಷ್ಮಿಯು ತಾಂಡವವಾಡುತ್ತಿದ್ದಳೋ ಅಲ್ಲಿ ಈಗ ನಿರ್ಜನವಾದ ಅರಣ್ಯವಿದೆ. ಯಾವ ಪ್ರದೇಶವು ಧನಲಕ್ಷ್ಮಿಯ ಆವಾಸಸ್ಥಾನವಾಗಿದ್ದಿತೋ ಅದು ಈಗ ಕಷ್ಟಜೀವಿಗಳಾದ ರೈತರ ಬೀಡಾಗಿದೆ"[೧] ಎಂದು ವೆಂಕೋಬರಾಯರು ನೊಂದು ನುಡಿದಿದ್ದಾರೆ. ಇಲ್ಲಿರುವ ಶ್ರೀ ಚನ್ನಕೇಶವ ಸ್ವಾಮಿ ದೇವಾಲಯ ಗಂಗಾಧರೇಶ್ವರನ ಗುಡಿ, ರಾಮೇಶ್ವರನ ಗುಡಿ, ಭೀಮಜಿನಾಲಯ, ಬೃಂದಾವನ, ಶೂಲದ ಆಂಜನೆಯ ಗುಡಿ, ಚೆಲುವಕೇಶ್ವರನ ದೇವಸ್ಥಾನ. ಇವೆಲ್ಲವೂ ಒಂದೊಂದು ಐತಿಹ್ಯವನ್ನು ಹೊಂದಿ ಗಮನಸೆಳೆಯುವ ತಾಣಗಳಾಗಿವೆ. ಆದರೆ ಕನ್ನಡಿಗರ ನಿರ್ಲಕ್ಷ್ಯ, ಅಭಿಮಾನ ಶೂನ್ಯತೆ, ಇತಿಹಾಸದ ವಿಚಾರದಲ್ಲಿರುವ ಅಜ್ಞಾನ ಇವುಗಳಿಂದಾಗಿ ಶಿಥಿಲವಾಗುತ್ತಿದ್ದು ಅವುಗಳ ಬಗ್ಗೆ ಗಮನಹರಿಸಬೇಕಾದ ಅಗತ್ಯವನ್ನು ಈ ಲೇಖನ ಸೂಚಿಸುತ್ತದೆ.

ಎಂ.ಎನ್.ಬಾಬು ಅವರ ಚಿರದುಃಖಿ ಕವನ ಶ್ರೀರಂಗಪಟ್ಟಣದ ವೈಭವವನ್ನು ಅಲ್ಲಿರುವ ಪ್ರಸಿದ್ಧ ತಾಣಗಳ ಪರಿಚಯಮಾಡಿಕೊಡುತ್ತದೆ. ಶ್ರೀರಂಗಪಟ್ಟಣದ ಮೂರನೆ ಮಹಾಯುದ್ಧದಲ್ಲಿ ಮಡಿದ ಟಿಪ್ಪುವಿನ ಆತ್ಮ ನಂತರ ಶ್ರೀರಂಗಪಟ್ಟಣವನ್ನು ಅಲ್ಲಿನ ಪರಿಸ್ಥಿತಿಯನ್ನು ವೀಕ್ಷಿಸಲು ಬಂದಾಗ ಆತನಿಗೆ ಅಲ್ಲಿ ಗತಿಸಿದ ಔಷಧ ಶಾಲೆ, ಮುರಿದ ಕೋಶಾಗಾರ, ಮದ್ದಿನ ಮನೆ ಕಾಣಸಿಗುತ್ತದೆ. ಕೋಟೆಯನ್ನು ಬಳಸಿ ಊರನ್ನು ಕಾಯುತ್ತಲಿದ್ದ ದೊಡ್ಡ ಕಂದರ ತಾನು ಶತ್ರುಗಳನ್ನು ತಡೆಯಲಾರದೆ ಹೋದುದಕೆ ನಾಚಿ ಮುಖವನ್ನು ತೋರದೆ ನಿಲ್ಲುತ್ತದೆ. ಹಿಂದೆ ರಾಜಾಸ್ಥಾನವಾಗಿದ್ದ ದರಿಯಾದೌಲತ್ತು ತಲೆಬಾಗಿ ನಿಲ್ಲುತ್ತದೆ. ಸಮೀಪದಲ್ಲೇ ಇರುವ ತನ್ನ ತಂದೆ-ತಾಯಿಗಳ ಸಮಾಧಿ, ಶ್ರೀರಂಗನ ದೇವಸ್ಥಾನ ಎಲ್ಲವನ್ನೂ ಕಾಣುತ್ತಾ ಅವನ ಮನ ಪರಿತಪಿಸುತ್ತದೆ. ಕವನವನ್ನು ಓದುತ್ತಿರುವವನ ಮನವೂ ವಿಷಾದದಿಂದ ಮುಳುಗುತ್ತದೆ.

**"ರಾಜಕಾರಣಕೆಲ್ಲ 'ಗದ್ದಿಗೆ'ಯಾ ತೆರನಿದ್ದ**
**ದರಿಯದವಲತ್ತು ಈಗಾಟಕಾಯ್ತು .......**
**ಊರ ಕಾಯಲು ಎದ್ದ ಕೋಟೆ ಕೊತ್ತಲವೆಲ್ಲ**
**ಕಾಡುದನ ಗೂಬೆಗಳ ವಾಸಕಾಯ್ತು**
**ತಂದೆ ತಾಯಿಯ ಪುಣ್ಯಗೋರಿಗಳ ಸುತ್ತಲೂ**
**ಅಂದು ಸತ್ತೆಲ್ಲರಾ ಗಣನೆಯಾಯ್ತು**[೨]

ಇಷ್ಟೆಲ್ಲಾ ವೈಭವವನ್ನು ಹೊಂದಿದ್ದ ನಾಡು. ಬ್ರಿಟಿಷರ ದಾಳಿಯನ್ನು ಸಮರ್ಥವಾಗಿ ಎದುರಿಸಿ ತಲೆ ಎತ್ತಿ ನಿಂತಿದ್ದ ನಾಡು, ಮನದಲ್ಲಿ ಮರಕ ಹುಟ್ಟಿಸುತ್ತದೆ.

---

೧. ಎ.ಶ್ರೀಕಂಠಯ್ಯ, ಪ್ರ.ಕ., ಸಂಪುಟ ೨೪, ಸಂಚಿಕೆ ೨, ಪು. ೪೧.
೨. ಎಂ.ಎನ್.ಬಾಬು, ಪ್ರ.ಕ., ಸಂಪುಟ ೨೭, ಸಂಚಿಕೆ ೪, ಪು. ೪೬.

ಕನ್ನಡಿಗನೊಬ್ಬನ ಸಾಹಸದ ಕಾರ್ಯಗಳಲ್ಲಿ ಅವನಿಗೆ ಆಶ್ರಯವಿತ್ತ ನಾಡು, ಸಹಕಾರವಿತ್ತ ನಾಡಿಗರು ಎಲ್ಲವೂ ಮನಸ್ಸಿಗೆ ಒಂದು ಕನ್ನಡನಾಡಿಗಾಗಿ ದುಡಿಯಲು ಹುರಿದುಂಬಿಸುತ್ತದೆ.

'ತಲಕಾಡು' ಮೈಸೂರು ಪ್ರಾಂತ್ಯದ ಪ್ರಾಚೀನ ಪಟ್ಟಣಗಳಲ್ಲಿ ಒಂದು. ಈಗ ಅದು ಮರಳುಗಾಡಾಗಿದ್ದರೂ ಹಿಂದೊಮ್ಮೆ ಗಂಗರ ರಾಜಧಾನಿಯಾಗಿತ್ತು. ಚೋಳರ ಆಳ್ವಿಕೆಗೆ ಸೇರಿ ನೂರು ವರ್ಷಗಳಲ್ಲಿ ಏಳಿಗೆಯನ್ನು ಸಾಧಿಸಿತು. ೧೧೧೬ರಲ್ಲಿ ಹೊಯಿಸಳರ ಆಳ್ವಿಕೆಗೆ ಒಳಪಟ್ಟ ಸಂದರ್ಭದಲ್ಲಿ ಅವರ ದೊರೆ ವಿಷ್ಣುವರ್ಧನನಿಗೆ 'ತಲಕಾಡು ಗೊಂಡ' ಎಂಬ ಬಿರುದು ಪ್ರಾಪ್ತವಾಯಿತು. ವಿಜಯನಗರ ಹಾಗೂ ಮೈಸೂರು ಅರಸರ ಆಳ್ವಿಕೆಗೂ ಒಳಪಟ್ಟಿದ್ದ ಈ ನಾಡಿನಲ್ಲಿ ಸುಮಾರು ಮೂವತ್ತಕ್ಕಿಂತಲೂ ಹೆಚ್ಚು ದೇವಾಲಯಗಳಿದ್ದಂತೆ ತಿಳಿದುಬರುತ್ತದೆ. ಇಲ್ಲಿ ಕೀರ್ತಿ ನಾರಾಯಣ, ಮರಳೇಶ್ವರ, ಚೌಡೇಶ್ವರಿ ವೈದ್ಯನಾಥೇಶ್ವರ ಇವೇ ಮೊದಲಾದ ಪ್ರಮುಖ ದೇವಸ್ಥಾನಗಳು ಇಂದಿಗೂ ಅಂದಿನ ವೈಭವವನ್ನೂ ಸಾರುತ್ತಾ ನಿಂತಿವೆ. ಇವುಗಳನ್ನು ಗಮನಿಸಿದಾಗ ಬಿ.ವೆಂಕೋಬರಾಯರು ಹೇಳುವ "ಇಷ್ಟು ಔನ್ನತ್ಯಕ್ಕೆ ಒಂದು ದಕ್ಷಿಣ ದೇಶದ ಚರಿತ್ರೆಯಲ್ಲೆಲ್ಲಾ ಪ್ರಸಿದ್ಧಿ ಪಡೆದಿದ್ದ ಈ ಪಟ್ಟಣವು ನಮ್ಮ ದೇಶದಲ್ಲಿ ಇದ್ದಿತೆಂಬ ಹೆಮ್ಮೆಯು ಅಂಥ ಔನತ್ಯ ಮಹತ್ವಗಳು ಎಷ್ಟು ಅಶಾಶ್ವತವೆಂಬ ಒಂದು ವಿಧವಾದ ಉದ್ವೇಗವೂ ಮೈಸೂರು ದೇಶದವರಿಗೆ ಏಕಕಾಲದಲ್ಲಿ ಉಂಟಾಗುವುವು"[೧] ಎಂಬ ಮಾತುಗಳು ನಿಜವೆನಿಸುತ್ತದೆ.

ಇಂಥದೇ ಭಾವನೆಯನ್ನು ಹುಟ್ಟು ಹಾಕುವ ಮತ್ತೊಂದು ಸ್ಥಳ ವಿಜಯನಗರ ಸಾಮ್ರಾಜ್ಯದ ಇಂದಿನ ಹಾಳು ಹಂಪೆ. ಮಹಮದೀಯರ ದಾಳಿಗೆ ಸಿಕ್ಕಿ ನುಚ್ಚುನೂರಾದ ದಕ್ಷಿಣ ಪಥದ ಹಿಂದೂ ರಾಜ್ಯಗಳ ಅಳಿದುಳಿದ ಅಸ್ತಿತ್ವದಿಂದ ಉದಯಿಸಿದ ನಾಡು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ದಕ್ಷಿಣ ಭಾರತದ ಇತಿಹಾಸದಲ್ಲಿ ಅದ್ವಿತೀಯವಾದ ಘಟನೆ. ವಿದೇಶಿಯರೂ ಸೇರಿದಂತೆ ರಾಷ್ಟ್ರದ ಎಲ್ಲರ ಗಮನ ಸೆಳೆದಿದ್ದ ಈ ನಾಡು ಮಹಮದೀಯರ ದಾಳಿಗೆ ಸಿಲುಕಿ ನಾಶವಾದ ನಂತರ ಅಳಿದುಳಿದ ಅದರ ಅವಶೇಷಗಳೇ ಕನ್ನಡಿಗರ ಹೆಮ್ಮೆಯ ಸಂಕೇತಗಳಾಗಿ ಉಳಿದುಕೊಂಡವು. ಕನ್ನಡಿಗರೂ ತಮ್ಮ ಗತವೈಭವವನ್ನು ಸ್ಮರಿಸಿಕೊಳ್ಳಲು ಹಂಪೆಯ ಸ್ಮರಣೆ, ಹಂಪೆಯ ಉತ್ಸವ, ಹಂಪೆಯ ಸಂದರ್ಶನ, ಹಂಪೆಯ ಕುರಿತಾದ ಕೃತಿ ರಚನೆ ಇವುಗಳ ಮೂಲಕ ಸ್ಫೂರ್ತಿ ಪಡೆಯುತ್ತಿದ್ದರು. ಕನ್ನಡ ನಾಡಿನ ವೈಭವದ ಪ್ರತೀಕವಾದ ವಿಜಯನಗರದ ಕೀರ್ತಿ ಕನ್ನಡಿಗರಿಗೆ ಮಾತ್ರವಲ್ಲದೆ ಇಡೀ

---

೧. ಎಂ.ಎಸ್.ಬಾಬು, ಪ್ರಕ., ಸಂಪುಟ ೨೭, ಸಂಚಿಕೆ ೪, ಪು. ೨೧.

ದೇಶದಾದ್ಯಂತ ಹರಡಬೇಕೆಂಬ ಹಂಬಲ ಕನ್ನಡಿಗರ ಮನದ ಆಸೆಯಾಗಿತ್ತು. ರಾಷ್ಟ್ರದ ಉಳಿದ ಭಾಗದವರು ಹೆಮ್ಮೆಯಿಂದ ತಮ್ಮ ನಾಡನ್ನು ಹೊಗಳಿ-ಕೊಳ್ಳುತ್ತಿದ್ದಂತೆಯೇ ನಮ್ಮ ನಾಡೂ ಕೂಡ ಹಿರಿಮೆಯನ್ನು ಹೊಂದಿದೆ ಎಂಬ ಆತ್ಮಾಭಿಮಾನವನ್ನು ಪ್ರದರ್ಶಿಸುವುದಕ್ಕೆ ಈ ಪಟ್ಟಣ ಸ್ಫೂರ್ತಿಯನ್ನು ಒದಗಿಸಿತು. ಕನ್ನಡಿಗರೂ ಕೂಡ ಅಂತಹ ಯಾವುದೇ ಸಂದರ್ಭ ಒದಗಿದಾಗಲೆಲ್ಲ ಸಮರ್ಪಕ-ವಾಗಿಯೇ ಬಳಸಿಕೊಂಡರು. ಬೆಳಗಾವಿಯ ಕಾಂಗ್ರೆಸ್ ಅಧಿವೇಶನ ಇದಕ್ಕೆ ತಕ್ಕ ನಿದರ್ಶನ. ರಾಷ್ಟ್ರದಾದ್ಯಂತ ಆಗಮಿಸುವ ಅತಿಥಿಗಳಿಗೆ ಕನ್ನಡ ವಾತಾವರಣ ಸೃಷ್ಟಿಸಬೇಕೆಂದು ಆಲೋಚಿಸಿದ ಅಂದಿನ ಸಂಘಟಕರು ಅಧಿವೇಶನ ನಡೆದ ಸ್ಥಳಕ್ಕೆ 'ವಿಜಯನಗರ' ಎಂದು ಹೆಸರಿಟ್ಟರು. ಅಲ್ಲಿಗೆ ನೀರು ಪೂರೈಸಲು ಮಾಡಿದ ಚಿಕ್ಕಕೆರೆಗೆ 'ಪಂಪಾ ಸರೋವರ' ಎಂದು ಹೆಸರಿಟ್ಟರು. ಸಮ್ಮೇಳನದ ಮಹಾದ್ವಾರವನ್ನು ಹಂಪೆಯ ಗೋಪುರದಂತೆ ನಿರ್ಮಾಣ ಮಾಡಲಾಯಿತು. ಹೀಗೆ ರಾಷ್ಟ್ರದ ಮೂಲೆ ಮೂಲೆಗಳಿಂದ ಬಂದ ಅಷ್ಟೆ ಅಲ್ಲದೆ ಕನ್ನಡ ನಾಡಿನ ಮೂಲೆಮೂಲೆಗಳಿಂದ ಬಂದ ಅತಿಥಿಗಳಿಗೆ ಹಂಪೆಯ ಬಗ್ಗೆ ಕುತೂಹಲ ಮೂಡುವಂತೆ ಆಯಿತು.

ಇದರಿಂದ ಪ್ರೇರಣೆಗೊಂಡ ಫಲವೋ ಏನೋ ಎಂಬಂತೆ ಹಂಪೆಯನ್ನು ಕುರಿತಾದ ಹಲವಾರು ಲೇಖನಗಳು, ನಾಟಕಗಳು, ಕವಿತೆಗಳು ಸೃಷ್ಟಿಯಾದವು. ಪ್ರಬುದ್ಧ ಕರ್ಣಾಟಕವೂ ಕೂಡ ಅದರ ವೈಭವವನ್ನು ಕಣ್ಣ ಮುಂದೆ ತರುವಂತಹ ನಾಟಕಗಳು, ಲೇಖನಗಳು ಹಾಗೂ ಕವನಗಳನ್ನು ಪ್ರಕಟಿಸಿ ಕನ್ನಡಿಗರಿಗೆ ಅಗತ್ಯವಾಗಿ ಬೇಕಾದ ಹೋರಾಟದ ಸ್ಫೂರ್ತಿಯನ್ನು ಒದಗಿಸಿಕೊಟ್ಟಿತು. ಬೆಳಗಾವಿ ಸಮ್ಮೇಳನದ ನಂತರ ಬೆಳ್ಳಾವೆ ವೆಂಕಟರಾಯರು, ಟಿ.ಎಸ್.ವೆಂಕಣ್ಣಯ್ಯನವರು, ಎಂ.ಆರ್.ಶ್ರೀನಿವಾಸ ಮೂರ್ತಿಗಳು, ಡಿ.ವಿ.ಗುಂಡಪ್ಪನವರು ಇವರೇ ಮೊದಲಾದವರ ಜೊತೆ ವಿ.ಸಿ.ಯವರು ಹಂಪೆಯ ಸಂದರ್ಶನವನ್ನು ಮಾಡಿದರು. ಸುಮಾರು ೨೭ ವರ್ಷದವರಾಗಿದ್ದ ವಿ.ಸಿ. ಅವರಿಗೆ ಈ ಹಿರಿಯರೊಡನೆ ನಡೆದ ಮಾತುಕತೆ ಅಭಿಪ್ರಾಯ ವಿನಿಮಯ ಅನುಭವಗಳ ಶೋಧನೆ ಹೊಸ ಬಗೆಯ ಲೋಕವನ್ನೇ ಪರಿಚಯಿಸಿತು. ತಾವು ಕಂಡ ಹಾಳು ಹಂಪೆಯ ಗತ ವೈಭವವು ಅವರ ಮನಸ್ಸನ್ನು ಕಲಕಿತು. ಆಗ ರಚನೆಗೊಂಡ ಕೃತಿಯೇ 'ಪಂಪಾಯಾತ್ರೆ'. ಪ್ರಬುದ್ಧ ಕರ್ಣಾಟಕ ಅದನ್ನು ನಾಲ್ಕು ಸಂಚಿಕೆಗಳಲ್ಲಿ ಪ್ರಕಟಿಸಿದೆ. ನಂತರ ಪುಸ್ತಕರೂಪದಲ್ಲಿ ಪ್ರಕಟಗೊಂಡ ಈ ಕೃತಿ ಈ ವಿಭಾಗದಲ್ಲಿ ಮೇರು ಕೃತಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ನವಿರಾದ ಹಾಸ್ಯದ ಲೇಪನದೊಡನೆ ಲೇಖಕರು ತಮ್ಮ ಅಗಾಧವಾದ ಲೋಕಾನುಭವವನ್ನು ಹಾಗೂ ತಮ್ಮ ಜೀವನ ದೃಷ್ಟಿಯನ್ನು ಈ ಬರಹದಲ್ಲಿ ಒಡಮೂಡಿಸಿದ್ದಾರೆ. ಹಂಪೆಯಲ್ಲಿ ಲೇಖಕರು ಕಳೆದ ಅಲ್ಪಾವಧಿಯಲ್ಲಿ ಹಂಪೆಯ ೨೫೦ ವರ್ಷಗಳ ಚರಿತ್ರೆಯನ್ನು ಕಣ್ಣಿಗೆ ಕಟ್ಟುವಂತೆ

ಚಿತ್ರಿಸಿದ್ದಾರೆ. ಹಂಪೆಯಲ್ಲಿನ ಕಲ್ಲು ಮಣ್ಣು ರಾಶಿಗಳನ್ನು ನೋಡಿ ಬೆಂದ ಹೃದಯದ ಮಾತುಗಳು ಆ ಸಂದರ್ಭದ ಪ್ರತಿ ಪಂಕ್ತಿಯಲ್ಲಿ ಪ್ರತಿಧ್ವನಿಸಿದೆ. "ರಕ್ತ ಮಾಂಸ, ರಸ ರಾಗ, ಬಣ್ಣ ಕಾಂತಿಗಳಿಂದ ಪರಿಪುಷ್ಟರಾದ ಯುವಕ ಯುವತಿಯರು ನಗುನಗುತ್ತ ಸರಸವಾಡುತ್ತಿದ್ದ ಸುಖಭೂಮಿಯಲ್ಲಿ ಈಗ ವಿಷಧರ ಸರ್ಪಗಳು, ಮುಳ್ಳು ಹಂದಿಗಳು, ಕಳ್ಳಕಾಕರು, ಎಲ್ಲಿ ಹೂದೋಟಗಳ ಪರಿಮಳವನ್ನು ಹೊತ್ತುಕೊಂಡು ತಣ್ಣಗೆ ತಂಗಾಳಿ ಬೀಸುತ್ತಿತ್ತೋ ಅಲ್ಲಿ ಈಗ ದಾರುಣ ಉರಿಗಾಳಿ ಪ್ರಪಂಚದ ಚಕ್ರಾಧಿಪತಿಗಳ ಸಂದಣಿಯಲ್ಲಿ ಎಲ್ಲಾ ಅಂಶಗಳಲ್ಲೂ ಸಮತೂಗಲು ಅರ್ಹರಾಗಿದ್ದ ಸಾಮ್ರಾಟರು ಆಳುತ್ತಿದ್ದ ಈ ಪ್ರದೇಶದಲ್ಲಿ ಮುಳ್ಳು ಪೊದೆ : ಅವರ ದರ್ಪ ಪೌರುಷಗಳು ಪ್ರತಿಧ್ವನಿತವಾಗುತ್ತಿದ್ದ ಅರಮನೆಗಳಲ್ಲಿ ನರಿ, ಗೂಗೆಗಳ ಕರ್ಕಶ ಧ್ವನಿ"[೧] ಕೇಳಿಬರುತ್ತಿದೆ. ಕೇಳಿಬರುತ್ತಿದೆ. ಇಷ್ಟೆಲ್ಲಾ ಅವನತಿಗಳ ನಡುವೆಯೂ ಅಂದಿನ ವೈಭವದ ಕುರುಹಾಗಿ ನಿಂತಿರುವ ಅಳಿದುಳಿದ ಸ್ಥಳಗಳೇ ಅವರಿಗೆ ಬೆರಗನ್ನು ಹುಟ್ಟಿಸುತ್ತದೆ ಹಾಗೂ ತಮ್ಮ ಸೌಂದರ್ಯದ ಕಾರಣದಿಂದಾಗಿ ಮನಸೆಳೆಯುತ್ತದೆ. ವಿಠಲ ಸ್ವಾಮಿಯ ಗುಡಿ ಕಂಡಾಗ ದ್ರಾವಿಡ ಶೈಲಿಯ ವಾಸ್ತು ರಚನೆಯಲ್ಲಿ ಈ ತೆರನಾದ ಇನ್ನೊಂದು ಶಿಲ್ಪ ಕಲೆ ಇಲ್ಲವೇನೋ ಎಂದು ಅನಿಸುತ್ತದೆ. ಅದರ ಸೌಂದರ್ಯ ಅವರ ಕಣ್ಣಿಗೆ ಸಾಧ್ವಿಯ ಸೌಂದರ್ಯದಂತೆ ಕಾಣುವುದಿಲ್ಲ. ಅತುಳ ಲಾವಣ್ಯವತಿಯಾಗಿ ಹಾವಭಾವ ವಿಲಾಸಗಳಿಂದ ಲೋಕವನ್ನು ಬೆರಗು ಮಾಡಿ ಸೋಲಿಸುವ ನಾರಿಯಂತೆ ಅಥವಾ ಚಿರ ವೈಧವ್ಯ ಹೊಂದಿರುವ ವ್ಯರ್ಥವಾದ ಸೌಂದರ್ಯದಂತೆ ಅವರಿಗೆ ತೋರುತ್ತದೆ. ಕಲ್ಯಾಣ ಮಂಟಪದ ಅಂದ ಚಂದಗಳನ್ನು ಕಂಡು ಮರಳಾಗಿ "ಭವ್ಯ ಗಾನವೊಂದು ಘನೀಭೂತವಾಗಿ ಶಿಲಾಕೃತಿಯಾಗಿ ಪರಿಣಮಿಸಿದಂತೆ ಇಲ್ಲಿನ ನೋಟ ಈ ರಾಜರ ಕಲಾಭಿರುಚಿ ಅಲಂಕಾರ ದೃಷ್ಟಿ ರಸಿಕತೆ ಇವುಗಳನ್ನು ಏನೆಂದು ಹೇಳೋಣ"[೨] ಎನ್ನುತ್ತಲೇ ವಿಸ್ಮಿತರಾಗಿ ಸಲ್ಲುತ್ತಾರೆ. ಪಂಪಾ ಸರಸ್ಸನ್ನು ಕಂಡಾಗ ಅಲ್ಲಿಗೆ ಮಂಗಲಯಾನ ಮಾಡುತ್ತ ಬಂದಿಳಿದ ಕ್ರೌಂಚ ಪಕ್ಷಿಗಳ ಪಂಕ್ತಿಯನ್ನು ಕಂಡಾಗ ಮನದಲ್ಲಿ ಉದಯಿಸಿದ್ದ ಅಲ್ಪಭಾವನೆಗಳು, ತಾಪಗಳೂ ದೂರವಾಗಿ ಶಾಂತಿ ಆವರಿಸುತ್ತದೆ. ಹೀಗೆ ಹಂಪೆಯಲ್ಲಿರುವ ವಿವಿಧ ಸ್ಥಳಗಳ ವೈಶಿಷ್ಟ್ಯತೆಗಳನ್ನೂ ಹಾಗೂ ಅವುಗಳ ವಿನಾಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿತವಾಗಿದೆ.

ಮಾತುಂಗದ ನೆತ್ತಿಯಲ್ಲಿ ಹಂಪೆಯ ದರ್ಶನ ಕವನವು ಹಂಪೆಯು ಸೂರ್ಯೋದಯ ಕಾಲದ ಘಟನೆಗಳನ್ನು ಚಿತ್ರಿಸುವುದರೊಂದಿಗೆ ಪ್ರಾರಂಭವಾಗುತ್ತದೆ. ಅಲ್ಲಿಯ ತುಂಗೆಯ ಮಂಜುಳ ನಿನಾದ ಹಸುರಾದ ಪರಿಸರ, ಪಕ್ಷಿಗಳ ಕಲರವ,

---

೧. ಸೀತಾರಾಮಯ್ಯ.ವಿ. ಪ್ರಕ. ಸಂಪುಟ. ೯, ಸಂಚಿಕೆ ೨, ಪು. ೩೧.
೨. ಸೀತಾರಾಮಯ್ಯ.ವಿ. ಪ್ರಕ. ಸಂಪುಟ. ೯, ಸಂಚಿಕೆ ೨, ಪು. ೨೯.

ಬೀಸುವ ತಣ್ಣನೆಯ ಗಾಳಿ ಇವುಗಳಿಂದ ಆನಂದವನ್ನು ಅನುಭವಿಸುತ್ತಾ ಮಾತಂಗಿಯ ನೆತ್ತಿಯಲ್ಲಿ ನಿಂತು ಹಂಪೆಯನ್ನು ಕಂಡಾಗ ಅಲ್ಲಿನ ಗುಡಿ ಗೋಪುರಗಳು ಶಿಲ್ಪಿಯ ಕನಸುಗಳಂತೆ ತೋರುತ್ತದೆ. ಹಿಂದಿನ ವೈಭವವನ್ನು ನೆನೆದು ಕಂಬನಿ ಮುಡಿಯುತ್ತಿರುವಂತೆ ಎನಿಸುತ್ತದೆ. ಇದನ್ನು ಕಂಡಾಗ ಕವಿಗೆ

**ಛೆ! ಬಿಡು ಮನವೆ ಕೊರಗುವೆಯೇತಕೆ**

**ಅತ್ತರೆ ಬರುವರೆ ಸತ್ತವರು**

**ಅವರೆಮಗಿತ್ತಿಹ ಭವ್ಯಕನಸುಗಳ**

**ನಮ್ಮವರೆಂದೂ ಬಿತ್ತುವರು.........**[೧] ಎಂಬ ಭಾವನೆ ಮೂಡುತ್ತದೆ. ಕೊನೆಗೆ ತನ್ನ ನಾಡು ಹೀಗೆ ಉಳಿಯುವುದಿಲ್ಲ. ಅದು ಮುಂದಿನ ದಿನಗಳಲ್ಲಿ ಗತಿಸಿದ ವೈಭವವನ್ನು ಮರಳಿ ಪಡೆಯುತ್ತದೆ. "ಮಸಣದ ಮಹಿಮೆಯೇ ಇಂತಿರೆ ಮುಂದಿನ ಸೃಷ್ಟಿಯು ದಿವ್ಯವಿದೆ" ಎಂಬ ನಂಬಿಕೆ ಆತನಲ್ಲಿ ಮೂಡುತ್ತದೆ. ಕನ್ನಡ ನಾಡು ಮುಂದಿನ ದಿನಗಳಲ್ಲಿ ಏಳಿಗೆ ಹೊಂದಬೇಕೆಂಬ ಆಶಾಭಾವನೆ ಇಲ್ಲಿ ವ್ಯಕ್ತವಾಗಿದೆ.

'ವಿಜಯ ದಶಮಿ' ಕವನ ವಿಜಯನಗರ ಅರಸರ ಕಾಲದಲ್ಲಿ ನಡೆಯುತ್ತಿದ್ದ ನವರಾತ್ರಿಯ ವೈಭವವನ್ನು ವರ್ಣಿಸುವ ಕವನ

**ಕನ್ನಡ ನಾಡಿನ ಚಿನ್ನದ ಹಬ್ಬದ ಶತಶತಮಾನದ ಕಥೆಯಿದು ಕೇಳು**

**ನೆನೆದರೆ ಮೈಮರೆಯುವುದೀ ಬಾಳು**

**ತುಂಗಭದ್ರಯಾ ತೀರದಿ ಬೆಳಗಿದ ನವರಾತ್ರಿಯ ವೈಭವವಿದು ಬಂಧು"....**[೨]

ಎಂದು ಪ್ರಾರಂಭಗೊಳ್ಳುವ ಈ ಕವನವು ಕೃಷ್ಣದೇವರಾಯನ ಕಾಲದ ನವರಾತ್ರಿಯ ಸಂಭ್ರಮದ ಸೊಬಗನ್ನು ಉಣಬಡಿಸಿದೆ. ಕೃಷ್ಣದೇವರಾಯನ ಬರುವಿಕೆಗಾಗಿ ಕಾದ ಜನಸಮೂಹ, ಆತನನ್ನು ಕಂಡಾಗ ತೋರುವ ಉತ್ಸಾಹ,

**"ಇಂದ್ರನಂದ, ಮದನ ಚೆಂದ, ತುಂಬು ಚೆಲುವ ಕಾಯನು।**

**ಕೆಂಪು ತಿಲಕ ಮುತ್ತಿನೋಲೆ, ಚಿನ್ನ ಕಡಗ, ಉಂಗುರ**

**ಥಳಿಪ ಕವಚ ರತ್ನಮಾಲೆ ದಿವ್ಯ ಪೀತಾಂಬರ"**[೩] ಧರಿಸಿ ಬಂದ ಆತನ ಠೀವಿ-ಯನ್ನು ಕಾಣಲು ಜನರ ಸಮೂಹ, ಇವುಗಳ ವರ್ಣನೆ ಇದೆ. ನಂತರ ಬರುವುದೇ ಆತನ ಸವಾರಿ. ಆತನ ಬರುವಿಕೆಯನ್ನು ನಿರೀಕ್ಷಿಸಿ ದಾರಿಯುದ್ದಕ್ಕೂ ಸಿಂಗಾರ ಮಾಡಿ ಝುಲ್ಲರಿ, ಪತಾಕೆ, ಮಾವಿನೆಲೆ, ತೋರಣ, ಹೊಂಬಾಳೆ, ಗೊನೆಬಾಳೆ, ಕಂಬಗಳನ್ನು

---

೧. ಗುಂಡಣ್ಣ ಜಿ., ಪ್ರಕ., ಸಂಪುಟ ೩೧, ಸಂಚಿಕೆ ೭, ಪು. ೮೨.
೨. ಜಿ.ವರದರಾಜರಾವ್, ಪ್ರಕ., ಸಂಪುಟ ೩೫, ಸಂಚಿಕೆ ೪, ಪು. ೫೩.
೩. ಜಿ.ವರದರಾಜರಾವ್, ಪ್ರಕ., ಸಂಪುಟ ೩೫, ಸಂಚಿಕೆ ೪, ಪು. ೫೪.

ಕಟ್ಟಿರುವ ರಸ್ತೆಗಳನ್ನು ದಾಟಿ ಕೆತ್ತನೆಯ ಕೆಲಸದಲ್ಲಿ ಚಿತ್ರವನ್ನು ಸೆಳೆದಿರುವ ರಾಮದೇವರ ಗುಡಿಯ ಮುಂದುಗಡೆ ಹಾದು, ವಿಜಯ ವಿಠಲನ ಗುಡಿ ದಾಟಿ ಮಾರನವಮಿಯ ದಿಬ್ಬಣದ ಬಳಿ ಬಂದು ಅಲ್ಲಿಂದ ವಂಧಿಮಾಗಧರ ಹೊಗಳಿಕೆ ಸ್ವೀಕರಿಸಿ ಸಿಂಹಾಸನ ಪೀಠದ ಮೇಲೆ ಕುಳಿತು ಕೊಳ್ಳುವ ಈತನ ಮುಂದೆ ವಿವಿಧ ರೀತಿಯ ಮನೋರಂಜನೆ. ಆನೆ ಕಾಳಗ, ಜಟ್ಟಿ ಕಾಳಗ ನಡೆಯುತ್ತದೆ. ಇದನ್ನು ಕಲ್ಪನೆಯಲ್ಲೇ ಕಾಣುತ್ತಿದ್ದ ಕವಿಗೆ "ಪ್ರತಿ ವರುಷ ವರುಷ ವಿಜಯ ವೈಭವ ವಿಜಯ ನಗರದಿ ಸಾಗಿತು. ದೇವಲೋಕದ ಇಂದ್ರ ವೈಭವ ಇಳೆಯೊಳೇ ಪರಿ ಮೆರೆಯಿತು" ಎನಿಸುತ್ತದೆ. ವಿಜಯನಗರ ಸಾಮ್ರಾಟರ ವೈಭವದ ಕುರುಹಾಗಿ ನಿಂತಿರುವ ಮಾರನವಮಿಯ ದಿಬ್ಬವನ್ನು ನೋಡಿದಾಗ ಅಂದಿನ ದೊರೆಗಳ ವೈಭವ, ಜನಾನುರಾಗ ಇವುಗಳನ್ನು ಊಹಿಸಿಕೊಂಡು ರಚಿಸಿರುವ ಈ ಕವನ

> **"ಮೆರೆಯುವುದೆಂದಿಗೆ ಇಂದಿನ ಜನಪದ,**
>
> **ಬೆಳಗುವುದೆಂದಿಗೆ ಹಂಪೆಯ ಬೀಡು**
>
> **ಇಂದೊ ಆಗಲಿ ಕನ್ನಡ ನಾಡು"**[೧] ಎಂಬಂತಹ ಆಸೆಯನ್ನು ಹುಟ್ಟಿಸುತ್ತದೆ.

ಇದೇ ರೀತಿಯಲ್ಲೇ ಹಂಪೆಯ ಬಗ್ಗೆ ಗಮನ ಸೆಳೆಯುವ ಕನ್ನಡಿಗರಲ್ಲಿ ಹೋರಾಟದ ಸ್ಫೂರ್ತಿಯನ್ನು ತುಂಬಿದ ನಾಟಕ 'ನಾಗರಿಕ' ಎಂ.ಆರ್.ಶ್ರೀನಿವಾಸ ಮೂರ್ತಿಯವರ ಈ ನಾಟಕ ವೈಭವದಿಂದ ಮೆರೆದಿದ್ದ, ನಾಡಿನ ಧರ್ಮ ಸಂಸ್ಕೃತಿ ಕಲೆಯ ಪ್ರತೀಕವಾಗಿದ್ದ 'ಪಂಪಾ'ನಗರ ಭಗ್ನಾವಶೇಷವಾಗಿದ್ದನ್ನು ಕಂಡಾಗ ಯಾವ ಕನ್ನಡಿಗನಿಗೇ ಆಗಲಿ ಉಕ್ಕಿಸುವ ರೋಷವನ್ನು ಸಾರ್ಥಕವಾಗಿ ಧ್ವನಿಸಿದೆ. ವಿದ್ಯಾರಣ್ಯರನ್ನು ಕಂಡಾಗ "ಹಿಂದಿನಾ ವೈಭವದ ಸಿರಿನೋಟವಂ ನೋಡಬೇಕೆಂಬ ಮನವಿಹುದು ಕರುಣಿಸಿರಿ ಗುರುದೇವ"[೨] ಎಂದು ಬೇಡಿಕೊಳ್ಳುವ ನಾಗರಿಕನಿಗೆ ವಿದ್ಯಾರಣ್ಯರು ನೀನು ಅದನ್ನು ನೋಡಿದರೆ ಶೋಕದಿಂ ಕಂಗೆಟ್ಟು ಮತಿಗೆಡುವೆ ಎಂದು ಎಚ್ಚರಿಸುತ್ತಾರೆ. ಆದರೂ "ಸಾಮ್ರಾಜ್ಯದ ವೈಭವದ ದೃಶ್ಯಮಂ ಬೇಡವೆನ್ನುವವನುಂಟೆ? ಕನ್ನಡಿಗ ತಾನುಂಟೆ ಕರುಣಿಸಿರಿ"[೩] ಎಂದು ಹೇಳುತ್ತಾ ಅದನ್ನು ನೋಡಲೇಬೇಕೆಂದು ಬಯಸಿದಾಗ ವಿದ್ಯಾರಣ್ಯರು ಅಂದಿನ ವೈಭವವನ್ನು ನಾಗರಿಕನ ಕಣ್ಣ ಮುಂದೆ ತರುತ್ತಾರೆ. ಮಾನವಮಿ ದಿಬ್ಬಗಳ ಮೇಲೆ ದರ್ಬಾರುಗಳು– ರಾಯಭಾರಿಗಳು ಬಂದು ಹೋಗುವುದು – ಅಂತಃಪುರದ ಅರಮನೆಗಳು – ಜನಸಂದಣಿ – ಉತ್ಸವವಾದಿಗಳು ಇವೆಲ್ಲವೂ ಅಂದಿನ ವೈಭವದ ದೃಶ್ಯವನ್ನು ನೋಡುಗನ, ಓದುಗನ ಮುಂದೆ ಸುಳಿದಾಡುವಂತೆ ಮಾಡುತ್ತದೆ.

---

೧. ಜಿ.ವರದರಾಜರಾವ್, ಪ್ರ.ಕ., ಸಂಪುಟ ೩೫, ಸಂಚಿಕೆ ೪, ಪು. ೫೮.
೨. ಎಂ.ಆರ್.ಶ್ರೀನಿವಾಸಮೂರ್ತಿ, ಸಂಪುಟ ೧೧, ಸಂಚಿಕೆ ೪, ಪು. ೪೨.
೩. ಎಂ.ಆರ್.ಶ್ರೀನಿವಾಸಮೂರ್ತಿ, ಸಂಪುಟ ೧೧, ಸಂಚಿಕೆ ೪, ಪು. ೪೨.

ಹಂಪೆಯಂತೆಯೇ ಕನ್ನಡಿಗರ ಗಮನ ಸೆಳೆದ ಕನ್ನಡಿಗರಲ್ಲಿ ಅಭಿಮಾನ ತುಂಬಿದ ಇನ್ನೊಂದು ಸ್ಥಳ ಬನವಾಸಿ. ಪಂಪನ ಕಾಲದಿಂದಲೂ ಕನ್ನಡಿಗರ ಮನಸೆಳೆದ ಸೊಬಗಿನ ತಾಣ ಬನವಾಸಿ ಬಿ.ಎಂ.ಶ್ರೀ ಅವರು 'ಅಶ್ವತ್ಥಾಮನ್' ನಾಟಕವನ್ನು ಕನ್ನಡಿಗರಿಗೆ ನೀಡಿದ ಸಂದರ್ಭದಲ್ಲಿ ಕನ್ನಡಿಗರಿಗೆ ಪ್ರಿಯವೆನಿಸುವ ಕೆಲವು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಸಂದರ್ಭ ಒದಗಿದಾಗಲೆಲ್ಲ ಕನ್ನಡದ, ಕನ್ನಡ ನಾಡಿನ ಪರವಾಗಿ ದನಿ ಎತ್ತುವ ಬಿ.ಎಂ.ಶ್ರೀ ಈ ನಾಟಕದಲ್ಲಿ ದ್ರೋಣನ ತಾಯಿ ಭಾರ್ಗವಿ ಪರಶುರಾಮನ ತಂಗಿಯೆಂದೂ ದ್ರೋಣ ಅಶ್ವತ್ಥಾಮರು ಕನ್ನಡ ನಾಡಿನ ಬನವಾಸಿ ಪ್ರಾಂತದಿಂದ ಕೌರವನಾಸ್ಥನಕ್ಕೆ ಹೋಗಿ ಸೇರಿದರೆಂದು ಮಾರ್ಪಾಟು ಮಾಡಿಕೊಂಡಿದ್ದಾರೆ ಮತ್ತು ಮಹಾಭಾರತದ ಪರಮವೀರ ಏಕಲವ್ಯನೂ ಇದೇ ಪ್ರಾಂತ್ಯಕ್ಕೆ ಸೇರಿದವನೆಂದು ತನ್ನ ಗುರುಗಳ ಬೆಂಬಲವಾಗಿ ಬೇಡರ ಸೈನ್ಯವನ್ನು ತೆಗೆದುಕೊಂಡು ಹೋಗಿ ಕಾದಿದನೆಂದೂ ಕಲ್ಪಿಸಿಕೊಂಡಿದ್ದಾರೆ. ಈ ಬೇಡರ ಪಡೆಯವರೇ ಮೇಳದವರು, ಈ ಮೇಳದವರು ಹೇಳುವ

**"ಚೆಲ್ವಿನ ನೆಲೆ ಕಣ್ಣಳ ಬಲೆ ಸುಖ ದೊರತೆಯ ಬನವಾಸೀ**

**ಬಳೆದಲೆದಾ ಕಾನ್ ಮಲೆಗಳನು ಆನ್ ಮರೆನವೇ ಬನವಾಸಿ...**

**ಪೆರ್ಮೆಯ ನೆಲೆ ಪಡುಗಡಲಲೆ ಸುಖಮೆರಚುವ ಬನವಾಸಿ**

**ನೀನು ಕಳುಹಿದ ಪೇರಾಳ್ಗಳ್ ಅದೇನಾದರ್ ಬನವಾಸಿ"**[೧] ಎಂಬ ಮಾತುಗಳು ಬನವಾಸಿಯ ಸೊಬಗನ್ನು ಹೇಳುವುದರ ಜೊತೆಯಲ್ಲೇ ಅಲ್ಲಿನ ಜನರ ವೀರತ್ವದ ಬಗ್ಗೆಯೂ ತಿಳಿಸುತ್ತದೆ. ಬನವಾಸಿಯ ವರ್ಣನೆ ಸುಂದರವಾದ ಮಲೆನಾಡನ್ನು ಪದೇ ಪದೇ ನೆನಪಿಗೆ ತರುತ್ತದೆ. ಇಂತಹ ಹೆಮ್ಮೆಯ ನೆಲೆಯಾದ ಬನವಾಸಿಯನ್ನು ತೊರೆದು ಮರಣವನ್ನಪ್ಪಬೇಕೆಂದು ಆಲೋಚಿಸಿದಾಗ ಆತ ಕೇಳಿಕೊಳ್ಳುವುದಾದರೂ ಏನನ್ನು? "ಇದುವೆ ಕಡೆಯ ನುಡಿ ನುಡಿವನ್, ಓ ಬೆಳಕೆ, ಓ ಪುಣ್ಯ ಭೂಮಿ ಕನ್ನಡಮೆ, ಎನ್ನ ತಾಯ್ನಾಡೇ, ನೆಲನ್ ಅರಿವ ಬನವಾಸಿ, ತೆಂಗುಗರಿ ಕೊಡೆಯಲಿ ಕಡಲು ಉಲಿಯ ಮನೆಯೇ.... ಬೀಳ್ಕೊಡಿಂ ಪೋಗಿ ಬರ್ಪೆನ್"[೨] ಸಾಯುವವನ ಕೊನೆಯ ನೆನಪುಗಳೂ ಕೂಡ ಕನ್ನಡ ನುಡಿ ಹಾಗೂ ಕನ್ನಡ ನಾಡು. ಇದಕ್ಕಿಂತ ಮಿಗಿಲಾಗಿ ಕನ್ನಡ ನಾಡಿಗಾಗಿ ಪ್ರಚೋದಿಸುವುದಾದರೂ ಹೇಗೆ? ಇಂತಹ ಬರಹಗಳೇ ಕನ್ನಡಿಗರಿಗೆ ಬೇಕಾದ ಹೋರಾಟದ ಸ್ಫೂರ್ತಿಯನ್ನು ಒದಗಿಸುತ್ತದೆ.

ಬನವಾಸಿಯ ಸೌಂದರ್ಯಕ್ಕೆ ಕನ್ನಡಿಗರ ಮನಸ್ಸು ಮನಸೋತ ಹಾಗೆಯೇ ಅವರಿಗೆ ಹೆಮ್ಮೆ ಗೌರವ ಸ್ಥಳ ಶೃಂಗೇರಿ ತುಂಗಾನದಿಯ ದಡದಲ್ಲಿ ಇರುವ ಈ

---

೧. ಬಿ.ಎಂ.ಶ್ರೀಕಂಠಯ್ಯ, ಪ್ರ.ಕ., ಸಂಪುಟ ೧೧, ಸಂಚಿಕೆ ೨, ಪು. ೨೫.
೨. ಬಿ.ಎಂ.ಶ್ರೀಕಂಠಯ್ಯ, ಪ್ರ.ಕ., ಸಂಪುಟ ೧೧, ಸಂಚಿಕೆ ೨, ಪು. ೩೫.

ಪಾವನ ಕ್ಷೇತ್ರ. ಈ ಪ್ರದೇಶದಲ್ಲಿ ಇರುವ ಶ್ರೀ ವಿದ್ಯಾ ದೇವಾಲಯ. ಶಾರದಾ ದೇವಾಲಯ ಜನಾರ್ಧನ ದೇವಾಲಯ ಇವುಗಳಿಂದಷ್ಟೇ ಅಲ್ಲದೆ ಶಂಕರಾಚಾರ್ಯರಿಂದ ಸ್ಥಾಪಿತವಾದ ಮಠದ ಕಾರಣದಿಂದಾಗಿಯೂ ಪ್ರಸಿದ್ಧಿ ಪಡೆದಿದೆ. "ಯವನರ ದಾಳಿಗೆ ಸಿಲುಕಿ ಸಂಪೂರ್ಣ ನಾಶವಾಗುವಂತಿದ್ದ ಹಿಂದೂ ಸಂಸ್ಕೃತಿಯನ್ನು ಕಾಪಾಡಲು ಈ ಮಠವು ಸಲ್ಲಿಸಿರುವ ಸೇವೆ ಗಮನಾರ್ಹವಾದದ್ದು. ಹಿಂದೂ ಸಂಸ್ಕೃತಿಯನ್ನು ಉದ್ಧರಿಸಿ ಸಂರಕ್ಷಿಸುವ ಮಹತ್ಕಾರ್ಯದಲ್ಲಿ ಭಾಗಿಗಳಾಗಿ ಶೃಂಗೇರಿಯ ಗುರುಗಳು ಸಲ್ಲಿಸಿದ ಸೇವೆಯ ಸುವರ್ಣಾಕ್ಷರಗಳಲ್ಲಿ ಬರೆದಿಡಲು ಯೋಗ್ಯವಾಗಿದೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಲ್ಲಿ ಶ್ರೀ ವಿದ್ಯಾರಣ್ಯರು ನೀಡಿದ ಸಹಾಯ ಪ್ರಾತಃ ಸ್ಮರಣೀಯವಾಗಿದೆ. ಈ ದೃಷ್ಟಿಯಿಂದ ಶೃಂಗೇರಿಗೆ ಕನ್ನಡನಾಡಿನ ಇತಿಹಾಸದಲ್ಲಿ ಮಾತ್ರವಲ್ಲದೆ ಇಡೀ ಭರತಖಂಡದ ಇತಿಹಾಸದಲ್ಲಿ ಅಗ್ರಸ್ಥಾನಮಾನ ದೊರಕ-ಬೇಕಾದುದು ಯುಕ್ತವಾಗಿದೆ"[೧] ಎಂದು ಹೊಗಳಿಸಿಕೊಂಡ ಶೃಂಗೇರಿಯ ಪೌರಾಣಿಕ ಹಿನ್ನೆಲೆ, ಸ್ಥಳ ಮಹಿಮೆ ಇವುಗಳ ಬಗ್ಗೆ ಮಾಹಿತಿ ಒದಗಿಸಿದೆ. ಹೀಗೆ ಪ್ರಬುದ್ಧ ಕರ್ನಾಟಕವು ಕನ್ನಡನಾಡಿನಲ್ಲಿ ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿ ಪಡೆದಿರುವ ಮಾನವ ನಿರ್ಮಿತ ಸ್ಥಳಗಳು ಕನ್ನಡಿಗರಿಗೆ ಹೆಮ್ಮೆಯನ್ನೂ, ಕನ್ನಡನಾಡಿನ ಬಗ್ಗೆ ಪ್ರೀತಿಯನ್ನೂ ಬೆಳೆಸಿಕೊಳ್ಳಲು ಸಹಾಯ ಮಾಡಿದವು ಎಂಬಂತಹ ವಿಚಾರಗಳನ್ನು ಪ್ರಕಟಿಸಿರುವಂತೆಯೇ ಆಧುನಿಕ ಕಾಲದಲ್ಲಿಯೂ ನಮ್ಮ ಹೆಮ್ಮೆಗೆ ಪಾತ್ರವಾಗಬಲ್ಲ ಹಲವಾರು ಸ್ಥಳಗಳು ನಮ್ಮ ಸುತ್ತಮುತ್ತಲಿನಲ್ಲೇ ಇವೆ. ಅವುಗಳ ವೈಶಿಷ್ಟ್ಯವನ್ನು ತಾವೂ ಗಮನಿಸಿ ತಮ್ಮ ಸುತ್ತಮುತ್ತಲಿನವರಿಗೂ ದೊರಕಿಸಿಕೊಡಬೇಕೆಂಬ ಇಚ್ಛೆಯಿಂದ ಪ್ರಕಟಗೊಂಡ ಬರಹಗಳನ್ನೂ ಗಮನಿಸಬಹುದು. ಆಧುನಿಕ ಜಗತ್ತಿನಲ್ಲಿ ಗಮನ ಸೆಳೆಯುವ ಈ ಸ್ಥಳಗಳಲ್ಲಿ ಕೆಲವು ಮಾನವ ನಿರ್ಮಿತವಾದದ್ದು ಇನ್ನು ಕೆಲವು ಪ್ರಕೃತಿಯೇ ನಮಗೆ ಕೊಡುಗೆ ನೀಡಿರುವಂತಹದು.

**ಪ್ರಾಕೃತಿಕ ಹಾಗೂ ಪ್ರೇಕ್ಷಣೀಯ ಸ್ಥಳಗಳ ಪರಿಚಯ**

ಮೈಸೂರು ಅರಸರ ಆಳ್ವಿಕೆಗೆ ಒಳಪಟ್ಟು ಹಲವು ಬಗೆಯಲ್ಲಿ ಅಭಿವೃದ್ಧಿ ಹೊಂದಿದ ಮೈಸೂರು ಹಾಗೂ ಅದರ ಸುತ್ತ ಮುತ್ತಲಿನ ಪ್ರದೇಶಗಳು ಹಲವಾರು ಕವಿಗಳ ಮನಸ್ಸನ್ನು ಆಕರ್ಷಿಸಿವೆ. ಚಾಮುಂಡಿ ಬೆಟ್ಟ, ಮಧುವನ, ಕುಕ್ಕನಹಳ್ಳಿ ಕೆರೆ, ಬೃಂದಾವನ ಇವೇ ಮೊದಲಾದ ರಮಣೀಯ ಸ್ಥಳಗಳ ಬಗ್ಗೆ ಹಲವಾರು ಬರಹಗಳು ಪ್ರಕಟಗೊಂಡಿವೆ. ಇವುಗಳು ದೂರದ ಪ್ರದೇಶದಲ್ಲಿರುವ ಕನ್ನಡಿಗರಲ್ಲಿ ಆ ಸ್ಥಳಗಳ ಬಗ್ಗೆ ಆಸಕ್ತಿ ಮೂಡಿಸುತ್ತವೆ. ದಿನನಿತ್ಯವೂ ನಡೆಯುವ ಸೂರ್ಯೋದಯ

---

೧. ಬಿ.ಸೀತಾರಾಮ ಮೊದಲಿಯಾರ್, ಸಂಪುಟ. ೨೪, ಸಂಚಿಕೆ –೩, ಪು. ೪೯.

ಸೂರ್ಯಾಸ್ತಮಾನದಂತಹ ಕ್ರಿಯೆಗಳು ಮೈಸೂರಿನಲ್ಲೂ ನಡೆಯುವುದು ಸಹಜವಾದ ಕ್ರಿಯೆ. ಆದರೆ ನಮ್ಮ ಕವಿಗಳ ಮನದಲ್ಲಿ ಇಂತಹ ವಿಚಾರಗಳು ವಿಶೇಷವಾದ ಭಾವನೆಗಳನ್ನು ಉಂಟು ಮಾಡಿದೆ. ಮೈಸೂರಿನಲ್ಲಿ ನಡೆಯುತ್ತಿರುವ ಇಂತಹ ಕ್ರಿಯೆಗಳನ್ನು ಹಾಗೂ ಆ ಸಂದರ್ಭಗಳಲ್ಲಿದ್ದ ಮೈಸೂರಿನ ಸ್ಥಿತಿಯ ಬಗ್ಗೆ ಕುವೆಂಪುರವರು ಒಂಟಿಕೊಪ್ಪಲಿನ ತಮ್ಮ ಮನೆಯಲ್ಲಿ ನಿಂತು, ಫಾಲ್ಗುಣದ ಉಷಃ ಕಾಲದಲ್ಲಿ 'ರಾಜಧಾನಿ'ಯನ್ನು ವೀಕ್ಷಿಸುತ್ತಾ, ಆ ಸಂದರ್ಭದಲ್ಲಿ ಸಕಲ ಸಮಾಜದ ಚೇತನಗಳು ಜಾಗೃತಿಗೊಂಡ ಪರಿಯನ್ನು ಹಂತ ಹಂತವಾಗಿ ವಿವರಿಸಿದ್ದಾರೆ. ಸಾಮಾನ್ಯ ಸ್ಥಳಗಳಲ್ಲೂ ಇರಬಹುದಾದ ಸೌಂದರ್ಯದ ಬಗ್ಗೆ ಗಮನ ಸೆಳೆಯಲು ಇಂತಹ ಕವನಗಳು ಸಹಕಾರಿಯಾಗಿವೆ.

**"ಹರಿಯುತಿಹುದಿರುಳ್ನಿದ್ದೆ ತಿರೆಯ ಮನದಿಂ, ತೇಲಿ**
**ಗಾಳಿಗುದುರುವ ಹಕ್ಕಿಗರಿಯಂತೆ ಉಷೆವೆಣ್ಣು**
**ಮೂಡಣ ದಿಗಂತದೆವೆಯಂ ಬಿದಿರ್ಚುತೆ ಕಣ್ಣು**
**ತೆರೆದಿಹಳು ಮುಸುಗಿಹುದು ಮೃದುಮನೋಹರ ನೀಲಿ**
**ಚಾಮುಂಡಿಯಂ, ಮಲಗಿದಂತಿದೆ ಮಹಾಕಾಳಿ ವಿಶ್ರಾಂತಿಯಲಿ"**[೧]

ಇಂತಹ ಸಂದರ್ಭದಲ್ಲಿಯೇ ಕವಿಗೆ ತಾವಿರುವ ತಾಣ ವಿಶೇಷವಾಗಿ ಕಾಣುತ್ತಿದೆ. ದಿನ ದಿನದ ಪರಿಚಯದ, ಮಣ್ಣು ಸ್ವರ್ಗೀಯವಾದಂತೆ ಭಾಸವಾಗುತ್ತದೆ. ಪರಿಚಯದ ಮಣ್ಣು ಕೂಡ ದೈವತ್ವವನ್ನು ಹೊಂದುವುದು ಕವಿಗೆ ತಾವಿರುವ ತಾಣದ ಮೇಲಿನ ಅಭಿಮಾನದ ತೀವ್ರತೆಯನ್ನು ತೋರುತ್ತದೆ. ಇಂತಹ ಅಭಿಮಾನ ಹಾಗೂ ಹೆಮ್ಮೆಗಳೇ ನಾಡಿನ ರಚನೆಗೆ ನಾಂದಿ ಹಾಡುತ್ತವೆ. ಕುಕ್ಕನಹಳ್ಳಿ ಕೆರೆಯ ಮೇಲೆ ಕವನ ಸೂರ್ಯಾಸ್ತಮಾನದ ಸೊಬಗಿನ ಸಂದರ್ಭವನ್ನು ವಿವರಿಸಿದೆ. ಇರುಳಿನ ಕರಿಛಾಯೆ ತೆರೆಗೆ ಬಿದ್ದ ಸಮಯದಲ್ಲಿ ಕವಿ ಕುಕ್ಕನಹಳ್ಳಿ ಕೆರೆಯ ದಡದ ಮೇಲೆ ಒಂಟಿಯಾಗಿ ಕುಳಿತಿದ್ದಾರೆ. ಮೇಲೆ ಆಕಾಶ ನಕ್ಷತ್ರ ಖಚಿತವಾಗಿದೆ. ಷಷ್ಠಿ ಶಶಿಯ ಜೊನ್ನ ಹರಿದ ಹುಟ್ಟಿಯಿಂದ ಜೇನು ಸೋರುವಂತೆ ಧಾರೆ ಧಾರೆಯಾಗಿ ಸೋರಿ ಸುರಿದಿದೆ. ಕೊಳದ ನೀರೆ, ಕಿರಿಯ ನಿರಿಯ ಸೀರೆ ಧರಿಸಿ ಮೆರೆಯುತ್ತಿದ್ದಾಳೆ. ದಡದಲ್ಲಿ ವಿದ್ಯುತ್ತಿನ ದೀಪಮಾಲೆ ಮಿಂಚನ್ನು ಹತ್ತಿಸಿದೆ. ದೀಪದ ಮಾಲೆ ಕೊಳದ ಹೃದಯದಲ್ಲಿ ಪ್ರತಿಫಲಿಸಿದೆ.

**ಬೀದಿಸಾಲು ದೀಪ ಮಾಲೆ**
**ಮಿಂಚು ಹತ್ತಿದೆ !**

---

೧. ಕೆ.ವಿ.ಪುಟ್ಟಪ್ಪ, ಪ್ರ.ಕ., ಸಂಪುಟ. ೧೬, ಸಂಚಿಕೆ –೧, ಪು. ೧೮.

**ಇಲ್ಲಿ ಕೊಳದ ಹೃದಯದಲ್ಲಿ**

**ದಿವ್ಯ ಲೀಲೆ**

**ಕಡೆದ ಉರಿಯ ಕೊಲುಗೊಳ್ಳಿ**

**ಜ್ಯೋತಿ ಶಾಲೆ!**

**ಒಂದು ನಿಮಿಷಕೊಂದು ಪ್ರತಿ**

**ನಿಮಿಷಕೊಂದು ಕಲೆಯ ಕೃತಿ......**[೧]ಯನ್ನು ಕವಿಯ ಮನಸ್ಸಿನಲ್ಲಿ ಸೃಷ್ಟಿಸುತ್ತಿದೆ. ಇಂದು ವಿದ್ಯುದಲಂಕಾರಗಳು ಬೀದಿ ದೀಪಗಳು ಭಾವನೆಗಳನ್ನು ಕೆರಳಿಸದಿರಬಹುದು. ಸೊಬಗೆಂದು ಅನ್ನಿಸದಿರಬಹುದು. ಆದರೆ ೧೯೩೧ರ ವೇಳೆಯಲ್ಲಿ ಇವೆಲ್ಲವೂ ಹೊಸತೇ. ವಿದ್ಯುತ್ತಿನ ಸೌಲಭ್ಯವನ್ನು ಪಡೆಯದೇ ಇರುವ ಸಹಸ್ರಾರು ಪ್ರಾಂತ್ಯದವರೆಗೆ ಇವು ಆಕರ್ಷಣೀಯವಾದ ವಿಚಾರಗಳೇ ಆಗಿರುತ್ತದೆ. ತೀ.ನಂ.ಶ್ರೀಕಂಠಯ್ಯನವರು ಹದಿನಾರನೇ ಕರ್ನಾಟಕ ಸಾಹಿತ್ಯ ಪರಿಷತ್ ಸಮ್ಮೇಳನದ ಸಂದರ್ಭದಲ್ಲಿ ಎಲ್ಲರನ್ನೂ ಸ್ವಾಗತಿಸಿ ಬರೆದ 'ಸ್ವಾಗತ ಗೀತೆ'ಯಲ್ಲಿ ಬರುವ ಮೈಸೂರಿನ ವರ್ಣನೆ ಇದಕ್ಕೆ ಪೂರಕವಾಗಿದೆ. ಬೆಟ್ಟದ ತುದಿಯಲ್ಲಿ ನಿಂತು ಭಕ್ತರ ಅಳಲೆಲ್ಲವನ್ನೂ ದೂರಮಾಡಿ ಒಲುಮೆಯಿಂದ ನಲುಮೆಯಿಂದ ಕಾಯುತ್ತಿರುವ ಚಾಮುಂಡಿ ದೇವತೆ ಎಲ್ಲರಿಗೂ ಶುಭವನ್ನು ಕೋರುತ್ತಿದ್ದಾಳೆ.

**'ಕನ್ನಡದ ರಸಿಕತೆಗೆ ತಾನು ನೆಲೆಯೆನಿಸಿ**

**ಕನ್ನಡದ ನಲ್ನುಡಿಗೆ ಮನ್ನಣೆಯ ಸಲಿಸಿ'**

**ಕೃಷ್ಣ ಪ್ರಭುವಾಳುವೀ ಮೈಸೂರಿನಲ್ಲಿ"**[೨] ನೆಲೆಸಿದ್ದಾಳೆ...... ಆಕೆಯ ತಾಣದಿಂದ ಮೈಸೂರನ್ನು ನೋಡಿದರೆ ಅಲ್ಲಲ್ಲಿ ತಂಪೆರಿಸುವ ಉಪವನಗಳು, ಕೆರೆ, ಗಿರಿಗಳು, ಆಕರ್ಷಣೀಯವಾಗಿ ಕಾಣುತ್ತದೆ. ರಸ್ತೆಯಲ್ಲಿ ಬೆಳಗುತ್ತಿರುವ

**"ತನ್ನಂತರಂಗವನು ತೆರೆದು ತೋರಿಸಿ ಬೆಳಗಿ**

**ತನ್ನ ನಲವನು ನಿಮಗೆ ಪುರವರು ಹುವಂತಿರುವ**

**ಉರಿವ ದೀಪದ ಹಿರಿಯ ಬೀದಿ ಸಾಲು......... "**[೩]

ತನ್ನ ಅಂತರಂಗವನ್ನು ತೆರೆದು ತೋರುವಂತೆ ಕಂಗೊಳಿಸುತ್ತದೆ. ಚಾಮುಂಡಿ ಬೆಟ್ಟ, ಮೈಸೂರಿನ ವಿದ್ಯುದುಪಕರಣಗಳು ಕವಿಗಳಿಗೆ ನೆಲೆ ನೀಡಿರುವ ಮೈಸೂರು ಹೆಮ್ಮೆಯನ್ನುಂಟು ಮಾಡುತ್ತದೆ. ಚಾಮುಂಡಿ ಬೆಟ್ಟದ ನೆತ್ತಿಯಿಂದ ಮೈಸೂರು ನಗರದ ಸೌಂದರ್ಯ ತಿಂಗಳ ಬೆಳಕಿನಲ್ಲಿ ಹೇಗೆ ಕಾಣಿಸುತ್ತದೆ ಎಂಬುದನ್ನೇ 'ತೆಪ್ಪೋತ್ಸವ'

---

೧. ಕೆ.ವಿ.ಪುಟ್ಟಪ್ಪ, ಪ್ರ.ಕ., ಸಂಪುಟ. ೧೪, ಸಂಚಿಕೆ –೨, ಪು. ೩.

೨. ತೀ.ನಂ.ಶ್ರೀಕಂಠಯ್ಯ, ಪ್ರ.ಕ., ಸಂಪುಟ ೧೨. ಸಂಚಿಕೆ ೨. ಪು. ೮.

೩. ತೀ.ನಂ.ಶ್ರೀಕಂಠಯ್ಯ, ಪ್ರ.ಕ., ಸಂಪುಟ ೨೬. ಸಂಚಿಕೆ ೨. ಪು. ೯.

ಕವನವು ವ್ಯಕ್ತಪಡಿಸಿ ಅದರ ಸೌಂದರ್ಯದ ಪರಿ ಎಂತಹದ್ದು ಎಂಬುದನ್ನು ವಿವರಿಸುತ್ತದೆ. ಚಾಮುಂಡಿ ಬೆಟ್ಟದ ಮೇಲೆ ನಡೆಯುವ ತೆಪ್ಪೋತ್ಸವ ವಿಜಯದಶಮಿಯ ಆಕರ್ಷಣೆಗಳಲ್ಲಿ ಒಂದು. ಅದನ್ನು ಕಾಣಲು ಹೋದ ಕವಿಗೆ ಮೈಸೂರು ನಗರದ ಇರುಳಿನ ಸೌಂದರ್ಯ ಹೀಗೆ ಕಾಣಿಸುತ್ತದೆ.

**ತಿಂಗಳ ಕನಸಿನಲ್ಲಿ ಎನಿತು ಮುದ್ದಾಗಿರುದು ನಮ್ಮ ಮೈಸೂರು**
**ಚೆಲುವಿಕೆಯಲಾಳಿತ್ಯೆ ಚಂದ್ರಿಕೆಯ ಮುತ್ತಿನಲಿ ಮಲಗಿ ಮೈಸೂರು**
**ಅರಿಲುಗಳು ಅಲ್ಲಿ ಇಳಿದು ಮಿನುಗುತಿವೆ ಯೆನುವಂತೆ ವಿದ್ಯುದೀಪಗಳು**
**ಹೊರಮೈಯ ಆಕಾರ ಸ್ಪಷ್ಟವಾಗಿವುದು ನೋಡು ಮೈಸೂರು**
**ತೋರುವುದು ಯಾ ಸೊಬಗ ಊರಲಿಹವೆಂಬುದು ಕಾಣು ಮೈಸೂರು**
**ಈ ತೋಟ, ಈ ಹಾದಿ ಅದೋ ಮಹಲು ಇದೋ ಗುಡಿಲು ಗೋಪುರಗಳು**[೧]

ಅರಮನೆಯ ನೆರೆಮನೆಯು ಕೆರೆ ಬನವು ಲಲಿತ ಗಿರಿ ಶೃಂಗಗಳು.... ಚಿತ್ರಗಾರನ ಕುಂಚದಿಂದ ಮೂಡಿರುವ ನೀಳವಾದ ರೇಖೆಗಳಂತೆ ಕಾಣುತ್ತವೆ. ಚೌಕಟ್ಟಿನಲ್ಲಿ ಚಿತ್ರಿಸಿರುವ ಹಾಗೆ ನಯನ ಮನೋಹರವಾಗಿದೆ. ಇಂತಹ ಸಊಂದರ ತಾಣವಾಗಿರುವ ಮೈಸೂರಿನ ಬಗ್ಗೆ ಆಕರ್ಷಣೆ ಮೂಡುವುದು ಸಹಜವಾದ ಕ್ರಿಯೆ.

'ಮೈಸೂರಿನ ಮಧುವನ'ವು ಕೂಡ ಇಂತಹ ಆಕರ್ಷಣೀಯವಾದ ಸ್ಥಳಗಳಲ್ಲಿ ಒಂದು. ಇದು ರಂಗು ರಂಗಿನ ಹೂವಿನ ಆಭರಣಗಳನ್ನು ಧರಿಸಿ ಕಣ್ಣುಗಳಿಗೆ ಆನಂದವನ್ನು ನೀಡುವ ಹಸಿರು ಉಡುಪನ್ನು ಧರಿಸಿರುವ ರೀತಿಯಲ್ಲಿ ಸಿಂಗಾರಗೊಂಡಿದೆ. ಇಲ್ಲಿ ಇರುವ ಕೊಳದಲ್ಲಿ ಬಿಳಿಯ ತಾವರೆ, ಮರಿದುಂಬಿಯ ತಂಡಗಳು, ಗಿಳಿಯ ಸಮೂಹ. ಇವುಗಳೆಲ್ಲವೂ ಗೋಚರಿಸಿ ಹೊಸ ಅನುಭವ ನೀಡುತ್ತಿದೆ. ಅಂಚೆಗಳ ಆಟ ಕೋಗಿಲೆಗಳ ಗಾಯನ ಹಕ್ಕಿಗಳ ಕಲರವ ಇವುಗಳೆಲ್ಲದರಿಂದ ಕಂಗೊಳಿಸುತ್ತಿರುವ

**ಮಧುವನ, ಸೌಂದರ್ಯ ಜಲಧಿಯಲ್ಲಿ ವನಲಕ್ಷ್ಮಿ**
**ಯೋಲಾಡಿ ಹಗಲಲ್ಲಿ ನಲಿಯುತಿಹಳು**
**ಸಮರಾತ್ರಿ ಸಮನಿಸಲು ಕಾಣುವಳು ಋಷಿಯಂತೆ**
**ಯೋಗ ನಿದ್ರೆಯ ತಳೆದ ಯೋಗಿಯಂತೆ....**[೨] ಕಾಣಿಸುತ್ತಿದ್ದಾಳೆ.

ಹಗಲಿನಲ್ಲಿ ಮನಸೂರೆಗೊಂಡು ಚೇತನಗಳಿಗೆ ತಾಣವಾಗಿದ್ದ ಈ ಸ್ಥಳ ಸಾಯಂಕಾಲದ ವೇಳೆ ನಿರ್ಲಿಪ್ತ ಸೌಂದರ್ಯವನ್ನು ಹೊಂದಿ ಮನಸ್ಸಿಗೆ ಶಾಂತಿಯನ್ನು ನೆಮ್ಮದಿಯನ್ನು

---

೧. ಜೈ. ಪ್ರಕ., ಸಂಪುಟ ೨೯, ಸಂಚಿಕೆ ೨, ಪು. ೩೫-೩೬.
೨. ಓ.ಎನ್.ಲಿಂಗಯ್ಯ, ಪ್ರಕ., ಸಂಪುಟ. ೨೪, ಸಂಚಿಕೆ ೪, ಪು. ೫೬.

ಕೊಡುತ್ತಿದೆ. ಇಂತಹ ಸ್ಥಳಗಳು ಮೈಸೂರಿನ ಬಗ್ಗೆ ಕುತೂಹಲವನ್ನು ಉಂಟು-ಮಾಡುತ್ತದೆ.

ಮೈಸೂರಿನ ಸೊಬಗನ್ನು ಜಗತ್ತಿನಾದ್ಯಂತ ಸಾರುತ್ತಿರುವ ಮತ್ತೊಂದು ಸ್ಥಳ 'ಬೃಂದಾವನ'. ಜಗತ್ತಿನ ಅತಿ ಸುಂದರ ಸ್ಥಳಗಳಲ್ಲಿ ಪ್ರಮುಖ ಸ್ಥಾನ ಪಡೆಯಬಲ್ಲ ಆಕರ್ಷಣೀಯ ಸ್ಥಳ ವಿಶ್ವೇಶ್ವರಯ್ಯನವರ ಜಾಣ್ಮೆಯ, ಆಲೋಚನೆಯ ಫಲವಾಗಿ ರೂಪುಗೊಂಡ ಸುಂದರ ತಾಣ.

**ಹಸರು ಹಂದರ ದಿವ್ಯ ಪ್ರಭೆಯ ಕಾಸಾರ**
**ಕುಸುರಿ ಕೆಲಸದ ನವ್ಯಕಾಂತಿಯ ವಷದಾಸಾರ**
**ಕಾಣುವುದು ಕನ್ನಡ ವೈಭವ ಕಲೆಯ ಪ್ರಸ್ತಾರ**[೧]

"ಕೃಷ್ಣಭೂಪನ ಧವಳ ಕೀರ್ತಿಯು ಲತೆಯ ವಿಸ್ತಾರ"ದಂತಿರುವ ಈ ಸ್ಥಳ, ತನ್ನ ಸೊಬಗನ್ನು ಲೋಕಕ್ಕೆಲ್ಲಾ ಸಾರುತ್ತಿರುವಂತೆ ತೋರುತ್ತದೆ. ಅಲ್ಲೇ ಹರಿಯುತ್ತಿರುವ ಕಾವೇರಿ ಮಾತೆ ನೊರೆಯನ್ನು ಚೆಲ್ಲುತ್ತಾ ತನ್ನ ಬಂಗಾರದ ಮೆತ್ತನೆಯ ಹಾಸಿನ ಮೇಲೆ ಕನ್ನಡ ಕಂದನನ್ನು ಜೋಗುಳ ಹಾಡಿ ಮಲಗಿಸುತ್ತಿರುವಂತೆ ತೋರುತ್ತಿದೆ. ಇಂತಹ ಸುಂದರ ಸ್ಥಳದ ಅಂದ ಚಂದವನ್ನು ವರ್ಣಿಸಲು ಕನ್ನಡಿಗರಾದವರಿಗೆ ಮಾತ್ರ ಸಾಕಾಗುವುದಿಲ್ಲ. ಆದುದರಿಂದ ಇದರ ಸೊಬಗನ್ನು ಅನುಭವಿಸಲು, ಆಸ್ವಾದಿಸಲು 'ನೆರೆದು ದೇವತೆಗಳಿಲ್ಲಿ ಅರಳು ಅಕ್ಷತೆ ಚೆಲ್ಲಿ, ಹೊಗಳಿ ಹಾಡಲಿ ನಲ್ವ, ಸಿರಿಯ ಕನ್ನಡ ಚೆಲ್ವ' ಎಂದು ಬೇಡಿಕೊಳ್ಳುತ್ತಾರೆ. ದೇವತೆಗಳಿಂದಲೇ ಹೊಗಳಿಸಿಕೊಳ್ಳುವ ಅರ್ಹತೆಯುಳ್ಳ ಈ ನಮ್ಮ ಚೆಲುವ ಕನ್ನಂಬಾಡಿಯ ದರ್ಶನ ಕನ್ನಡಿಗರೆಲ್ಲರಿಗೂ ಆಗಬೇಕು, ಭಿನ್ನ ಪ್ರದೇಶದ ಕನ್ನಡ ಜನಗಳು ಇಲ್ಲಿಗೆ ಬರಬೇಕು, ಇದು ನಮ್ಮದು ಎಂಬ ಪ್ರೀತಿ ಮೂಡಬೇಕು ಇದು ಕವಿಯ ಅಂತರಾಳದ ಅನಿಸಿಕೆ.

ಹೀಗೆ ಆಧುನಿಕ ಯುಗದಲ್ಲಿ ಗಮನಸೆಳೆಯುತ್ತಿರುವ ಮೈಸೂರಿನ ಹಾಗೆಯೇ ತನ್ನ ಕೈಗಾರಿಕಾ ನೆಲೆಯಿಂದ ಭವ್ಯವಾದ ಪ್ರಾಚೀನ ಹಿನ್ನೆಲೆಯಿಂದ ಗಮನಸೆಳೆಯುವ ಪಟ್ಟಣ 'ಭದ್ರಾವತಿ'. ಭದ್ರಾವತಿಯಿಂದ ದೂರನಾದ ರಸಿಕನೊಬ್ಬ ಅದನ್ನು ನೆನಸಿಕೊಳ್ಳುತ್ತಾ ಅದರ ಸೊಬಗನ್ನು ಪರಿಚಯ ಮಾಡಿಕೊಡುವ ಕವನ "ಭದ್ರಾವತಿ ದೂರವಾಯಿತು. ಇಲ್ಲವಾಯಿತು ಇನ್ನೆನಗೆ ಭದ್ರಾವತಿ" ಎಂದೇ ಪ್ರಾರಂಭವಾಗುವ ಈ ಕವಿತೆಯು ರಸದ ಮಡುವಾಗಿದ್ದ ಅಂತಹ ತಾಣವನ್ನು ಕಾಣುವುದು ಎಂದಿಗೆ?, ಎಂದಿಗೆ? ಎಂದು ಕವಿಯ ಮನಸ್ಸು ಮಿಡುಕಿ ತಲ್ಲಣಗೊಳ್ಳುತ್ತದೆ. ಅಲ್ಲಿದ್ದ ನೈಸರ್ಗಿಕ

---

೧. ಕೆ.ನರಸಿಂಹಶಾಸ್ತ್ರಿ, ಪ್ರಕ., ಸಂಪುಟ. ೨೧, ಸಂಚಿಕೆ ೧, ಪು. ೪.

ಸೌಂದರ್ಯ ಗೆಳೆಯರ ಸಂಗ, ಭದ್ರೆಯ ಒಡನಾಟ, ಶಾಲೆಯ ಪರಿಸರ ಎಲ್ಲವೂ ಅವರಿಗೆ ನೆನಪಿಗೆ ಬರುತ್ತದೆ. ಅಲ್ಲಿ ಕಬ್ಬಿಣದ ಕಾರ್ಖಾನೆಗೆ ತಾವು ಬಾಲ್ಯದಲ್ಲಿ ಭೇಟಿಯಿತ್ತ ಸಂದರ್ಭದಲ್ಲಿ ಮನದಲ್ಲಿ ಉಳಿದುಕೊಂಡ ಚಿತ್ರಗಳು ಕಣ್ಣ ಮುಂದೆಯೇ ಹರಿದಾಡುತ್ತದೆ.

"ಅಲ್ಲೇನನ್ಯಾಯ ರೋಷವೆ ರೋಷ
ಕರ್ಣ ಕಠೋರದ ಯಂತ್ರದ ಘೋಷ
ಘೋರೆನ್ನುತಲಿ ಪಿಶಾಚಿ ಚಕ್ರ........"[೧] ತಿರುಗುವುದನ್ನು ಕಾಣುತ್ತಾರೆ.

ಅಲ್ಲಿ ನಡೆಯುವ ಕಬ್ಬಿಣ ತಯಾರಿಕೆಯ ವಿವಿಧ ಹಂತದ ಕ್ರಿಯೆಗಳನ್ನು ಕಂಡಾಗ ಭೀಕರವಾದ ಆದರೆ ಆ ನಯನ ಮನೋಹರವಾದ ದೃಶ್ಯ.

ಅಗ್ನಿ ದೇವನೆ ನೀರಾದನೋ ಎನೆ
ಬಂಧಿತ ಪಾವಕನೋ ಹೆತ್ತನೋ ಕೆನೆ
ಎಂಬೊಲು ನುಗ್ಗಿತು ಕುಂಕುಮ ಲೋಹ
ನಡೆದಿರುವಂತೆ ಮಿಂಚು ಸಿಡಿಲ್ಗಳ ಕಲಹ[೨]

ಎಂಬ ಭಾವನೆಯನ್ನು ಮೂಡಿಸುತ್ತದೆ. ಕವಿಯ ಮನಸ್ಸಿನ ಮೇಲೆ ಆ ಕಾರ್ಖಾನೆ, ಸ್ಥಳ, ಬೀರುವ ಪ್ರಭಾವ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ಬದುಕಿನ ಹಲವು ರೀತಿಯ ರಾಗ, ದ್ವೇಷಗಳಿಗೆ ಚಾರಿತ್ರಿಕ ಘಟನೆಗಳಿಗೆ, ಮಾನವೀಯ ಸಂಬಂಧಗಳಿಗೆ ನೆಲೆಯಾಗಿರುವ ಆ ಸ್ಥಳ ಹಲವು 'ರಸ'ಗಳಿಗೆ ಕಾರಣೀಭೂತವಾಗುತ್ತದೆ. ಆದುದರಿಂದಲೇ ಕವಿಗೆ 'ಅಂತಹ ರಸದ ಮಡುವನ್ನು ಏತಕ್ಕಾಗಿ ತೊರೆದು ಬಂದೆನೋ' ಎಂದು ಪರಿತಪಿಸುವಂತಾಗುತ್ತದೆ. ಕಲೆ, ಸೌಂದರ್ಯ ಪರಂಪರೆ ಹೀಗೆ 'ಇತ್ತು' 'ಇತ್ತು'ಗಳನ್ನಷ್ಟೇ ಅಲ್ಲದೆ ಕೈಗಾರಿಕೆ ಅಭಿವೃದ್ಧಿ ಆಧುನಿಕತೆ ಇವುಗಳ 'ಇದೆ' ಎನ್ನುವುದನ್ನು ತೋರಿಸಿಕೊಡುತ್ತಿರುವ ಇಂತಹ ತಾಣಗಳು ಕನ್ನಡಿಗನಿಗೆ ಹೆಮ್ಮೆಯನ್ನು ತರುತ್ತದೆ.

ಹೀಗೆ ಮಾನವ ನಿರ್ಮಿತ ಸೊಬಗನ್ನು ವರ್ಣಿಸಿರುವ ಬರಹಗಳು ಇರುವಂತೆಯೇ ಪ್ರಕೃತಿ ನಿರ್ಮಿತವಾದ ನಮ್ಮ ಸುತ್ತಲೂ ಇದ್ದರೂ ನಾಗರಿಕರ ಅವಜ್ಞತೆಗೆ ಒಳಗಾಗಿರುವ ಹಲವಾರು ತಾಣಗಳ ಕಡೆ ಪ್ರಬುದ್ಧ ಕರ್ನಾಟಕದ ಹಲವಾರು ಕವಿತೆಗಳು, ಲೇಖನಗಳು ಗಮನಸೆಳೆಯುತ್ತದೆ. ಕರ್ನಾಟಕದಲ್ಲಿ ಹಸಿರಿಗೆ ನೆಲೆಮನೆಯಾಗಿ ನಿಂತು ತನ್ನ ಭೀಷಣ ಸೌಂದರ್ಯದಿಂದಲೇ ಇಂದಿಗೂ

---

೧. ಬಿಳಿಗಿರಿ, ಪ್ರ.ಕ., ಸಂಪುಟ. ೩೦, ಸಂಚಿಕೆ –೩, ಪು. ೭೫.
೨. ಬಿಳಿಗಿರಿ, ಪ್ರ.ಕ., ಸಂಪುಟ. ೩೦, ಸಂಚಿಕೆ –೩, ಪು. ೭೫.

ಗಮನಸೆಳೆಯುತ್ತಿರುವ ಮಲೆನಾಡಿನ ಬಗ್ಗೆ ಕುವೆಂಪು ಅವರ 'ಮಲೆನಾಡಿನ ಚಿತ್ರಗಳು' ಎಂಬ ಪ್ರಬಂಧಗಳಲ್ಲಿ ವಿವರಗಳು ಲಭ್ಯವಾಗುತ್ತದೆ. ಮುಕ್ಕಾಲು ಶತಮಾನಗಳ ಹಿಂದಿನ ಮಲೆನಾಡಿನ ಪ್ರಕೃತಿ ಜೀವನ, ಪ್ರಾಣಿ ಜೀವನ, ಜನ ಜೀವನಗಳ ಸಂಕ್ಷಿಪ್ತ ಚಿತ್ರಣಗಳು ಈ ಬರಹಗಳಲ್ಲಿ ಮೂಡಿಬಂದಿವೆ. 'ಕಾಡಿನಲ್ಲಿ ಕಳೆದ ಒಂದಿರುಳು' ಎಂಬ ಅವರ ಲೇಖನದಲ್ಲಿ ಬರುವ ಮಲೆನಾಡಿನ ವರ್ಣನೆ ಗಮನಸೆಳೆಯುತ್ತದೆ. "ನಾವು ನಿಂತ ಸ್ಥಳ ಎತ್ತರವಾಗಿತ್ತು. ಸುಮಾರು ಮೂವತ್ತು ಮೈಲಿಗಳ ದೃಶ್ಯ ನಮ್ಮೆದುರಿಗಿತ್ತು. ದಿಗಂತ ವಿಶ್ರಾಂತವಾದ ಸಹ್ಯಾದ್ರಿ ಪರ್ವತ ಶ್ರೇಣಿಗಳು ತರಂಗ ತರಂಗಗಳಾಗಿ ಸ್ಪರ್ಧೆಯಿಂದ ಹಬ್ಬಿದ್ದವು. ದೂರ ಸರಿದಂತೆಲ್ಲ ಅಸ್ಪಷ್ಟವಾಗಿ ತೋರುತ್ತಿದ್ದವು. ಕಣಿವೆಗಳಲ್ಲಿ ಇಬ್ಬನಿಯ ಒಲ್ಲಡಲು ತುಂಬಿತ್ತು. ವೀಚಿ ವಿಕ್ಷೋಭಿತ ಶ್ವೇತ ಘನಾವೃತ ಮಹಾವಾರಧಿಯಂತೆ ಪಸರಿಸಿದ್ದ ತುಷಾರ ಸಮುದ್ರದಲ್ಲಿ ಶ್ಯಾಮಲ ಗಿರಿ ಶೃಂಗಗಳ ದ್ವೀಪಗಳಂತೆ ತಲೆಯತ್ತಿಕೊಂಡಿದ್ದವು. ಕಂದರ ಪ್ರಾಂತ-ಗಳಲ್ಲಿದ್ದ ಗದ್ದೆ, ತೋಟ, ಹಳ್ಳಿ, ಕಾಡು ಎಲ್ಲವೂ ಹೆಸರಿಲ್ಲದಂತೆ ಅಳಿಸಿಹೋಗಿದ್ದವು"[೧] ಎಂತಹ ವಿವರಣೆಗಳನ್ನು ಓದಿದಾಗ ಮಲೆನಾಡಿನ ರುದ್ರ ಭೀಷಣ ದೃಶ್ಯವೆಲ್ಲವೂ ಕಣ್ಣಿಗೆ ಕಟ್ಟಿದಂತಾಗುತ್ತದೆ. ಪ್ರಕೃತಿಯ ಸಹಜವಾದ ಆವರಣದಲ್ಲಿ ಹುಟ್ಟು ಬೆಳೆದ ಕವಿಗೆ ಇವೆಲ್ಲವೂ ಸಹಜವಾದ್ದೇ. ಅವರಿಗೆ ತಾವು ಹುಟ್ಟಿ ಬೆಳೆದ ನೆಲ, ರಮಣೀಯವಾದದ್ದು ಎಂಬ ಅಭಿಮಾನವಿದೆ. ತಾವು ಕಂಡು ಅನುಭವಿಸಿದ ಈ ಸುಖವನ್ನು ಕನ್ನಡಿಗರು ಪಡೆಯಬೇಕೆಂಬುದು ಕವಿಯ ಆಸೆ.

ಹಾಗಾಗಿಯೇ 'ಮಲೆನಾಡಿಗೆ ಬಾ'(೧೩-೩) ಎಂಬ ಆಹ್ವಾನವನ್ನು ಕನ್ನಡಿಗರಿಗೆ, ಕಬ್ಬಿಗರಿಗೆ ನೀಡಿದ್ದಾರೆ. ಮಲೆನಾಡಿನ ಅವಿಭಾಜ್ಯ ಅಂಗವಾಗಿರುವ ಕುಪ್ಪಳ್ಳಿ ಕುವೆಂಪು ಅವರ ಜನ್ಮಸ್ಥಳ. ಮಲೆನಾಡಿನ ಮಡಿಲಲ್ಲಿ ಮಿಂಚಿನ ಕಡಲಿನ ಮಧ್ಯದಲ್ಲಿರುವ ಚೆಲುವಿಗೆ ಆಗರವಾಗಿರುವ ತಾಣ. ಇಲ್ಲಿ ತೊರೆಯಿದೆ, ಕೆರೆಯಿದೆ, ಬೆಟ್ಟವಿದೆ, ಘಟ್ಟವಿದೆ, ಬಿಸಿಲಿದೆ, ತಂಪಿದೆ, ಹೂವಿದೆ, ಫಲವಿದೆ. ಈ ಎಲ್ಲದರ ಜೊತೆಯಲ್ಲೇ ಸೂರ್ಯನ ಉದಯ ಅಸ್ತಮಾನ ಕಣ್ಣಿಗೆ ಸೊಬಗನ್ನು ಉಂಟುಮಾಡುತ್ತಿದೆ. ಇರುಳಿನ ಶಾಂತಿ ತಿಂಗಳ ಬೆಳಕಿನ ಕಾಂತಿ ಮನಸ್ಸಿಗೆ ಮುದವನಿಳಿಯುತ್ತಿದೆ. ಕೋಗಿಲೆಯ ದನಿ, ಗಿಣಿಗಳ ಇಂಚರ ಮನಮೋಹಕವಾಗಿದೆ. ಇಂತಹ ಸುಂದರ ತಾಣವನ್ನು ನೋಡಲು ಕವಿ ಶ್ರೇಷ್ಠರಾದ ಪಂಪ, ರನ್ನರು, ಮಿಲ್ಟನ್, ಷೆಲ್ಲಿ ಎಲ್ಲರೂ ಬರುತ್ತಾರೆ. ಅಂತಹುದರಲ್ಲಿ ಕನ್ನಡಿಗರು ಕನ್ನಡದ ಕಬ್ಬಿಗರಾದವರು ಬರದಿದ್ದರೆ ಆದೀತೇ. ಆದ್ದರಿಂದಲೇ ಈ ತಾಣದ ಸೊಬಗನ್ನು ವೀಕ್ಷಿಸಲು, ಆನಂದಿಸಲು "ಮುದ್ದಿನಹಳ್ಳಿ ಈ ಕುಪ್ಪಳ್ಳಿ"ಗೆ ಬನ್ನಿ ಎಂದು

---

೧. ಕುವೆಂಪು, ಪ್ರ.ಕ., ಸಂಪುಟ ೧೨, ಸಂಚಿಕೆ ೨, ಪು. ೧೪–೧೫.

ಆಹ್ವಾನಿಸಿದ್ದಾರೆ. ಮಲೆನಾಡಿನ ಮಡಿಲಲ್ಲಿ ಬೆಳೆದ ಕವಿಗೆ ಪ್ರಕೃತಿಯ ಸವಿಯನ್ನು ತಾವು ಸವಿದದ್ದು ಮಾತ್ರವಲ್ಲದೆ ಆನಂದಿಸುವ ಗೀಳನ್ನು ತಮ್ಮ ಕೃತಿಗಳ ಮೂಲಕ ಎಲ್ಲರಲ್ಲಿಯೂ ಉಂಟು ಮಾಡಿದ್ದಾರೆ. ನಾಗರಿಕ ಬದುಕಿನ ನಡುವೆ ಹಲವಾರು ಜಂಜಾಟಗಳಿಂದ ತತ್ತರಿಸಿ ಹೋಗುತ್ತಿರುವ ಆಧುನಿಕ ಸಮಾಜದ ಜನತೆ ತಮ್ಮೆಲ್ಲಾ ಸಮಸ್ಯೆಗಳ ನಡುವೆಯೇ ಪ್ರಕೃತಿಯನ್ನು ಗಮನಿಸುವ ಅದರ ಸೊಬಗನ್ನು ಆಸ್ವಾದಿಸುವ ಮನಸ್ಸು ಮಾಡಬೇಕು. ತಮ್ಮ ಸುತ್ತಮುತ್ತಲು ಇರುವ ಇರಬಹುದಾದ ಸೌಂದರ್ಯವನ್ನು ಆಸ್ವಾದಿಸುವ ಮನ ಬೇಕು. ಅದಕ್ಕಾಗಿಯೇ ಕವಿ ಮಲೆನಾಡಿಗೆ ಆಹ್ವಾನಿಸುತ್ತಾರೆ. ಇಂತಹ ಸೊಬಗಿನ ತಾಣಗಳು ನಮ್ಮ ನಾಡಿಗೇ ಸೇರಿದವು ಎಂಬ ಅಭಿಮಾನದಿಂದ ನೋಡಲೆಂದು ಮಲೆನಾಡಿಗೆ ಬರುವಂತೆ ಕರೆಕೊಡುತ್ತಾರೆ. "ಮನುಷ್ಯನು ನಿರ್ಮಿಸುವ ಕಲೆಗಿಂತ ಪ್ರಕೃತಿ ನಿರ್ಮಿಸುವ ಕಲೆ ದೊಡ್ಡದು ಪ್ರಕೃತಿಯ ಒಂದೊಂದು ವ್ಯಾಪಾರವೂ ವಿಶ್ವಕವಿವರನ ವಿಶ್ವಕಾವ್ಯದ ಒಂದೊಂದು ಅಧ್ಯಾಯ"[೧] ಎಂಬುದನ್ನು ಅರಿತಿರುವ ಕವಿ ತನ್ನ ಸುತ್ತಲಿರುವ ಸುಂದರ ತಾಣಗಳ ಬಗ್ಗೆ ಜನರ ಗಮನಸೆಳೆಯುತ್ತಾರೆ.

ತೀರ್ಥಹಳ್ಳಿಯಿಂದ ಸುಮಾರು ಐದು ಐದೂವರೆ ಮೈಲು ದೂರ ದಾಟಿದರೆ ಸಿಬ್ಬಲು ಗುಡ್ಡವೆಂಬ ರಮಣೀಯವಾದ ಸ್ಥಳ ಕಾಣುತ್ತಿದೆ. ಸಣ್ಣ ಸಣ್ಣ ಬಂಡೆಗಳ ಅರೆಕಲ್ಲುಗಳ ನಡುವೆ ತುಂಗೆ ಸುಳಿದು ಜುಳು ಜುಳು ನಿನಾದಗೈಯುತ್ತಾ, ಹರಿಯುತ್ತಿದ್ದಾಳೆ. ಸಿಬ್ಬಲು ಗುಡ್ಡೆಯಲ್ಲಿ ಕವಿ ಒಮ್ಮೆ ಸ್ನಾನ ಮಾಡುವ ಸಂದರ್ಭದಲ್ಲಿ ಆಕಾಶದಲ್ಲಿ ಕಂಡ ಬೆಳ್ಳಕ್ಕಿಯ ಸಾಲು, ಅವರಿಗೆ ಇಡೀ ಸೃಷ್ಟಿಯ ಅಂದ ಚೆಂದಗಳ ಹಿಂದೆ ತನ್ನ ಇರುವಿಕೆಯನ್ನು ಪ್ರದರ್ಶಿಸಲು ಹಾಗೂ ಜಗತ್ತಿನ ಎಲ್ಲಾ ಆಶ್ಚರ್ಯಕರ ಚೇತನಗಳ ಹಿಂದೆ ತನ್ನ ಅಸ್ತಿತ್ವವನ್ನು ಸಮರ್ಥಿಸಲು ಅದರ ಕೆಳಗಿ ಸಹಿ ಮಾಡಿದಂತೆ ತೋರುತ್ತದೆ. ದೇವರು ರುಜು ಮಾಡಿದನು (೨೦-೧) ಎಂಬಂತಹ ಕವನಗಳು ಕೇವಲ ಮಲೆನಾಡಿನ ಸೌಂದರ್ಯದ ಕಡೆ ನಮ್ಮ ಗಮನಸೆಳೆಯುವುದಷ್ಟೇ ಅಲ್ಲದೆ ಇವೆಲ್ಲವೂ ನಮ್ಮ ನಾಡಿಗೆ ಸೇರಿದವು ಎಂಬ ಪ್ರೀತಿಯನ್ನು ಹುಟ್ಟಿಸುತ್ತದೆ. ನಗರದಾಕರ್ಷಣೆಗೆ ಮನಸೋತು ಹಳ್ಳಿಗಳನ್ನು ತೊರೆದು ಪಟ್ಟಣಗಳ ಕಡೆ ಹರಿದು ಬರುತ್ತಿದ್ದ, ಬರುತ್ತಿರುವ, ಅಂದಿನ ಹಾಗೂ ಇಂದಿನ ಸಂದರ್ಭದಲ್ಲಿ ಇಂತಹ ಕವನಗಳು ಪ್ರಮುಖವಾಗಿ ಕಾಣುತ್ತವೆ. ತಾವು ವಾಸಿಸುವ ಪ್ರದೇಶಗಳ ಬಗ್ಗೆ ಅಭಿಮಾನ ಬೆಳಸಿಕೊಳ್ಳದೇ ತಮ್ಮ ನಾಡಿನ ಬಗ್ಗೆ ಅಭಿಮಾನ ಮೂಡಲು ಸಾಧ್ಯವಿಲ್ಲ. ಹಳ್ಳಿಗಳ ವಾಸ ಕೀಳಲ್ಲ ಪಟ್ಟಣದ ವಾಸವೇ ಶ್ರೇಷ್ಠ ಎಂಬ ಭಾವನೆ ಸರಿಯಲ್ಲ ಎಂಬ ತಿಳುವಳಿಕೆ ಮೂಡಿಸಲು ಇಂತಹ ಕವನಗಳು ಸಹಕಾರಿಯಾಗಿವೆ. "ಕುವೆಂಪು ತಮ್ಮ

---

೧. ಪರಮೇಶ್ವರಭಟ್ಟ, ರಸಋಷಿ ಕುವೆಂಪು, ೧೯೮೫, ಪು. ೩೯.

ಸುತ್ತಮುತ್ತಲಿನ ಪ್ರದೇಶಗಳ ಬಗ್ಗೆ ತೋರುತ್ತಿರುವ ಅಭಿಮಾನ ಹಾಗೂ ಪ್ರಾಮುಖ್ಯತೆ ಸ್ವದೇಶೀ ಚಳುವಳಿಯ ಹಿನ್ನೆಲೆಯಲ್ಲಿ ಮಹತ್ವ ಪಡೆದುಕೊಳ್ಳುತ್ತದೆ. ಕುವೆಂಪು ಅವರ ಹಳ್ಳಿಗಳ ಈ ವೈಭವೀಕರಣ ಅಂದಿನ 'ಆತ್ಮಾಭಿಮಾನ ಜಾಗೃತಿ' ಸ್ವದೇಶೀ ಚಳುವಳಿಯ ಸ್ಫೂರ್ತಿಗಳ ಹಿನ್ನೆಲೆಯಲ್ಲಿ ಗಮನಿಸಬಹುದು".[1]

ಅಂಚೆಯ ಅರೆಕಲ್ಲಿನಲ್ಲಿ ಎಂಬ ಕವನದಲ್ಲಿ ಮಲೆನಾಡಿನ ಮಧ್ಯದಲ್ಲಿ ಒಂಟಿಯಾಗಿ ಇರುವ ಈ ತಾಣ ಕವಿಗೆ

**"ನೆತ್ತಿಯೆಡೆ ತಿಳಿಬಾನು ಸುತ್ತಲೂ ವನಧಾತ್ರಿ**
**ಮೊರೆಯುತ್ತಿಹುದೆನ್ನ ಕರೆಯುತಿದೆ ಅನವರತ ಯಾತ್ರಿ**
**ಮಂಜುಲ ತರಂಗಣಿಯ ಜಲಶಿಲಾ ಕಲಲೀಲೆ"**[2]

ಎಂಬಂತೆ ಗೋಚರಿಸುತ್ತದೆ. ಶತಶತಮಾನಗಳಿಂದ ಹರಿಯುತ್ತಿರುವ ಅದರ ತಡಿಯಲ್ಲಿ ಏಕಾಂಗಿಯಾಗಿ ಕುಳಿತು, ಬೆಳೆದಿಹ ಮರದ ತಣ್ಣೆಳಲಲ್ಲಿ ಮಲಗಿ, ಅದರ ಗೇಯಲೋಲುಪಗಾನವನು ಕೇಳಬೇಕೆಂದು ಕವಿ ಬಯಸುತ್ತಾರೆ. ಕವಿಯ ಬಯಕೆ ಓದುಗನ ಹೃದಯದಲ್ಲಿ ಪ್ರತಿಫಲಿಸುತ್ತದೆ. ಮಲೆನಾಡಿನ ನಡುವೆ ಇರುವ ಇಂತಹ ಸುಂದರ ಮಲೆನಾಡ ಚಿತ್ರಗಳ' ಬಗ್ಗೆ ವಿಮರ್ಶಿಸುತ್ತ ಡಾ. ಸಿ.ಪಿ.ಕೃಷ್ಣಕುಮಾರ್ ಅವರು ಹೇಳುವ "ಈ ಪುಸ್ತಕವನ್ನೋದಿದ ಯಾರಿಗಾದರೂ ಮಲೆನಾಡನ್ನು ನೋಡಬೇಕು ಅಲ್ಲಿ ಸುತ್ತಾಡಬೇಕು ಎಂಬ ಆಸೆ ಹುಟ್ಟಿಸುತ್ತದೆ"[3] ಎಂಬ ಮಾತುಗಳನ್ನು ಈ ಕವನಗಳಿಗೂ ಅನ್ವಯಿಸಿ ಹೇಳಬಹುದು. ಇಂತಹ ಸ್ಥಳಗಳ ಬಗ್ಗೆ ಆಕರ್ಷಣೆ ಹುಟ್ಟಿಸುವ ಇಂತಹ ಬರಹಗಳ ಭಿನ್ನಭಿನ್ನವಾದ ಪ್ರದೇಶಗಳಲ್ಲಿದ್ದ ಕನ್ನಡಿಗರ ಮನಸ್ಸನ್ನು ಬೆಸೆಯುವ ಅನುವು ಮಾಡಿಕೊಡುತ್ತದೆ. ಬರಹಗಳಲ್ಲಿ ಕಂಡುಬರುವ ಆಶಯ ತಮ್ಮಂತೆಯೇ ಎಲ್ಲರಿಗೂ ಕಲೆಯ ಕಣ್ಣು ಬರಲಿ ಎಂಬುದೇ ಆಗಿದೆ.

ಕುವೆಂಪು ಅವರ 'ಪ್ರಕೃತಿಯ ಉಪಾಸನೆ' ಎನ್ನುವ ಕವನದಲ್ಲಿ ಇದು ಸೊಗಸಾಗಿ ವ್ಯಕ್ತಗೊಂಡಿದೆ. ನಾಗರೀಕತೆಯೇನೋ ಪಟ್ಟಣದ ಎಲ್ಲ ಕಡೆಯಲ್ಲಿ ತನ್ನ ಛಾಯವನ್ನು ಬೀರುತ್ತಿದೆ. ಪ್ರಸಾದ, ಸೌಧ, ಮಂದಿರ, ಗುಡಿಗೋಪುರ, ಮನೆ, ಚರ್ಚು, ಗುಡಿಸಲು, ಮಸೀದಿ, ಯಂತ್ರಾಲಯ, ಕಾರ್ಖಾನೆ, ಆಸ್ಪತ್ರೆ, ಶಾಲೆ. ಹೀಗೆ ಎಲ್ಲ ಕಡೆಯಲ್ಲೂ ತನ್ನ ಹಸ್ತವನ್ನು ಚಾಚಿದೆ. ಇದರಿಂದಾಗಿ ಪ್ರಕೃತಿಯನ್ನು ನೋಡುವ, ಆಸ್ವಾದಿಸುವ, ಆಸಕ್ತಿಯೇ ನಾಗರೀಕರಿಗೆ ಇಲ್ಲದಂತಾಗಿರುವುದನ್ನು ಕಂಡಾಗ ಕವಿಗೆ ಬೇಸರವೆನಿಸುತ್ತದೆ. 'ಯಾವ ಹೃದಯದ ಮನುಜರಿಹರಿಲ್ಲಿ ನನ್ನ

---

೧. ಕೆ.ಎ.ಲತ, ಕುವೆಂಪು ಕೃತಿ ವಿಮರ್ಶೆ, ೨೦೦೬, ಪು. ೫೯.
೨. ಕುವೆಂಪು, ಪ್ರ.ಕ., ಸಂಪುಟ. ೧೬, ಸಂಚಿಕೆ –೩, ಪು. ೧.
೩. ಕೃಷ್ಣಕುಮಾರ್.ಸಿ.ಪಿ, ಕುವೆಂಪು ಸಾಹಿತ್ಯ ಸಂಧಾನ. ೧೯೯೫, ಪು. ೮೨.

ವೋಲ್ ಯಾರಾದರೀ ಉದಯವನು ನೋಡುತಿಹರೇನು? ಲಕ್ಷದೊಳಗೊಬ್ಬ-ನಿರಬಹುದಾತನಿಗೆ ನಮೋ' ಎನ್ನುತ್ತಾರೆ. ಇದು ಅಹಂಕಾರದ, ಅವಹೇಳನದ ಮಾತುಗಳಲ್ಲ. ಆ ಮಾತುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅದರಲ್ಲಿ ನಾಡನ್ನು ಉನ್ನತಿಯ ಕಡೆಗೆ ಒಯ್ಯುವ ಆಸೆ ಇದೆ ಎಂಬುದನ್ನು ಅರಿತುಕೊಂಡಾಗ ಇಂತಹ ಟೀಕೆಗಳೂ ಕೂಡ ಓದುಗರ ಆತ್ಮೋನ್ನತಿಯ ಸಾಧನವಾಗಿರುವುದು ಸ್ಪಷ್ಟವಾಗುತ್ತದೆ. ಕುವೆಂಪು ಅವರದ್ದು ತಮ್ಮಂತೆಯೇ ಬೇರೆಯವರಿಗೂ ಕಲೆಯ ಕಣ್ಣು ಬರಲಿ ಎಂಬ ಆಶಯ ತಾವು ಮಾತ್ರ ಸರಸಾನುಭವವನ್ನು ಶ್ರೀಮಂತಿಕೆಯನ್ನು ಪಡೆದುಕೊಳ್ಳುವುದು ಅವರಿಗೆ ಬೇಕಿಲ್ಲ. ನಾಡಜನರೆಲ್ಲರೂ ಅದನ್ನು ಪಡೆದು ಉದ್ಧಾರವಾಗಬೇಕು ಆತ್ಮೋನ್ನತಿಯನ್ನು ಪಡೆಯಬೇಕೆಂಬುದೇ ಅವರ ನಿರಂತರ ಅಭೀಪ್ಸೆ. ಜನರು ಕೇವಲ ವಿಷಯೋಪಭೋಗಗಳಿಗೇ ಮಗ್ನರಾಗಿ ನಿಸರ್ಗ ಸೌಂದರ್ಯವನ್ನು ವೀಕ್ಷಿಸದೆ ರಸಾನಂದದಿಂದ ವಿಮುಖರಾಗಿ ಬಾಳುತ್ತಿದ್ದಾರಲ್ಲ ಎಂದು ಕೊರಗುತ್ತಾರೆ. “ಇದಕ್ಕೆ ಅವರಲ್ಲಿ ಸದಾ ಅಂತರ್ಗತವಾಇರುವ ಗುಪ್ತ ಗಾಮಿನಿಯಂತೆ ಪ್ರವಹಿಸುತ್ತಿರುವ ಜನತಾ ದೃಷ್ಟಿಯ ಜನಪರ ಕಾಳಜಿಯ ಮೂಲಕಾರಣವಾಗಿದೆ”[೧]. ನಮ್ಮ ಸುತ್ತಮುತ್ತಲಿನ ಪ್ರದೇಶಗಳಲ್ಲಿರುವ ಸುಂದರ ತಾಣಗಳ ಬಗ್ಗೆ ಅಭಿಮಾನ ತಳೆಯಬೇಕು. ಸುಂದರ ದೃಶ್ಯಗಳು ಕನ್ನಡಿಗರ ಮನಸ್ಸನ್ನು ಸೆಳೆಯಬೇಕು. ಇಂತಹ ಅನುಭವ ಆಗದಿದ್ದರೆ ಜೀವನವೇ ವ್ಯರ್ಥವೆಂಬ ಸಿದ್ಧಾಂತವೂ ಇಲ್ಲಿ ವ್ಯಕ್ತಗೊಂಡಿದೆ. ಇದೇ ಸಂದರ್ಭದಲ್ಲಿ ಇಂತಹ ಅನಿಸಿಕೆಗಳಿಗೆ ವಿರೋಧ ವ್ಯಕ್ತಪಡಿಸುತ್ತಾ ಎಲ್ಲರಿಗೂ ಕಲೆಯ ಆಸ್ವಾದನೆ ಮೊದಲು ಸಾಧ್ಯವಿಲ್ಲ ಹೊಟ್ಟೆಗಿಲ್ಲದ ಬಡವನಿಗೆ ಕಾರ್ಮಿಕನಿಗೆ ಹೊಟ್ಟೆ ಮುಖ್ಯವೇ ಹೊರತು ಪ್ರಕೃತಿಯ ಆರಾಧನೆಯಲ್ಲ ಎನ್ನುವವರನ್ನು ಕುರಿತು “ಸೋದರನೆ ಹೋಗಿ ಕೇಳು ಕೆಲಸಗಾರನಿಗೆ ಅಶಿವ ಕೃತಿಗಳಿಗೆ, ಕಳ್ಳಂಗಡಿಗೆ, ಸಿನಿಮಾಕ್ಕೆ ನೂರಾರು ಹವ್ಯಾಸಗಳಿಗೆನಿತ್ತು ವೇಳೆಯನು ವ್ಯರ್ಥ ಮಾಡುವನೆಂದು”[೨] ಎಂದು ಅವರನ್ನು ಪ್ರಶ್ನಿಸಲು ಕೇಳುತ್ತಾರೆ. ಇಂತಹ ಮಲೆನಾಡಿನ, ಪ್ರಕೃತಿಯ ವಿವರಣೆಗಳು ಸ್ಥಳದ ಪರಿಚಯಗಳು ಕನ್ನಡಿಗರಿಗೆ ಅತಿ ಅವಶ್ಯಕ ಎಂಬುದು ಕುವೆಂಪು ಅವರ ಅಭಿಪ್ರಾಯ ಮಾತ್ರವೇ ಆಗಿರದೆ ಅದು ಪ್ರಬುದ್ಧ ಕರ್ಣಾಟಕದ ಆಶಯವೂ ಆಗಿದೆ. ಇದರಲ್ಲಿ ಪ್ರಕಟಗೊಂಡಿರುವ ಈ ಸ್ಥಳಗಳ ಪರಿಚಯವನ್ನು ಗಮನಿಸಿದಾಗ ಅವುಗಳನ್ನು ಬರೆದಿರುವವರ ಉದ್ದೇಶ ಹಾಗೂ ಪ್ರಕಟಿಸಿರುವ ಪತ್ರಿಕೆಯ ಉದ್ದೇಶವೇನೆಂಬುದು ಸ್ಪಷ್ಟವಾಗಿ ವ್ಯಕ್ತವಾಗಿದೆ.

---

೧. ಲತಾ ರಾಜಶೇಖರ್, ಕುವೆಂಪು ಕಾವ್ಯದಲ್ಲಿ ಪ್ರಕೃತಿ ಒಂದು ಅಧ್ಯಯನ, ೨೦೦೩, ಪು. ೮೭.
೨. ಲತಾ ರಾಜಶೇಖರ್, ಕುವೆಂಪು ಕಾವ್ಯದಲ್ಲಿ ಪ್ರಕೃತಿ ಒಂದು ಅಧ್ಯಯನ, ೨೦೦೩, ಪು. ೮೯.

**ನಾಡಿನ ಸಂಸ್ಕೃತಿಯ ಬಗೆಗಿನ ಕಾಳಜಿ**

ಭಿನ್ನ ಭಿನ್ನವಾದ ಪ್ರದೇಶಗಳಲ್ಲಿ ವ್ಯಕ್ತಗೊಂಡಿರುವ ನಮ್ಮ ನಾಡಿನ ಸಂಸ್ಕೃತಿ, ವೈಭವ ಹಾಗೂ ಸೌಂದರ್ಯ ಇವುಗಳು ಭಿನ್ನ ಭಿನ್ನ ಕಾರಣಗಳಿಂದಾಗಿ ನಾಶದ ಅಂಚನ್ನು ಮುಟ್ಟಿದಾಗ ನಮ್ಮ ಸಂಸ್ಕೃತಿ ಪ್ರಾಚೀನವಾದದ್ದು. ಭವ್ಯವಾದ ಪರಂಪರೆಯನ್ನು ಹೊಂದಿದ್ದು. ಅದನ್ನು ಉಳಿಸಿಕೊಳ್ಳಬೇಕು ಎಂಬ ಆಶಯವನ್ನು ವ್ಯಕ್ತಗೊಳಿಸುವ ಬರಹಗಳು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡಿವೆ. ಕಾಲನ ಹಾವಳಿ, ವೈರಿಗಳ ಹಾವಳಿಗಳ ಹಾಗೆಯೇ ಕನ್ನಡ ನಾಡು ಎದುರಿಸಿದ ಮತ್ತೊಂದು ಹಾವಳಿಯೆಂದರೆ ಆಧುನಿಕತೆಯ ಹೆಸರಿನಲ್ಲಿ ಕನ್ನಡಿಗರ ಮೇಲೆ ನಡೆದ ಪಾಶ್ಚಾತ್ಯ ಸಂಸ್ಕೃತಿಯ ದಾಳಿ. ಸ್ವಾತಂತ್ರಪೂರ್ವದ ಸಮಸ್ಯೆಯಾಗಿದ್ದ ಪೂರ್ವ ಪಶ್ಚಿಮಗಳ ಮುಖಾಮುಖಿಯ ಹೋರಾಟವನ್ನು ಮಾಸ್ತಿಯವರ ಮಸುಮತ್ತಿ (೫–೧) ಕಥೆ ಚೆನ್ನಾಗಿ ಪ್ರತಿಬಿಂಬಿಸಿದೆ. ಮಾಸ್ತಿಯವರಿಗೆ ನಮ್ಮ ನಾಡಿನ ಸಂಸ್ಕೃತಿಯ ಬಗ್ಗೆ ಅಭಿಮಾನ ಹಾಗೂ ವಿಶ್ವಾಸ. ಆದರೆ ವಸಾಹತುಶಾಹಿಗಳ ಆಳ್ವಿಕೆಗೆ ಒಳಪಟ್ಟಿದ್ದ ಆ ಸಂದರ್ಭದಲ್ಲಿ ನಮ್ಮ ಸಂಸ್ಕೃತಿಯು ಹಿಂದೆ ಇದ್ದಂತೆ ಅದು ತನ್ನ ಮೂಲರೂಪದಲ್ಲಿ ಉಳಿದುಕೊಂಡಿಲ್ಲ ಎಂಬ ನೋವು ಅವರಿಗಿತ್ತು. ನಮ್ಮ ನಾಡು ಚೆನ್ನಾಗಿ ಇರಬೇಕು ನಮ್ಮ ಬಾಳು ಬೆಳಗಬೇಕು. ಭಾರತ ದೇಶದ ಹಿರಿತನದ ಬಗ್ಗೆ ಕನ್ನಡ ನಾಡಿನ ಸಂಸ್ಕೃತಿಯ ಬಗ್ಗೆ ನಮಗೆ ಗೌರವ ಇರಬೇಕು. ತಾತ್ಕಾಲಿಕವಾಗಿ ಈಗ ಭಾರತ ಪರಕೀಯರ ಆಡಳಿತಕ್ಕೆ ಸಿಲುಕಿಕೊಂಡಿದ್ದರೂ ನಮ್ಮ ನಾಡಿನಲ್ಲಿ ನಮ್ಮದೇ ಆದ ಸಂಸ್ಕೃತಿ ಇದೆ. ಅದನ್ನು ನಾವು ಉಳಿಸಿಕೊಳ್ಳಬೇಕು. ಆಸೆ ಆಮಿಷಗಳಿಗೆ ನಮ್ಮ ಸಂಸ್ಕೃತಿಯ ಸೊಬಗು ನಾಶವಾದರೆ ಪುನಃ ಅದು ನಮಗೆ ದೊರಕದು ಎಂಬ ಭಾವನೆಯೂ ಕಥೆಯಲ್ಲಿ ವ್ಯಕ್ತವಾಗಿದೆ.

'ಮಸುಮತ್ತಿ'ಯ ಕೃಷ್ಣಯ್ಯ ಕಾಯ್ದಿರಿಸಿದ ಗೋಪಾಲಕೃಷ್ಣನ ಅಪೂರ್ಣ ಚಿತ್ರಗಳು ನಮ್ಮ ನಾಡಿನ ಸಂಸ್ಕೃತಿಯ ಪ್ರತಿನಿಧಿಸಿದೆ. ಕಥೆಯಲ್ಲಿ ಬರುವ ಕೋರ್ಟ್ನೀ ಎಮಿಲಿ ಹಾಗೂ ಫರ್ಸುವರ ಈ ಮೂವರೂ ನಮ್ಮ ಸಂಸ್ಕೃತಿಯನ್ನು ಭಿನ್ನಭಿನ್ನವಾದ ದೃಷ್ಟಿಕೋನದಿಂದ ನೋಡುವವರ ಸಂಕೇತವಾಗಿ ನಿಲ್ಲುತ್ತಾರೆ. ಕೋರ್ಟ್ನೀ ಭಾರತದಲ್ಲಿದ್ದ ಬ್ರಿಟಿಷರ ಪ್ರತಿನಿಧಿಯಂತೆ ಕಂಡುಬರುತ್ತಾನೆ. ಅವನಿಗೆ ಸಂಸ್ಕೃತಿ ಪ್ರಮುಖವಾದ ವಿಚಾರವಾಗಿಲ್ಲ. ಆಧುನಿಕತೆಯ ಹೆಸರಿನಲ್ಲಿ ಸಂಪೂರ್ಣವಾಗಿ ನಮ್ಮ ಸಂಸ್ಕೃತಿಯ ಬಗ್ಗೆ ಅವಜ್ಞತೆಯನ್ನು ತೋರುವ ಮಂದಿಯಂತೆ ಈತ. ಫರ್ಸುವರ ನಮ್ಮ ನಾಡಿನ ಸಂಸ್ಕೃತಿಯ ಪ್ರತಿನಿಧಿಯಾದ ಕಲಾಕೃತಿಯನ್ನು ತನ್ನ ದೇಶಕ್ಕೆ ಸಾಗಿಸುವ ವ್ಯಾಪಾರಿಯಂತೆ ತೋರುತ್ತಾನೆ. ತಮ್ಮ ಸಂಸ್ಕೃತಿಯ ಹಿರಿಮೆಯ ಅರಿವಿಲ್ಲದೆ ಕೇವಲ ವೈಯಕ್ತಿಕವಾದ ಲಾಭಗಳಿಗೆ ಸೀಮಿತವಾದ ಜನರನ್ನು ಈತ ಪ್ರತಿನಿಧಿಸುತ್ತಾನೆ.

ಕಥೆಯ ದೃಷ್ಟಿಯಿಂದ ಹಾಗೂ ನಮ್ಮ ನಾಡಿನ ಸಂಸ್ಕೃತಿಯ ವೈಭವವನ್ನು ನಮ್ಮಲ್ಲೇ ಉಳಿಸುವ ಅವಳ ಆಲೋಚನೆಗಳ ಕಾರಣದಿಂದ ಎಮಿಲಿ ಪ್ರಮುಖವಾಗುತ್ತಾಳೆ. ನಮ್ಮೀ ನಾಡಿನ ಸಂಸ್ಕೃತಿ ನಮ್ಮಲ್ಲೇ ಉಳಿಯಬೇಕು. ಅದರ ರಕ್ಷಣೆ ನಮ್ಮದೇ ಕರ್ತವ್ಯ ಎಂಬುದನ್ನು ಈಕೆ ಪ್ರತಿಬಿಂಬಿಸುತ್ತಾಳೆ. ನಮ್ಮ ಸಂಸ್ಕೃತಿಗೆ ತಾತ್ಕಾಲಿಕವಾದ ಅಡೆತಡೆಗಳು ತೊಂದರೆಗಳು ಎದುರಾಗಿರಬಹುದು. ಆದರೆ ಅವುಗಳನ್ನು ಎದುರಿಸಿ ಸಂಸ್ಕೃತಿಗೆ ರಕ್ಷಣೆ ಹಾಗೂ ಪೋಷಣೆ ನೀಡಿದಾಗ ಅದು ದೃಢವಾಗಿ ಉಳಿಯುತ್ತದೆ. ಕಲ್ಲು ಕಳಚಿ ಒಣಗಿದ ಕೆರೆಯನ್ನು ಕಂಡಾಗ ಎಮಿಲಿ ತನ್ನ ಅಣ್ಣನಿಗೆ ಹೇಳುವ "ಈಗ ಇದರಲ್ಲಿ ನೀರಿಲ್ಲ ಕಟ್ಟಡ ಚೆನ್ನಾಗಿದೆ ಸೊಪ್ಪು ಸದೆಯನ್ನು ತೆಗೆದು ಹಾಕಿ ಸರಿಯಾಗಿ ನೋಡಿಕೊಂಡರೆ ನೀರು ಇಂದಿಲ್ಲದಿದ್ದರೆ ನಾಲ್ಕು ವರುಷದ ಮೇಲೆ ಬಂದಾಗ ಇದು ಒಳ್ಳೆಯ ಕೊಳ. ಕೊಳವಿದ್ದರೆ ನೀರು ಬರಬಹುದು. ಕಲ್ಲನ್ನು ಕಳಚಿಕೊಂಡು ಹೋಗುವವರು ಹೋಗಿ ಕೆಟ್ಟು ಹೋದ ಬಾವಿ ಎಂದು ಬಾವಿಯನ್ನು ಎಲ್ಲರೂ ಅಷ್ಟಿಷ್ಟು ಕೆಡಸಿದರೆ ನೀರು ಬಂದಾಗ ಕೊಳವಿಲ್ಲ"[೧] ಎನ್ನುವ ಮಾತುಗಳು ಗಮನಾರ್ಹವಾದದ್ದು. ಇಲ್ಲದೇ ಇರುವುದನ್ನು ಅಪೇಕ್ಷಿಸಿ ಇರುವುದನ್ನು ಕಳೆದು-ಕೊಂಡು ಪರಿತಪಿಸಬಾರದೆನ್ನುವ ಸಂದೇಶ ನೀಡುತ್ತದೆ. ಭಾರತವನ್ನು ಇಲ್ಲಿಯ ಸಂಸ್ಕೃತಿಯನ್ನು ಪ್ರತಿನಿಧಿಸುವ ವಸ್ತುಗಳ ಪರದೇಶೀಯರ ಪಾಲಾಗಬಾರದು. ನಮ್ಮ ಸಂಸ್ಕೃತಿಯ ಕುರುಹುಗಳು ನಮ್ಮಲೇ ಉಳಿಯಬೇಕು ಎನ್ನುವ ಎಮಿಲಿಯ ಅನಿಸಿಕೆ, ಮಾಸ್ತಿಯವರ ಹಾಗೂ ಸಂಸ್ಕೃತಿಯ ಉಳಿವಿಗಾಗಿ ಹೋರಾಡುತ್ತಿದ್ದವರ ಮದಳಾದ ಆಶಯವೂ ಅದೇ ಆಗಿದೆ. "ನಾವು ಪಟ ಚೆನ್ನಾಗಿದೆ ಅಂತ ಪಟವನ್ನು ವಿಗ್ರಹ ಚೆನ್ನಾಗಿದೆ ಅಂತ ವಿಗ್ರಹವನ್ನು ಇದು ಅದು ಚೆನ್ನಾಗಿದೆ ಎಂತ ಇದು ಅದು ಎಲ್ಲವನ್ನೂ ಇಲ್ಲಿಂದ ಹೊತ್ತುಕೊಂಡು ಹೋದರೆ ಈ ಸೀಮೆ ಮುಂದಕ್ಕೆ ಬರೊವಾಗ, ಇವೆಲ್ಲಾ ಆರೋಡಾಗಿ ಹೋಗಿರುತ್ತದೆ"[೨] ಎನ್ನುವುದು ಅವಳ ಅಭಿಪ್ರಾಯ. ಇದು ಹಾಗಾಗ ಕೂಡದು. ಇದಕ್ಕೆ ನಾವುಗಳು ಅವಕಾಶವನ್ನು ಕೊಡಬಾರದು ಎಂಬುದು ಅಲ್ಲಿನ ಆಶಯ. ನಮ್ಮ ನಾಡಿನ ಸಂಸ್ಕೃತಿಯ ತಾತ್ಕಾಲಿಕವಾದ ಎಡರುತೊಡರುಗಳಿಂದ ಬಳಲುತ್ತ ಇರಬಹುದು. ಆದರೆ ಮುಂದೆ ಅದು ಪುನಃ ವೈಭವವನ್ನು, ಹಿರಿಮೆ-ಯನ್ನು ಪಡೆಯುತ್ತದೆ. ಅದಕ್ಕೆ ಅವಕಾಶವಾಗಬೇಕು. ಸಡಿಲಗೊಳ್ಳುವ ನಮ್ಮ ಸಂಸ್ಕೃತಿಯನ್ನು ಗಟ್ಟಿಗೊಳಿಸಬೇಕು. ಆಧುನಿಕತೆಯ ಬೆನ್ನುಹತ್ತಿ ನಮ್ಮ ನಾಡಿನ ನಾಗರಿಕತೆ ಸಂಸ್ಕೃತಿ ಇವುಗಳನ್ನು ಮರೆತು ಅವುಗಳ ವಿನಾಶಕ್ಕೆ ಪರೋಕ್ಷ-ವಾಗಿಯಾದರೂ ಕಾರಣರಾಗಬಾರದು. ನಮ್ಮ ನಾಡಿನ ಸಂಸ್ಕೃತಿ ವೈಭವ ಇವುಗಳನ್ನು

---

೧. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರ.ಕ., ಸಂ. ೫, ಸಂಚಿಕೆ-೧, ಪು. ೪
೨. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರ.ಕ., ಸಂ. ೫, ಸಂಚಿಕೆ-೧, ಪು. ೯

ನಮ್ಮ ಮುಂದಿನ ಜನಾಂಗ ಅರಿತುಕೊಳ್ಳಬೇಕಾದರೆ ಸಂಸ್ಕೃತಿಯ ಪಳೆಯುಳಿಕೆಗಳನ್ನು ಸಂರಕ್ಷಿಸಿಕೊಳ್ಳಬೇಕು ಹಣದಾಸೆಯಿಂದಲೋ, ಅವಿವೇಕದಿಂದಲೋ ಅವುಗಳನ್ನು ಕಳೆದುಕೊಂಡರೆ ಅದು ಪುನಃ ನಮಗೆ ದಕ್ಕದ ವಸ್ತುವಾಗುತ್ತದೆ. ಹೀಗೆ ಕನ್ನಡನಾಡಿನ ವೈಭವವನ್ನು ಪರಿಚಯಿಸುವ ಬರಹಗಳ ಜೊತೆಯಲ್ಲೇ ಅದನ್ನು ಉಳಿಸಿಕೊಳ್ಳಬೇಕೆಂಬ ಆಲೋಚನೆಯನ್ನೂ ಪ್ರಬುದ್ಧ ಕರ್ಣಾಟಕ ಪ್ರಕಟಿಸಿದೆ.

ಸಂಸ್ಕೃತಿ ಎಂದರೇನು? ಅದರ ಪುನರುದ್ಧಾರ ಆಗುವ ಬಗೆ ಹೇಗೆ ಎಂಬಂತಹ ವಿಚಾರವನ್ನು ಚರ್ಚಿಸಿರುವ 'ಸಂಸ್ಕೃತಿ ಮತ್ತು ಪುನರುದ್ಧಾರ' ಎಂಬ ಲೇಖನವೂ ನಾಲ್ಕು ಸಂಚಿಕೆಗಳಲ್ಲಿ ಪ್ರಕಟವಾಗಿದೆ. ಎಲ್.ಶ್ರೀಕಂಠಯ್ಯನವರು ಬರೆದಿರುವ ಈ ಲೇಖನದಲ್ಲಿ ಸಂಸ್ಕೃತಿಯ ಪುನರುದ್ಧಾರವಾಗಬೇಕಾದರೆ ಯಾವ ಯಾವ ಅಂಶಗಳ ಕಡೆ ಗಮನಹರಿಸಬೇಕಾಗಿದೆ ಎಂಬುದರ ವಿವರಣೆ ಇದೆ. ನಮ್ಮ ಸಂಸ್ಕೃತಿ ಎಂದ ಕೂಡಲೆ ಅದರಲ್ಲಿ ಎಲ್ಲವೂ ಇದೆ ಎಂಬ ಕುರುಡು ನಂಬಿಕೆಯನ್ನು ದೂರ ಮಾಡಬೇಕು. ನಮ್ಮ ಸಂಸ್ಕೃತಿಯಲ್ಲಿ ಇರಬಹುದಾದ ಒಳಿತು ಕೆಡಕುಗಳನ್ನು ನಿಷ್ಪಕ್ಷಪಾತವಾಗಿ ಚಿಂತಿಸಿ ಅರ್ಥಮಾಡಿಕೊಳ್ಳಬೇಕು. "ನಮ್ಮ ಸಂಸ್ಕೃತಿ ಎಂಬ ಅಂಧ ಪ್ರೇಮಕ್ಕೆ ತುತ್ತಾಗಿ ವಿಜ್ಞಾನಕ್ಕೆ ಮತ್ತು ವೈಜ್ಞಾನಿಕ ದೃಷ್ಟಿಗೆ ಸರಿಹೊಂದದ ಆಚಾರ ವ್ಯವಹಾರಗಳನ್ನು ಹಳೆಯ ಭಾವನೆಗಳನ್ನು ಮತ್ತು ಗತಿಸಿದ ರೀತಿ ನೀತಿಗಳನ್ನು ಪುನರುದ್ಧಾರ ಮಾಡಲು ಯತ್ನಿಸಬಾರದು"[೧] ಆಧುನಿಕತೆಯು ಎಲ್ಲಾ ಕಡೆಯಲ್ಲೂ ಪಸರಿಸುತ್ತಿದ್ದು ಅದರಲ್ಲಿರುವ ಒಳ್ಳೆಯ ಅಂಶಗಳನ್ನಷ್ಟೇ ಸ್ವೀಕರಿಸಬೇಕು. 'ಕರ್ನಾಟಕ ಜನತೆಯ ಸಂಸ್ಕೃತಿ'(೧೩-೨) ಎಂಬ ಲೇಖನದಲ್ಲೂ ಇದೇ ಅಭಿಪ್ರಾಯವು ಸಮರ್ಥನೆಗೊಂಡಿದೆ. ನಮ್ಮ ಜನರ ಜೀವನವು ಈಗ ಹೊಸದೊಂದು ರೀತಿಯಲ್ಲಿ ಬಹುಮುಖವಾಗಿ ಹಬ್ಬುತ್ತಿದೆ. ಈ ಹಬ್ಬುಗೆಯು ಶುಭಪ್ರದವಾಗಬೇಕಾದರೆ ನಾವು ಅದನ್ನು ಸರಿಯಾದ ದಾರಿಗಳಿಗೆ ತಿದ್ದಿಕೊಳ್ಳಬೇಕು. ಹಳೆಯದನ್ನು ತೀರಾ ಬಿಡದೆ ಅದಕ್ಕೆ ಅತಿಯಾಗಿ ಕಟ್ಟುಬೀಳದೆ ವಿವೇಚನೆಯಿಂದ ನಡೆದುಕೊಳ್ಳಬೇಕು ಅಷ್ಟೆ ಅಲ್ಲದೆ ಹೊರಗಿನ ಸಂಸ್ಕೃತಿಯನ್ನು ಅನುಸರಿಸುತ್ತಾ ಅದರಲ್ಲೇ ಸುಖ ಕಾಣುವ ಕೆಲವರು ನಮ್ಮ ಸಂಸ್ಕೃತಿಯಲ್ಲಿ ಇರುವ ದೋಷಗಳನ್ನು ಎತ್ತಿಹಿಡಿಯುತ್ತಾರೆ. ಹೀಗೆ ನಿಂದೆಗೆ ಒಳಗಾಗುವ ಸಂಸ್ಕೃತಿ ನಮ್ಮದು ಎಂದು ನಾವು ಬೇಸರಿಸಿಕೊಂಡರೆ ಅಥವಾ ಕೋಪಿಸಿಕೊಂಡರೆ ಪ್ರಯೋಜನವಿಲ್ಲ. ಹೀಗೆ ದೋಷ ನುಡಿಯುವವರ ಅಭಿಪ್ರಾಯ-ಗಳನ್ನು ಸಾವಧಾನವಾಗಿ ಪರಿಶೀಲಿಸಿ ಅವರ ಅಭಿಪ್ರಾಯಗಳ ಸಾಧುತೆಯನ್ನು ಗಮನಿಸಿ ಒಪ್ಪಿಕೊಳ್ಳಬೇಕು. ಪಾಶ್ಚಾತ್ಯನಾಡಿನ ಸಂಸ್ಕೃತಿಯ ಬಗ್ಗೆ ಬರುವ ಹೊಗಳಿಕೆಯ ಮಾತುಗಳನ್ನು ಕೇಳಿ ಕನ್ನಡನಾಡಿನ ಸಂಸ್ಕೃತಿ ಕೀಳಾದದು ಎಂಬ

---

೧. ಎಲ್.ಶ್ರೀಕಂಠಯ್ಯ, ಪ್ರ.ಕ., ಸಂಪುಟ. ೩೬, ಸಂಚಿಕೆ. ೪, ಪು. ೧೫೭.

ಕೀಳರಿಮೆ ಪಡಬೇಕಾದುದಲ್ಲ. ಕನ್ನಡದ ಸಂಸ್ಕೃತಿಯ ಆಚರಣೆಗಳಲ್ಲಿ ಕೆಲವೊಂದು ಲೋಪಗಳು ಇರಬಹುದಾದರೂ ಹೆಮ್ಮೆಪಡುವಂತಹ ವಿಚಾರಗಳು ಹೆಚ್ಚಿನ ಪ್ರಮಾಣದಲ್ಲಿಯೇ ಇದೆ. ಅದನ್ನು ಗಮನಿಸಿ ತಲೆಯೆತ್ತಿಕೊಂಡು ನಡೆಯಬೇಕು. ಹೀಗೆ ಭಾರತದ ಒಟ್ಟು ಸಂಸ್ಕೃತಿಯನ್ನು ಕುರಿತು ಯೋಚನೆ ಮಾಡುವಾಗ ಅದು ಕರ್ನಾಟಕ ಸಂಸ್ಕೃತಿಯ ಬಗ್ಗೆ ಚಿಂತನೆಯೂ ಆಗಿರುತ್ತದೆ. "ಭರತ ಖಂಡದ ಬೇರೆ ಬೇರೆ ನಾಡುಗಳ ಸಂಸ್ಕೃತಿಯನ್ನು ನೋಡಿದರೆ ಅದರಲ್ಲಿ ಬಹುಭಾಗ ಸಾಮಾನ್ಯವಾಗಿ ಇರಬಹುದು; ಸಾಮಾನ್ಯವಾಗಿರುವುದೇ ನಿಜ"[೧]. ಹೀಗಾಗಿ ಸಂಸ್ಕೃತಿಯ ವಿಷಯದಲ್ಲಿ ಭಾರತ ಎದುರಿಸುತ್ತಿದ್ದ ಸಮಸ್ಯೆ ಕರ್ನಾಟಕದ ಸಮಸ್ಯೆಯೂ ಆಗಿರುತ್ತದೆ. ಆದರೂ ಆಯಾ ನಾಡಿನ ಲಕ್ಷಣ ಸೌಕರ್ಯ ಇತಿಹಾಸಗಳಿಗೆ ಅನುಗುಣವಾಗಿ ಕೆಲವೊಂದು ವಿಶೇಷ ಗುಣಗಳು ಇರುವುದು ಸ್ವಾಭಾವಿಕವೇ. ಈ ನಿಟ್ಟಿನಿಂದ ಆಲೋಚಿಸಿದರೆ ನಮ್ಮ ಕರ್ನಾಟಕದ ಜನಪದರಲ್ಲಿ ಇರುವ ಆಚರಣೆ ಸಂಪ್ರದಾಯ ಇವುಗಳಲ್ಲಿ ಇರುವ ವೈಶಿಷ್ಟ್ಯತೆಗಳು ಗಮನಸೆಳೆಯುತ್ತದೆ.

**ಜಾನಪದ ಆಚರಣೆ**

ಜನಪದ ಸಾಹಿತ್ಯ, ಜನಪದರು, ಜಾನಪದ ಕಲೆ ಇವುಗಳ ಬಗ್ಗೆ ವಿಶೇಷವಾದ ಅಧ್ಯಯನ ನಡೆಯದೆ ಇದ್ದ ಕಾಲ ಘಟ್ಟದಲ್ಲೇ ಪ್ರಬುದ್ಧ ಕರ್ನಾಟಕವು ಅಂತಹ ವಿಷಯಗಳ ಕಡೆ ಹರಿಸಿತು. ಸಂಸ್ಕೃತಿ ಎಂದಾಗ ಅದು ಮಾನವ ಸಮುದಾಯದ ಸಂಪ್ರದಾಯಗಳಿಂದ ಹಿಡಿದು ವೈಯಕ್ತಿಕ ಆಚರಣೆಯವರೆಗೂ ಹಬ್ಬಿದೆ ಎಂದು ಅರ್ಥೈಸಿಕೊಂಡಾಗ ನಮ್ಮ ಜನಪದರ ನಡುವೆ ಇರುವ ಕೆಲವೊಂದು ವಿಶಿಷ್ಟ ಆಚರಣೆಗಳು ನಮಗೆ ಸಂಸ್ಕೃತಿಯ ಬಗ್ಗೆ ಹೆಮ್ಮೆ ಮೂಡಿಸುತ್ತದೆ. ನಮ್ಮ ಜನಪದ ಸಾಹಿತ್ಯಗಳಲ್ಲಿ ಅಂದಿನ ಇಂದಿನ ಆಧುನಿಕ ಜಗತ್ತಿನಿಂದ ದೂರವಾಗಿರುವ ಹಲವಾರು ಅಪರೂಪದ ಆಚರಣೆಗಳ ವಿವರಣೆ ಲಭ್ಯವಾಗುತ್ತದೆ. ಜನಪದ ಸಾಹಿತ್ಯ ಎಂಬುದು ಪಂಡಿತರಿಂದ ರಚಿತವಾದ ಗ್ರಂಥಸ್ಥ ಸಾಹಿತ್ಯವಲ್ಲ. ಅವುಗಳ ಯಾರನ್ನೋ ಮೆಚ್ಚಿಸಲು ಬರೆದವುಗಳಲ್ಲ. ಜೀವನದ ಬದಲಾವಣೆಗೆ ಅನುಗುಣವಾಗಿ ಬೆಳೆದುಬಂದವು. ಒಬ್ಬ ವ್ಯಕ್ತಿಯ ಕೃತಿಯಾಗದೆ, ಸಮಷ್ಠಿ ಮನಸ್ಸಿನ ಪ್ರತಿನಿಧಿಗಳಾಗಿ ಅಂತೆಯೇ ಸಮಷ್ಠಿ ಸಂಸ್ಕೃತಿಯ ನಿಧಿಗಳಾಗಿ ಪರಿಣಮಿಸಿದವು. "ಜನಪದ ಸಾಹಿತ್ಯದಲ್ಲಿ ಬಹುಭಾಗವನ್ನು ಹೆಣ್ಣು ಮಕ್ಕಳ ಹಾಡುಗಳೇ ಆಕ್ರಮಿಸುತ್ತವೆನ್ನಬಹುದು. ನಮ್ಮ ಜನಾಂಗದ ಸಂಸ್ಕೃತಿಯ ಕೆನೆ ಅನೇಕ ವೇಳೆ ಹೆಣ್ಣುಮಕ್ಕಳ ಹಾಡಿನಲ್ಲಿ ವ್ಯಕ್ತವಾಗುತ್ತದೆ"[೨]

---

೧. ಮಾಸ್ತಿ ವೆಂಕಟೇಶ ಅಯ್ಯಂಗಾರ್(ಸಂ.), ಪ್ರ.ಕ., ಸಂಪುಟ ೧೩, ಸಂಚಿಕೆ-೨, ಪು.

೨. ತಿಪ್ಪೇರುದ್ರಸ್ವಾಮಿ.ಎಚ್, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೬೮, ಪು. ೪೩೧.

ದೇವರ ಸ್ತುತಿ, ತವರಿನ ಹಂಬಲ, ಪತಿಯ ಪ್ರೇಮ, ಸಂಸಾರದ ಸುಖ ದುಃಖಗಳು ಇವುಗಳನ್ನು ಒಳಗೊಂಡಿರುವ ಜಾನಪದ ಸಾಹಿತ್ಯಗಳು ಇರುವಂತೆಯೇ ಅವುಗಳಲ್ಲಿ ಮುಖ್ಯವಾದ ಒಂದು ಭಾಗ ಹಬ್ಬ ಹುಣ್ಣಿಮೆ ಪ್ರಸ್ತ ಪ್ರಯೋಜನಗಳಲ್ಲಿ ಹೇಳುವ ಪದಗಳು. ಮೈಸೂರು ಪ್ರಾಂತದ ಹರಿಜನರಲ್ಲಿ ಇರುವುದೆಂದು ಹೇಳುವ ಎಣ್ಣೆಶಾಸ್ತ್ರದ ಪದಗಳು ಅಕ್ಕತಂಗಿಯರ ಅಕ್ಕರೆ ಪ್ರೀತಿ ಇವುಗಳ ಗಾಢತೆಯ ಪರಿಚಯವನ್ನು ಸೊಗಸಾಗಿ ಮಾಡುತ್ತದೆ.

**ಶಾಸ್ತ್ರವ ಮಾಡಿರಿ ಸೂಸ್ತ್ರದ ಬೊಂಬೆಗೆ**
**ಲೋಕ ಪಾಲಕರ ಮಗನೀಗೆ ಮದ್ಲಗಿತ್ತೀಗೆ**
**ಶಾಸ್ತ್ರವ ಮಾಡಿ ನಡುಮನೆಲಿ**
**ಅಕ್ಕಿ ಇಕ್ಕಿರಿ ಅಚ್ಚಮುತ್ತೈದೇರು**
**ಪಾರುವತಿ ಪಡೆದ ಮಗನಿಗೆ ಮದ್ಲಗಿತ್ತೀಗೆ**
**ಅಕ್ಷತೆ ಇಕ್ಕಿ ಐವಾರು**
**ಆರಣ್ಣೆ ತೂರಣ್ಣೆ ಆರು ಆನದೊಳ್ಳೆಣ್ಣೆ**
**ನಾರೀರ ಕೈಯ ಉಗುರೆಣ್ಣೆ ಒತ್ತೀರಿ**
**ರಾಜ್ಯವಾಳುವವರ ಮಗನೀಗೆ......** [೧]

ಗೀತೆ ಹೀಗೆ ಮುಂದುವರೆದುಕೊಂಡೇ ಹೋಗುತ್ತದೆ. ಈ ಹಾಡಿನಲ್ಲಿ ಕಂಡುಬರುವ ಮಣೆಯಲ್ಲಿ ಕುಳಿತ ವ್ಯಕ್ತಿ ಗಣಪತಿಯಲ್ಲ, ಸುಬ್ರಹ್ಮಣ್ಯನೂ ಅಲ್ಲ. ಪಾರ್ವತಿಯ ಮಮತೆ ಪಡೆದ ಮಗ. ಇಂತಹವನಿಗೆ ಶಾಸ್ತ್ರವನ್ನು ಮಾಡಬೇಕು. ಈ ಶಾಸ್ತ್ರದಲ್ಲಿ ಅಕ್ಷತೆ ಇದೆ. ನಾರೀರ ಕೈಯ ಉಗುರೆಣ್ಣೆ ಇದೆ ದೊರೆಯ ಮಗನಿಗೆ ಸಮನಾಗಿ ಪಡೆಯುತ್ತಿರುವ ಈ ಸೇವೆಯ ಹಿಂದೆ ಪ್ರೀತಿ ಉಂಟು. ಇಂತಹ ಆಚರಣೆ ಅದರ ಹಿಂದಿರುವ ಸಂಸ್ಕೃತಿ ಕುರಿತು ಮಾಸ್ತಿಯವರು "ಇದು ಹರಿಜನರಲ್ಲಿ ಸಿಕ್ಕಿದ ಪದ್ಯ. ತಪೋವನದಲ್ಲಾಗಲೀ ಅರಮನೆಯಲ್ಲಾಗಲೀ ಇವಕ್ಕೆ ಮೀರಿದ ಸಂಸ್ಕೃತಿ ದೊರೆಯಲಾರದು... ಅಸಂಸ್ಕೃತರನ್ನಬಹುದಾದ ಜನರಲ್ಲಿ ಕಾಣುವ ಈ ಸಂಸ್ಕೃತಿ ಮೆರಗನ್ನು ನೋಡಿ ಯಾರಾದರೂ ಆಶ್ಚರ್ಯಪಡಬೇಕು ಎಂದಿದ್ದಾರೆ. ಇದು ನಮ್ಮ ನಾಡಿನ ಕೆಳಸ್ತರದಲ್ಲಿ ಇದ್ದರೆಂದು ಭಾವಿಸುವ ಜನಾಂಗದಲ್ಲೂ ಕಂಡುಬರುವ ಸಾಂಸ್ಕೃತಿಕ ಪ್ರಬುದ್ಧತೆಯನ್ನು ತಿಳಿಸುತ್ತದೆ.

ಎಂ.ಆರ್.ಲಕ್ಷ್ಮಮ್ಮ ಅವರು ಬರೆದಿರುವ ಕೊಂತಮ್ಮನ ಪದಗಳು ಲೇಖನ ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಅದರಲ್ಲೂ ಮುಖ್ಯವಾಗಿ ಮಳವಳ್ಳಿಯ

---

೧. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರ.ಕ. ಸಂಪುಟ –೮, ಸಂಚಿಕೆ ೨, ಪು. ೫.

ತಿರುಮಲಕೂಡಲು, ಬನ್ನೂರು ಈ ಕಡೆಗಳಲ್ಲಿ ವಿಶೇಷವಾಗಿ ಹಬ್ಬಿರುವ ಕೊಂತಮ್ಮನ ಪೂಜೆಯ ಬಗ್ಗೆ ತಿಳಿಸುತ್ತದೆ.[೧] ಮೇಲೆ ಹೇಳಿರುವ ಪ್ರಾಂತಗಳಲ್ಲದೆ ಶಿವಮೊಗ್ಗೆಯ ಹತ್ತಿರ ನಂದಿಕೊಪ್ಪಲು ಬೆಂಗಳೂರಿನ ಸಮೀಪದ ಕಾನ್‌ಕಾನಹಳ್ಳಿ (ಕನಕಪುರ) ತುಮಕೂರಿನ ಶಿರ ಈ ಪ್ರಾಂತಗಳಲ್ಲೂ ಕೂಡ ಕೊಂತಮ್ಮನ ಪೂಜೆ ಇರುವುದನ್ನು ಗಮನಿಸಿರುವ ಲೇಖಿಕೆಯರು ಕೊಂತಿಯನ್ನು ಪೂಜಿಸುವ ಕ್ರಮ, ಕೊಂತಿಯನ್ನು ಸಿದ್ಧಪಡಿಸಿಕೊಳ್ಳುವ ರೀತಿ, ಅದನ್ನು ಆಚರಿಸುವ ಬಗೆಯನ್ನು ವಿವರಿಸುತ್ತಿದ್ದಾರೆ. ಕರ್ನಾಟಕದ ಕೆಲವು ಭಾಗಗಳಲ್ಲಷ್ಟೇ ಕಂಡು ಬರುವ ಈ ವಿಶಿಷ್ಟವಾದ ಆಚರಣೆ ಆಕರ್ಷಣೀಯವಾದದ್ದು. ನಮ್ಮ ನಾಡಿನ ಸಂಸ್ಕೃತಿಗೆ ವೈವಿಧ್ಯತೆಯನ್ನು ಒದಗಿಸು-ವಂತಹದ್ದು. ಕೊಂತವ್ವನನ್ನು ಆರಾಧಿಸುವ ಮೊದಲು ಕೊಂತಿಯನ್ನು ತಯಾರು ಮಾಡಿಕೊಳ್ಳುವುದೇ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಸಾಮಾನ್ಯವಾಗಿ ಇದು ಸೋಮವಾರ ಪ್ರಾರಂಭವಾಗುತ್ತದೆ. ಮಣ್ಣಲ್ಲಿ ಜಗತಿ ಐದು ಅಂತ ಪ್ರಾಕಾರ ರಚನೆ ಮಾಡಿಕೊಂಡ ನಂತರ ಎರೆ ಮಣ್ಣಿನಿಂದ ಮಾಡಿದ ಸ್ತ್ರೀ ವಿಗ್ರಹ ಇಟ್ಟು ಪೂಜೆ ಮಾಡುವ ಕ್ರಮ ಉಂಟು. ಕೆಲವು ಕಡೆ ಸಣ್ಣ ಗುಂಡುಕಲ್ಲನ್ನೇ ಕೊಂತಿಯೆಂದು ಭಾವಿಸಿದರೆ ತೇಗದ ಮರದಲ್ಲಿ ಬಳಪದ ಕಲ್ಲಲ್ಲಿ ಕೊಂತಿಯ ವಿಗ್ರಹ ಮಾಡಿ ಇಟ್ಟುಕೊಳ್ಳುವುದೂ ಉಂಟು. ಆದರ್ಶ ಸತಿ ಮಾತೆ ಎನಿಸಿದ ಕುಂತಿಯನ್ನು ತಮಗೂ ಸತ್ ಸಂತಾನ ಸತ್‌ಕೀರ್ತಿ ದೊರಕಲಿ ಎಂದು ಮಹಿಳೆಯರು ಶ್ರದ್ಧಾ ಭಕ್ತಿಯಿಂದ ಮಾಡುವ ಪೂಜೆ. ಇದೇ ಸಂದರ್ಭದಲ್ಲಿಯೇ ವಿನಾಯಕ ಅವರಿಂದ ರಚಿತವಾದ ಹೋಳಿ ಹುಣ್ಣಿಮೆ ಕವನವು ಹೋಳಿ ಹುಣ್ಣಿಮೆಯ ಆಚರಣೆ ಹಾಗೂ ಆ ಆಚರಣೆಯು ನಮಗೆ ನೀಡುವ ಸಂದೇಶ ಇವುಗಳ ಕಡೆ ನಮ್ಮ ಗಮನ ಸೆಳೆಯುತ್ತದೆ. ಹೋಳಿ ಹುಣ್ಣಿಮೆಯ ಆಚರಣೆಯನ್ನು ಕುರಿತಂತೆ

**ಕೇರಿಗೆ ಒಸಗೆ ಮಸಗುತಿವೆ ಎಸಗುತಿವೆ**
**ಬಾರಿ ಬಾರಿಗೆ ಬೆಳೆದು ಮದ್ದಳೆಯ ಮದವು**
**ಓಕುಳಿಯ ಜೀಕುಳಿಯನಾಡುತ್ತಿವೆ ಜನವೆಲ್ಲ**
**ಚಣ ಚಣಕೆ ಕೇಳುತಿದೆ ದುಮ್ಮಿ ದುಮ್ಮಿ ಪದವು**
**ಇಂದೆ ಕಾಮನ ಕರೆಸಿ ದಿನವೆಲ್ಲಾ ಬೋಳೈಸಿ**[೨]

ಕೊನೆಗೆ ಕೊಲ್ಲಿಸಲು ಪಣ ತೊಟ್ಟ ಜನರು... ಇವನ್ನು ಪರಿಚಯಿಸುವ ಮೂಲಕ ಹೋಳಿ ಹುಣ್ಣಿಮೆಯ ಆಚರಣೆ, ಅದನ್ನು ಆಚರಿಸುವ ಜನಗಳು ಹಾಗೂ ಅವರ ನಡವಳಿಕೆಯಲ್ಲಿರುವ ಗೊಂದಲಗಳು ಇವುಗಳ ಬಗ್ಗೆ ಗಮನ ಸೆಳೆಯುತ್ತದೆ.

---

೧. ಎ.ಆರ್.ಲಕ್ಷ್ಮಮ್ಮ, ಪ್ರ.ಕ. ಸಂಪುಟ ೨೪, ಸಂಚಿಕೆ ೭.
೨. ವಿನಾಯಕ, ಪ್ರ.ಕ. ಸಂಪುಟ. ೧೬, ಸಂಚಿಕೆ-೪, ಪು.

ನಮ್ಮ ನಾಡಿನ ಜಾನಪದ ಸಂಸ್ಕೃತಿಯನ್ನು, ಆಚರಣೆಯನ್ನು ಬಿಂಬಿಸುವ ಲೇಖನಗಳೇ ಇರುವಂತೆಯೇ ನಮ್ಮ ನಾಡಿನ ಸುಸಂಸ್ಕೃತ ಕಾಡು ಜನಾಂಗವಾದ ಸೋಲಿಗರ ಬಗ್ಗೆಯೂ ಹಾಗೂ ಅವರ ಬದುಕಿನ ಕ್ರಮದ ಬಗ್ಗೆ ಕಿರುಪರಿಚಯ ಮಾಡಿಕೊಡುವ 'ಸೋಲಿಗರು'[1] ಬಿಳಿಗಿರಿ ರಂಗನ ಬೆಟ್ಟ, ಕಾಕನಕೋಟೆ ಸರಹದ್ದು. ಈ ಪ್ರಾಂತ್ಯದಲ್ಲಿ ವಾಸಿಸುವ ಜನ. ಮಹದೇಶ್ವರ ಬೆಟ್ಟ, ಬೂದಿ ಪಡಗ, ಗುಂಡಲ್, ಬುರುಡೆ ಬೈಲೂರು ಕಾಡುಗಳಲ್ಲಿ ವಾಸಿಸುವ ಈ ಜನರ ಸಂಪ್ರದಾಯಗಳು ಬಹಳ ವಿಶಿಷ್ಟ ಹಾಗೂ ಕಠಿಣವಾದವು. ಈ ಲೇಖನವು ಸೋಲಿಗರು, ಅವರ ಪೋಡುಗಳ ನಿರ್ಮಾಣದ ಕ್ರಮ, ಸೋಲಿಗರ ಉತ್ಪತ್ತಿ, ಇವೇ ಮೊದಲಾದ ಅಂಶಗಳ ಕಡೆ ಗಮನಹರಿಸಿದೆ. ಸೋಲಿಗರ ಮೂಲ ಯಾವುದು? ಅವರು ಎಲ್ಲಿಂದ ಬಂದರು? ಅವರು ಹೇಗೆ ಪ್ರಸರಿಸಿದರು? ಇವೇ ಮೊದಲಾದ ವಿಚಾರಗಳನ್ನು ನಿರ್ಧರಿಸುವುದಕ್ಕೆ ಸಾಕಷ್ಟು ಐತಿಹಾಸಿಕ ದಾಖಲೆಗಳು ಲಭ್ಯವಾಗದೆ ಇರುವುದನ್ನು ಒಪ್ಪಿಕೊಂಡು ಇವರಿಗೆ ಸಂಬಂಧಿಸಿದ ಕಥೆಗಳ ಮೂಲಕ ತಿಳಿಸುವ ಪ್ರಯತ್ನ ಮಾಡಿದ್ದಾರೆ. ಇತರ ಸಂಸ್ಕೃತಿಯ ಜನರ ನಡುವೆ ಬಾಳುತ್ತಿದ್ದರೂ ತಮ್ಮ ಸಂಸ್ಕೃತಿಯ ಗುರುತುಗಳನ್ನು ಕಾಪಾಡಿಕೊಂಡು ಬರುತ್ತಿರುವ ಇಂತಹ ಬುಡಕಟ್ಟು ಜನಾಂಗದ ಬಗ್ಗೆ ಅರಿಯುವುದು ನಮ್ಮ ನಾಡಿನ ಬಹುಮುಖ ಸಂಸ್ಕೃತಿಯ ಪರಿಚಯ ಮಾಡಿಕೊಂಡಂತಾಗುತ್ತದೆ. ಈ ಎಲ್ಲಾ ಲೇಖನಗಳಲ್ಲಿ ಇರುವ ಆಶಯಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವುಗಳು ಕೇವಲ ಸ್ಥಳ ಪರಿಚಯಕೋಸ್ಕರವಾಗಿಯೇ ಪ್ರಕಟವಾಗಿರುವಂತೆ ಕಂಡುಬರುವುದಿಲ್ಲ. ಅದರ ಬದಲಾಗಿ ೧. ಕರ್ನಾಟಕದಲ್ಲಿ ಇರುವ ಮನೋಹರವಾದ ತಾಣಗಳನ್ನು ಪರಿಚಯಿಸುವ ೨. ಕರ್ನಾಟಕದ ಸಂಸ್ಕೃತಿಯನ್ನು ಜನರಿಗೆ ತಿಳಿಸುವುದು ೩. ನಮ್ಮ ಪರಂಪರೆಯ ಬಗ್ಗೆ ಅಭಿಮಾನ ಬೆಳೆಸುವುದು. ೪. ಹಾಳಾಗುತ್ತಿರುವ ಕಲಾ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದು. ೫. ಕನ್ನಡಿಗರೆಲ್ಲರೂ ಒಂದೇ ಎಂಬ ಭಾವನೆ ಮೂಡುವಂತೆ ಮಾಡುವುದು. ೬. ಕನ್ನಡ ನಾಡೆಲ್ಲವೂ ಒಂದೇ ಎಂಬ ವಿಚಾರವನ್ನು ಕನ್ನಡಿಗರಲ್ಲಿ ತುಂಬುವುದು ೭. ಕರ್ನಾಟಕ ಏಕೀಕರಣದ ಬಗ್ಗೆ ಅಭಿಪ್ರಾಯಗಳನ್ನು ಕ್ರೋಢೀಕರಿಸುವುದು ೮. ಏಕೀಕರಣ ಹೋರಾಟಕ್ಕೆ ಕನ್ನಡಿಗರನ್ನು ಮಾನಸಿಕವಾಗಿ ಸಿದ್ಧಗೊಳಿಸುವುದು ೯. ಕನ್ನಡಿಗರಿಗೆ ಬೇಕಾಗಿದ್ದ ಹೋರಾಟದ ಸ್ಫೂರ್ತಿಯನ್ನು ತುಂಬುವುದು ೧೦. ಕನ್ನಡಿಗರಾದ ನಾವು ಯಾರಿಗೂ ಯಾವುದರಲ್ಲೂ ಕಮ್ಮಿ ಇಲ್ಲ ಎಂಬ ಆತ್ಮವಿಶ್ವಾಸವನ್ನು ಹೆಚ್ಚಿಸುವುದು. ಹೀಗೆ ಹತ್ತು ಹಲವು ಕಡೆ ಅದು ಗಮನಹರಿಸಿದೆ.

---

೧. ಕೃಷ್ಣಯ್ಯಂಗಾರ್.ಡಿ. ಪ್ರ.ಕ., ಸಂಪುಟ ೨೬, ಸಂಚಿಕೆ ೨, ಪು. ೩೭.

**ಏಕೀಕರಣಕ್ಕೆ ಮುನ್ನ ನಾಡಿನ ಪರಿಸ್ಥಿತಿ**

ಆಧುನಿಕ ಕರ್ನಾಟಕ ಕಂಡ ಎರಡು ಮುಖ್ಯವಾದ ಐತಿಹಾಸಿಕ ಘಟನೆಗಳೆಂದರೆ ಸ್ವತಂತ್ರ ಸಂಗ್ರಾಮ ಮತ್ತು ರಾಜ್ಯದ ಏಕೀಕರಣ. ಸ್ವಾತಂತ್ರ ಸಂಗ್ರಮ ಇಡೀ ಭಾರತಕ್ಕೆ ಸಂಬಂಧಿಸಿದ್ದಾದರೆ ಏಕೀಕರಣ ಕೆಲವು ಪ್ರದೇಶಗಳಿಗೆ ಸೀಮಿತವಾಗಿತ್ತು. ಆದರೆ ಈ ಎರಡೂ ಚಳುವಳಿಗಳು ಒಟ್ಟಾಗಿಯೇ ನಡೆದವು. ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಉದಯಿಸಿದ ಪಾಳೇಗಾರರು ಕರ್ನಾಟಕದ ಸಂಸ್ಕೃತಿಯನ್ನು ರಕ್ಷಿಸಿದರಾದರೂ ತಮ್ಮ ನಡುವಿನ ಆಂತರಿಕ ಕಲಹಗಳು ಮತ್ತು ಅನೈತಿಕತೆಯಿಂದ ಕರ್ನಾಟಕದ ಅಖಂಡತೆಯನ್ನು ಉಳಿಸಿಕೊಳ್ಳಲು ವಿಫಲರಾದರು. ಮೈಸೂರಿನ ಒಡೆಯರ ಕಾಲಾವಧಿಯಲ್ಲಿ ಕರ್ನಾಟಕದ ಏಕೀಕರಣದ ಬಗ್ಗೆ ಆಲೋಚನೆಗಳು ಸೃಷ್ಟಿಯಾಗಿದ್ದವು. ಹೈದರಾಲಿ ಹಾಗೂ ಟಿಪ್ಪುವಿನ ಕಾಲದಲ್ಲಿ ಅಖಂಡತೆಯನ್ನು ಉಳಿಸಿಕೊಂಡಿದ್ದ ನಮ್ಮ ನಾಡು ೧೭೯೯ರಲ್ಲಿ ಟಿಪ್ಪುಸುಲ್ತಾನ್ ನಾಲ್ಕನೆಯ ಮೈಸೂರು ಯುದ್ಧದಲ್ಲಿ ಮಡಿದ ನಂತರ ಆಂಗ್ಲರು ತಮ್ಮ ಅನುಕೂಲಕ್ಕೆ ತಕ್ಕಂತೆ ಮೈಸೂರು ರಾಜ್ಯವನ್ನು ವಿಭಜಿಸಿದರು. ಟಿಪ್ಪುವಿನ ವಿರುದ್ಧ ತಮಗೆ ನೆರವು ನೀಡಿದ್ದ ಹೈದರಾಬಾದು ನಿಜಾಮ, ಮರಾಠರು ಮತ್ತು ಮೈಸೂರಿನ ಒಡೆಯರ್‌ಗಳಲ್ಲಿ ಅದನ್ನು ಹಂಚಿದರು. ಹಾಗಾಗಿ ಅಖಂಡ ಕರ್ನಾಟಕ ಅನೇಕ ಸಂಸ್ಥಾಪಕರ ಆಳ್ವಿಕೆಯಲ್ಲಿ ಹಂಚಿಹೋಯಿತು. ಮೈಸೂರು ಪ್ರಾಂತ್ಯದ ಅಡಿಯಲ್ಲಿ ಮೈಸೂರು, ಮಂಡ್ಯ, ತುಮಕೂರು, ಹಾಸನ, ಶಿವಮೊಗ್ಗ, ಚಿಕ್ಕಮಗಳೂರು, ಚಿತ್ರದುರ್ಗ, ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳು ಸೇರಿದ್ದವು. ಇದಲ್ಲದೆ ಕೊಡಗು, ಮುಧೋಳ, ಜಮಖಂಡಿ ಮೊದಲಾದ ಹಲವಾರು ಸಣ್ಣ ಪುಟ್ಟ ಸಂಸ್ಥಾನಗಳಿದ್ದವು. ಉಳಿದ ಭಾಗವು ಮುಂಬಯಿ, ಹೈದರಾಬಾದ್ ಹಾಗೂ ಮದ್ರಾಸ್ ಪ್ರಾಂತಗಳ ಆಳ್ವಿಕೆಗೆ ಒಳಪಟ್ಟಿದ್ದವು. ಬ್ರಿಟಿಷರ ಆಳ್ವಿಕೆಯನ್ನು ಗಮನಿಸು–ವುದಾದರೆ ಕನ್ನಡ ಮಾತಾಡುವ ಜನಗಳು ಸುಮಾರು ೨೦ಕ್ಕೂ ಮಿಗಿಲಾದ ಆಡಳಿತ ಘಟಕಗಳಲ್ಲಿ ಹಂಚಿಹೋಗಿದ್ದರು. ಸಾಹಿತ್ಯಕವಾಗಿಯೂ ಸಾಂಸ್ಕೃತಿಕವಾಗಿಯೂ ಮಾತ್ರವಲ್ಲದೆ ರಾಜಕೀಯವಾಗಿ ಅಖಂಡವಾಗಿದ್ದ ನಾಡು ಭಾರತದ ಇತರ ಪ್ರದೇಶಗಳಂತೆ ಛಿದ್ರವಾಗಿದ್ದನ್ನು ಕಂಡ ಕನ್ನಡಿಗರಲ್ಲಿ ಏಕೀಕರಣದ ಕಲ್ಪನೆ ಬಹಳ ಹಿಂದಿನಿಂದಲೇ ಮೂಡುತ್ತಿತ್ತು. ಇದಕ್ಕೆ ಭಾರತದ ಇತರ ಭಾಗಗಳಲ್ಲಿ ನಡೆಯುತ್ತಿದ್ದ ಘಟನೆಗಳು ಪ್ರಚೋದನೆಯನ್ನು ನೀಡಿದವು.

೧೮೫೮ರಲ್ಲಿ ಕಂಪನಿ ಸರ್ಕಾರವನ್ನು ಕೊನೆಗಾಣಿಸುವ ಸಲುವಾಗಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಭಾರತ ಸರ್ಕಾರ ವಿಧೇಯಕ ಮಂಡನೆಯಾದ ಸಂದರ್ಭದಲ್ಲಿ ಭಾರತದಲ್ಲಿ ಪ್ರಾಂತ್ಯಗಳ ರಚನೆಯಾಗಬೇಕೆಂದೂ ಅದಕ್ಕಾಗಿ ಭಾಷೆಗಳನ್ನು

ಆಧಾರವಾಗಿರಿಸಿಕೊಂಡು ಐದು ಪ್ರಾಂತ್ಯಗಳ ನಿರ್ಮಾಣವಾಗಬೇಕೆಂಬ ಅಭಿಪ್ರಾಯ ವ್ಯಕ್ತವಾಗಿತ್ತು. ೧೮೭೪ರ ಸುಮಾರಿನಿಂದ ಬಂಗಾಲ ಹಾಗೂ ೧೮೭೯ರಿಂದ ಒರಿಸ್ಸಾದಲ್ಲೂ ಭಾಷೆಗೆ ಅನುಗುಣವಾಗಿ ಪ್ರಾಂತ್ಯಗಳ ರಚನೆಯಾಗಬೇಕೆಂದು ಚಳುವಳಿ ಪ್ರಾರಂಭವಾಯಿತು. ಲಾರ್ಡ್‌ಕರ್ಜನ್ ಬಂಗಾಳವನ್ನು ವಿಭಜಿಸಲು ಕೈಗೊಂಡ ತೀರ್ಮಾನದಿಂದಾಗಿ ಭಾರತಾದ್ಯಂತ ಹೋರಾಟ ಪ್ರಾರಂಭವಾಯಿತು. ಅದರ ಕಾರಣದಿಂದಾಗಿ ಒಂದೊಂದು ಪ್ರಾಂತದವರಲ್ಲೂ ಪ್ರತ್ಯೇಕ ಪ್ರಾಂತ್ಯ ನಿರ್ಮಾಣದ ಆಸೆ ಚಿಗುರೊಡೆಯತೊಡಗಿತು.

ಕರ್ನಾಟಕದ ಏಕೀಕರಣದ ವಿಚಾರವನ್ನು ಗಮನಿಸುವುದಾದರೆ ೧೮೫೬ರಲ್ಲಿ ಡೆಪ್ಯೂಟಿ ಚೆನ್ನಬಸಪ್ಪನವರು, ಧಾರವಾಡ, ಬಿಜಾಪುರ, ಉತ್ತರ ಕನ್ನಡ ಮತ್ತು ಬೆಳಗಾಂವಿ ಜಿಲ್ಲೆಗಳಲ್ಲಿ ಈ ಚಳುವಳಿಗೆ ಪ್ರಾರಂಭವನ್ನು ಒದಗಿಸಿದರು. ೧೮೯೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಪ್ರಾರಂಭವಾದಾಗ ಈ ಹೋರಾಟಕ್ಕೆ ಸಂಘಟನೆಯೊಂದರ ಬೆಂಬಲ ದೊರೆಯಿತು. ೧೯೦೩ರಲ್ಲಿ ಬೆನಗಲ್ ರಾಮರಾಯರು ಕರ್ನಾಟಕ ಏಕೀಕರಣ ಕುರಿತು ಧಾರವಾಡದಲ್ಲಿ ಭಾಷಣ ಮಾಡಿದರು. ೧೯೦೭ರಲ್ಲಿ ಆಲೂರು ವೆಂಕಟರಾಯರು ವಾಗ್ಭೂಷಣ ಪತ್ರಿಕೆಯಲ್ಲಿ ಲೇಖನವೊಂದನ್ನು ಬರೆದರು. ೧೯೧೫ರಲ್ಲಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತು. ಇದರಲ್ಲಿ ಕರ್ನಾಟಕದ ವಿವಿಧ ಪ್ರಾಂತ್ಯಗಳಿಗೆ ಪ್ರಾತಿನಿಧ್ಯ ದೊರೆತು ಕರ್ನಾಟಕ ಏಕೀಕರಣಕ್ಕೆ ಸಾಂಸ್ಕೃತಿಕ ಸ್ವರೂಪ ದೊರೆಯಿತು. ೧೯೧೭ರಲ್ಲಿ ಕಡಪ ರಾಘವೇಂದ್ರರಾವ್, ಮುಡವೀಡು ಕೃಷ್ಣರಾವ್, ಗಾದಿಗಯ್ಯ, ಹೊನ್ನಾಪುರ ಮಠ ಇವರುಗಳ ಪ್ರಯತ್ನದಿಂದ ಕರ್ನಾಟಕ ಸಭೆಯ ಸ್ಥಾಪನೆಯಾಯಿತು. ಈ ಸಭೆಯ ಉದ್ದೇಶ ಕರ್ನಾಟಕ ಏಕೀಕರಣ ಸಾಧಿಸುವುದೇ ಆಗಿತ್ತು. ಇದಕ್ಕೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಬೆಂಬಲವೂ ದೊರೆಯಿತು.

೧೯೨೦ರಲ್ಲಿ ಮೈಸೂರಿನ ದಿವಾನರಾಗಿದ್ದ ವಿ.ಪಿ.ಮಾಧವರಾಯರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಮೊತ್ತಮೊದಲನೆಯ ಕರ್ನಾಟಕ ರಾಜಕೀಯ ಸಮ್ಮೇಳನ ನಡೆದು ಕರ್ನಾಟಕ ಪ್ರಾಂತ್ಯ ನಿರ್ಮಾಣ ಮಾಡಬೇಕೆಂದು ನಿರ್ಣಯವಾಯಿತು. ೧೯೨೩ರಲ್ಲಿ ಮುಂಬಯಿ ಶಾಸನ ಸಭೆಯಲ್ಲಿ ಸಿದ್ದಪ್ಪ ಕಂಬಳಿಯವರು ಏಕೀಕರಣವನ್ನು ಸಮರ್ಥಿಸಿದರು. ೧೯೨೪ ಬೆಳಗಾವಿಯಲ್ಲಿ ನಡೆದ ಹಾಗೂ ೧೯೨೭ರಲ್ಲಿ ಅಖಿಲ ಭಾರತ ಕಾಂಗ್ರೆಸ್ ಮುಂಬೈ ಅಧಿವೇಶನದಲ್ಲಿ ಕರ್ನಾಟಕ ಪ್ರಾಂತ್ಯ ರಚನೆಗೆ ಬೆಂಬಲ ಸೂಚಿಸಿತು. ೧೯೨೮ರಲ್ಲಿ ಯು.ರಾಮರಾಯರು ಕೇಂದ್ರ ಶಾಸನ ಮಂಡಳಿಯ ಮುಂದೆ ಕರ್ನಾಟಕ ಏಕೀಕರಣದ ಬಗ್ಗೆ ಗೊತ್ತುವಳಿಯನ್ನು ತಂದರು. ೧೯೩೧ರಲ್ಲಿ ಲಂಡನ್ನಿನಲ್ಲಿ ನಡೆದ

ದುಂಡು ಮೇಜಿನ ಪರಿಷತ್ತಿನಲ್ಲಿ ಕರ್ನಾಟಕ ಏಕೀಕರಣದ ಪ್ರಸ್ತಾಪವಾಯಿತು. ೧೯೨೮ರ ಸೈಮನ್ ಸಮಿತಿಯ ಮುಂದೆ ಕರ್ನಾಟಕ ಏಕೀಕರಣ ಬೇಡಿಕೆಯನ್ನಿಟ್ಟಾಗ ಆ ಸಮಿತಿಯವರು ಅದನ್ನು ಒಪ್ಪಿ ಆ ತತ್ವಗಳಿಗೆ ಅನುಸಾರಿಯಾಗಿ ರೂಪುಗೊಳಿಸಬೇಕು ಎಂದು ಸೂಚಿಸಿದರು. ೧೯೩೮ರಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ನಿರ್ಣಯವನ್ನೊಂದನ್ನು ತೆಗೆದುಕೊಂಡು ತಾನು ಅಧಿಕಾರಕ್ಕೆ ಬಂದಾಗ ಭಾಷಾನುಗುಣವಾಗಿ ಪ್ರಾಂತ್ಯಗಳನ್ನು ನಿರ್ಮಾಣ ಮಾಡುವುದಾಗಿ ಹೇಳಿತು. ೧೯೪೬ರಲ್ಲಿ ಕರ್ನಾಟಕ ಏಕೀಕರಣ ಸಭೆಯ ಹತ್ತನೆಯ ಅಧಿವೇಶನದಲ್ಲಿ ಸರ್ದಾರ್ ಪಟೇಲರು ಛಿದ್ರವಾಗಿರುವ ಕರ್ನಾಟಕ ಒಂದಾಗುವ ಕಾಲ ದೂರವಾಗಿಲ್ಲ. ಬ್ರಿಟಿಷರ ಕುತಂತ್ರದಿಂದಾಗಿ ದುರ್ಬಲಗೊಂಡಿರುವ ಪ್ರಾಂತ್ಯವಾರು ಪ್ರದೇಶಗಳ ಶೀಘ್ರದಲ್ಲಿಯೇ ಒಂದಾಗುತ್ತದೆ ಎಂಬ ಭರವಸೆ ನೀಡಿದರು. ೧೯೪೬ರಲ್ಲಿ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಹಾಗೂ ಕರ್ನಾಟಕ ಏಕೀಕರಣ ಸಮಿತಿ ಜಂಟಿಯಾಗಿ ಅಖಿಲ ಕರ್ನಾಟಕ ಮಹಾಸಮ್ಮೇಳನ ನಡೆಸಿದವು. ಕರ್ನಾಟಕ ಪ್ರಾಂತ್ಯ ನಿರ್ಮಿಸಲು ಬೇಕಾದ ಎಲ್ಲ ಕಾರ್ಯಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿದವು.

೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಯಿತು. ಈ ನಡುವೆ ದೇಶೀಯ ರಾಜರ ಕರ್ನಾಟಕ ಒಂದು ಕಡೆ, ಬ್ರಿಟಿಷ್ ಕರ್ನಾಟಕ ಇನ್ನೊಂದು ಕಡೆ ಆಗಬೇಕೆಂಬ ಚರ್ಚೆ ವಾದ ವಿವಾದಗಳು ನಡೆದರೂ ಅದು ತೀವ್ರವಾದ ತೊಂದರೆಯನ್ನು ಉಂಟುಮಾಡಲಿಲ್ಲ. ಭಾಷಾನುಗುಣ ರಾಜ್ಯ ನಿರ್ಮಾಣದ ಸಾಧಕ ಭಾದಕಗಳ ಬಗ್ಗೆ ಅರಿಯಲು ಧಾರ್ ಸಮಿತಿಯು ೧೯೪೮ರಲ್ಲಿ ರಚನೆಯಾಯಿತು. ಧಾರ್ ಸಮಿತಿಯು ವರದಿ ಏಕೀಕರಣಕ್ಕೆ ಪೂರಕವಾಗಿಲ್ಲದ ಕಾರಣ ಅದಕ್ಕೆ ಪ್ರತಿಭಟನೆ ವ್ಯಕ್ತವಾಯಿತು. ಇದನ್ನು ಶಮನಗೊಳಿಸಲು ಜವಾಹರಲಾಲ್ ನೆಹರು, ಸರ್ದಾರ್ ವಲ್ಲಭಬಾಯಿ ಪಟೇಲ್, ಪಟ್ಟಾಭಿ ಸೀತಾರಾಮಯ್ಯ ಇವರುಗಳ ಸಮಿತಿ ನೇಮಕವಾಯಿತು. ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ೧೯೪೯ರಲ್ಲಿ ಏಕೀಕರಣದ ಬಗ್ಗೆ ಚರ್ಚಿಸಿ ಕರ್ನಾಟಕ ರಾಜ್ಯ ನಿರ್ಮಾಣ ಅಗತ್ಯವನ್ನು ಎತ್ತಿ ಹೇಳಿತಲ್ಲದೆ ಮೈಸೂರು ಮಹಾರಾಜರು ಶಾಸನಬದ್ಧ ರಾಜರಾಗುವುದು ಒಳ್ಳೆಯದೆಂದು ಅಭಿಪ್ರಾಯಪಟ್ಟಿತು. ೧೯೫೧ರಲ್ಲಿ ಬೆಂಗಳೂರಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಸಮಾವೇಶದಲ್ಲೂ ಏಕೀಕರಣದ ವಿಚಾರ ಪ್ರಸ್ತಾಪವಾಯಿತು. ಇದೇ ವರ್ಷದಲ್ಲಿ ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಬೆಂಗಳೂರಿಗೆ ಬಂದಾಗ ಬಿ.ಶಿವಮೂರ್ತಿಗಳ ನೇತೃತ್ವದಲ್ಲಿ ಅವರಿಗೆ ಏಕೀಕರಣದ ಬಗ್ಗೆ ಮನವಿ ಸಲ್ಲಿಸಿತು.

೧೯೫೨ ನಡೆದ ಪ್ರಥಮ ಚುನಾವಣೆಯಲ್ಲಿ ಭಾರತದ ಕೇಂದ್ರ ರಾಜ್ಯಗಳ ಸಭೆಗಳಲ್ಲಿ ಕಾಂಗ್ರೆಸ್ಸಿನವರೇ ಅಧಿಕವಾಗಿ ಆರಿಸಿ ಬಂದರು. ಹಿಂದೆ ಭಾಷಾವಾರು ಪ್ರಾಂತ್ಯಗಳಿಗೆ ಬೆಂಬಲ ಸೂಚಿಸಿದ್ದ ಕಾಂಗ್ರೆಸ್ ಆಂಧ್ರ ಪ್ರದೇಶವನ್ನುಳಿದು ಬೇರೆ ಪ್ರಾಂತ್ಯಗಳ ನಿರ್ಮಾಣ ಸದ್ಯಕ್ಕೆ ಅಗತ್ಯವಿಲ್ಲ ಎಂದು ಅಭಿಪ್ರಾಯಪಟ್ಟಿತು. ಆಂಧ್ರ ನಿರ್ಮಾಣವಾದಾಗ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕು ಮೈಸೂರಿಗೆ ಸೇರಿತು. ೧೯೫೩ರಲ್ಲಿ ಕರ್ನಾಟಕ ಕಾಂಗ್ರೆಸ್ ಸಭೆ ಸೇರಿ ೧೯೫೪ರ ಅಂತ್ಯದೊಳಗಾಗಿ ಯಾವ ಸಂದೇಹಕ್ಕೂ ಅವಕಾಶ ಮಾಡಿಕೊಡದೆ ಕರ್ನಾಟಕ ಪ್ರಾಂತ್ಯ ರಚನೆಗೆ ಅವಕಾಶ ಮಾಡಿಕೊಡಬೇಕೆಂದು ಆಗ್ರಹಿಸಿತು. ೧೯೫೩ರ ಕೊನೆಯಲ್ಲಿ ಇದರ ಬಗ್ಗೆ ಆಗ್ರಹ ಪಡಿಸಲು ದೆಹಲಿಗೆ ನಿಯೋಗ ಒಯ್ಯಲ್ಪಟ್ಟಿತು. ಇದೇ ವರ್ಷ ಎಸ್.ಫಜಲ್ ಆಲಿ, ಎಚ್.ಎನ್.ಕುಂಜ್ರು, ಕೆ.ಎಂ.ಫಣಿಕ್ಕರ್ ಇವರುಗಳನ್ನೊಳಗೊಂಡ ಸಮಿತಿ ರಚಿಸಲ್ಪಟ್ಟಿತು. ಈ ಸಮಿತಿ ಕರ್ನಾಟಕದಾದ್ಯಂತ ಸಂಚರಿಸಿ ೧೯೫೫ರಲ್ಲಿ ತನ್ನ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಒಪ್ಪಿಸಿತು. ಈ ವರದಿಗೆ ಬಹುತೇಕ ಮಂದಿಗೆ ತೃಪ್ತಿ ತಂದರೂ ಕಾಸರಗೋಡನ್ನು ಕೇರಳಕ್ಕೆ ಸೇರಿಸಿದ್ದು ಹಾಗೂ ಬಳ್ಳಾರಿಯ ವಿಚಾರದ ಅದರ ತೀರ್ಮಾನಕ್ಕೆ ತೀವ್ರವಾದ ಪ್ರತಿಭಟನೆ ವ್ಯಕ್ತವಾಯಿತು. ೧೯೫೫ ನವೆಂಬರ್‌ನಲ್ಲಿ ಮೈಸೂರು ವಿಧಾನ ಸಭೆ ಫಜಲ್ ಆಲಿ ವರದಿಯಲ್ಲಿ ಹೇಳಿರುವಂತೆ ಬಳ್ಳಾರಿಯನ್ನು ಮೈಸೂರಿನಿಂದ ಬೇರ್ಪಡಿಸಬಾರದೆಂದೂ ಹಾಗೂ ಈ ಪ್ರಾಂತ್ಯಕ್ಕೆ ಕರ್ನಾಟಕ ಎಂಬ ಹೆಸರಿನ ಬದಲು ಮೈಸೂರು ಎಂಬ ಹೆಸರನ್ನೇ ಇಡಬೇಕೆಂದು ಸೂಚಿಸಿತು. ಕೇಂದ್ರ ಸರ್ಕಾರ ಈ ವಿಚಾರಗಳನ್ನು ಪರಿಗಣಿಸಿತು. ಪುನರ್ವಿಮರ್ಶಿತ ವಿಧೇಯಕವನ್ನು ಲೋಕಸಭೆ ೧೯೫೬ ಜೂನ್ ೧೦ರಂದು ಅಂಗೀಕರಿಸಿತು. ಆಗಸ್ಟ್ ೨೫ರಂದು ರಾಜ್ಯ ಸಭೆ ಅಂಗೀಕರಿಸಿತು. ಆಗಸ್ಟ್ ೩೧ರಂದು ವಿಧೇಯಕ್ಕೆ ರಾಷ್ಟ್ರಪತಿಗಳ ಸಹಿಯಾಯಿತು. ನವೆಂಬರ್ ೧ರಿಂದ ಹೊಸ ಮೈಸೂರು ರಾಜ್ಯ ಉದಯ-ವಾಯಿತು. ಹೀಗೆ ಕರ್ನಾಟಕದಾದ್ಯಂತ ನಡೆದ ಚಳುವಳಿಗೆ ಇವರಿಂದ ಫಲ ದೊರೆತಂತೆ ಆಯಿತು. ಹೀಗೆ ಕರ್ನಾಟಕ ಏಕೀಕರಣಕ್ಕಾಗಿ ಹೀಗೆ ಸುಮಾರು ಎಪ್ಪತ್ತು ವರ್ಷಗಳಿಗಿಂತಲೂ ಅಧಿಕವಾಗಿ ನಡೆದ ಹೋರಾಟಕ್ಕೆ ಪ್ರತಿಫಲ ಸಿಕ್ಕಂತಾಯಿತು.

ಇದೇ ಸಂದರ್ಭದಲ್ಲಿ ಈ ಹೋರಾಟಗಳಿಗೆ ನಾಡಿನ ವಿವಿಧ ಪ್ರಾಂತ್ಯಗಳಿಂದ ದೊರೆತ ಬೆಂಬಲ ಗಮನಾರ್ಹವಾದದ್ದು ಹಾಗೂ ಈ ಹೋರಾಟಕ್ಕೆ ವಿವಿಧ ರೀತಿಯಲ್ಲಿ ಸ್ಫೂರ್ತಿಯನ್ನು ಒದಗಿಸಿದ ಮಹನೀಯರು ಹಾಗೂ ಪತ್ರಿಕೆಗಳ ಪಾತ್ರವನ್ನು ಮರೆಯುವ ಆಗಿಲ್ಲ. ಹಳೆಯ ಮೈಸೂರು ಪ್ರಾಂತ್ಯದಲ್ಲಿ ಇದಕ್ಕೆ ಸಂಬಂಧಿಸಿದಂತೆ ಸಹಕಾರ ಹಾಗೂ ಬೆಂಬಲವನ್ನು ನೀಡಿದ ಪತ್ರಿಕೆಗಳಲ್ಲಿ ಪ್ರಬುದ್ಧ ಕರ್ನಾಟಕದ ಪಾತ್ರವೂ ಹಿರಿದು.

ಆರಂಭದ ದಿನಗಳಲ್ಲಿ ಇದು ಸಾಹಿತ್ಯ ಪತ್ರಿಕೆಯಾಗಬೇಕು ಎಂಬ ಕಾರಣದಿಂದಲೋ ಏನೋ ಕನ್ನಡ ಭಾಷೆ ಹಾಗೂ ಸಾಹಿತ್ಯದ ಬೆಳವಣಿಗೆಯ ಕಡೆ ಆದ್ಯತೆ ನೀಡಿದೆ. ಭೌಗೋಳಿಕ ಏಕೀಕರಣದಿಂದ ಉಂಟಾಗುವ ಸೌಲಭ್ಯವಾಗಲಿ, ಏಕೀಕರಣವಿಲ್ಲದೆ ಉಂಟಾಗುತ್ತಿದ್ದ ನಷ್ಟವಾಗಲಿ ಈ ಘಟ್ಟದಲ್ಲಿ ಅದಕ್ಕೆ ಪ್ರಮುಖ ಅಂಶವಾಗಿರುವಂತೆ ಕಂಡು ಬರುವುದಿಲ್ಲ. ಆದರೆ ಕನ್ನಡ ನಾಡಿನ ವೈಭವವನ್ನು, ಅದರ ಸಂಸ್ಕೃತಿಯ ಹಿರಿಮೆಯನ್ನು ಪ್ರತಿಬಿಂಬಿಸುವ ಬರಹಗಳನ್ನು ಪ್ರಕಟಿಸುವ ಮೂಲಕ ಕನ್ನಡಿಗರಲ್ಲಿ ಅಭಿಮಾನ ಬೆಳೆಸುವ ಹಾಗೂ ಏಕೀಕರಣಕ್ಕೆ ಮಾನಸಿಕವಾಗಿ ಸಿದ್ಧಗೊಳಿಸುವ ಪ್ರಯತ್ನಮಾಡಿದೆ. ನಮ್ಮ ನಾಡು-ನುಡಿಗಳ ಹಿಂದಿನ ವೈಭವವನ್ನು ಇಂದಿನ ಬೀಳನ್ನೂ ಹೋಲಿಸಿ ಕೊರಗುವ ಬರಹಗಳು ಪ್ರಕಟಗೊಂಡಿವೆ. ಇವು ಬರಿಯ ಕೊರಗಿನಲ್ಲೇ ಮುಗಿಯದೆ ಹಿಂದಿನಂಥ ವೈಭವವನ್ನು ನಮ್ಮ ಪ್ರಯತ್ನದಿಂದ ತಿರುಗಿ ಗಳಿಸಬೇಕೆಂಬ ಉತ್ಸಾಹದಿಂದ ಕೂಡಿವೆ. ನಂತರದ ದಿನಗಳಲ್ಲಿ ನಾಡಿನಾದ್ಯಂತ ಸ್ವಾತಂತ್ರ್ಯದ ಚಳುವಳಿ ಕಾವೇರುತ್ತಿದ್ದ ಸಮಯದಲ್ಲಿ ಕರ್ನಾಟಕದ ಏಕೀಕರಣದ ಆಶಯವನ್ನು ಹೊಂದಿರುವ ಆದರೆ ನೇರವಾಗಿ ಪ್ರಕಾಶಗೊಳ್ಳದ ಬರಹಗಳನ್ನು ಎಂದರೆ ಏಕೀಕರಣಕ್ಕೆ ಸಂಬಂಧಿಸಿದಂತೆ ನಾಡಿನಲ್ಲಿ ನಡೆದ ಹೋರಾಟಗಳ ಬಗ್ಗೆ ನಾಡಿನ ವಿವಿಧ ಭಾಗಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆಸಿದ ಸಾಹಿತ್ಯ ಸಮ್ಮೇಳನ ಹಾಗೂ ವಿವಿಧ ಕಾರ್ಯಚಟುವಟಿಕೆಗಳ ಬಗ್ಗೆ ಗಮನಹರಿಸಿದೆ. ಈ ಸಂದರ್ಭದಲ್ಲಿ ಬೇರೆ ಪ್ರಾಂತ್ಯಗಳಲ್ಲಿ ಪ್ರಕಟಗೊಂಡ ಏಕೀಕರಣದ ಪರವಾಗಿರುವ ವಿಚಾರಗಳಲ್ಲಿ ಪ್ರಮುಖವಾದುದನ್ನು ಸಂಗ್ರಹಿಸಿಕೊಟ್ಟಿದೆ. ಭಾರತ ಸ್ವಾತಂತ್ರ್ಯಗೊಂಡ ನಂತರ ಭಾಷಾವಾರು ಪ್ರಾಂತ್ಯದ ರಚನೆಯ ವಿಷಯ ಬಂದಾಗ ಅದರ ಸಾಧಕಬಾಧಕಗಳ ಬಗ್ಗೆ, ಆಗುಹೋಗುಗಳ ಬಗ್ಗೆ ನೇರವಾಗಿ ಪ್ರತಿಕ್ರಿಯೆ ನೀಡಿದೆ ಹಾಗೂ ಸೂಕ್ತ ಸಲಹೆ ಸೂಚನೆಗಳನ್ನು ನೀಡಿದೆ. ಡಾ. ಎಸ್.ಚಂದ್ರಶೇಖರ್ ಅವರು ಗುರುತಿಸುವ ಹಾಗೆ ಕರ್ನಾಟಕ ಏಕೀಕರಣ ಕಲ್ಪನೆ ಹುಟ್ಟಿದ್ದೇ ಕನ್ನಡ ಭಾಷೆ, ಕನ್ನಡ ಸಂಸ್ಕೃತಿ ಹಾಗೂ ಕನ್ನಡಿಗರಿಗೆ ಅನ್ಯಾಯವಾಗುತ್ತಿದೆ ಎಂಬ ಅರಿವಿನಿಂದ. ಸಾಂಸ್ಕೃತಿಕವಾಗಿ ಆರಂಭಗೊಂಡು ಅನಂತರ ಅದು ರಾಜಕೀಯ ಆಯಾಮವನ್ನು ಪಡೆದುಕೊಂಡಿತು.[೧]

ಕನ್ನಡ ನಾಡು ಏಕೀಕರಣವಾಗಬೇಕಾದರೆ ಕನ್ನಡ ನಾಡಿನ ಜನಗಳೆಲ್ಲರ ಸಹಕಾರ ಅಗತ್ಯವಿದೆ. ಅದರಲ್ಲೂ ಯುವಪೀಳಿಗೆಯ ಬೆಂಬಲ ಅಗತ್ಯವಾಗಿ ಬೇಕಾದದ್ದು ಎಂಬುದನ್ನು ಅರಿತಿರುವ ಪ್ರಬುದ್ಧ ಕರ್ನಾಟಕ ಅದನ್ನು ಕ್ರೋಢೀಕರಿಸಿ ಕೊಡುವುದರ ಪ್ರಯತ್ನಮಾಡಿದೆ. ಹೋರಾಟದ ಸಂದರ್ಭದಲ್ಲಿ ತರುಣರು ನಿರ್ವಹಿಸಬೇಕಾದ ಕಾರ್ಯಗಳ ಕಡೆ ಗಮನಸೆಳೆದಿದೆ. ಈ ರೀತಿ ಹೋರಾಡುವಾಗ

---

೧. ಎಸ್.ಚಂದ್ರಶೇಖರ್, ಏಕೀಕರಣ ಒಂದು ಕಥನ, ೨೦೦೫, ಪು. ೬೦.

ಏರಿಳಿತಗಳು ಉಂಟಾಗಬಹುದು. ಆದರೆ ಅದಕ್ಕೆ ಕುಗ್ಗದೆ ಮುನ್ನುಗ್ಗಬೇಕು ಎಂಬುದನ್ನು ಪ್ರತಿಪಾದಿಸಿದೆ. ತಾಳಿಕೋಟೆಯ ಕದನ ಕರ್ನಾಟಕದ ದೃಷ್ಟಿಯಿಂದ ಪ್ರಮುಖ ತಿರುವನ್ನು ನೀಡಿದ ಕದನ. ವಿಜಯ ನಗರದ ಪತನಕ್ಕೆ ಕಾರಣವಾದ ಈ ನಿರ್ಣಾಯಕ ಕದನವನ್ನು ಕುರಿತು ರಚನೆಗೊಂಡಿರುವ ದಿನಕರ ದೇಸಾಯಿಯವರ 'ತಾಳಿಕೋಟೆ ಕದನ' ಎಂಬ ಕವನ ಕನ್ನಡಿಗರಿಗೆ ಬೇಕಾದ ಹೋರಾಟದ ಸ್ಫೂರ್ತಿಯನ್ನು ನೀಡಿದೆ. ಕನ್ನಡಿಗರ ಪ್ರಯತ್ನದ ನಡುವೆಯೇ 'ತಾಳೀಕೋಟೆ'ಯ ಪ್ರದೇಶ ಹೇಗೆ ವಿನಾಶದ ಅಂಚನ್ನು ಮುಟ್ಟಿತು ಎಂಬ ವಿವರಣೆಯನ್ನು ನೀಡುವಾಗಲೇ ಅವರು

**"ಅಳಿಯಿತೆ ರಾಜ್ಯವು**
**ನಮ್ಮ ಕನ್ನಡ ಭಾಗ್ಯವು**
**ನಮ್ಮ ನಾಡಿನ ಬಾಳು ಕುಂದಿತು**
**ಮ್ಲಾನನಾದನು ಚಂದ್ರನು......**[೧] ಎಂದು ದುಃಖಿಸುತ್ತಾರೆ.

ಈ ನಾಡಿನ ರಕ್ಷಣೆಗೆ ಕನ್ನಡದ ವೀರರು ತಮ್ಮ ರಕ್ತವನ್ನೇ ಅರ್ಪಿಸಿದರೂ ಅದರಿಂದ ನಾಡನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆದರೆ ಇದರಿಂದಾಗಿ ಬೇಸರಿಸಿಕೊಂಡು ಕನ್ನಡಿಗರು ನಿರಾಶರೇನೂ ಆಗಬೇಕಾಗಿಲ್ಲ. ಹೋರಾಡುವ ಮನೋಭಾವ, ಹೋರಾಡುವ ಛಲ ಮುಖ್ಯವಾದದ್ದು. ಅದರಿಂದ ವಿನಾಶವಾದ ನಾಡನ್ನು ಪುನಃ ಕಟ್ಟಬಹುದು. ಕನ್ನಡ ನಾಡಿನ ಈ ಸೋಲು ತಾತ್ಕಾಲಿಕವಾದ ಹಿಂಜರಿತ ಅಷ್ಟೇ ಆದುದರಿಂದಲೇ ಕವಿ

**"ಕರ್ಣಾಟವಿದು ಸಾಯದು**
**ಏಳಬಲ್ಲದು ಮಾತ್ರದು**
**ಮಡಿದ ಬಂಟರ ಕುಲವ ಕೆಡಿಸೆ**
**ಮತ್ತೆ ಗರ್ಜನೆ ಗೈವುದು**[೨] – ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಹಾಗಾಗಿಯೇ ಕನ್ನಡಿಗರು ಸಾಗಬೇಕಾಗಿರುವುದು ಹಿಂದಿನವರು ತೋರಿಸಿಕೊಟ್ಟ ವೀರಮಾರ್ಗದಲ್ಲಿ ಅದರಿಂದ ಕರ್ನಾಟಕ ಮೊದಲಿನ ಸ್ಥಾನವನ್ನು ಪಡೆಯಲು ಶಕ್ಯವಾಗುತ್ತದೆ. ಇದಕ್ಕಾಗಿ ಕನ್ನಡ ನಾಡಿನ ತರುಣರೆಲ್ಲರೂ ಒಂದಾಗಬೇಕಾದ ಅನಿವಾರ್ಯತೆ ಇದೆ. ಇದೇ ಆಕಾಂಕ್ಷೆಯನ್ನು ತಿ.ನಂ.ಶ್ರೀ ರವರ ಸ್ವಾಗತ ಗೀತೆ ಎಂಬ ಕವನದಲ್ಲೂ ವ್ಯಕ್ತವಾಗಿದೆ.

---

೧. ದಿನಕರ ದೇಸಾಯಿ, ಪ್ರ.ಕ. ಸಂಚಿಕೆ-೧೦, ಸಂಪುಟ. ೩, ಪು. ೧೮.
೨. ದಿನಕರ ದೇಸಾಯಿ, ಪ್ರ.ಕ. ಸಂಚಿಕೆ-೧೦, ಸಂಪುಟ. ೩, ಪು. ೧೯.

ಕರ್ನಾಟಕ ಸಾಹಿತ್ಯ ಪರಿಷತ್ತಿನ ಹದಿನಾರನೆಯ ವಾರ್ಷಿಕ ಸಮ್ಮೇಳನವು ಮೈಸೂರಿನಲ್ಲಿ ನಡೆದಾಗ ತೀ.ನಂ.ಶ್ರೀ ಅವರು ಕನ್ನಡ ನಾಡಿನ ಎಲ್ಲ ಪ್ರಾಂತ್ಯಗಳ ಗೆಳೆಯರನ್ನು ಕನ್ನಡ ಸೇವೆಗಾಗಿ ಸ್ವಾಗತಿಸಿದ್ದಾರೆ. ಈ ಸಂದರ್ಭದಲ್ಲಿ ಅವರು ಕನ್ನಡ ನಾಡಿನ ವಿವಿಧ ಪ್ರಾಂತಗಳಲ್ಲಿರುವ ವೈಶಿಷ್ಟ್ಯಗಳನ್ನು ಗುರುತಿಸಿ ಅಲ್ಲಿಂದ ಬಂದಿರುವ ಕನ್ನಡಿಗರೆಲ್ಲ ಒಟ್ಟಾಗಿ ಸೇರಿ. ಯಾವ ಬಗೆಯ ಬೇಧ ಭಾವಗಳಿಲ್ಲದೆ ಸೇವೆ ಮಾಡಲು ಕೋರುತ್ತಾರೆ. ಕನ್ನಡ ತಾಯಿಯ ಮಗುವಾಗಿ ಆಕೆಯ ಎದೆಯ ಹಾಲು ಕುಡಿದು, ಆಕೆಯ ಮಡಿಲು ತೊಡೆಗಳಲ್ಲಿ ಕುಣಿದು ಆಕೆಯಿಂದಲೇ ಭಾಷೆ ಕಲಿತು ಸುಖವಾಗಿ ಬೆಳೆದ ಕನ್ನಡಿಗರು

**"ಪಡುಗಡಲ ತೆರೆ ಮೊಳಗಿ ಹಲವು ಹೊಳೆಗಳು ಮಿನುಗಿ**
**ಸೊಬಗು ಸುಳಿಯುವ ಸುಖದ ಬೀಡಿನಿಂದ,**
**ತುಳು ನೆರೆಯ ನಾಡಿನಿಂದ**
**ಕನ್ನಡ ಕಲಿಗಳನು ಕನ್ನಡದ ಕವಿಗಳನು**
**ತನ್ನ ಬಸಿರಲಿ ಮುನ್ನ ಹೊರೆದು ಜಗದಲಿ ಮೆರೆದು**
**ಮತ್ತೆ ಮಿಗುಮತ್ಸಹದ ಕೊಯಲಿನಿಂದ**
**ಬೆಳೆವಲದ ಬಯಲಿನಿಂದ.....**[೧] ಇಷ್ಟೇ ಅಲ್ಲದೆ ವನದೇವಿ ಜಲದೇವಿಯರಿಗೆ ತೌರೂರೆನಿಸಿ ಮತ್ತು ಜನಗಳ ಕಣ್ಣು ಮನಸ್ಸುಗಳನ್ನು ಸೆರೆಹಿಡಿದಿಡುವ ಪ್ರಕೃತಿಯ ರಚನೆಯ ಬೆಡಗನ್ನು ಪಡೆದಿರುವ ಮಲೆನಾಡು ಹಾಗೂ ಕೊಡಗು ಪ್ರಾಂತ್ಯಗಳಿಂದ, ಶತ್ರುಗಳು ಕೊಡುತ್ತಿರುವ ಉಪಟಳವನ್ನು ಎದುರಿಸಿ ಕನ್ನಡ ಧ್ವಜವನ್ನು ಮೆರೆಸಲು ಯತ್ನಿಸುತ್ತಿರುವ ಗಂಡುಮೆಟ್ಟಿದ ಗಡುನಾಡ ಭಾಗಗಳಿಂದ ಹೀಗೆ ನಾಡಿನ ಮೂಲೆ ಮೂಲೆಗಳಿಂದ ಬಂದಿರುವ ತರುಣರನ್ನು ಗುರುತಿಸುವ ಕವಿ ಆ ಸಂದರ್ಭದಲ್ಲೇ ಅವರು ಬಂದಿರುವ ಸ್ಥಳಗಳ ವೈಶಿಷ್ಟ್ಯಗಳನ್ನು ನೆನಪಿಸಿಕೊಂಡಿದ್ದಾರೆ. ಇಲ್ಲಿ ಕವಿಗಳು ನೀಡುತ್ತಿರುವ ಸ್ವಾಗತವೇ ಪ್ರಮುಖವಾಗಿ ಗಮನಿಸಬೇಕಾದ ಅಂಶವಲ್ಲ. ಕರ್ನಾಟಕದ ಏಕೀಕರಣ ಪೂರ್ವದಲ್ಲೇ ಕನ್ನಡ ಮಾತಾಡುವ ಜನಗಳೆಲ್ಲರೂ ಒಂದುಗೂಡಬೇಕು. ಅವರು ಯಾವ ಪ್ರಾಂತ್ಯದಲ್ಲೇ ಇದ್ದರೂ ಕನ್ನಡದ ಕಾರ್ಯ ಎದುರಾದಾಗ ಒಗ್ಗೂಡಿ ಪರಸ್ಪರ ಸಹಕರಿಸಬೇಕು ಎಂಬ ಆಶಯ ಪ್ರಮುಖ-ವಾಗುತ್ತದೆ. ಇಂತಹ ಗೀತೆಗಳು, ಕನ್ನಡ ನಾಡಿನ ವಿವಿಧ ಪ್ರಾಂತ್ಯದ ಜನರಲ್ಲಿ ನಾವೆಲ್ಲರೂ ಒಂದು ಎಂಬಂತಹ ಮಾನಸಿಕ ಸ್ಥಿತಿಯನ್ನು ನಿರ್ಮಾಣಮಾಡುತ್ತದೆ. ಆದ್ದರಿಂದಲೇ ಕವಿಗಳಿಂದ

**ನಾವೆಲ್ಲರೊಡಗೂಡಿ ಒಡನಾಡ ಕಲೆತು**
**ಕನ್ನಡದ ಸೇವೆಯಲಿ ನಮ್ಮ ಮೈಮರೆತು**

---

೧. ತೀ.ನಂ.ಶ್ರೀಕಂಠಯ್ಯ, ಪ್ರಕ. ಸಂಪುಟ ೧೨, ಸಂಚಿಕೆ ೨, ಪು. ೭.

**ಕುಂದು ಕೊರತೆಗಳೊಂದ ಕಿಂಬಿಲ್ಲದಂತೆ**

**ನಮ್ಮ ಸಖ್ಯದ ಮೊಗ್ಗು ಬಿರಿದರಳುವಂತೆ** [೧]

ದೇವಿ ಕರುಣಿಸಲಿ ವರವ, ಕನ್ನಡದ ದೇವಿ ಕೈ ಕೊಳಲಿ ಫಲವ, ಎಂಬಂತಹ ಬೇಡಿಕೆಗಳನ್ನಿಡುವಂತೆ ಪ್ರಚೋದನೆ ಕೊಡುತ್ತದೆ. ಕರ್ನಾಟಕ ಏಕೀಕರಣಪೂರ್ವದಲ್ಲಿ ಕನ್ನಡಿಗರ ಮನಸ್ಥಿತಿ ಯಾವ ರೀತಿಯಲ್ಲಿ ಯೋಚಿಸುತ್ತಿತ್ತು ಎಂಬುದನ್ನು ಇಲ್ಲಿ ಗಮನಿಸಬಹುದು.

ಕನ್ನಡ ನಾಡಿನ ಏಕೀಕರಣದ ಸಂದರ್ಭದಲ್ಲಿ ಕನ್ನಡ ನಾಡಿನಲ್ಲಿ ವಿವಿಧ ಭಾಗಗಳಿಲ್ಲದ ತರುಣರನ್ನು ಮಾನಸಿಕವಾಗಿ ಹೋರಾಟಕ್ಕೆ ಸಿದ್ಧಗೊಳಿಸುವ ಕಾರ್ಯ ಆಗಬೇಕಾಗಿತ್ತು. 'ಕನ್ನಡಿಗನಿಗೆ' ಕವನದಲ್ಲಿ ಪ್ರಾಚೀನ ಕಾಲದಿಂದಲೇ ಕನ್ನಡ ನಾಡಿನ ಕೀರ್ತಿಯನ್ನು ಹೊರದೇಶಗಳಲ್ಲೆಲ್ಲಾ ಹರಡಿದ್ದ ಕನ್ನಡಿಗ ಇಂದು ತನ್ನ ನಾಡಿನ ಬಗ್ಗೆ ಯೋಚಿಸದೇ ನಿರ್ಲಿಪ್ತನಾಗಿ ಇರುವುದನ್ನು ಕಂಡು ಅವನಿಗೆ ಆತನ ಕರ್ತವ್ಯವನ್ನು ನೆನಪು ಮಾಡಿಕೊಡುವ ಆಶಯವಿದೆ. ಕವಿ ಸಿದ್ದಲಿಂಗಯ್ಯನವರು ಕನ್ನಡಿಗನನ್ನು ಕುರಿತು

**ಕೊನರಿದೆ ನುಡಿಯ ಚಿದ್ ಕೀರ್ತಿಲತೆ ಈಜಿಪ್ತ**

**ಮೇಣೇತರ ನಾಡಿನೊಳು ನೀನಂದೆ ಹಿಂದೆ**

**ಇಂತಾದೆಯಿಂದೇಕೆ ನಾಡನೇಕೀಕರಿಸಲೊಲ್ಲದೆಯೆ**

**ನಿನ್ನ ಕುಲಪೆರ್ಮೆಯನೆ ಕೊಂದೆ......** [೨] ಎಂದು ಬೇಸರಪಡುತ್ತಾ ಜನ್ಮಕೊಟ್ಟ ಕನ್ನಡ ನಾಡಿನ ಋಣವನ್ನು ಮರೆತಿರುವ ಕನ್ನಡಿಗನಿಂದಲೇ ತನ್ನ ತಾಯಿಯ ವಧೆಯಾಗುತ್ತಿದೆ. ಹಿಂದೊಂದು ಕಾಲದಲ್ಲಿ ಕನ್ನಡವೇ ಉಸಿರೆಂದು ಆಕೆಯೇ ತನ್ನ ಪ್ರಾಣವೆಂದು ಪ್ರೀತಿಸುತ್ತಿದ್ದ ಆತನಿಗೆ ಇಂತಹ ಘಾತುಕದ ಮನಸ್ಸು ಏಕೆ ಬಂದಿದೆ? ಎಂದು ನೊಂದುಕೊಳ್ಳುತ್ತಾರೆ. ಕನ್ನಡವೇ ನಮ್ಮ ಉಸಿರಾಗಬೇಕು ಇದನ್ನು ಮರೆತರೆ ಬದುಕಿನಲ್ಲಿ ಶೂನ್ಯ ತುಂಬಿಕೊಳ್ಳುತ್ತದೆ. ಆದುದರಿಂದ ಆಗಿರುವ ತಪ್ಪುಗಳನ್ನು ತಿದ್ದಿಕೊಂಡು ನಾಡಿನ ಬಗ್ಗೆ ಯೋಚನೆಯನ್ನು ಮಾಡಿದಾಗ ಮಾತ್ರ ಕನ್ನಡ ಮಾತೆಯಿಂದ ಕ್ಷಮೆ ದೊರೆಯುತ್ತದೆ. ಆದುದರಿಂದಲೇ

**"ತಪ್ಪನೊಪ್ಪಬ್ಬೆಯಿಂ ಕ್ಷಮೆಯುಂಟು 'ಅವಳಗುಡಿ'**

**ಯೇಳಿಗೆಗೆ ದುಡಿಯಲೈ ನೀನೊಲವು ತೀವಿ!**

**ಛಿದ್ರಿಸಿಹ ನುಡಿಯಬ್ಬೆ ದೇಗುಲವನೊಂದು ಗೈ**

---

೧. ತೀ.ನಂ.ಶ್ರೀಕಂಠಯ್ಯ, ಪ್ರ.ಕ. ಸಂಪುಟ ೧೨, ಸಂಚಿಕೆ ೨, ಪು. ೯.

೨. ಸಿದ್ದಲಿಂಗಯ್ಯ, ಪ್ರ.ಕ., ಸಂಪುಟ ೩೩, ಸಂಚಿಕೆ ೧, ಪು. ೫೪.

**ತಾಯಿಗೊಂದಾಗರವ ನಿರ್ಮಿಸೈ ಕಲಿಯೆ**

**ಹೊತ್ತಿಸೈ ನುಡಿಯ ನಂದಾದೀಪನು**[೧] ಎಂದು ಕೇಳಿಕೊಳ್ಳುತ್ತಾರೆ. 'ಕನ್ನಡ ನಾಡನ್ನು ಒಂದು ಗೂಡಿಲು ಕನ್ನಡಿಗರು ಇಡಬೇಕಾದ ಅಡಿಯ ಬಗ್ಗೆ ಸೂಚಿಸಿದೆ.

'ಕನ್ನಡ ತಾಯ ನೋಟ' ಬಿ.ಎಂ.ಶ್ರೀಕಂಠಯ್ಯನವರ ಪ್ರಸಿದ್ಧವಾದ ಕವನ. ಕನ್ನಡ ನಾಡು ಒಂದಾಗಬೇಕಾದ ಅನಿವಾರ್ಯತೆಯನ್ನು ಅದಕ್ಕಾಗಿ ಕನ್ನಡಿಗರು ಮಾಡಬೇಕಾದ ಕರ್ತವ್ಯವನ್ನೂ ಈ ಕವನ ಸೂಚಿಸಿದೆ. ಇಲ್ಲಿ ಕನ್ನಡ ನಾಡೇ ಕನ್ನಡ ತಾಯಾಗಿ ಮೂರ್ತಿವೆತ್ತಿದ್ದಾಳೆ. ಈಗ ಆಕೆ ಬಡತನವೇ ಮೈವೆತ್ತಿದಂತೆ ನಿರ್ಗತಿಕಳಾಗಿ ತುಂಗಭದ್ರೆಯ ದಡದಲ್ಲಿ ಚೆದುರಿರುವ ಕಲ್ಲುಗಳ ಮೇಲೆ ಬಿಸಿಲ ಬೇಗೆಯನ್ನು ಲೆಕ್ಕಿಸದೆ ತಲೆಯ ಮೇಲೆ ಕೈಹೊತ್ತು ಕುಳಿತಿದ್ದಾಳೆ. ಆಕೆಯ ಮೊಗವು ಬಾಡಿ ಕಂದಿ ಕುಂದಿಹೋಗಿದೆ. ಆಕೆಯ ಅಳಲನ್ನು ಕಂಡ ಕವಿ ಏಕೆಂದು ವಿಚಾರಿಸಿದಾಗ ತಾನು ಹಳೆಯ ಮುತ್ತೈದೆಯೆಂದೂ ಅಕ್ಕತಂಗಿಯರ ಜೊತೆಗೂಡಿ ಬಾಳುತ್ತಿದ್ದವಳೆಂದೂ ತಿಳಿಸಿ, ತನ್ನ ಅಕ್ಕತಂಗಿಯರು ವೈಭವವನ್ನು ಪಡೆದು ಬದುಕುತ್ತಿದ್ದಾರೆ. ಅದಕ್ಕೆ ಅವರ ಮಕ್ಕಳ ಪೂರ್ಣ ಸಹಕಾರವಿದೆ. ಹಾಗಾಗಿಯೇ ಅವರೆಲ್ಲರು ಚೆಲುವಾಗಿದ್ದಾರೆ. ಚಿನ್ನದಂತಾಗಿದ್ದಾರೆ. ಆದರೆ ತನಗೆ ಮಾತ್ರ ತನ್ನ ಮಕ್ಕಳ ಅನುಕಂಪ ಸಹಕಾರ ಲಭ್ಯವಾಗುತ್ತಿಲ್ಲ. ಹಾಗಾಗಿಯೇ ಬಡತನ ತನ್ನನ್ನು ಆವರಿಸಿಕೊಂಡಿದೆ. ಮಕ್ಕಳ ಈ ನಿರ್ಲಕ್ಷ್ಯಕ್ಕೆ ಕಾರಣವೇನೆಂಬುದು ತಿಳಿಯುತ್ತಿಲ್ಲ.

**"ಏನು ಕವಿಯಿತೋ ಮಂಕು ಮಕ್ಕಳಿಗೆ! ಯಾರೆರಚಿದರೋ ಬೂದಿಕಾಣೆ**
**ನನ್ನನೊಲ್ಲರು ನನ್ನ ಮಕ್ಕಳೇ! ತಾವ್ ಬಾಳಿ, ತಾಯ ಬಾಳಿಸರು**
**ಹೇರರ ನುಡಿ ಹೆರರ ನಡೆ ಹೆರರ ಕೂಗೇ ಕೂಗು, ಹೆರರದೇ ಹೆಮ್ಮೆ**
**ನನ್ನ ಮನೆ ಹಾಳು ನನ್ನ ನುಡಿ ಬೀಳು......**[೨] ಎಂದು ದುಃಖಕ್ಕೆ ಒಳಗಾಗುತ್ತಾಳೆ. ತನ್ನ ನೆರವಿಗೆ ಧಾವಿಸದೇ ಇರುವ ತನ್ನ ಮಕ್ಕಳ ನಿರ್ಲಕ್ಷ್ಯವನ್ನು ಅವರ ಅಭಿಮಾನ್ಯ ಶೂನ್ಯತೆಯನ್ನು ಕಂಡು ಮರುಗುತ್ತಾಳೆ. ಕನ್ನಡ ತಾಯಿ ಮಾತುಗಳು ಅಭಿಮಾನ್ಯ ಶೂನ್ಯರಾಗಿ ಕನ್ನಡವನ್ನು ಮರೆಯುತ್ತಿದ್ದ ಕನ್ನಡಿಗರನ್ನು ಎಚ್ಚರಿಸುತ್ತದೆ. ಎಚ್ಚತ್ತ ಕವಿ ಕನ್ನಡ ತಾಯಿಗೆ

**"ಏಕಮ್ಮ ಇನಿಸೊಂದು ಕೊರಗು?**
**ಬೇಡಮ್ಮ ಮಕ್ಕಳಲಿ ಇನಿಸೊಂದು ಕಡು ಮುನಿಸು... ಬಾರಮ್ಮ ಹರಸು**
**ನಿನ್ನ ನಾಡಿನೊಳದೆಕೂ ಬೆಳಕು ಮೂಡಿಹುದು..... ಜೀವ ಕೂಡಿಹುದು**
**ನಿನ್ನ ಮಕ್ಕಳು ನಿದ್ದೆಗಳಿಂದೆದ್ದ ಸಿಂಹದಂತೇಳುತ್ತ, ಮೊಳಗಿ**

---

೧. ಸಿದ್ದಲಿಂಗಯ್ಯ, ಪ್ರಕ., ಸಂಪುಟ ೩೩, ಸಂಚಿಕೆ ೧, ಪು. ೫೪.
೨. ಶ್ರೀಕಂಠಯ್ಯ.ಬಿ.ಎಂ., ಪ್ರಕ. ಸಂ. ೧೮, ಸಂಚಿಕೆ ೩, ಪು. ೪.

**ಕಣಕಿಳಿದು ಪಂಪ ನೃಪತುಂಗರಾ ಮಾತುಗಳು ದಿಟವೆನಿಸುತಿಹರು**

**ಸೆರೆಯನ್ನೊಕ್ಕಡೆಗೊಗೆದು ಬಿಡುಗಡೆಯ ಕೈಕೊಂಡು ..... ಹಳೆ ನೆನಪು ನೆನೆದು**

**ಹೊಸ ಕಾಣ್ಕೆಗಳ ಕಂಡು ಸಾಮ್ರಾಜ್ಯಗಳ ಮತ್ತೆ ಕಟ್ಟುತಿಹರು**

**ನಿನ್ನ ನಾಡೊಂದಾಗಿ ನಿನ್ನ ನುಡಿ ಮೇಲಾಗಿ .... ಮನೆಮಕ್ಕಳೆಲ್ಲ**

**ಪೇರೊಕ್ಕಲಾಗಿ ಪಾಡುವರು......**[೧] ಎಂದು ಆಶ್ವಾಸನೆ ಕೊಡುತ್ತಾರೆ. ಕನ್ನಡ ತಾಯಿಯು ಯಾವುದೆ ರೀತಿಯ ಚಿಂತೆಗೊಳಗಾಗಬಾರದೆಂದು, ಕಂಗಾಲಾಗ-ಬಾರದೆಂದು ಧೈರ್ಯ ತುಂಬುತ್ತಾರೆ. ಕನ್ನಡ ತಾಯಿಯ ಮಕ್ಕಳು ನಿದ್ದೆಯಿಂದ ಎಚ್ಚೆತ್ತು ಹೋರಾಡಲು ಸಿದ್ಧವಾಗುವ ಭರವಸೆಯನ್ನು ನೀಡುತ್ತಾರೆ. ಕವಿಯ ಧೈರ್ಯದ ಮಾತುಗಳನ್ನು ಕೇಳುತ್ತಿದ್ದಂತೆಯೇ ಮುದುಕಿ ಎಳೆಯುವಳಾಗುತ್ತಾಳೆ. ಮೊದಲಿನ ಸೌಂದರ್ಯವನ್ನು ಪಡೆಯುತ್ತಾಳೆ. ನಿಧಾನವಾಗಿ ನಡೆದು ಬಂದು ರಥವನ್ನೇರುತ್ತಾಳೆ. ಕಲ್ಲು ಮೊರಡಿಗಳ ಮೇಳೆ ಕುಳಿತಿದ್ದ ಕನ್ನಡ ತಾಯಿಗೆ ನ್ಯಾಯವಾಗಿ ಸಿಗಬೇಕಾದ ಸ್ಥಾನಮಾನ ದೊರಕುತ್ತದೆ. ಹಾಗಾಗಿಯೇ ಇದನ್ನು ಕಂಡ ಎಲ್ಲರೂ ಒಟ್ಟಾಗಿ

**"ತಾಯ್ ಬಿಜಯ ಮಾಡುವಳು ದಾರಿ ಬಿಡಿ ದಾರಿ ಬಿಡಿ ಅಡ್ಡ ಬಾರದಿರಿ**

**ಭಾರತಾಂಬೆಯ ಹಿರಿಯ ಹೆಣ್‌ಮಗಳೆ ದಾರಿ ತೋರುವ ಹಿರಿಯ ಸೊಡರೆ**

**ಬಾಳಮ್ಮ ಬಾಳು"**[೨] ಎಂದು ಆಶೀರ್ವದಿಸುತ್ತಾರೆ. ಕರ್ನಾಟಕದ ಏಕೀಕರಣವಾಗುವ ಮೊದಲೇ ಕವಿಯು ಕಂಡ ಕನಸು ಕನ್ನಡ ತಾಯಿಗೆ ಯಾವ ಸ್ಥಾನ ದೊರಕಬೇಕು. ಹಾಗೆ ದೊರಕಿದಾಗ ಆಕೆಯ ಗೌರವ, ಅಂತಸ್ತು ನಾಡಿನಲ್ಲಿ ಹೇಗೆ ಉನ್ನತ ಸ್ಥಿತಿಗೆ ಏರುತ್ತದೆ ಎಂಬ ಸೂಚನೆ ಇಲ್ಲಿದೆ. ಇದಕ್ಕಾಗಿ ಕನ್ನಡಿಗರು ಏನು ಮಾಡಬೇಕೆಂದು ಹೇಳುತ್ತಾ, ಚೆಲುವೆಯರ ಚೆನ್ನಿಗರ ಹಿರಿಯ ತಾಯ್ ಮಕ್ಕಳಿರ ಒಡಹುಟ್ಟಿದವರ

**ಒಸಗೆ ನುಡಿ ಕೇಳಿದಿರ ತಾಳಿದಿರ ಎದೆಯಲ್ಲಿ ತಾಳಿ ಬಾಳುವಿರಾ**

**ನಾಡು ನುಡಿ ನಡೆಗಳನು ಮುನ್ನಡೆಗೆ ನಡೆಸುತ್ತಾ ಮುಂದೆ ಸಾಗುವಿರ**

**ಭಾರತದ ಲೋಕದ ಮಕ್ಕಳಲ್ಲಿ ಹಿರಿದಾಗಿ ತೂಕ ತೂಗವಿರಾ**

**ಬನ್ನಿ ಓ ಮಕ್ಕಳಿರ... ಒಕ್ಕೊರಲಾಗಿ ಕೂಗಿ.....**[೩] ಎಂದು ಕರೆಯನ್ನು ಕೊಡುತ್ತಾರೆ. ಕನ್ನಡ ಏಕೀಕರಣದ ಸಂದರ್ಭದಲ್ಲಿ ಕನ್ನಡಿಗರ ಕರ್ತವ್ಯವೇನು? ಹಾಗೂ ಅದಕ್ಕಾಗಿ ಏನು ಮಾಡಬೇಕು ಎಂಬ ಮಾರ್ಗದರ್ಶನ ಇಲ್ಲದೆ.. ಇದೇ ಸಂದರ್ಭದಲ್ಲಿಯೇ ಬಂದ 'ಕನ್ನಡ ತಾಯ್ಗೆ' ಎನ್ನುವ ಕವನ ಕನ್ನಡ ತಾಯಿಗಾಗಿ

---

೧. ಶ್ರೀಕಂಠಯ್ಯ.ಬಿ.ಎಂ., ಪ್ರ.ಕ. ಸಂ. ೧೮, ಸಂಚಿಕೆ ೩, ಪು. ೫.
೨. ಶ್ರೀಕಂಠಯ್ಯ.ಬಿ.ಎಂ., ಪ್ರ.ಕ. ಸಂ. ೧೮, ಸಂಚಿಕೆ ೩, ಪು. ೬.
೩. ಶ್ರೀಕಂಠಯ್ಯ.ಬಿ.ಎಂ., ಪ್ರ.ಕ. ಸಂ. ೧೮, ಸಂಚಿಕೆ ೩, ಪು. ೬.

ಹೋರಾಡಲು ಸಿದ್ಧವಾದ ಯುವಕನೊಬ್ಬನ ಮನಸ್ಥಿತಿಯನ್ನು ಅದಕ್ಕೆ ಒದಗಿಬಂದ ಹಿನ್ನೆಲೆಯನ್ನು ವಿವರಿಸಿದೆ. ಸಮುದ್ರದ ತನಕ ವಿಸ್ತಾರವಾಗಿ ಹರಡಿನಿಂತಿರುವ ಈ ನಾಡು ಉತ್ತುಂಗ ಬಲಶಾಲಿಗಳಿಂದ ಯಶಸ್ಸು ಗಳಿಸಿದ ರಾಜರುಗಳಿಂದ ಆಳಲ್ಪಟ್ಟಿದೆ. ಕೊಟುಗೈ ದಾನಿಗಳಿಗೆ ಆಶ್ರಯ ನೀಡಿದೆ. ವೀರರಾದ ಕಡುಗಳಿಗಲಿಗೆ ನೆಲವೀಡಾಗಿದೆ. ಖ್ಯಾತ ಕವಿ ಸಾರ್ವಭೌಮರಿಂದ ಖ್ಯಾತಿಯನ್ನು ಗಳಿಸಿದೆ. ಖ್ಯಾತರಾದ ರಸಿಕರ, ಪಂಡಿತರ, ಗಮಕಿಗಳ, ವಾದಿಗಳ, ವಾಗ್ಮಿಗಳ ಕಾರಣದಿಂದಾಗಿ ದಿಕ್ಕು ದಿಕ್ಕಿಗೂ ಇದರ ಕೀರ್ತಿ ಬೆಳಗಿದೆ. ಆದರೆ ಕಾಲಾಂತರದಲ್ಲಿ ಈ ಕನ್ನಡತಾಯಿಯ ಸಿರಿ ಸೂರೆ ಹೋಗಿ ಮಾಣಿಕ್ಯ ಮಕುಟ ವಿಗತವಾಗಿ ಜೋತ ಮುಖ ಕಂಬನಿ ತುಂಬಿದ ಕಣ್ಣುಗಳು ವಿಷಾದದ ಭಾವ ಇವುಗಳನ್ನು ಸೂಸುತ್ತಾ ತನ್ನಲ್ಲಿದ್ದ ಎಲ್ಲಾ ವೈಭವಗಳನ್ನು ಕಳೆದುಕೊಂಡು ನಿರ್ಗತಿಕಳಂತೆ ನಿಂತಿದ್ದಾಳೆ. ಆ ತಾಯಿಗೆ ಧೈರ್ಯ ತುಂಬುವ ಕಾರ್ಯ ಮಾಡಬೇಕಾಗಿದೆ. ಆಕೆಯು ಕಳೆದುಕೊಂಡಿರುವ ವೈಭವವನ್ನು ಪುನಃ ದೊರಕಿಸಿಕೊಡುವ ಧೈರ್ಯ ತುಂಬಬೇಕಾಗಿದೆ. ಆದುದರಿಂದಲೇ ಕವಿ

**"ಈ ತರುಣತೆಯ ಮಿಂಚು ಸಂಚರಿಸುತಿರಲೊಡಲೋ**
**ಳೇತರಂಜುವೆ ಎನ್ನಲೆಕ್ಕಣಿಯಂಬಿನಿಂ**
**ತೂತುಗೆಡಹುವ ಮಾತೃಸೇವೆ ಗಾಗದನೆದೆಯ**
**ಕನ್ನಡ ಕಲಿಗಳೆದಿಬ್ಬ ಕೆರಳಿಸಿ ಸಾಸ**
**ದುನ್ನತಿಯ ಮೆರೆಯಿಸುವೆನು"**[೧] ಎಂಬ ಆಶ್ವಾಸನೆ ನೀಡುತ್ತಾರೆ.

ಮಾತ್ರವಲ್ಲದೆ ಕಳಚಿ ಬಿದ್ದಿರುವ ಕನ್ನಡ ತಾಯಿಯ ವೈಭವದ ಮಕುಟವನ್ನು ಪುನಃ ಆಕೆಗೆ ಕೊಡಿಸುವುದಾಗಿ ಅದಕ್ಕಾಗಿ ಕನ್ನಡ ದಳವನ್ನು ಕೂಡಿಸಿ ಕನ್ನಡ ಪದಗಳನ್ನು ಹಾಡಿಸಿ ಕನ್ನಡ ತಾಯಿಗೆ ರಕ್ಷಣೆ ಕೊಡುವುದಾಗಿ ಹೇಳಿಕೊಳ್ಳುತ್ತಾರೆ. ಕನ್ನಡ ತಾಯಿ ಮೊದಲಿನ ವೈಭವವನ್ನು ಪಡೆಯಬೇಕು. ಕನ್ನಡ ನಾಡು ಉಳಿದ ಎಲ್ಲ ನಾಡುಗಳಂತೆ ಉನ್ನತಿಯನ್ನು ಪಡೆಯಬೇಕು. ಕನ್ನಡ ತಾಯಿಗೆ ತಮ್ಮವರಿಂದ ಮಾತ್ರವಲ್ಲದೆ ಉಳಿದವರಿಂದಲೂ ಗೌರವ ದೊರಕುವಂತಾಗಬೇಕು. ಇದಕ್ಕಾಗಿ ಕನ್ನಡಿಗರು ಪ್ರಯತ್ನಪಡಬೇಕು ಎಂಬ ಭಾವನೆಯನ್ನು ಇಲ್ಲಿ ಗಮನಿಸಬಹುದು. ಹೀಗೆ ಕನ್ನಡ ನಾಡು ಇಲ್ಲಿ ಕನ್ನಡ ತಾಯಿಯಾದರೆ ಕುವೆಂಪು ಅವರ ದೃಷ್ಟಿಯಲ್ಲಿ ಆಕೆ ದೇಶದೇವಿಯಾಗುತ್ತಾಳೆ.

ಕರ್ನಾಟಕ ಭಾರತದ ಅಂಗವಾಗಿದ್ದು ಭಾರತಕ್ಕೆ ಮಾತ್ರ ಸ್ವಾತಂತ್ರ್ಯ ದೊರೆತರೆ ಸಾಲದು ಕನ್ನಡ ಮಾತೆಗೂ ಸ್ವಾತಂತ್ರ್ಯ ಬೇಕು ಎಂಬ ವಿಚಾರವನ್ನು 'ದೇಶ ದೇವಿಯ ಪೂಜೆಗೆ ಬನ್ನಿ' ಎಂಬ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ. ಈ ಲೇಖನದ

---

೧. ಬಿ.ಎಚ್.ಶ್ರೀಧರ, ಪ್ರ.ಕ., ಸಂ. ೨೧, ಸಂಚಿಕೆ-೨, ಪು. ೨.

ಆರಂಭದಲ್ಲಿಯೇ ದೇಶದೇವಿ ಎಂದರೆ ಯಾರು ಎಂಬುದರ ಬಗ್ಗೆ ಸ್ಪಷ್ಟನೆ ನೀಡಿದ್ದಾರೆ. "ಕನ್ನಡಿಗರ ಆತ್ಮ ಜಾಗ್ರತಿಯಿಂದ ಸಪ್ರಾಣವಾಗುತ್ತಿರುವ ಅವಿಚ್ಛಿನ್ನ ಕರ್ನಾಟಕವೆ ಈ ದೇಶ ದೇವಿ"[೧] ಎಂದು ಖಚಿತಪಡಿಸುತ್ತಾರೆ. ಭಾರತದಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯ ಚಳುವಳಿಗೆ ಸಹಕಾರ ನೀಡಬೇಕಾದುದು ಕನ್ನಡಿಗರ ಕರ್ತವ್ಯ. ಆದರೆ ಇದೇ ಸಂದರ್ಭದಲ್ಲಿಯೇ ಕರ್ನಾಟಕದ ಏಕೀಕರಣವೂ ಉದ್ಧಾರವೂ ಆಗಬೇಕಾಗಿದೆ. ನಾಡಿಗಾಗಿ ಹೋರಾಡುವ ಸಂದರ್ಭದಲ್ಲಿ ಕನ್ನಡಿಗರು ಅದಕ್ಕಾಗಿ ಶಕ್ತಿವಂತರಾಗ-ಬೇಕೆಂಬುದನ್ನೂ, ಹೋರಾಟದ ಕಿಚ್ಚು ಹಾಗೂ ಸಾಧಿಸಬೇಕೆಂಬ ಉತ್ಸಾಹ ಇವುಗಳನ್ನು ಹೊಂದಿರಬೇಕೆಂಬುದನ್ನೂ ಸೂಚಿಸುತ್ತದೆ. ಭರತ ಖಂಡ ಒಂದು ಜನಾಂಗವೂ ಅಲ್ಲ, ಅನೇಕ ಜನಾಂಗಗಳು ಅಲ್ಲ. ಅದು ಅನೇಕ ಜನಾಂಗಗಳ ಒಂದು ಜನಾಂಗ. ಆದ್ದರಿಂದಲೇ ಭಾರತ ಮಾತೆಯನ್ನು ಎಷ್ಟರ ಮಟ್ಟಿಗೆ ಆರಾಧಿಸುತ್ತೇವೆಯೋ ಅಷ್ಟರ ಮಟ್ಟಿಗೇ ಕರ್ನಾಟಕ ಮಾತೆಯನ್ನು ಪೂಜಿಸಲು ನಮಗೆ ಸಾಧ್ಯವಾಗಿದೆ. ಅದು ಹಾಗೆಯೇ ಆಗಿ ತೀರಬೇಕು. ಏಕೆಂದರೆ ಭಾರತ ಅಸಂಖ್ಯಾತ ಪ್ರಾಂತಗಳನ್ನು ಒಳಗೊಂಡಿರುವ ತಾಣ ಎಲ್ಲ ಪ್ರಾಂತಗಳ ಸುಖವೇ ಒಟ್ಟು ಸಮಾಜದ ಸುಖ ಎಲ್ಲ ಪ್ರಾಂತಗಳ ಬಿಡುಬಿಡಿಯಾದ ಸೌಂದರ್ಯ ಭಾರತದ ಒಟ್ಟು ಸೌಂದರ್ಯಕ್ಕೆ ಕಾರಣವಾಗುತ್ತದೆ.

ಭಾರತಕ್ಕೆ ಮಾತ್ರ ಸ್ವಾತಂತ್ರ್ಯ ಸಿಕ್ಕಿ ಅದರಲ್ಲಿರುವ ಪ್ರಾಂತಗಳಿಗೆ ಸಂಪೂರ್ಣ ಸ್ವಾತಂತ್ರ್ಯ ಸಿಗದೇ ಹೋದಾಗ ಅದು ಸ್ವತಂತ್ರ ಎನಿಸಿಕೊಳ್ಳಲು ಸಾಧ್ಯವಿಲ್ಲ. ಕುವೆಂಪು ಅವರು ಗುರುತಿಸುವ ಹಾಗೆ "ಆದುದರಿಂದ ಪ್ರಾಂತ ಪ್ರಾಂತಗಳ ವ್ಯಕ್ತಿತ್ವ ರಕ್ಷಣೆಗೆ ಸ್ವಾತಂತ್ರ್ಯವೂ ಭರತ ಖಂಡದ ಪೂರ್ಣ ಸ್ವಾತಂತ್ರ್ಯದಷ್ಟೇ ಅವಶ್ಯಕವಾದುದು"[೨] ಏಕೆಂದರೆ ಪ್ರತಿಯೊಂದು ಪ್ರಾಂತ್ಯಕ್ಕೂ ಅದರ ಬೆಳೆ, ಅದರ ಕೈಗಾರಿಕೆ, ನಡೆ, ನುಡಿಗಳಿದ್ದು ಅವುಗಳ ಬಗ್ಗೆ ಸ್ವಂತ ನಿರ್ಣಯ ತೆಗೆದುಕೊಳ್ಳಲು ಅದಕ್ಕೆ ಸ್ವಾತಂತ್ರ್ಯ ಬೇಕಾಗುತ್ತದೆ. ಹೀಗಾಗಿ ಕನ್ನಡಿಗರೆಲ್ಲರೂ ಒಂದು ಗೂಡುವ, ತಮ್ಮ ಅಭಿವೃದ್ಧಿಯನ್ನು ತಾವೇ ರೂಢಿಸಿಕೊಳ್ಳುವುದು, ಅವಶ್ಯಕವಾಗಿದ್ದು ಕನ್ನಡನಾಡಿನ ಉದಯದಿಂದ ಮಾತ್ರ ಅಂತಹ ಆಸೆಗಳು ಫಲಕಾರಿಯಾಗಬಹುದು.

'ಚಿರ ದುಃಖಿ' ಕವನದಲ್ಲಿ ಮೈಸೂರಿನ ನಾಲ್ಕನೆಯ ಮಹಾಯುದ್ಧದ ಸಂದರ್ಭದಲ್ಲಿ ಮಡಿದ ಟಿಪ್ಪುವಿನ ಆತ್ಮಶ್ರೀ ರಂಗಪಟ್ಟಣಕ್ಕೆ ಬರುತ್ತದೆ. ಅಲ್ಲಿ ಅದು ತಾನು ಆಳಿದ ಸ್ಥಳಗಳನ್ನು ನೋಡುತ್ತಾ ತನ್ನವರೇ ತನ್ನ ವಿರುದ್ಧ ಹೂಡಿದ ಸಂಚನ್ನು ನೆನೆದು ದುಃಖಿಸುತ್ತದೆ ತನ್ನ ಮನಸ್ಸನ್ನು ಅರ್ಥಮಾಡಿಕೊಳ್ಳದೇ ತನ್ನ ಬಗ್ಗೆ

---

೧. ಪುಟ್ಟಪ್ಪ.ಕೆ.ವಿ., ಪ್ರ.ಕ., ಸಂಪುಟ ೨೦, ಸಂಚಿಕೆ–೩, ಪು. ೩.
೨. ಪುಟ್ಟಪ್ಪ.ಕೆ.ವಿ., ಪ್ರ.ಕ., ಸಂಪುಟ ೨೦, ಸಂಚಿಕೆ–೩, ಪು. ೫.

ಅಪಪ್ರಚಾರ ಮಾಡಿದವರ ಬಗ್ಗೆ ಬೇಸರ ವ್ಯಕ್ತಪಡಿಸುತ್ತದೆ. ತನ್ನ ತಾಯ್ನಾಡಿಗಾಗಿ ತಾನು ಏನೆಲ್ಲವನ್ನು ಮಾಡಿದ್ದೆ ಎಂದು ಚಿಂತಿಸುತ್ತದೆ. ತಾನು ಮಾಡಬೇಕೆಂದಿದ್ದ ಕಾರ್ಯಕ್ಕೆ ಕನ್ನಡಿಗರಿಂದ ಸಹಕಾರ ದೊರೆಯದೇ ಇದ್ದುದನ್ನು ಕುರಿತು

**"ಒಂದು ನುಡಿಯಾಡುವರನೊಂದು ನಾಡನಲಿಡುವ**
**ಎನ್ನಾಸೆಯನು ಅವರೆ ಸುಟ್ಟರು**
**ನನ್ನ ನೆಚ್ಚಿನ ರಂಗ ಅವರ ದೇವರು ಗೊತ್ತೆ**
**ಆದರೂ ವಿಶ್ವಾಸವನೆ ಬಿಟ್ಟರು......**[೧] ಎಂದು ಪರಿತಪಿಸುತ್ತದೆ.

ಕನ್ನಡ ನಾಡು ಒಂದಾಗಬೇಕು ಎಂಬುದು ಟಿಪ್ಪುವಿನ ಆಸೆ ಹೇಗೋ ಹಾಗೆಯೇ ಅದು ಲೇಖಕರ ಹಾಗೂ ಓದುಗರ ಆಸೆಯೂ ಆಗಿದೆ ಎಂಬುದನ್ನು ಗಮನಿಸಬೇಕು. ಶ್ರೀ ಗೊಮ್ಮಟ ಮಹಾಮಸ್ತಾಭಿಷೇಕ ಕವನದಲ್ಲಿ ಗೊಮ್ಮಟವನ್ನು ಕಂಡಾಗ ಕುವೆಂಪು ಅವರ ಮನಸ್ಸನ್ನು ಆಕರ್ಷಿಸುವುದು ಅದರ ಸೌಂದರ್ಯವಲ್ಲ. ಅದನ್ನು ಕಂಡಾಗ ಕವಿಗೆ ಅನಿಸುವುದು ಕನ್ನಡ ನಾಡು ಒಂದಾಗಬೇಕು. ಕನ್ನಡಿಗರೆಲ್ಲರಿಗೂ ಅಹಂಕಾರ, ಕೀರ್ತಿ, ಲೋಭ ಇವುಗಳನ್ನು ತೊರೆದ ಗೊಮ್ಮಟ ಆದರ್ಶವಾಗಬೇಕು. ನಮ್ಮಲ್ಲಿರುವ ಒಡಕುಗಳು ಮಾಯವಾಗಬೇಕು ಎಂದು. ಆದುದರಿಂದಲೇ ಇಂತಹ ಭವ್ಯತೆ ಹೊಂದಿರುವ ಕನ್ನಡ ತಾಯನ್ನು ಕುರಿತು

**"ನಿನ್ನ ಕನ್ನಡನಾಡನೊಂದು ಗೂಡಿಸಿ ಕಾಯಿ**
**ನಿನ್ನ ಕನ್ನಡನುಡಿಯ ನಾಡಿ ಧನ್ಯವಾಗಲಿ ನಮ್ಮ ಬಾಯಿ**
**ಅನ್ಯ ಭಾಷಾಮೋಹಕ್ಕೆ ಪಕ್ಕಾಗದಿರಲೆಮ್ಮ ತಾಯಿ**
**ನಿನ್ನ ಭಾರತ ಭೂಮಿ ನಿನ್ನುತಿಗೆ ಬೆಳೆದು ನಿಲ್ಗೆ**
**ಪೃಥವಿಯ ಸುಧಾಕಾಂಕ್ಷೆ ಭಾರತೀಯ ಶಾಂತಿಮಯ ವಕ್ಷದಿಂ ಸಲ್ಗೆ**
**ಮರ್ತ್ಯ ಮಾನಸ ಕೋಶಕವತರಸಿ ನಿತ್ಯಮತಿಮಾನಸಂಗೆಲ್ಗೆ**
**ಪೂರ್ಣತಾ ಸಿದ್ಧಿಯಿಂದೀ ಧರೆಯನೇಗಳುಂ ಕ್ಷೀರ ಕೈವಲ್ಲಮಾಳ್ಗೆ**
**ಶ್ರೀ ಮಹಾಮಸ್ತಾಭಿಷೇಕದೊಳುದಿಸಿ ನದಿನಿದಗಳಮ್ಮಿಳೆಯ**
**ಸಿರಿ ಸೊಗಂ ಚಿರಂ ಬಾಳ್ಗೆ"**[೨] ಎಂದು ಆಶಿಸುತ್ತಾರೆ. ಇಲ್ಲಿ ಕನ್ನಡಿಗರು ಹಾಗೂ ಕನ್ನಡನಾಡು ಒಂದಾಗಬೇಕೆಂಬ ಅನ್ಯಭಾಷಾ ಮೋಹಕ್ಕೆ ಒಳಗಾಗದೆ ಸ್ವಭಾಷಾ ಪ್ರೀತಿಯನ್ನು ಬೆಳಸಿಕೊಳ್ಳಬೇಕೆಂಬ ಆಶಯವಿದೆ. ಕನ್ನಡ ನಾಡಿನ ಕೀರ್ತಿ ವಿಶ್ವವಿಖ್ಯಾತವಾಗಲಿ ಎಂಬ ಬಯಕೆಯಿದೆ. ಇಂತಹ ಕಡೆಗಳಲ್ಲೆಲ್ಲಾ ಸ್ಥಳಗಳ ಸೊಬಗು ಸುಂದರತೆ ಇವುಗಳ ವಿವರಣೆಗಳಷ್ಟೆ ಕವನದ ಆಶಯವಾಗಿಲ್ಲವೆಂಬುದನ್ನು

---

೧. ಎಂ.ಎನ್.ಬಾಬು, ಪ್ರ.ಕ. ಸಂಪುಟ ೨೭, ಸಂಚಿಕೆ ೪, ಪು. ೪೫.
೨. ಕುವೆಂಪು, ಪ್ರ.ಕ. ಸಂಪುಟ ೩೩, ಸಂಚಿಕೆ ೩, ಪು. ೬.

ಗಮನಿಸಬೇಕು. 'ಬಳ್ಳಿಗಾವೆ' ಕವನದ ಬಸವ ತನ್ನ ಹಿಂದಿನ ವೈಭವವನ್ನೆಲ್ಲಾ ವಿವರಿಸುತ್ತಿದ್ದಂತೆ ಕವಿಯ ಮನದಲ್ಲಿ ಮೂಡಿದ ಭಾವನೆಯು ಇದೇ ಆಗಿದೆ. 'ಅಂದಿನಾ ಅನುಭವವು ಇಂದೆ ಮಗ ದೀವಿಗೆಯು ದೈತ್ಯರಾ ಪೆಗಲೇರ್ದು ಕುಬ್ಜರುಂ ದೈತ್ಯರಿಂ ಮೇಲಲ್ತೆ ನಿನ್ನಂದಿನಾ ದೈತ್ಯ ಶಕ್ತಿ ಎಮಗಿಂದು ಪೆಗಲಾಗೆ ಬರ್ಕೆ' ಎಂದು ಬಯಸುತ್ತದೆ. ಗತಕಾಲದ ಇತಿಹಾಸವನ್ನು ಮರೆಯದೆ ಮುಂಬರುವ ದಿನಗಳಲ್ಲಿ ಅದನ್ನು ಪುನಃ ಪಡೆಯಲು ಮನಸ್ಸು ತುಂಬಿ ದುಡಿಯುವುದು ನಾಡಿನ ಏಳಿಗೆಗೆ ಅವಶ್ಯಕ ಎಂದು ಅನಿಸುತ್ತದೆ. ಅದಕ್ಕಾಗಿಯೇ ತಾಯಿ ಬೆಳಗಾವಿಯನ್ನು ಕುರಿತು ಕವಿಯು

**ನಿನ್ನಂದಿನಾ ಶಕ್ತಿ ಪಸರಿಸಲಿ ಧಮನಿ ಧಮನಿಗಳಲ್ಲಿ**
**ಅವತರಿಸಿ ಮೈದೋರಿ ನವರೂಪದಿಂ ಮೆರದು**
**ಕನ್ನಡಕೆ ಭಾರತಕೆ ವಿಶ್ವಕ್ಕೆ ಕಲ್ಯಾಣಮಸ್ಪಂತೆ ಪೋಲ್**[1] ಮಾಡು ಎಂದು

ಬೇಡಿಕೊಳ್ಳುತ್ತಾರೆ. ನಾಡಿನ ಏಕೀಕರಣ, ರಾಷ್ಟ್ರೀಯ ಚಳುವಳಿಗಳು ತೀವ್ರಗೊಳ್ಳುತ್ತಿದ್ದ ಕಾಲದಲ್ಲಿ ಕನ್ನಡಿಗರಿಗೆ ಬೇಕಾಗಿದ್ದ ಸ್ಫೂರ್ತಿ ಇಂತಹದ್ದು.

ಕನ್ನಡಿಗರಿಗೆ ಬೇಕಾಗಿದ್ದ ಇಂತಹ ಆತ್ಮವಿಶ್ವಾಸವನ್ನು ತುಂಬುವುದರಲ್ಲಿ ವಿ.ಸಿ.ಯವರ 'ಪಂಪಾಯಾತ್ರೆ'ಯಲ್ಲಿ ಹಾಗೂ ಎಂ.ಆರ್.ಶ್ರೀನಿವಾಸ ಮೂರ್ತಿಯವರ 'ನಾಗರಿಕ' ನಾಟಕದಲ್ಲಿ ಬರುವ ಸನ್ನಿವೇಶಗಳು ಯಶಸ್ವಿಯಾಗಿದೆ. ಪಂಪಾಯಾತ್ರೆಯ ಕೊನೆಯಲ್ಲಿ ಬರುವ ಯುದ್ಧ ಸನ್ನಿವೇಶದ ಕಲ್ಪನೆ ತೊಂಬತ್ತು ವರ್ಷದ ರಾಮರಾಜ ಬಿಜಾಪುರದ ಆದಿಲ್‌ಷಾಹ ಬರೆಸಿರುವ ಪತ್ರವನ್ನು ಸಲ್ಲಿಸಿದ ನಂತರ ನೀಡುವ ಪ್ರತಿಕ್ರಿಯೆ ನಾಟಕೀಯವಾಗಿದ್ದು ಕನ್ನಡಿಗರ ಎದೆಯಲ್ಲಿ ಅಭಿಮಾನವನ್ನು ಉಕ್ಕಿಸುತ್ತದೆ. "ಕೇಳಿದಿರಾ ಸರದಾರರೇ ಪೌರರೇ ಈ ವಾಕ್ಯಗಳನ್ನು, ವಿಜಯನಗರದ ದರ್ಪವೂ, ಗೌರವವೂ ನಷ್ಟವಾಗಿ ಹೋಗುವುವೇನು? ನಮ್ಮ ತೋಳುಗಳಲ್ಲಿ ಬಲವಿಲ್ಲವೇನು? ಅಬ್ಬಾ! ಏನು ದುರಹಂಕಾರ! ಕಾಲ್ಕೆಳಿಗೆ ಹರಿದು ಹೋಗುವ ಹುಳುಗಳು ಪ್ರಭು ಕೇಸರಿಯನ್ನು ಧಿಕ್ಕರಿಸಿ ಮದೋನ್ಮತ್ತವಾಗಿರುವವೇ"[2] ಎಂಬಂತಹ ಮಾತುಗಳು ಕನ್ನಡಿಗರ ಪೌರುಷವನ್ನು ಬಡಿದೆಬ್ಬಿಸುತ್ತದೆ. ಅಂದಿನ ಸಂದರ್ಭದಲ್ಲಿ ಆಗಬೇಕಾಗಿದ್ದ ಹಾಗೂ ಕವಿಯು ಬಯಸಿದ್ದ ಪರಿಣಾಮವೂ ಅದೇನೇ.

ನಾಗರಿಕ ನಾಟಕದ ಆಶಯವೂ ಇದನ್ನೆ ಧ್ವನಿಸುತ್ತದೆ. ಒಂದು ನಾಡಿನ ಧರ್ಮ, ವೈಭವ ಸಂಸ್ಕೃತಿ ಇವುಗಳ ಅಳಿವು ಉಳಿವು ಆಯಾ ಜನಾಂಗದ ಶ್ರದ್ಧೆ, ಧರ್ಮ, ಸಾಹಸ ಹಾಗೂ ಕ್ರಿಯಾಶೀಲತೆಯನ್ನು ಅವಲಮಬಿಸಿರುತ್ತದೆ. ನಾಡಿನ

---

೧. ಹೆಚ್.ತಿಪ್ಪಯ್ಯ, ಪ್ರ.ಕ. ಸಂಪುಟ ೩೪, ಸಂಚಿಕೆ ೧, ಪು. ೭೦.
೨. ಸೀತಾರಾಮಯ್ಯ.ವಿ, ಪ್ರ.ಕ. ಸಂಪುಟ ೯, ಸಂಚಿಕೆ ೪, ಪು. ೬೭-೬೮.

ನೆರವಿಗೆ ಬರಬೇಕಾದವರು ಹೆಂಬೇಡಿಗಳಲ್ಲ, ಶೂರರು ಹಾಗೂ ಸಾಹಸವಂತರು. ಆದುದರಿಂದ ನಾಡಿನ ಯುವಶಕ್ತಿ ಬಲಶಾಲಿಗಳಾಗಬೇಕು. "ಬಲಹೀನರಾಗಿರ್ದೊಡೆ ಪಾಪ ಬಲಯುಕ್ತರಾಗಿರ್ದೊಡೆ ಅದು ಪುಣ್ಯ"[೧] ಎಂಬುದೇ ಕವಿಯ ಅಭಿಪ್ರಾಯ. ಅದು ನಾಗರಿಕನ ಮಾತುಗಳಲ್ಲಿ ಮಾರ್ದನಿಗೊಳ್ಳುತ್ತದೆ. ನಾಡು ಆಪತ್ತಿನಲ್ಲಿದ್ದ ಸಂದರ್ಭಗಳಲ್ಲಿ ಅದನ್ನು ಕಾಪಾಡಿಕೊಳ್ಳಲು ಬರಬೇಕಾದ ದೇವರು ಬರದೇ ಹೋದುದರ ಬಗ್ಗೆ ಆಕ್ರೋಶವಿದೆ. ದೇವರು ವೀರನೇ ಆಗಿದ್ದರೆ ಅನ್ಯಾಯಗಳನ್ನು ಪ್ರತಿಭಟಿಸುವವನೇ ಆಗಿದ್ದರೆ ಹಂಪೆಯ ವೈಭವವನ್ನು ಹಾಳುಗೆಡವಿದವರ ಮೇಲೆ ಕ್ರಮಕೈಗೊಳ್ಳಬೇಕಿತ್ತು. ಆದರೆ ಅಂತಹ ವೇಳೆಯಲ್ಲೂ ಸಹಾಯಕ್ಕೆ ಒದಗದ ದೇವರುಗಳ ಪೂಜೆ ಅವಶ್ಯಕವೇ ಎಂಬುದು ಅವರ ಮನದ ಆಲೋಚನೆ. ದೇವರ ಹೆಸರನ್ನು ಹೇಳಿಕೊಂಡು ನಾಡಿಗೆ ಮಾಡಬೇಕಾದ ಕರ್ತವ್ಯಗಳನ್ನು ಮರೆತು ಎಲ್ಲವನ್ನೂ ದೇವರ ಮೇಲೆಯೇ ಹೊರಿಸಿ ತಮ್ಮನ್ನು ಮಹಾತ್ಮರೆಂದು ದೊಡ್ಡವರೆಂದು ಕರೆದುಕೊಳ್ಳುವ, ನಾಟಕದಲ್ಲಿ ಬರುವ ಮುನಿವರ್ಯರ ವಿಡಂಬನೆ ಸಮಾಜದಲ್ಲಿ ತಮ್ಮ ಜವಾಬ್ದಾರಿಯನ್ನು ಮರೆತು ಇನ್ನೊಬ್ಬರು ಆ ಕೆಲಸವನ್ನು ಮಾಡಲಿ ಎಂದು ಆಶಿಸುವವರನ್ನು ಕುರಿತು ಹೇಳುವಂತಿದೆ. ನಾಟಕದ ಕೊನೆಯಲ್ಲಿ ಬರುವ ನಾಗರಿಕ ಹಾಗೂ ವಿದ್ಯಾರಣ್ಯರ ಮಾತುಗಳಲ್ಲಿ ಭಾರತಕ್ಕೆ ಬೇಕಾದ ಸ್ವಾತಂತ್ರ್ಯ, ಕನ್ನಡಿಗರಿಗೆ ಬೇಕಾದ ಕನ್ನಡನಾಡು, ನಾಡಿನ ಜನತೆಗೆ ಬೇಕಾಗಿರುವ ಅಭಿಮಾನ ಇವುಗಳ ಬಗ್ಗೆ ತಿಳುವಳಿಕೆ ನೀಡುತ್ತದೆ. ಹಂಪೆಯಲಿ ರಾಜ್ಯವನ್ನು ಕಟ್ಟಿ ಪರಧರ್ಮದಾಹವನು ಬಿಗಿ ತಡೆದ ನಮ್ಮವರು ಇಂದು ಹೆಂಬೇಡಿಗಳಾಗಿರುವುದರ ಬಗ್ಗೆ ಕೋಪ ವ್ಯಕ್ತವಾಗಿದೆ. ಅಂಜಿಕೆಯ ಬದುಕನ್ನು ಸಾಗಿಸಿ ಹೇಡಿ ಎಂದೆನಿಸಿ ಶತಮಾನಗಳ ಕಾಲ ಬದುಕುವುದಕ್ಕಿಂತ ಸಾಹಸದ ಬಾಳನು ಸಾಗಿಸುವ ಗಳಿಗೆಯೊಂದರ ಬಾಳು ಶ್ರೇಷ್ಠ ಎಂಬ ಅಭಿಪ್ರಾಯ ವ್ಯಕ್ತವಾಗಿದೆ.

ನಾಟಕದಲ್ಲಿ ಆರಂಭದಿಂದಲೂ ಬಳಕೆಯಾಗಿರುವ ಭಾಷೆ ರಾಜಸಯುಕ್ತವಾದ ಗಂಡು ಭಾಷೆಯಾಗಿದ್ದು ಪ್ರಚೋದನಕಾರಿಯಾಗಿದೆ. ವಿಶೇಷವಾಗಿ ಯುವ ಜನರ ಗಮನ ಸೆಳೆದ ಈ ನಾಟಕ ಅಂದಿನ ಸಮಾಜಕ್ಕೆ ಬೇಕಾಗಿದ್ದ ಪೌರುಷ, ಹೋರಾಟದ ಮನೋಭಾವ, ಸ್ಫೂರ್ತಿ ಇವುಗಳನ್ನು ಒದಗಿಸುವುದರಲ್ಲಿ ಯಶಸ್ವಿಯಾಗಿದೆ. ದೇ.ಜೇ.ಗೌ ಅವರು ಈ ನಾಟಕ ಕುರಿತಂತೆ "ಭಾರತಮಾತೆಯ ಮತ್ತು ಆಕೆಯ ಸತ್ತ ಸತ್ಪುತ್ರರ ದುಃಖದೊಡಗೂಡಿದ ವೀರವಾಣಿ ನಾಗರಿಕನ ಹೃದಯದಲ್ಲಿ ಪ್ರತಿಧ್ವನಿತ-ವಾದಂತೆ ಕಂಡುಬಂದಿತು. ನಿರಾಶೆಯ ಮಡಲಿನ ಆಶಾಶಿಶುವಿನ ನಲಿದಾಟವನ್ನೂ ಪುರುಷಬಲ ದೈವಬಲಗಳ ಸಮ್ಮೇಳನವನ್ನು ಕಂಡು ನಮ್ಮೆಲ್ಲರ ಹುರುಪು

---

೧. ಶ್ರೀನಿವಾಸಮೂರ್ತಿ.ಎಂ.ಆರ್, ಪ್ರಕ. ಸಂಪುಟ ೧೧, ಸಂಚಿಕೆ ೩, ಪು. ೧೩.

ಹುರಿಯಾಯಿತು. ನಾಗರಿಕನ ಕೊರಗು ನಮ್ಮ ಕೊರಗಾಯಿತು. ಅವನ ಕೋಪ ನಮ್ಮ ಕೋಪವಾಯಿತು"[೧] ಎಂದಿದ್ದಾರೆ. ಅವರ ಈ ಮಾತುಗಳನ್ನೂ ಗಮನಿಸಿದರೆ ಈ ನಾಟಕವು ಅಂದಿನ ಸಮಾಜದ ಅದರಲ್ಲೂ ಪ್ರಮುಖವಾಗಿ ಯುವಕರ ಮೇಲೆ ಬೀರಿದ ಪ್ರಭಾವವನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಕನ್ನಡಿಗರ ಹೋರಾಟಕ್ಕೆ ಪ್ರೋತ್ಸಾಹವನ್ನು ಅವರಿಗೆ ಅವಶ್ಯಕವಾಗಿ ಬೇಕಾಗಿದ್ದ ಆತ್ಮಸ್ಥೈರ್ಯವನ್ನು ತುಂಬಲು ಈ ನಾಟಕ ಯಶಸ್ವಿಯಾಗುತ್ತದೆ.

ಇಂತಹ ಹಲವು ಪ್ರಯತ್ನಗಳ ಫಲವಾಗಿ ಸ್ವಾತಂತ್ರ್ಯಪೂರ್ವದಿಂದಲೇ ಕನ್ನಡನಾಡಿನ ಕಲ್ಪನೆಯನ್ನು ಕಾಣುತ್ತಿದ್ದ ಕನ್ನಡಿಗರಿಗೆ ಸ್ವತಂತ್ರ ಬಂದನಂತರ ಅದು ದೊರೆತೇ ತೀರುತ್ತದೆ ಎಂಬ ಭರವಸೆ ಮೂಡತೊಡಗಿತ್ತು. ಆದರೆ ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಸ್ಥಿತಿಯಲ್ಲಿ ಬದಲಾವಣೆ ಕಾಣಿಸಿಕೊಂಡಿತು. ಭಾರತವು ಆಗ ಇದ್ದ ಪರಿಸ್ಥಿತಿಯಲ್ಲಿ ಭಾಷೆಗಳ ಆಧಾರದಮೇಲೆ ಪ್ರಾಂತಗಳ ನಿರ್ಣಯ ಮಾಡುವುದಕ್ಕೆ ಅಲ್ಲಲ್ಲಿ ಅಪಸ್ವರ ಕೇಳಿ ಬರತೊಡಗಿತು. ಭಾರತ ರಾಜ್ಯಾಂಗ ರಚನೆಯ ರೂಪರೇಷೆಗಳನ್ನು ನಿರ್ಣಯಿಸುವ ರಚನಾ ಸಮಿತಿಯ ತೀರ್ಮಾನದಲ್ಲಿ ಕರ್ನಾಟಕ ಪ್ರಾಂತದ ನಿರ್ಮಾಣ ಅಥವಾ ಭಾಷಾನುಗುಣವಾಗಿ ಹೊಸ ಪ್ರಾಂತದ ನಿರ್ಮಾಣದ ಉದ್ದೇಶವು ಕಂಡು ಬರದೇ ಹೋಯಿತು. ನೆಹರೂ ಅವರು ಲೋಕವೆಲ್ಲ ಒಂದು ಎಂದು ಹೇಳಬೇಕಾದ ಸಂದರ್ಭದಲ್ಲಿ ಪ್ರಾಂತೀಯ ನಿರ್ಮಾಣದಂತಹ ಸಂಕುಚಿತ ಭಾವನೆಗೆ ಆಸ್ಪದ ಕೊಡಬಾರದೆಂದು ಹೇಳಿದರು. ಇಂತಹ ಅಭಿಪ್ರಾಯಗಳು ಕನ್ನಡ ನಾಡಿನ ಏಕೀಕರಣಕ್ಕೆ ಪೂರಕವಾಗಿಲ್ಲದ್ದನ್ನು ಗಮನಿಸಿದ ಕನ್ನಡಿಗರು ವಿರೋಧ ವ್ಯಕ್ತಪಡಿಸಿದರು. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲೂ ವಿರೋಧವು ವ್ಯಕ್ತವಾಯಿತು. ಮಾಸ್ತಿವೆಂಕಟೇಶ ಅಯ್ಯಂಗಾರರು ಇದನ್ನು ವಿರೋಧಿಸಿ ಜೀವನ ಪತ್ರಿಕೆಯಲ್ಲಿ ಲೇಖನವೊಂದನ್ನು ಬರೆದರು. ಪ್ರಬುದ್ಧ ಕರ್ನಾಟಕ ಅದನ್ನು ಪುನಃ ಪ್ರಕಟಿಸಿ ಬೆಂಬಲ ಸೂಚಿಸಿತು.

ಬಿ.ಎಂ.ಶ್ರೀಕಂಠಯ್ಯ ಅವರು ಇದನ್ನು ವಿರೋಧಿಸುತ್ತಾ "ಕೆಲವರು ಪ್ರಾಂತಾಭಿಮಾನ, ಸಂಕೋಚದೃಷ್ಟಿಯೆಂದೂ ಭಾರತದ ಏಕಭಾಷೆ ಏಕರಾಜ್ಯ ಸ್ವಾತಂತ್ರ್ಯ ಇವು ಮೊದಲು ಆಗಬೇಕೆಂದು ಹೇಳುತ್ತಾರೆ. ಇದು ಒಂದು ದೃಷ್ಟಿಯಲ್ಲಿ ನಿಜ, ಆದರೆ ಮತ್ತೊಂದು ದೃಷ್ಟಿಯಿಂದ ಪ್ರಾಂತಗಳನ್ನು ಸರಿಪಡಿಸಿ ಎಲ್ಲ ಪ್ರಾಂತಗಳನ್ನು ಕೂಡಿಸಿದರೆ ಭಾರತವಾಗುವುದು"[೨] ಎಂದಿದ್ದಾರೆ. ಯಾವುದೇ ಪ್ರಾಂತದ ಜನ ಚೆನ್ನಾಗಿ ಬಾಳಬೇಕಾದರೆ ಅವರದು ಒಂದು ಪ್ರಾಂತವಾಗಿ

---

೧. ಜವರೇಗೌಡ.ದೇ., ಸಾಹಿತಿಗಳ ಸಂಗದಲ್ಲಿ, ೧೯೭೨, ಪು. ೪೫.
೨. ಬಿ.ಎಂ.ಶ್ರೀಕಂಠಯ್ಯ, ಪ್ರಕ. ಸಂಪುಟ ೨೧, ಸಂಚಿಕೆ ೧, ಪು. ೧೧೨.

ಏರ್ಪಡಬೇಕು. ಇಂತಹ ಪ್ರಾಂತಗಳ ನಿರ್ಮಾಣ ಪ್ರಾಂತಗಳ ಕ್ಷೇಮಕ್ಕಾಗಿ ಮಾತ್ರವಲ್ಲ. ಇದು ಭಾರತದ ಕ್ಷೇಮಕ್ಕೂ ಅವಶ್ಯಕ. ಭಾರತವನ್ನು ಮರೆತು ಪ್ರಾಂತಗಳ ಮಾತಾಡಕೂಡದು. ಹಾಗೆಯೇ ಪ್ರಾಂತಗಳನ್ನು ಬಿಟ್ಟು ಭಾರತದ ಮಾತಾಡುವುದು ಸರಿ ಅಲ್ಲ. ಸ್ವತಂತ್ರವಾಗಿರುವ ಭಾರತ ಅದರ ಪೂರ್ಣ ಫಲ ಪಡೆಯಬೇಕಾದರೆ ಬೇಗನೆ ಭಾಷಾನುಗುಣವಾಗಿ ಪ್ರಾಂತಗಳ ಪುನರ್ರಚನೆ ಆಗಬೇಕು. ಪ್ರತಿಯೊಬ್ಬ ಭಾರತೀಯನಿಗೂ ಅವನ ಪ್ರಾಂತದ ಭಾಷೆಯಲ್ಲೇ ಜೀವವಾಹಿನಿ ಹರಿದುಬರಬೇಕು. ಭಾರತದ ಹೊಸ ಸರ್ಕಾರ ಎಲ್ಲ ವಿಷಯಗಳನ್ನು ಎಲ್ಲ ಪ್ರಾಂತ್ಯಗಳಿಗೆ ಅವರವರ ಭಾಷೆಯಲ್ಲಿ ತಿಳಿಸಬೇಕು. ಇದು ನಡೆಯಬೇಕಾದರೆ ಆಯಾ ಭಾಷೆಗೆ ಸಂಬಂಧಪಟ್ಟ ಪ್ರಾಂತ್ಯಗಳು ಒಂದಾಗಿದ್ದಾಗ ಮಾತ್ರ ಸುಲಭವಾಗುತ್ತದೆ. ಅದು ಹೇಗೆಂದರೆ ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಯನ್ನು ತಾವೇ ಕಟ್ಟಿಕೊಂಡರೆ ತಮಗೆ ಬೇಕಾದ ಸೌಕರ್ಯಗಳನ್ನೆಲ್ಲವನ್ನೂ ಅದರಲ್ಲಿ ಮಾಡಿಕೊಳ್ಳಬಹುದು. ಹಾಗೆಯೇ ಕನ್ನಡಿಗರಿಗಾಗಿ ಕನ್ನಡನಾಡೊಂದು ಉದಯವಾಗಬೇಕು. ವಿ.ಸೀತಾರಾಮಯ್ಯನವರು ಕುಮುಟದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಮಾತನಾಡುತ್ತಾ" ಪ್ರತಿ ಮನೆಯವರೂ ಅವರವರ ಮನೆಯನ್ನು ಒಪ್ಪಿ ತಾವೇ ಮಾಡಿಕೊಂಡು ಏಳಿಗೆ ಹೊಂದಿದರೆ ಊರಿನ ಪ್ರಗತಿ ಹೇಗೋ ಹಾಗೆಯೇ ಪ್ರತಿ ಪ್ರಾಂತದವರು ಏಳಿಗೆ ಹೊಂದಿದರೆ ನಾಡಿನ ಏಳಿಗೆ ಸಾಧ್ಯ. ಯಾವುದೇ ಪ್ರಾಂತ ದುರ್ಬಲವಾದರೆ ಭರತ ಖಂಡ ದುರ್ಬಲವಾದಂತೆ. ಆದುದರಿಂದ ರಾಷ್ಟ್ರ ಸಬಲವಾಗಬೇಕಾದರೆ ಮುನ್ನಡೆ ಸಾಧಿಸಬೇಕಾದರೆ ಪ್ರಾಂತೀಯ ಭಾಷಾಪ್ರಾಂತಗಳ ರಚನೆ ಅಗತ್ಯ"[೧] ಎಂದಿರುವುದು ಪ್ರಾಂತ ರಚನೆಗಳು ಅಗತ್ಯವಾಗಿ ಆಗಲೇ ಬೇಕಾದ ಕಾರ್ಯವಾಗಿತ್ತು ಎಂಬುದನ್ನು ಸೂಚಿಸುತ್ತದೆ.

ಪ್ರಬುದ್ಧ ಕರ್ಣಾಟಕವು ಕರ್ನಾಟಕದ ಯಾವುದೇ ಭಾಗದಲ್ಲಿ ಪ್ರಕಟಗೊಳ್ಳುವ ಇಂತಹ ವಿಚಾರಗಳೆಲ್ಲವೂ ಕನ್ನಡಿಗರಿಗೆ ಮುಟ್ಟಬೇಕು ಎಂದು ಯೋಚಿಸಿ ಅದರ ಮೂಲಕ ಕನ್ನಡಿಗರು ತಮ್ಮ ನಾಡಿನ ರಚನೆಯ ಕಡೆ ಯೋಚಿಸುವಂತೆ ಪ್ರೇರೇಪಣೆಯನ್ನು ನೀಡಿದೆ. ಅಷ್ಟೇ ಅಲ್ಲದೆ ಕನ್ನಡ ನಾಡು ಒಂದುಗೂಡುವ ಈ ಕಾರ್ಯದ ಬಗ್ಗೆ ಅನುಮಾನ ಬೇಡ. ಅದು ನಡೆದೇ ತೀರುತ್ತದೆ ಎಂಬ ಭರವಸೆಯನ್ನು ಅದು ವ್ಯಕ್ತಪಡಿಸಿದೆ. ಕನ್ನಡನಾಡು ಒಂದುಗೂಡುವ ಈ ಕಾರ್ಯದ ಬಗ್ಗೆ ಆತಂಕ ಪಡಬೇಕಾಗಿಲ್ಲ. ಅದು ಖಂಡಿತವಾಗಿಯೂ ನಮಗೆ ದಕ್ಕಿಯೇ ತೀರುತ್ತದೆ. ಕುವೆಂಪು ಅವರು ಕೇಳುವ ಹಾಗೆ "ಏನು ಶಂಕೆ? ಏನು ಶಂಕೆ? ಆರ ಶಂಕೆ? ಕಷ್ಟ ಎನ್ನುವಿರಾ? ಜಟಿಲ ಎನ್ನುವಿರಾ? ನಷ್ಟ ಎನ್ನುವಿರಾ? ಅದೆಂದಿಗೂ ಭಾರತದ

---

೧. ವಿ.ಸೀತಾರಾಮಯ್ಯ, ಪ್ರ.ಕ. ಸಂಪುಟ ೩೫, ಸಂಚಿಕೆ ೧, ಪು. ೨೫.

ವಿಭಜನೆಗಿಂತ ಹೆಚ್ಚು ಕಷ್ಟವಾಗಲಾರದು. ಅದಕ್ಕಿಂತ ಹೆಚ್ಚು ಜಟಿಲವಾಗಲಾರದು. ಅದರಿಂದೊದಗಿದ ನಷ್ಟಕ್ಕಿಂತಲೂ ಹೆಚ್ಚು ನಷ್ಟವಾಗಲಾರದು. ಇಂದು ನಾಳೆಯೋ ಕರ್ನಾಟಕ ಪ್ರಾಂತ ರಚನೆ ನಮಗೆ ಕಟ್ಟಿಟ್ಟ ಬುತ್ತಿ[೧] ಎಂಬ ಆಶಾಭಾವನೆಯೂ ಕನ್ನಡ ಜನಗಳಲ್ಲಿ ಇತ್ತು. ಅಷ್ಟೇ ಅಲ್ಲದೆ ನಾಡಿನಲ್ಲಿರುವ ಅನ್ಯಭಾಷಿಕರಾಗಲೀ ಕನ್ನಡದ ಬಗ್ಗೆ ಅಭಿಮಾನವಿಲ್ಲದ ಕನ್ನಡಿಗರೇ ಆಗಲಿ ಇದಕ್ಕೆ ವಿರೋಧ ವ್ಯಕ್ತಪಡಿಸಿದರೆ ಅವರಿಗೆ ತಕ್ಕ ಬುದ್ಧಿಯನ್ನು ಕಲಿಸುವ ಉತ್ಸಾಹವೂ ತುಂಬಿತು. ಕುವೆಂಪು ಅವರು ಮಾತುಗಳಲ್ಲಿ ಹೇಳುವುದಾದರೆ "ಕನ್ನಡ ನಾಡಿನಲ್ಲಿ ನೆಲೆಸಿರುವ ಕನ್ನಡಿಗರಲ್ಲದವರಾಗಲೀ ಕಾರಣಾಂತರಗಳಿಂದ ಕನ್ನಡದ ಅಭಿಮಾನ ಕೆಟ್ಟಿರುವ ಕನ್ನಡಿಗರಾಗಲೀ ಆ ಆಕಾಂಕ್ಷೆಯ ಹಾದಿಯಲ್ಲಿ ಅಡಚಣೆ ತಂದೊಡ್ಡುವ ಸಾಹಸಕ್ಕೆ ಮುಂಬರುವ ಸಂಭವ ಒದಗಿದರೆ....... ಅವರನ್ನು ದೇವರೇ ಕಾಪಾಡಲಿ"[೨] ಈ ಮಾತುಗಳ ಹಿಂದೆ ಇರುವುದು ವಿನೀತ ಭಾವವಲ್ಲ ಅಸಡ್ಡೆಯ ವಿರುದ್ಧ ನೀಡಿರುವ ಸಾತ್ವಿಕ ಎಚ್ಚರಿಕೆ.

ಇಷ್ಟೆಲ್ಲ ಪ್ರಯತ್ನಗಳು ನಡೆದರೂ ಪ್ರಾಂತಗಳ ರಚನೆಯ ಕಾರ್ಯದಲ್ಲಿ ಸಿಗಬೇಕಾದ ವೇಗ ಸಿಗದೇ ಹೋಯಿತು. ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಸರ್ಕಾರದ ಮುಂದೆ ಅನೇಕ ರೀತಿಯ ಸಮಸ್ಯೆಗಳಿದ್ದು ರಾಷ್ಟ್ರೀಯ ಅಂತಾರಾಷ್ಟ್ರೀಯ ಮಟ್ಟದ ಗಂಭೀರ ಸಮಸ್ಯೆಗಳ ನಡುವೆ ಕೆಲವು ರಾಜ್ಯಗಳಿಗೆ ಮಾತ್ರ ಸೀಮಿತವಾಗಿದ್ದ ಏಕೀಕರಣ ಸಮಸ್ಯೆ ಆದ್ಯತೆಯ ಮೇಲೆ ಬಗೆಹರಿಸಬೇಕಾದ್ದೆಂದೂ ಅದಕ್ಕೆ ಹೆಚ್ಚಿನ ನೀಡಬೇಕಾದ ಅವಶ್ಯಕತೆ ಇಲ್ಲವೆಂದು ಕೇಂದ್ರದ ಅಭಿಪ್ರಾಯವಾದುದ್ದರಿಂದಲೋ ಏನೋ ಭಾಷಾವಾರು ಪ್ರಾಂತ್ಯಗಳ ರಚನೆಗೆ ಸಿಗಬೇಕಾದಷ್ಟು ತೀವ್ರವಾದ ಚಾಲನೆ ದೊರೆಯಲಿಲ್ಲ. ಆದರೆ ದಕ್ಷಿಣ ರಾಜ್ಯಗಳ ಒತ್ತಡ ಹೆಚ್ಚಾದಾಗ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರೂ ಸಂವಿಧಾನ ಘಟನಾ ಸಮಿತಿಯ ಅಧ್ಯಕ್ಷರು ಆದ ಶ್ರೀ ರಾಜೇಂದ್ರ ಪ್ರಸಾದ್ ಅವರು ಜೂನ್ ೧೯೪೮ರಲ್ಲಿ ಮೂರು ಸದಸ್ಯರ ಸಮಿತಿಯೊಂದನ್ನು ಶ್ರೀ ಎಸ್.ಕೆ.ದಾರ್ ಅವರ ಅಧ್ಯಕ್ಷತೆಯಲ್ಲಿ ರಚಿಸಿದರು. ಈ ಸಮಿತಿಗೆ ಆಂಧ್ರ ಕರ್ನಾಟಕ, ಕೇರಳ ಪ್ರಾಂತ್ಯಗಳ ರಚನೆಯ ಸಾಧಕ ಬಾದಕ್‌ಗಳನ್ನು ಕುರಿತು ಪರಿಶೀಲಿಸಿ ವರದಿ ಮಾಡುವಂತೆ ಸೂಚಿಸಲಾಯಿತು. ಹಾಗೆ ಬಂದ ಭಾಷಾವಾರು ಪ್ರಾಂತ್ಯ ರಚನೆಯ ಸಮಿತಿ ಕರ್ನಾಟಕದ ಏಕೀಕರಣಕ್ಕೆ ಸಂಬಂಧಿಸಿದಂತೆ ಕೇಳಿದ ಪ್ರಶ್ನೆಗಳಿಗೆ ಅಖಿಲ ಕರ್ನಾಟಕ ಏಕೀಕರಣ ಸಂಘದವರು ಉತ್ತರಗಳನ್ನು ನೀಡಿ ಅನುಮಾನಗಳನ್ನು ಬಗೆಹರಿಸಿ ಕರ್ನಾಟಕ ಒಂದಾಗಲೇ-ಬೇಕೆಂದು ಒತ್ತಡವನ್ನು ಹೇರಿದರು. ಈ ಸಂದರ್ಭದಲ್ಲಿ ನಡೆದ ಪ್ರಶ್ನೋತ್ತರಗಳನ್ನು

---

೧. ಕುವೆಂಪು, ಪ್ರ.ಕ. ಸಂಪುಟ ೨೯, ಸಂಚಿಕೆ ೨, ಪು. ೧೦೦.
೨. ಕುವೆಂಪು, ಪ್ರ.ಕ. ಸಂಪುಟ ೨೯, ಸಂಚಿಕೆ ೨, ಪು. ೧೦೦.

ಪ್ರಬುದ್ಧ ಕರ್ಣಾಟಕ ಸಂಗ್ರಹಿಸಿಕೊಟ್ಟಿದೆ.[೧] ಇದು ಮಹತ್ತರವಾದ ಮಾಹಿತಿ ಸಂಗ್ರಹವಾಗಿದೆ. ಏಕೀಕರಣಕ್ಕೆ ಸಂಬಂಧಿಸಿದಂತೆ ಪ್ರಾಂತ್ಯ ರಚನೆಯವರು ಹಲವಾರು ಪ್ರಶ್ನೆಗಳನ್ನೆತ್ತಿದರು. ಆಂಧ್ರ ಕರ್ಣಾಟಕ ಕೇರಳ ಮತ್ತು ಮಹಾರಾಷ್ಟ್ರಗಳನ್ನು ಭಾಷಾ ಪದ್ಧತಿಗೆ ಅನುಸಾರವಾಗಿ ಪ್ರತ್ಯೇಕ ಪ್ರಾಂತ್ಯಗಳಾಗಿ ರಚಿಸಬೇಕೇ? ಎಂಬುದೇ ಆ ಸಮಿತಿಯವರು ಎತ್ತಿದ ಮೊದಲ ಪ್ರಶ್ನೆ. ಇದಕ್ಕೆ ಪ್ರತಿಯಾಗಿ ಏಕೀಕರಣ ಸಮಿತಿಯವರು ಹೌದು ಭಾಷೆಗಳಿಗೆ ಅನುಸಾರಿಯಾಗಿ ಪ್ರಾಂತ, ರಚನೆಯಾಗಬೇಕು ಏಕೆಂದರೆ ಭಾರತದ ಆಡಳಿತಾಂಗಗಳು ಹಿಂದಿನ ರಾಜರ ಅಥವಾ ಆಡಳಿತಗಾರರ ಇಚ್ಛೆಗೆ ಅನುಸಾರವಾಗಿ ಬೆಳೆದು ನಿಂತಿದೆ. ಆದುದರಿಂದ ಕ್ರಮಬದ್ಧವಾದ ತಳಹದಿಯ ಮೇಲೆ ಭಾಷಾವಾರು ಪ್ರಾಂತ್ಯದ ರಚನೆಯಾಗದಿದ್ದರೆ ಅದರಿಂದ ತೀವ್ರವಾದ ಹಾನಿಗೆ ಒಳಗಾಗಬೇಕಾಗುತ್ತದೆ. ಜನಗಳಿಗೆ ಆಶಾಭಂಗವಾಗುತ್ತದೆ. ಕರ್ನಾಟಕದ ಏಕೀಕರಣ ಬೇಕೇ ಬೇಡವೇ ಎಂಬಂತಹ ಗೊಂದಲಗಳಿಗೆ ಆಸ್ಪದವೇ ಇಲ್ಲ. ಭಾರತದ ಹೊಸ ರಾಜ್ಯ ಘಟನೆ ಜಾರಿಗೆ ಬರುವುದರ ಒಳಗಾಗಿ ಕರ್ನಾಟಕ ಪ್ರಾಂತ್ಯ ನಿರ್ಮಾಣ ಆಗುವುದು ಅವಶ್ಯಕ. ಇದಕ್ಕೆ ಮೊದಲಿನಿಂದಲೂ ನಾಡಿನ ಹಿರಿಯರ ಅನುಮೋದನೆ ದೊರೆತಿದೆ. ರಾಷ್ಟ್ರ ಮಹಾ ಸಭೆಯ ಚುನಾವಣಾ ಘೋಷಣೆಯೂ ಕೂಡ ಈ ಧ್ಯೇಯವನ್ನು ಒಪ್ಪಿದೆ. "ಮುಂಬಯಿ ಹಾಗೂ ಮದ್ರಾಸು ಮಂತ್ರಿ ಮಂಡಲಗಳಲ್ಲಿರುವ ಕರ್ನಾಟಕ ಮಂತ್ರಿಗಳ ಆಡಳಿತ ಅನುಭವವು ಕರ್ನಾಟಕ ಪ್ರಾಂತ ರಚನೆ ಆಗದಿದ್ದರೆ ಕರ್ನಾಟಕವು ಬದುಕಿ ಉಳಿಯುವುದು ಕಷ್ಟ ಎಂಬುದನ್ನು ಒತ್ತಿ ಹೇಳಿದೆ[೨]. ಆದುದರಿಂದ ಕರ್ನಾಟಕದ ಅಸ್ತಿತ್ವ ಉಳಿಯಬೇಕಾದರೆ ಕನ್ನಡ ನಾಡಿನ ಪ್ರಾಂತ ರಚನೆ ಅಗತ್ಯವಾಗಿ ಆಗಲೇಬೇಕು ಎಂಬುದನ್ನು ಸಮಿತಿಯ ಸ್ಪಷ್ಟ ಅಭಿಪ್ರಾಯ. ಕನ್ನಡ ನಾಡಿನ ರಚನೆಯಿಂದಷ್ಟೇ ಕನ್ನಡಿಗರು ಉದ್ಧಾರವಾಗಲು ಸಾಧ್ಯ. ತಮ್ಮ ಏಳಿಗೆಯನ್ನು ಸಾಧಿಸಿಕೊಳ್ಳಲು ಸಾಧ್ಯ. ಸಮಿತಿಯ ಈ ಉತ್ತರ ಕನ್ನಡನಾಡಿನಂತಹ ಪ್ರಾಂತ ರಚನೆಗಳ ಅಗತ್ಯತೆಯ ಬಗ್ಗೆ ಪ್ರಶ್ನಿಸುತ್ತಿದ್ದವರ ಕಣ್ಣು ತೆರೆಸಲು ಶಕ್ತವಾಗುತ್ತದೆ. ಭಾಷಾವಾರು ಪ್ರಾಂತ ರಚನೆ ಸಮಿತಿ ವ್ಯಕ್ತಪಡಿಸಿದ ಮತ್ತೊಂದು ಶಂಕೆಯೆಂದರೆ ಕೃಷಿ ಕೈಗಾರಿಕೆ ಕಾಡು ಉತ್ಪತ್ತಿ ಖನಿಜಗಳು ವ್ಯಾಪಾರ ವಹಿವಾಟು ಸಾರ್ವಜನಿಕ ಆರೋಗ್ಯ ಇವುಗಳ ದೃಷ್ಟಿಯಿಂದ ಹೊಸ ಪ್ರಾಂತ್ಯ ರಚನೆಯಾದರೆ ಅವುಗಳ ಆರ್ಥಿಕ ಪರಿಣಾಮ ಏನಾಗಬಹುದು? ಎಂಬುದು ಈ ಶಂಕೆಗೆ ಅರ್ಥವೇ ಇಲ್ಲ ಎಂದು ಭಾವಿಸಿರುವ ಕರ್ನಾಟಕ ಏಕೀಕರಣ ಸಮಿತಿಯವರು ಇದಕ್ಕೆ ಉತ್ತರವಾಗಿ ಕರ್ನಾಟಕ ಪ್ರಾಂತ್ಯ ರಚನೆಯ ಕಾರಣದಿಂದ ಆರ್ಥಿಕ ಪರಿಸ್ಥಿತಿಯಲ್ಲಿ ಯಾವ ಬಗೆಯ ತೊಂದರೆಯೂ ಉಂಟಾಗುವುದಿಲ್ಲ. ಅದರ ಬದಲಾಗಿ ಆರ್ಥಿಕವಾಗಿ ಪ್ರಗತಿ ಸಾಧಿಸಲು ಅವಕಾಶವಿದೆ. ಏಕೆಂದರೆ ಕರ್ನಾಟಕವು

---

೧. ಹೆಚ್ಚಿನ ವಿವರಗಳು, ೩೦ನೇ ಸಂಪುಟ ೨ನೇ ಸಂಚಿಕೆಯ ವಸ್ತುಕೋಶದಲ್ಲಿ ಲಭ್ಯವಿದೆ.
೨. ವಸ್ತುಕೋಶ, ಸಂಪುಟ ೩೦, ಸಂಚಿಕೆ ೨, ಪು. ೧೧೮.

ವಿವಿಧ ಆಡಳಿತಗಳಲ್ಲಿ ಹಂಚಿ ಹೋಗಿರುವುದರಿಂದ ಎಲ್ಲಾ ಪ್ರಾಂತ್ಯಗಳಲ್ಲೂ ಪ್ರಗತಿ ಸಾಧ್ಯವಾಗುತ್ತಿಲ್ಲ. ಆದರೆ ಮೈಸೂರು ಪ್ರಾಂತ್ಯವು ಕೃಷಿ ಕೈಗಾರಿಕೆಗಳಲ್ಲಿ ಬಹಳ ಪ್ರಗತಿ ಸಾಧಿಸಿದೆ. ಇಲ್ಲಿನ ಮಣ್ಣು ಫಲವತ್ತಾಗಿ ಉತ್ಪಾದನೆಯನ್ನು ಹೆಚ್ಚಿಸಲು ನೀರಾವರಿ ಯೋಜನೆಗಳನ್ನು ಕೈಗೊಳ್ಳಲಾಗಿದೆ. ನಾಡಿನ ಉಳಿದ ಭಾಗಗಳಲ್ಲಿ ಯೋಗ್ಯವಾದ ನೀರಾವರಿಯ ಸಹಾಯದಿಂದ ಬಿಜಾಪುರ, ಉತ್ತರ ಕನ್ನಡ ಧಾರವಾಡ ಹಾಗೂ ಬಳ್ಳಾರಿ ಜಿಲ್ಲೆಯ ವಿಸ್ತಾರವಾದ ಪ್ರದೇಶಗಳನ್ನು ಕೃಷಿಯೋಗ್ಯವಾದ ಭೂಮಿಯನ್ನಾಗಿ ಮಾಡಬಹುದು. ವಿವಿಧ ರೀತಿಯ ಕೈಗಾರಿಕೆಗಳಿಗೂ ಇಲ್ಲಿ ಅವಕಾಶ ವಿಪುಲವಾಗಿದೆ ಅತಿ ಹೆಚ್ಚು ಹತ್ತಿಯ ಬೆಳೆ ಬರುತ್ತಿದ್ದು ಅದನ್ನು ಜಪಾನ್, ಮುಂಬೈಗೆ ಕಳುಹಿಸುವ ಬದಲು ಇಲ್ಲೇ ಕೈಗಾರಿಕೆ ಸ್ಥಾಪಿಸಬಹುದು. ನಮ್ಮಲ್ಲಿ ಕಬ್ಬಿಣದ ಅದಿರು, ಮ್ಯಾಂಗನೀಸ್, ಸುಣ್ಣದ ಕಲ್ಲು, ಬಣ್ಣದ ಮಣ್ಣು, ಸಿಲ್ಲಿಕ ದೊರೆಯುತ್ತದೆ. ಹೀಗೆ ಅನೇಕ ವಿಧವಾದ ಖನಿಜಗಳು ದೊರೆಯುತ್ತದೆ. ವ್ಯಾಪಾರ ವಹಿವಾಟಿಗೆ ಕರ್ನಾಟಕದಲ್ಲಿ ಅವಕಾಶವಿದ್ದು ಉತ್ತಮವಾದ ರಸ್ತೆ ವ್ಯವಸ್ಥೆ ರೈಲು ಮಾರ್ಗಗಳನ್ನು ನಿರ್ಮಿಸುವುದರಿಂದ ಅದನ್ನು ಮತ್ತಷ್ಟು ಸುಧಾರಿಸಬಹುದು. ಕರ್ನಾಟಕವು ಉದ್ದವಾದ ಕರಾವಳಿ ಪ್ರದೇಶವನ್ನು ಹೊಂದಿದ್ದು ಅದರಲ್ಲಿ ಕೆಲವಾದರೂ ಸರ್ವ ಋತು ಬಂದರುಗಳನ್ನು ಸ್ಥಾಪಿಸಬಹುದು. ಹೀಗೆ ಕರ್ನಾಟಕವು ತನ್ನ ಅಭಿವೃದ್ಧಿ-ಯನ್ನು ಸಾಧಿಸಿಕೊಳ್ಳಲು ವಿಫಲವಾದ ಅವಕಾಶ ಇದ್ದರೂ ಏಕೀಕರಣವಾಗದೆ ಅದು ಸಾಧ್ಯವಾಗುತ್ತಿಲ್ಲ. ಹಾಗಾಗಿ ಏಕೀಕರಣಗೊಂಡ ಕನ್ನಡ ನಾಡಿನಿಂದ ಕೇಂದ್ರಕ್ಕೆ ಆರ್ಥಿಕ ಹೊರೆಯಾಗುವುದಿಲ್ಲ. ಅದು ಕೇಂದ್ರಕ್ಕೆ ಸಹಕಾರಿಯಾಗಿಯೇ ಕಾರ್ಯ ನಿರ್ವಹಿಸುತ್ತದೆ. ಆದುದರಿಂದ ಕರ್ನಾಟಕ ಏಕೀಕರಣವಾಗಲೇಬೇಕು ಎಂದು ಒತ್ತಾಯಪಡಿಸಿದೆ. ಪ್ರಬುದ್ಧ ಕರ್ನಾಟಕವು ಈ ವರದಿಯನ್ನು ಪ್ರಕಟಿಸುವುದರ ಮೂಲಕ ಮೈಸೂರು ಪ್ರಾಂತ್ಯದವರು ಏಕೀಕರಣ ವಿರೋಧಿಗಳು ಎಂಬ ಭಾವನೆಯನ್ನು ದೂರ ಮಾಡಲು ಪ್ರಯತ್ನಿಸಿದೆ. ಮಾತ್ರವಲ್ಲದೆ ಏಕೀಕರಣಕ್ಕೆ ಕರ್ನಾಟಕದಲ್ಲಿ ಪೂರಕವಾಗಿರುವ ಅಂಶಗಳು ಯಾವುವು? ಅದರಿಂದ ಪ್ರಯೋಜನವೇನು? ಎಂಬುದನ್ನು ಮನವರಿಕೆ ಮಾಡಿಕೊಡಲು ಯತ್ನಿಸಿದೆ. ಲೇಖನದ ಕೊನೆಯಲ್ಲಿ ಬರುವ "ಆಡಳಿತವು ಯೋಗ್ಯವಾಗಿ ನಡೆಯುವಂತಾಗ-ಬೇಕಾದರೆ ಅದನ್ನು ಭಾಷಾನಾಗುಣವಾಗಿ ತುಂಡರಿಸಲೇಬೇಕು" ಎಂಬ ಮಾತುಗಳು ಇದನ್ನೇ ಸಮರ್ಥಿಸುತ್ತದೆ.

ಹೀಗೆ ಹಲವಾರು ಪ್ರಶ್ನೆಗಳನ್ನು, ಶಂಕೆಗಳನ್ನು ವ್ಯಕ್ತಪಡಿಸಿ ಸೂಕ್ತವಾದ ಉತ್ತರಗಳನ್ನು ಪಡೆದುಕೊಂಡ ನಂತರವೂ ಸಮಿತಿಯು ನೇತ್ಯಾತ್ಮಕವಾಗಿ ವರದಿಯನ್ನು ನೀಡಿ ಕರ್ನಾಟಕ ಪ್ರಾಂತ್ಯ ರಚನೆಯ ಬಗ್ಗೆ ಅಪಸ್ವರವನ್ನೆತ್ತಿತು. ಕರ್ನಾಟಕ ಏಕೀಕರಣದ ಬಗ್ಗೆ ಹಲವಾರು ಅನುಮಾನಗಳನ್ನು ಹಾಗೂ ಅದರಿಂದ ಬೇರೆ ಬೇರೆ ಸಮಸ್ಯೆಗಳು ಉಂಟಾಗಬಹುದೆಂಬ ಅನುಮಾನವನ್ನು ತನ್ನ ವರದಿಯಲ್ಲಿ

ವ್ಯಕ್ತಪಡಿಸಿತು. ಇದರಿಂದ ಏಕೀಕರಣದ ಬಗ್ಗೆ ತೀವ್ರವಾದ ಆಸಕ್ತಿ ಹಾಗೂ ಆಸೆಗಳನ್ನು ಇಟ್ಟುಕೊಂಡಿದ್ದ ಕನ್ನಡಿಗರಿಗೆ ತೀರಾ ನಿರಾಸೆಯಾಯಿತು. ಪ್ರಬುದ್ಧ ಕರ್ಣಾಟಕವು ಈ ಸಂದರ್ಭದಲ್ಲಿ ಸಮಿತಿಯು ಇತ್ತಿದ ಆಕ್ಷೇಪಣೆಗಳೆಲ್ಲವನ್ನೂ ಗಮನಿಸಿ ಅವುಗಳೆಲ್ಲವೂ ನಿರಾಧಾರ ಎಂದು ಸ್ಪಷ್ಟನೆ ನೀಡಿದೆ. ಕನ್ನಡಿಗರ ಪರವಾಗಿ ನಿಂತು ಕನ್ನಡಿಗರ ಅನಿಸಿಕೆಗಳನ್ನು ತನ್ನ ಸಂಪಾದಕೀಯದಲ್ಲಿ ವ್ಯಕ್ತಪಡಿಸಿದೆ. ಧಾರ್ ಸಮಿತಿಯ ವರದಿಯನ್ನು ತೀವ್ರವಾಗಿ ವಿರೋಧಿಸಿದ್ದು ಮಾತ್ರವಲ್ಲದೆ ಆಗ ಬೇಕಾಗಿರುವ ಕಾರ್ಯಗಳೇನು ಮುಂದೆ ಏನಾಗಬೇಕು ಎಂಬುದನ್ನೂ ಸೂಚಿಸಿದೆ.

ಭಾಷಾವಾರು ಪ್ರಾಂತ ರಚನೆಯ ಅಗತ್ಯ ಸದ್ಯಕ್ಕಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ ಧಾರ್ ಸಮಿತಿಯು ಭಾಷಾವಾರು ಪ್ರಾಂತ ರಚನೆಯಿಂದ ಹಲವಾರು ಸಮಸ್ಯೆಗಳು ಉದ್ಭವಿಸಬಹುದು ಎಂಬುದನ್ನು ಎತ್ತಿ ತೋರಿಸಿದ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕ ಪ್ರತಿಕ್ರಿಯಿಸಿದ ರೀತಿ ಗಮನಾರ್ಹ.[೧] ಧಾರ್ ಸಮಿತಿ ಎತ್ತಿದ ಸಮಸ್ಯೆಗಳಲ್ಲಿ ಪ್ರಮುಖವಾದದ್ದು, ಸದ್ಯದಲ್ಲಿ ಭಾರತದ ಮುಖ್ಯ ಅವಶ್ಯಕತೆ ಎಂದರೆ ಅದನ್ನು ಒಂದು ಜನಾಂಗವನ್ನಾಗಿ ಮಾಡುವುದು. ಭಾಷಾವಾರು ಪ್ರಾಂತ್ಯ ನಿರ್ಮಾಣವಾದರೆ ಅದರಿಂದ ದೇಶ ಛಿದ್ರ ಛಿದ್ರವಾಗಿ ಹೋಗುತ್ತದೆ, ಹಿಂದೆ ಕಾಂಗ್ರೇಸ್ ಭಾಷಾವಾರು ಪ್ರಾಂತ್ಯಗಳ ರಚನೆಗೆ ಒಪ್ಪಿಕೊಂಡ ಸಂದರ್ಭವೇ ಬೇರೆ ಈಗಿನ ಸಂದರ್ಭವೇ ಬೇರೆ ಇಂದಿನ ದೃಷ್ಟಿಯಿಂದ ಭಾರತ ಏಕ ಖಂಡವಾಗಿರಬೇಕು. ಈ ರೀತಿ ಪ್ರಾಂತ್ಯಗಳನ್ನು ಮಾಡುವುದರಿಂದ ಒಂದು ಪ್ರಾಂತ್ಯದ ಜನ ತಮ್ಮ ಮಧ್ಯ ಇರುವ ಇತರ ಭಾಷೆಯನ್ನಾಡುವ, ಅಲ್ಪ ಸಂಖ್ಯಾತರ ವಿಷಯದಲ್ಲಿ ಅಸಹನೆ ತೋರಬಹುದು. ಗಡಿ ನಿರ್ಣಯಿಸುವುದರಲ್ಲಿ ವೈಮನಸ್ಸು ಏರ್ಪಡಬಹುದು. ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಯಾಗಿರಬೇಕು ಮುಂದೆ ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಿರಬೇಕು ಅಂತಹ ಸಂದರ್ಭದಲ್ಲಿ ಮಾತ್ರ ಪ್ರಾಂತ್ಯವನ್ನು ನಿರ್ಮಾಣ ಮಾಡಬಹುದು. ಆದುದರಿಂದ ಭಾಷಾವಾರು ಪ್ರಾಂತ್ಯ ರಚನೆ ಈಗ ಅಗತ್ಯವಿಲ್ಲ. ಇದಲ್ಲದೆ ದೇಶ ಈಗ ಇರುವ ಪರಿಸ್ಥಿತಿಯಲ್ಲಿ ದೇಶವು ಇನ್ನೂ ಹೊರಗಣ ಆಕ್ರಮಣ ಭಯದಿಂದ ತಪ್ಪಿಸಿಕೊಂಡಿಲ್ಲ. ಅಳತೆ ಮೀರಿದ ಆರ್ಥಿಕ ಮುಗ್ಗಟ್ಟು ಉಂಟಾಗಿದೆ. ಸಂಸ್ಥಾನಗಳಲ್ಲಿ ಭಿನ್ನಭಾವ ಇನ್ನೂ ದೂರವಾಗಿಲ್ಲ. ಮಿಗಿಲಾಗಿ ಹೊಸ ಪ್ರಾಂತ್ಯಗಳ ರಚನೆಯಿಂದ ಅದರ ಹೊರ ಜನತೆಯ ಮೇಲೆ ಬೀಳುತ್ತದೆ. ಇದು ಅಲ್ಪಸಂಖ್ಯಾತರ ಸಮಸ್ಯೆಯನ್ನು ಹುಟ್ಟು ಹಾಕುತ್ತದೆ. ಭಾಷಾನುಗುಣವಾಗಿ ಪ್ರಾಂತ್ಯಗಳಾಗಿರಲು ಭಾರತದ ಕೆಲವು ಭಾಗಗಳಿಗಷ್ಟೇ ಅವಕಾಶವನ್ನು ಮಾಡಿಕೊಟ್ಟರೆ ಭಾರತದ ಉಳಿದ ಭಾಗಗಳಿಂದಲೂ ಇಂತಹ ಬೇಡಿಕೆ ಬರಬಹುದು. ರಾಷ್ಟ್ರದ ಮುಂದೆ ರಕ್ಷಣೆ

---

೧. ಹೆಚ್ಚಿನ ವಿವರಗಳು: ಸಂಪಾದಕೀಯ, ಪ್ರಕ. ಸಂಪುಟ ೩೦, ಸಂಚಿಕೆ ೩ರಲ್ಲಿ ಲಭ್ಯವಾಗುತ್ತದೆ.

ನಿರಾಶ್ರಿತರು ಆಹಾರ ಮುಂತಾದ ಜಟಿಲವಾದ ಸಮಸ್ಯೆಗಳಿವೆ. ಈ ಸಂದರ್ಭದಲ್ಲಿ ದೇಶವನ್ನು ಹೊಸ ರೀತಿಯಲ್ಲಿ ವಿಭಾಗಿಸಲು ಯತ್ನಿಸುವುದು ತಿಳಿಗೇಡಿತನ. ಮುಂದೆ ಸಂಸ್ಥಾನದವರ ಭವಿಷ್ಯ ಸ್ಪಷ್ಟವಾಗಿ ನಿರ್ಧಾರವಾದ ನಂತರ ಈಗಿನ ಪ್ರಾಂತ್ಯಗಳು ಬೇರೆ ಬೇರೆ ರೀತಿಯಲ್ಲಿ ರಚನೆಯಾಗಬೇಕೇ ಹೊರತು ಆಗಲೂ ಭಾಷಾ ದೃಷ್ಟಿಯಿಂದ ಮಾಡಬಾರದು ಎಂಬ ಅಭಿಪ್ರಾಯ ವ್ಯಕ್ತಪಡಿಸಿದಾಗ ಏಕೀಕರಣಕ್ಕಾಗಿ ಹೋರಾಡಿ-ದವರಲ್ಲೆಲ್ಲ ನಿರಾಶೆ ಕವಿಯಿತು. ಈ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕವು, ಆ ವರದಿಯು ಅಸಮರ್ಪಕವೂ ಅವಿವೇಕವಾದುದೂ ವಾಸ್ತವಾಂಶಗಳಿಂದ ದೂರ-ವಾದದ್ದು ಎಂದು ಅದನ್ನು ವಿರೋಧಿಸಿದ್ದು ಮಾತ್ರವಲ್ಲದೆ ತನ್ನ ಹೇಳಿಕೆಗಳಿಗೆ ಪೂರಕವಾಗಿ ಧಾರ್ ಸಮಿತಿಯು ಮುಂದಿಟ್ಟ ಸಮಸ್ಯೆಗಳಿಗೆ ಕೂಲಂಕಷವಾಗಿ ಉತ್ತರಿಸಿದೆ.

ಪ್ರಾಂತೀಯ ಪ್ರದೇಶೀಗಳ ರಚನೆಯಾಗುವುದರಿಂದ ಭಾರತದ ಅಖಂಡತೆಗೆ ಯಾವುದೇ ಕಾರಣದಿಂದಲೂ ಭಂಗ ಬರುವುದಿಲ್ಲ. ಭಾರತವನ್ನು ಒಂದು ಜನಾಂಗವನ್ನಾಗಿ ಮಾಡಬೇಕು ಎನ್ನುವ ಧಾರ್ ಸಮಿತಿಯವರ ಮಾತುಗಳಿಗೆ ಅರ್ಥವೇ ಇಲ್ಲ. ಏಕೆಂದರೆ ಭಾರತದ ಸಾಂಸ್ಕೃತಿಕವಾಗಿ ಯಾವಾಗಲೂ ಅಖಂಡ-ವಾಗಿದೆ. ಅದನ್ನು ಯಾರೂ ಮಾಡಬೇಕಾದ ಅವಶ್ಯಕತೆ ಇಲ್ಲ ಮೇಲಾಗಿ ಭಾರತದ ಯಾವ ಪ್ರಾಂತ್ಯದವರೂ ತಾವು ಭಾರತೀಯ ಜನಾಂಗದಿಂದ ಭಿನ್ನ ಎಂಬ ಭಾವನೆಯನ್ನು ವ್ಯಕ್ತಪಡಿಸಿಲ್ಲ ಕೇಂದ್ರ ಹಾಗೂ ಪ್ರಾಂತ್ಯಗಳ ಸಂಬಂಧ ತಾಯಿ ಮಕ್ಕಳ ಸಂಬಂಧವಂತೆ ಎಂದು ಭಾವಿಸುವ ಕರ್ನಾಟಕ ಪ್ರಾಂತ್ಯದಲ್ಲಂತೂ "ಭಾರತ ಜನನಿಯ ತನುಜಾತೆ ಜಯಹೇ ಕರ್ನಾಟಕ ಮಾತೆ" ಎಂಬಂತಹ ಕವನಗಳೇ ರಚನೆಗೊಂಡು ಕನ್ನಡಿಗರ ಮನಃಸ್ಥಿತಿ ಏನೆಂಬುದನ್ನು ಶೃತಪಡಿಸಿದೆ. ಕನ್ನಡ ನಾಡು ಹಾಗೂ ಭಾರತದ ನಡುವಿನ ಸಂಬಂಧ ಇಂತಹದು. ಆದುದರಿಂದ ಕರ್ನಾಟಕದಂತಹ ಪ್ರಾಂತ್ಯ ರಚನೆಯಿಂದ ನಾಡಿಗೆ ಯಾವುದೇ ರೀತಿಯ ಕೆಡಕು ಉಂಟಾಗಲಾರದು ಎಂಬುದನ್ನು ಸ್ಪಷ್ಟಪಡಿಸಿದೆ.

ಭಾಷಾವಾರು ಪ್ರಾಂತ್ಯದ ರಚನೆಯ ಬಗ್ಗೆ ಮೊದಲಿನಿಂದಲೂ ಬೆಂಬಲ ಸೂಚಿಸುತ್ತಾ ಬಂದಿದ್ದ ಕಾಂಗ್ರೆಸ್ ಅದೇ ಕಾರಣದಿಂದಾಗಿಯೇ ನಾಡಿನ ಎಲ್ಲೆಡೆಯಲ್ಲಿ ಸಾಕಷ್ಟು ಬೆಂಬಲ ಗಳಿಸಿಕೊಳ್ಳಲು ಯಶಸ್ವಿಯಾಗಿತ್ತು. ಆದುದರಿಂದ ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ ಕಾಂಗ್ರೆಸ್ಸಿನ ಅದರ ಮೂಲ ಸೂತ್ರಗಳು ಯಾವುವು ಇದ್ದವೋ ಅವುಗಳಲ್ಲಿ ಯಾವು ಬದಲಾವಣೆಯೂ ಆಗಬಾರದು ಎಂಬುದನ್ನು ಪ್ರಬುದ್ಧ ಕರ್ನಾಟಕ ಒತ್ತಿ ಹೇಳಿದೆ. ಮಹಾತ್ಮಾಗಾಂಧಿ ಸರ್ದಾರ್ ವಲ್ಲಭಾಯಿಪಟೇಲರಂತಹ ರಾಷ್ಟ್ರನಾಯಕರೇ ಬೆಂಬಲ ಸೂಚಿಸಿದ್ದ ಪ್ರಾಂತೀಯ ಪ್ರದೇಶದ ರಚನೆಯ

ಆಲೋಚನೆ ಧಾರ್ ಸಮಿತಿಯವರಿಗೆ ಕಾಣದೇ ಇರುವುದು ವಿರೋಧ ಭಾಸವಾಗಿ ತೋರುತ್ತದೆ ಎಂದು ಅಭಿಪ್ರಾಯಪಟ್ಟಿದೆ.

ಧಾರ್ ಸಮಿತಿಯವರು ಪ್ರಾಂತೀಯ ರಚನೆಯನ್ನು ವಿರೋಧಿಸಿ ನೀಡಿರುವ ಸಮಸ್ಯೆಗಳು ನಿಜವಾಗಿಯೂ ಸಮಸ್ಯೆಗಳೇ ಆಗಿರದೆ ತಪ್ಪು ಗ್ರಹಿಕೆಯಿಂದ ಉಂಟಾಗಿರುವುದು ಎಂಬುದನ್ನು ಗುರುತಿಸಿರುವ ಪ್ರಬುದ್ಧ ಕರ್ನಾಟಕ ಪರಕೀಯರ ಆಳ್ವಿಕೆಯಲ್ಲಿ ಕಾರಣಾಂತರಗಳಿಂದ ಉಂಟಾಗಿದ್ದ ಅಸ್ತವ್ಯಸ್ಥೆಯನ್ನು ಪ್ರಜೆಗಳ ಇಷ್ಟಕ್ಕೆ ವಿರೋಧವಾಗಿ ಹಾಗೆಯೇ ಉಳಿಸಿಕೊಂಡು ಬರುವುದು ಸೂಕ್ತವಲ್ಲ ಎಂದು ಅಭಿಪ್ರಾಯಪಟ್ಟಿದೆ. ಕರ್ನಾಟಕದ ಭಾಷಾ ಪ್ರದೇಶವನ್ನು ಗಮನಿಸಿದರೆ, ಮದ್ರಾಸಿನಿಂದ ಒಂದು ಕಡೆ ಉತ್ತರ ಸಂಧಿಭಾಗವನ್ನು ಇನ್ನೊಂದು ಕಡೆ ದಕ್ಷಿಣ ಭಾಗವನ್ನೂ, ಬೊಂಬಾಯಿಯಿಂದ ಉತ್ತರ ಕನ್ನಡ ಹಾಗೂ ಕನ್ನಡ ಮುಂಬಯಿ ಪ್ರಾಂತ್ಯಗಳನ್ನು ತೃಪ್ತಿಕರವಾಗಿ ಆಳಲು ಸಾಧ್ಯವಿಲ್ಲ. ಇಷ್ಟು ವಿಶಾಲವಾದ ಪ್ರದೇಶದಲ್ಲಿ ಇರುವ ಕನ್ನಡಿಗರ ಯಾವ ಸಮಸ್ಯೆಗಳೂ ಬಗೆಹರಿಯಲು ಸಾಧ್ಯವಿಲ್ಲ. ಆದುದರಿಂದ ಒಂದೇ ಭಾಷೆಯನ್ನಾಡುವ ಜನ ಒಂದೇ ಸರ್ಕಾರಕ್ಕೆ ಸೇರುವುದು ಎಲ್ಲಾ ದೃಷ್ಟಿಯಿಂದಲೂ ಉತ್ತಮ ಅದು ಆಗಿಯೇ ತೀರಬೇಕು ಎಂದು ಪ್ರತಿಪಾದಿಸಿದೆ.

ಭಾಷಾವಾರು ಪ್ರದೇಶಗಳ ರಚನೆಯಿಂದ ಆರ್ಥಿಕ ಹೊರೆ ಕೇಂದ್ರ ಸರ್ಕಾರದ ಮೇಲೆ ಬೀಳುತ್ತದೆ ಎಂಬುದು ಸರಿಯಲ್ಲ. ಕರ್ನಾಟಕದ ದೃಷ್ಟಿಯಿಂದ ಹೇಳು–ವುದಾದರೆ ಮೈಸೂರಿನಲ್ಲಿ ಅನೇಕ ಕೈಗಾರಿಕೆಗಳಿದ್ದು, ತಲಾ ಆದಾಯ ಭಾರತದ ಉಳಿದ ಹಲವಾರು ಪ್ರದೇಶಗಳಿಗಿಂತ ಉತ್ತಮ ಮಟ್ಟವಾಗಿಯೇ ಇದೆ ಅಷ್ಟೇ ಅಲ್ಲದೆ ಕರ್ನಾಟಕದಲ್ಲಿ ಆರ್ಥಿಕವಾಗಿ ಸಬಲವಾಗಲು ಬೇಕಾದ ನೈಸರ್ಗಿಕ ಸಂಪತ್ತು ಹಾಗೂ ಭೂ ಸಂಪತ್ತು ಇದೆ. ಇದರಿಂದ ಕನ್ನಡ ನಾಡು ಸ್ವಾವಲಂಬಿಯಾಗಿ ಬದುಕಲು ಹಾಗೂ ಸದ್ಯದ ಪರಿಸ್ಥಿತಿಗಿಂತಲೂ ಉತ್ತಮವಾದ ಆರ್ಥಿಕ ಪ್ರಗತಿ ಸಾಧಿಸಲು ಸಾಧ್ಯವಾಗುತ್ತಿದೆ ಎಂದು ಪ್ರತಿಪಾದಿಸುವ ಮೂಲಕ ನಾಡಿನ ಏಕೀಕರಣದಿಂದ ಯಾವುದೇ ರೀತಿಯ ಸಮಸ್ಯೆ ಉಂಟಾಗುವುದಿಲ್ಲ ಎಂಬುದನ್ನು ಬಲವಾಗಿ ಸಮರ್ಥಿಸಿದೆ.

ಭಾಷಾವಾರು ಪ್ರಾಂತ್ಯಗಳ ರಚನೆಯಾಗಬೇಕಾದರೆ ಯಾವ ಯಾವ ಲಕ್ಷಣಗಳು ಇರಬೇಕೆಂದು ಅಪೇಕ್ಷೆ ಪಟ್ಟಿದೆಯೋ ಆ ಎಲ್ಲ ಲಕ್ಷಣಗಳು ಪ್ರತ್ಯಕ್ಷವಾಗಿ ಕಂಡಬಂದರೂ ಸಮಿತಿಯವರು ಅದನ್ನು ಗಣನೆಗೆ ತೆಗೆದುಕೊಳ್ಳದೇ ಇರುವುದಕ್ಕೆ ತೀವ್ರವಾದ ಕೋಪವನ್ನು ವ್ಯಕ್ತಪಡಿಸಿದೆ. ಅಲ್ಪಸಂಖ್ಯಾತರ ಸಮಸ್ಯೆ ಹಾಗೂ ಅದರಿಂದುಂಟಾಗುವ ಮನಸ್ತಾಪ ಭಯ ಇವುಗಳ ಬಗ್ಗೆ ಪ್ರಸ್ತಾಪಿಸಿ ಇದು ಕೇವಲ ಭ್ರಮಾ ಮೂಲವಾಗಿದ್ದು ಎಲ್ಲ ಈ ಸಮಸ್ಯೆ ಎಲ್ಲ ಪ್ರಾಂತ್ಯಗಳಲ್ಲೂ ಇದ್ದು ಪರಸ್ಪರ

ಒಪ್ಪಂದದಿಂದ ಇದನ್ನು ಪರಿಹಾರ ಮಾಡಿಕೊಳ್ಳಬಹುದು ಎಂಬ ಪರಿಹಾರ ಸೂಚಿಸಿದೆ.

ಭಾರತದಲ್ಲಿ ಎಂದು ಯಾವ ಸಮಸ್ಯೆಗಳೂ ಇಲ್ಲದೆ ಪ್ರಾಂತ್ಯ ಸರ್ಕಾರಗಳು ರಚನೆಯಾಗುತ್ತದೋ ಅಂದು ಕೇಂದ್ರ ಸರ್ಕಾರದ ಸಮಸ್ಯೆಗಳು ಮತ್ತಷ್ಟು ದಕ್ಷತೆಯಿಂದ ಪರಿಹರಿಸಲ್ಪಡುತ್ತದೆ. ಪ್ರಾಂತ ಪ್ರಾಂತಗಳ ಗಡಿಯ ವಿಚಾರದಲ್ಲಿ ಆಂತರಿಕವಾದ ಮನಸ್ತಾಪಗಳು ಉಂಟಾಗುವುದು ಸಹಜ. ಇದಕ್ಕೆ ಪರಿಹಾರವೇನು ಎಂಬುದನ್ನು ಧಾರ್ ಸಮಿತಿಯು ತೋರಿಸದೇ ಕೇವಲ ಸಮಸ್ಯೆಗಳನ್ನಷ್ಟೇ ಎತ್ತಿತೋರಿಸುವುದು ಸರಿಯಲ್ಲ ಎಂದು ಆಕ್ಷೇಪಣೆ ವ್ಯಕ್ತಪಡಿಸಿದೆ. "ನಿಜವಾಗಿಯೂ ಭರತ ಖಂಡದ ರಾಷ್ಟ್ರೀಯ ಮನೋಭಾವ ಅಭಿವೃದ್ಧಿಯಾಗಬೇಕಾದರೆ ತಕ್ಷಣವೇ ಅಲ್ಲದಿದ್ದರೂ ಕೆಲವು ಕಾಲದ ಮೇಲಾದರೂ ಭಾಷಾವಾರು ಪ್ರಾಂತ ವಿಭಜನೆಯೇ ಪರಮ ಸಾಧನ"[೧] ಎಂದು ಖಚಿತ ಮಾತುಗಳಲ್ಲಿ ತನ್ನ ನಿಲುವನ್ನು ಸ್ಪಷ್ಟಪಡಿಸಿದೆ. ಭಾಷಾವಾರು ಪ್ರಾಂತಗಳ ರಚನೆ ಹಾಗೂ ಅವುಗಳ ಕಾರ್ಯ ವೈಖರಿಯಲ್ಲಿ ಏನಾದರೂ ಸಮಸ್ಯೆಗಳು ಉಂಟಾದರೆ ರಷ್ಯಾದಲ್ಲಿ ರೂಢಿಯಲ್ಲಿ ಇರುವ ಆಡಳಿತ ಪದ್ಧತಿಯನ್ನು ಗಮನಿಸಬಹುದು. ಅಲ್ಲಿ ಹಲವಾರು ಸಾಂಸ್ಕೃತಿಕ ವಿಭಾಗಗಳು ಇದ್ದರೂ ಅವು ಪೂರ್ಣ ಸ್ವಾತಂತ್ರ್ಯ ಅನುಭವಿಸುತ್ತ, ಕೇಂದ್ರ ಸರ್ಕಾರದ ಅಧಿನದಲ್ಲಿ ಅದರ ಭದ್ರತೆಗೆ ಯಾವುದೇ ಚ್ಯುತಿ ಬರದಂತೆ ತೃಪ್ತಿಕರವಾಗಿ ಆಡಳಿತ ನಡೆಸುತ್ತಿದೆ. ಹಾಗೆಯೇ ಇಲ್ಲಿನ ಕೇಂದ್ರ ಸರ್ಕಾರವೂ ಆರ್ಥಿಕ ಹಾಗೂ ರಾಜಕೀಯ ವಿಷಯಗಳಲ್ಲಿ ಪರಮಾಧಿಕಾರವನ್ನು ಉಳಿಸಿಕೊಂಡು ಉಳಿದ ಎಲ್ಲಾ ವಿಷಯಗಳಲ್ಲಿ ಭಾಷಾಗುಣ ಪ್ರಾಂತಗಳಿಗೆ ಪೂರ್ಣ ಸ್ವಾತಂತ್ರ್ಯ ಕೊಡಬೇಕು ಎಂಬ ಸಲಹೆ ನೀಡಿದೆ. ಯಾವ ಪ್ರಮುಖವಾದ ಕಾರಣಗಳಿಲ್ಲದೆ ಕೇವಲ ಊಹಾತ್ಮಕವಾಗಿ ಪ್ರಾಂತಗಳ ರಚನೆಗೆ ಅಡ್ಡಿಪಡಿಸುವುದು ಸರಿಯಲ್ಲ ಎಂದು ವಾದಿಸಿದೆ. ಹೀಗೆ ಕರ್ನಾಟಕ ಏಕೀಕರಣವಾಗಬೇಕೆಂಬ ಆಸೆ ಕನ್ನಡಿಗರಲ್ಲಿ ಬಲವಾಗಿ ವ್ಯಕ್ತವಾಗುತ್ತಿದ್ದರೂ ಕೂಡ ಕೇಂದ್ರ ಸರ್ಕಾರವು ೧೯೫೨ರಲ್ಲಿ ಆಂಧ್ರ ಪ್ರದೇಶವನ್ನು ಉಳಿದು ಬೇರೆ ಪ್ರಾಂತಗಳ ನಿರ್ಮಾಣ ಸದ್ಯಕ್ಕೆ ಅಗತ್ಯವಿಲ್ಲ ಎಂಬ ನಿರ್ಣಯ ತೆಗೆದುಕೊಂಡಿತು. ಈ ವಿಚಾರವಂತೂ ಕನ್ನಡಿಗರ ಮನಸ್ಸನ್ನು ಮತ್ತಷ್ಟು ಘಾಸಿಗೊಳಿಸಿತು. ಈ ವಿಚಾರಕ್ಕೆ ಸಂಬಂಧಿಸಿದಂತೆ ೧೯೫೩ನೇ ಇಸವಿಯಲ್ಲಿ ದಾವಣಗೆರೆಯಲ್ಲಿ ನಡೆದ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನಲ್ಲಿ ಮದ್ರಾಸ್ಸಿನ ಮಾಜಿ ಸಚಿವರಾದ ಶ್ರೀ ಕೆ.ಆರ್.ಕಾರಂತರು ಮಾಡಿದ ಭಾಷಣದಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿ ಅದರ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೩೦, ಸಂಚಿಕೆ ೩, ಪು. ೧೨೩.

ಸಾಧಕಬಾಧಕಗಳ ಬಗ್ಗೆ ಮಾತಾಡಿದರು.[೧] ಮೊದಲನೆಯದಾಗಿ ಕರ್ನಾಟಕ ಪ್ರಾಂತ ರಚನೆಯ ಪ್ರಶ್ನೆ ಅದು ಇಂದಿನದಲ್ಲ ಅಥವಾ ಆಂಧ್ರ ಪ್ರಾಂತರಚನೆಯ ಬೇಡಿಕೆಗೆ ವಿರುದ್ಧವಾಗಿ ಒಡ್ಡಿದ ಸವಾಲು ಅಲ್ಲ. ಆಂಧ್ರಪ್ರದೇಶದಲ್ಲಿ ನಡೆದ ತೀವ್ರವಾದ ಚಳುವಳಿಯ ಕಾರಣದಿಂದಾಗಿ ಆಂಧ್ರಪ್ರದೇಶದ ನಿರ್ಮಾಣಕ್ಕೆ ಒಪ್ಪಿಗೆ ಕೊಟ್ಟ ಕೇಂದ್ರ ಸರ್ಕಾರ ಆಂಧ್ರ ಸರ್ಕಾರದ ಭವಿಷ್ಯವನ್ನು ನೋಡಿಕೊಂಡು ಉಳಿದ ಪ್ರಾಂತಗಳ ರಚನೆಗೆ ಅವಕಾಶ ಮಾಡಿಕೊಡುವ ಮಾತುಗಳನ್ನು ಆಡುವುದು ಸರಿಯಾದುದೂ ಅಲ್ಲ. ಏಕೆಂದರೆ ಒಂದು ಪ್ರಾಂತದ ಸಮಸ್ಯೆ ಇನ್ನೊಂದು ಪ್ರಾಂತಕ್ಕೆ ಇರಲಾರದು. ಇಂಥ ಸಂದರ್ಭಗಳಲ್ಲಿ ಎಲ್ಲರೂ ನಿಷ್ಠೆ ಹಾಗೂ ದೃಢತೆಯಿಂದ ಪ್ರತಿಜ್ಞಾಬದ್ಧರಾಗಿ ಉಳಿದು ಕನ್ನಡ ನಾಡಿಗಾಗಿ ಹೋರಾಟ ಮಾಡಬೇಕು ಎಂದು ಹೇಳಿದ ಮಾತುಗಳನ್ನು ಪ್ರಬುದ್ಧ ಕರ್ನಾಟಕ ಸಮರ್ಥಿಸಿದೆ ಅಷ್ಟೇ ಅಲ್ಲದೆ ಇಂತಹ ಬೇಸರದ ಸಂಗತಿಯ ನಡುವೆಯೂ ಜಸ್ಟೀಸ್ ಮಿಶ್ರಾರವರ ವರದಿಯ ಪ್ರಕಾರ ಬಳ್ಳಾರಿಯ ಆರು ತಾಲ್ಲೂಕುಗಳು ಮೈಸೂರಿಗೆ ಸೇರುವ ವಿಚಾರಕ್ಕೆ ಸಂತೋಷವನ್ನು ವ್ಯಕ್ತಪಡಿಸಿದೆ. "ಸುಮಾರು ೧೫೦ ವರ್ಷಗಳಿಂದ ರಾಜಕೀಯ ಕಾರಣಗಳಿಂದಾಗಿ ಮೈಸೂರಿಂದ ವಿಯೋಗಗೊಂಡಿದ್ದ ಬಳ್ಳಾರಿ ಮತ್ತೆ ಸುಯೋಗ ಹೊಂದಲಿದೆ. ಮೈಸೂರಿನ ಮತ್ತು ಬಳ್ಳಾರಿಯ ಸಹೋದರರು ಒಂದಾಗಿ ಬಾಳುವ ಒಂದಾಗಿ ನಲಿಯುವ ಕಾಲ ತೀರ ಸನ್ನಿಹಿತವಾಗಿದೆ. ಬಳ್ಳಾರಿಯ ಸಹೋದರರಿಗೆ ಸುಸ್ವಾಗತ ಈ ಸೇರ್ಪಡೆಯೇ ಕರ್ನಾಟಕ ಪ್ರಾಂತ ರಚನೆಗೆ ನಾಂದಿಯಾಗಲಿ"[೨] ಎಂದು ಹಾರೈಸಿದೆ. ಕರ್ನಾಟಕ ಏಕೀಕರಣ ಕ್ರಿಯೆಯಲ್ಲಿ ಬಳ್ಳಾರಿಯ ಸೇರ್ಪಡೆ ಒಂದು ಪ್ರಮುಖವಾದ ವಿಚಾರ ಹಾಗಾಗಿಯೇ ಬಳ್ಳಾರಿಯ ಈ ಪ್ರಾಂತಗಳ ಸೇರ್ಪಡೆಯಿಂದ ಕರ್ನಾಟಕಕ್ಕೆ ಒದಗಿದ ನೈತಿಕ ಬಲ ಹಾಗೂ ಅದರ ಸಾಧಕಬಾದಕಗಳ ಬಗ್ಗೆ ನಂತರದ ಸಂಚಿಕೆಗಳಲ್ಲೂ ಚರ್ಚೆಯಿದೆ. ಬಳ್ಳಾರಿಯ ಏಳು ಪ್ರಾಂತಗಳು ಮೈಸೂರಿಗೆ ಸೇರಿದ ಸಂದರ್ಭದಲ್ಲಿ ಅದನ್ನು ಕುರಿತಂತೆ ಸಂಪಾದಕೀಯವನ್ನು ಪ್ರಕಟಿಸಿದೆ. ಬಳ್ಳಾರಿಯ ಈ ಪ್ರಾಂತಗಳು ಮೈಸೂರಿಗೆ ಸೇರ್ಪಡೆಯಾದ ದಿನ ಅಲ್ಲಿ ಹಬ್ಬದ ವಾತಾವರಣವಿದ್ದು ಬಗೆ ಬಗೆಯ ಹರ್ಷೋದ್ಗಾರಗಳೊಡನೆ ಬಳ್ಳಾರಿಯ ಕನ್ನಡಿಗರು ಮೈಸೂರಿನ ಜೊತೆ ವಿಲೀನಗೊಂಡದ್ದಕ್ಕಾಗಿ ಆನಂದಿಸಿದ ವಿಚಾರವನ್ನು ಪ್ರಸ್ತಾಪಿಸಿ "ಈ ಸೇರ್ಪಡೆ ಹೊಸ ಒಂದು ಅಧ್ಯಾಯವನ್ನೇ ಪ್ರಾರಂಭಿಸುತ್ತದೆ"[೩] ಎಂದು ಅಭಿಪ್ರಾಯಪಟ್ಟಿದೆ. ಈ ಘಟನೆ ಇಂದಲ್ಲಾ ನಾಳೆ ಅಖಂಡ ಕರ್ನಾಟಕ ಪ್ರಾಂತವೊಂದು ರೂಪುಗೊಳ್ಳುವುದಕ್ಕೆ ನಾಂದಿ ಹಾಡಲಿದೆ ಎಂಬ ಅಭಿಪ್ರಾಯ ಪ್ರಬುದ್ಧ ಕರ್ನಾಟಕದ್ದು. ಬಳ್ಳಾರಿಯ ಈ

---

೧. ವಸ್ತುಕೋಶ, ಪ್ರ.ಕ. ಸಂಪುಟ ೩೫, ಸಂಚಿಕೆ ೧, ಪು. ೧೨೩.
೨. ವಸ್ತುಕೋಶ, ಪ್ರ.ಕ. ಸಂಪುಟ ೩೫, ಸಂಚಿಕೆ ೧, ಪು. ೧೨೩.
೩. ಸಂಪಾದಕೀಯ, ಪ್ರ.ಕ. ಸಂಪುಟ ೩೫, ಸಂಚಿಕೆ ೨, ಪು. ೧೨೦.

ಪ್ರಾಂತ್ಯಗಳು ಈ ಮೈಸೂರಿಗೆ ಸೇರಿ ಆಯಿತು. ಆದರೆ ಅದಕ್ಕೆ ಪ್ರತಿಯಾಗಿ ನಾವು ತೋರಬೇಕಾದ ಪ್ರತಿಕ್ರಿಯೆ ಯಾವುದು ಎಂಬುದರ ಬಗ್ಗೆಯೂ ವಿಶ್ಲೇಷಿಸಿದೆ. ಮೈಸೂರು ಪ್ರಾಂತ್ಯಕ್ಕೆ ಸೇರಬೇಕೆಂಬ ಉದ್ದೇಶವನ್ನೂ ಅಭಿಪ್ರಾಯವನ್ನೂ ಬಳ್ಳಾರಿಯ ಜನರಲ್ಲಿ ತುಂಬಿದ ಜನನಾಯಕರ ಸೇವೆಯನ್ನು ಇದು ಶ್ಲಾಘಿಸಬೇಕಾದುದು ಮೊದಲನೆಯ ಕಾರ್ಯವಾದರೆ ಬಳ್ಳಾರಿಯ ಜನತೆಯನ್ನು ಪ್ರೀತಿಯಿಂದ ಸ್ವಾಗತಿಸಿ ಬರಮಾಡಿಕೊಳ್ಳುವುದು ಎರಡನೆಯ ಕಾರ್ಯ. ಅವಿಭಕ್ತ ಕುಟುಂಬದ ಅಣ್ಣತಮ್ಮಂದಿರು ಒಟ್ಟಿಗೆ ಬೆಳೆದು ಕಾರಣಾಂತರದಿಂದ ಕೆಲವು ಕಾಲ ಅಗಲಿ ಮರಳಿ ಮನೆಗೆ ಬಂದಾಗ ಹೇಗೆ ಸ್ವಾಗತಿಸುತ್ತೇವೋ ಹಾಗೆ ಬರಮಾಡಿಕೊಳ್ಳಬೇಕು ಎಂಬ ಹಿತವಚನವನ್ನು ಹೇಳಿದೆ. ಬಳ್ಳಾರಿಯ ಕೆಲವು ಭಾಗಗಳೇನೋ ಕನ್ನಡನಾಡಿಗೆ ಸೇರಿತು. ಇದರಂತೆಯೇ ಸಂಪೂರ್ಣ ಕನ್ನಡನಾಡಿಗಾಗಿ ಹೋರಾಡುವ ಸಂದರ್ಭದಲ್ಲಿ ಪ್ರಾಂತಾಭಿಮಾನ ರಾಷ್ಟ್ರಾಭಿಮಾನಕ್ಕೆ ಮುಳುವಾಗದಂತೆ ನೋಡಿಕೊಳ್ಳುವುದು, ಒಂದು ಭಾಷೆಯನ್ನಾಡುವವರು ಇನ್ನೊಂದು ಭಾಷೆಯನ್ನು ಆಡುವವರ ವಿಷಯದಲ್ಲಿ ಸೌಹಾರ್ದದಿಂದ ವರ್ತಿಸುವುದನ್ನು ಕಲಿಯುವುದು ಮುಂದೆ ನಿರ್ಮಾಣವಾಗಲಿರುವ ಬೃಹತ್ ಕರ್ನಾಟಕ ಪ್ರಾಂತ ರಚನೆಯ ವಿಷಯದಲ್ಲಿ ಕನ್ನಡಿಗರೆಲ್ಲರೂ ಎಂದಿಗಿಂತ ಹೆಚ್ಚಿನ ಶ್ರದ್ಧೆಯಿಂದ ಹಾಗೂ ಉತ್ಸಾಹದಿಂದ ಶ್ರಮಿಸಬೇಕಾದುದು ಕರ್ತವ್ಯ ಎಂಬುದನ್ನು ಒತ್ತಿಹೇಳಿದೆ. ಏಕೀಕರಣದ ಸಂದರ್ಭದಲ್ಲಿ ಇದಕ್ಕೆ ಸಂಬಂಧಿಸಿದಂತೆ ಅಂಕಿ ಅಂಶ ಸಾಕ್ಷಿ ಪುರಾಣಗಳನ್ನು ಒದಗಿಸುವುದು ಅಗತ್ಯವಾದರೆ, ವಿದ್ಯಾವಂತರಾದ ಜನತೆ ಅದನ್ನು ಒದಗಿಸಿಕೊಡುವ ಪ್ರಯತ್ನ ಮಾಡಬೇಕು. ಸಭೆ ಸಮ್ಮೇಳನಗಳನ್ನು ನಡೆಸುವುದರ ಮೂಲಕ, ಶಾಂತಿ ಶಿಸ್ತುಗಳ ಹಾದಿಯಲ್ಲಿ ನಡೆದು ನಮ್ಮ ಗುರಿಯನ್ನು ನಾವು ಮುಟ್ಟಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳಬೇಕು ಎಂಬುದನ್ನು ಸೂಚಿಸಿದೆ. ಬಳ್ಳಾರಿಯ ಕೆಲವು ಪ್ರಾಂತಗಳ ಸೇರ್ಪಡೆಯ ಈ ಸಂದರ್ಭ ಕನ್ನಡಿಗರಿಗೆ ಬೇಕಾದ ಸ್ಫೂರ್ತಿಯನ್ನು ನೀಡುವುದರಲ್ಲಿ ಹೇಗೆ ನೆರವಾಯಿತು ಎಂಬುದನ್ನು ಈ ಸಂಪಾದಕೀಯ ಎಳೆಎಳೆಯಾಗಿ ಬಿಡಿಸಿಟ್ಟಿದೆ. ಆದರೆ ನಂತರದ ದಿನಗಳಲ್ಲಿ ಆಂಧ್ರ-ಪ್ರದೇಶ ಮದ್ರಾಸ್ಸಿನಿಂದ ಬೇರ್ಪಟ್ಟ ಸಂದರ್ಭದಲ್ಲಿ ಆಂಧ್ರರಿಗೆ ಮಾತ್ರ ರಿಯಾಯಿತಿ ತೋರಿ ಇತರ ಭಾಷಾ ಪ್ರಾಂತವಾದಿಗಳನ್ನು ನಿರಾಶೆಗೊಳಿಸಿದ್ದಕ್ಕಾಗಿ ಕನ್ನಡಿಗರಲ್ಲಿ ಅಸಂತೋಷ ಹೆಚ್ಚತೊಡಗಿತ್ತು. ಅಧಿಕವಾದ ಆಕ್ರೋಶ ಕರ್ನಾಟಕದಾದ್ಯಂತ ವ್ಯಕ್ತವಾಗತೊಡಗಿತ್ತು. ಜೆ.ಪಿ.ಸಿ. ಕಮಿಟಿಯವರ ನಿರ್ಧಾರ ವಿಶೇಷವಾಗಿ ಕರ್ನಾಟಕದವರಲ್ಲಿ ಹಾಗೂ ಮಹಾರಾಷ್ಟ್ರದವರಲ್ಲಿ ಬೇಸರವನ್ನು ತರಿಸಿತ್ತು. ನಂತರ ಬಂದ ಫಜಲ್ ಆಲಿ ಸಮಿತಿಯ ಕೆಲವು ನಿರ್ಣಯಗಳೂ ಕನ್ನಡಿಗರ ಮನಸ್ಸಿಗೆ ಆಘಾತವನ್ನುಂಟು ಮಾಡಿತ್ತು. ಬಳ್ಳಾರಿ, ಕಾಸರಗೂಡಿನಂತಹ ಕನ್ನಡ ಮಾತನಾಡುವ ಪ್ರದೇಶಗಳು ಕನ್ನಡಿಗರ ಕೈ ತಪ್ಪಿ ಹೋಗುವ ಪರಿಸ್ಥಿತಿ ನಿರ್ಮಾಣವಾಗಿತ್ತು. ಈ

ಸಂದರ್ಭದಲ್ಲಿ ತೀವ್ರವಾಗಿ ನೊಂದಿದ್ದ ಕನ್ನಡಿಗರ ನೋವನ್ನು ದೂರ ಮಾಡುವ ಉದ್ದೇಶದಿಂದ ಕೇಂದ್ರ ಸರ್ಕಾರದವರು ರಾಜ್ಯ ಪುನರ್ರಚನಾ ಸಮಸ್ಯೆಯನ್ನು ಪರಿಶೀಲಿಸಲು ಉನ್ನತಾಧಿಕಾರಿಗಳ ಸಮಿತಿ ನೇಮಿಸಿತು.

ಬಳ್ಳಾರಿಯ ಕೆಲವು ಪ್ರಾಂತಗಳೇನೋ ಕರ್ನಾಟಕಕ್ಕೆ ಸೇರಿದೆ. ಆದರೆ ಸಂಪೂರ್ಣವಾಗಿಯೇ ಕರ್ನಾಟಕಕ್ಕೆ ಸೇರಬೇಕು ಎಂಬ ಆಶಯವನ್ನು ಪ್ರಬುದ್ಧ ಕರ್ಣಾಟಕವು ೧೯೪೪ರ ವೇಳೆಯಲ್ಲೇ ವ್ಯಕ್ತಪಡಿಸಿತ್ತು. ಈ ಸಂದರ್ಭದಲ್ಲಿ ಕನ್ನಡನಾಡು ಹಲವು ದೇಶೀಯ ಆಡಳಿತಗಳ ಮರೆಯಲ್ಲಿ ಇದ್ದರೂ ಮುಂದೆ ಒಂದು ದಿನ ಭಾಷಾ ಪ್ರಾಂತಗಳ ನಿರ್ಮಾಣವಾಗುವುದು ಖಚಿತ. ಆಗ ಗಡಿಸೀಮೆಗಳಲ್ಲಿರುವ ಕನ್ನಡಿಗರು ತಮ್ಮದಾದುದನ್ನು ಕನ್ನಡಕ್ಕೆ ಉಳಿಸಿಕೊಳ್ಳಬೇಕಾಗುತ್ತದೆ. ಇನ್ನೊಬ್ಬರ ನೆಲ ಕನ್ನಡಿಗರಿಗೆ ಬೇಡ. ಹಾಗೆಯೇ ಕನ್ನಡಿಗರು ತಮ್ಮ ನೆಲವನ್ನು ತಮ್ಮದಾಗಿಸಿಕೊಳ್ಳು-ವುದರಲ್ಲಿ ಉದಾಸೀನವನ್ನು ಮಾಡಕೂಡದು ಎಂದು ಎಚ್ಚರಿಕೆಯನ್ನು ನೀಡಿದೆ. ಹೊಸ ಪ್ರಾಂತಗಳು ನಿರ್ಮಾಣವಾಗುವಾಗ್ಗೆ ಗಡಿಯ ವಿಭಾಗ ಅಥವಾ ವಿಧೇಯಕ ಮಂಡಲಿಗಳು ಏರ್ಪಟ್ಟು ಬಳ್ಳಾರಿ, ನೀಲಗಿರಿ, ಬೆಳಗಾವಿ ಮುಂತಾದ ಗಡಿಭಾಗಗಳಿಗೆ ಸಂಬಂಧಪಟ್ಟ ಎಲ್ಲ ವಾಗ್ವಾದಗಳಿಗೆ ಉತ್ತರ ದೊರಕಲಿದೆ ಎಂಬ ಆಶಯ ವ್ಯಕ್ತಪಡಿಸಿದೆ. ಅಷ್ಟೆ ಅಲ್ಲದೆ ನಂತರದ ದಿನಗಳಲ್ಲಿ ರಾಜ್ಯ ಪುನರ್‌ರಚನಾ ಸಮಿತಿಯ ನೇಮಕಗೊಂಡ ನಂತರವೂ ಈ ಸಮಿತಿಯ ಮುಂದಿದ್ದ ಸಮಸ್ಯೆಗಳು ಯಾವುವು? ಯಾವ ವಿಚಾರಗಳ ಕಡೆ ಅವರು ಗಮನಹರಿಸಬೇಕು? ಅದರಿಂದಾಗುವ ಪರಿಣಾಮವೇನು? ಎಂಬಂತಹ ವಿಚಾರಗಳನ್ನು ಕನ್ನಡಿಗರಿಗೆ ತಿಳಿಸಿಕೊಡುವ ಪ್ರಯತ್ನವನ್ನು ಪ್ರಬುದ್ಧ ಕರ್ನಾಟಕ ಮಾಡಿದೆ. ಗ.ಸ.ಹಾಲಪ್ಪನವರ 'ರಾಜ್ಯಗಳ ಪುನರ್‌ರಚನೆಯ ಉಚ್ಛ ಸಮಿತಿ' ಎಂಬ ಲೇಖನವನ್ನು ಪ್ರಕಟಿಸಿ ಈ ಸಮಿತಿಯ ಕಾರ್ಯವ್ಯಾಪ್ತಿಯ ಬಗ್ಗೆ ಪರಿಚಯ ಮಾಡಿಕೊಟ್ಟಿದೆ. ಧಾರ್ ಮತ್ತು ಫಜಲ್‌ಹಾಲಿ ಸಮಿತಿಯ ವರದಿಯಲ್ಲಿ ವ್ಯಕ್ತವಾಗಿರುವ ಅಂಶಗಳು ಕನ್ನಡನಾಡಿನ ಏಕೀಕರಣಕ್ಕೆ ಎಷ್ಟರಮಟ್ಟಿಗೆ ಸಾಧಕವಾಗಿದೆ? ಹಾಗೂ ಬಾಧಕವಾಗಿದೆ ಎಂಬ ಅಂಶಗಳ ಬಗ್ಗೆಯೂ ಈ ಲೇಖನ ಸೂಚಿಸಿದೆ. ಹೀಗೆ ಪ್ರಬುದ್ಧ ಕರ್ನಾಟಕವು ಸ್ವಾತಂತ್ರ್ಯಾ-ನಂತರದ ಏಕೀಕರಣದ ಹೋರಾಟದ ಪ್ರತಿ ಹಂತಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಪ್ರತಿಕ್ರಿಯೆಯನ್ನು ನೀಡಿದೆ. ಆ ವಿಷಯಗಳ ಬಗ್ಗೆ ಚರ್ಚಿಸುವುದರ ಮೂಲಕ ಕನ್ನಡನಾಡಿನ ಪರವಾದ ತನ್ನ ಬದ್ಧತೆಯನ್ನು ಪ್ರದರ್ಶಿಸಿದೆ. ಅಷ್ಟೇ ಅಲ್ಲದೆ ಕರ್ನಾಟಕ ಏಕೀಕರಣವಾಗುವ ಸಂದರ್ಭದಲ್ಲಿ ಕರ್ನಾಟಕಕ್ಕೆ ನ್ಯಾಯವಾಗಿ ಸೇರಬೇಕಾದ ಪ್ರಾಂತಗಳು ಸೇರದೇ ಹೋದಾಗ ಅದಕ್ಕೆ ಬೇಸರವನ್ನೂ ವ್ಯಕ್ತಪಡಿಸಿದೆ.

ಹೀಗೆ ಕರ್ನಾಟಕದ ಏಕೀಕರಣವಾಗಬೇಕು ಎಂಬ ವಿಚಾರ ಅಂತಿಮ ಸ್ವರೂಪವನ್ನು ಪಡೆದುಕೊಳ್ಳುತ್ತಿದ್ದ ಸಮಯದಲ್ಲೇ ಹೊಸದಾದ ಸಮಸ್ಯೆಯೊಂದು

ಎದುರಾಯಿತು. ಹೊಸದಾಗಿ ರಚನೆಯಾಗುವ ಕರ್ನಾಟಕ ಪ್ರಾಂತ್ಯದೊಳಗೆ ಮೈಸೂರು ಸೇರಬೇಕೆ ಬೇಡವೇ? ಎಂಬ ಚರ್ಚೆ ಪ್ರಾರಂಭವಾಗಿತ್ತು. ಮೈಸೂರಿನ ಕೆಲವು ನಾಯಕರು ಉತ್ತರ ಕರ್ನಾಟಕವು ಹಿಂದುಳಿದ ಪ್ರದೇಶವಾಗಿದ್ದು ಅದರೊಮದಿಗೆ ಮೈಸೂರಿನಂತಹ ಮಾದರಿ ರಾಜ್ಯ ಸೇರಿದರೆ ಅದರ ಬೆಳವಣಿಗೆ ಕುಂಠಿತವಾಗುವುದೆಂದು ಕೆಲವರು ಭಾವಿಸಿದ್ದರು. ಇದನ್ನೇ ಪುಷ್ಟೀಕರಿಸುವ ಹಾಗೆ ಮೈಸೂರು ಸರಕಾರದವರು ನೇಮಿಸಿದ್ದ ಶೇಷಾದ್ರಿ ಸಮಿತಿಯೂ ಇಂಥದೇ ನಿರ್ಣಯವನ್ನು ಕೊಟ್ಟಿತ್ತು. ಕರ್ನಾಟಕ ಏಕೀಕರಣಕ್ಕೆ ಮೈಸೂರು ಸಂಸ್ಥಾನದ ಪ್ರಮುಖರನೇಕರು ಹಾಗೂ ನಾಡಿನ ಜನತೆಯಿಂದ ಹೃತ್ಪೂರ್ವಕವಾದ ಬೆಂಬಲ ಸಿಗಲಿಲ್ಲ. ಹಿಂದಿ ಮಾತಾಡುವ ಅನೇಕ ರಾಜ್ಯಗಳು ಇರುವಂತೆ ಕನ್ನಡ ಮಾತಾಡುವ ಎರಡು ಪ್ರಾಂತಗಳು ಇರಬಾರದೇಕೆ ಎಂಬಂತಹ ವಾದಗಳು ಕೂಡ ಇದ್ದವು. ಕರ್ನಾಟಕ ಏಕೀಕರಣಕ್ಕೆ ಮೈಸೂರಿನ ಕಡೆಯವರಿಂದ ವಿರೋಧ ವ್ಯಕ್ತವಾಗುತ್ತಿದ್ದುದಕ್ಕೆ ಬೇರೆ ಕಾರಣಗಳನ್ನು ಗುರುತಿಸಿರುವುದೂ ಉಂಟು. ಅವುಗಳಲ್ಲಿ ಮುಖ್ಯವಾಗಿ ಇದ್ದುದ್ದು "ಅಧಿಕಾರದ ಲಾಲಸೆ ಮತ್ತು ಜಾತಿಯ ಬಗ್ಗೆ ಅಭಿಮಾನ. ಉತ್ತರ ಕರ್ನಾಟಕ ಹಾಗೂ ಹಳೆ ಮೈಸೂರು ಸಂಸ್ಥಾನ ಒಂದೇ ಇದ್ದಲ್ಲಿ ಅಲ್ಲಿ ತಮ್ಮ ಜಾತಿಯವರೇ ಬಹುಸಂಖ್ಯಾತರಿರುವುದರಿಂದ ಅಧಿಕಾರದಲ್ಲಿ ಮುಂದುವರೆಯಲು ಸಾಧ್ಯವಾಗುತ್ತದೆ ಎನ್ನುವ ವಿಚಾರ ತಲೆಯೊಳಗೆ ಹೊಕ್ಕು ಅಧಿಕಾರಶಾಹಿಗಳು ಇದಕ್ಕೆ ಉತ್ತೇಜನ ನೀಡಲಿಲ್ಲ"[೧] ಎಂಬಂತಹ ಕಟುವಾದ ಟೀಕೆಗಳು ಮೈಸೂರಿನವರ ಬಗ್ಗೆ ಇತ್ತು. ಇದಕ್ಕೆ ವಿರುದ್ಧವಾಗಿ "ಉತ್ತರ ಕರ್ನಾಟಕದ ಹಲವಾರು ಸಾಹಿತಿಗಳು ಹಳೆಯ ಮೈಸೂರಿನ ಜನ ಸಾರಾಸಗಟಾಗಿ ಏಕೀಕರಣ ವಿರೋಧಿಗಳಾಗಿದ್ದರೆಂದು ಹಂಗಿಸುತ್ತಿದ್ದರು. ಆದರೆ ಬೇಜವಾಬ್ದಾರಿಯ ಈ ಅನುವಾದ ಘೋಷಣೆ ಸತ್ಯಕ್ಕೆ ದೂರವಾದದ್ದು ಒಬ್ಬಿಬ್ಬರು ಹೊರತಾಗಿ ಎಲ್ಲಾ ಸಾಹಿತಿಗಳು ಏಕೀಕರಣದ ಪರವಾಗಿದ್ದರು"[೨] ಎಂಬಂತಹ ಅಭಿಪ್ರಾಯಗಳು ವ್ಯಕ್ತವಾಗುತ್ತಿದ್ದವು.

ಇದೇ ಸಂದರ್ಭದಲ್ಲಿ ಮೈಸೂರಿನ ಮಹಾರಾಜರು ಉತ್ತರ ಕರ್ನಾಟಕದಲ್ಲಿ ಯಾತ್ರೆ ಮಾಡಿ ಅಲ್ಲಿ ಏಕೀಕರಣಕ್ಕೆ ಪೂರಕವಾದಂತಹ ಮಾತುಗಳನ್ನಾಡಿದರು. ಈ ಘಟನೆಗೆ ಪ್ರಬುದ್ಧ ಕರ್ನಾಟಕ ಪ್ರಾಮುಖ್ಯತೆಯನ್ನು ನೀಡಿದೆ. ಕರ್ನಾಟಕ ವಿಶ್ವವಿದ್ಯಾನಿಲಯದ ಘಟಿಕೋತ್ಸವದ ಸಂದರ್ಭದಲ್ಲಿ ಭಾಗವಹಿಸಿದ ನಂತರ ಮಹಾರಾಜರು ಉತ್ತರ ಕರ್ನಾಟಕದ ಪ್ರಮುಖ ನಗರಗಳಾದ ಹುಬ್ಬಳ್ಳಿ, ಬಾಗಲಕೋಟೆ, ಬಾದಾಮಿ, ಬಾಗೇವಾಡಿ, ಬಿಜಾಪುರಗಳನ್ನು ಸಂದರ್ಶಿಸಿದರು. ಈ

---

೧. ವೆಂಕಟಸುಬ್ಬಯ್ಯ.ಜಿ (ಸಂ), ಕರ್ನಾಟಕ ಏಕೀಕರಣ ಅನುಭವ, ೨೦೦೭, ಪು. ೮೩.
೨. ವೆಂಕಟಸುಬ್ಬಯ್ಯ.ಜಿ (ಸಂ), ಕರ್ನಾಟಕ ಏಕೀಕರಣ ಅನುಭವ, ೨೦೦೭, ಪು. ೧೬.

ಸಂದರ್ಭದಲ್ಲಿ ಅಲ್ಲಿಯ ಜನಗಳು ಮಹಾರಾಜರಿಗೆ ಉತ್ತಮವಾದ ಪ್ರೀತಿ, ವಿಶ್ವಾಸವನ್ನು ತೋರಿಸಿದರು. ಅಷ್ಟೇ ಅಲ್ಲದೆ ಮೈಸೂರು ಸಹಿತವಾದ ಕರ್ನಾಟಕ ಏಕೀಕರಣೆಯ ಬಗ್ಗೆ ತಮಗಿದ್ದ ಉತ್ಕಟವಾದ ಅಪೇಕ್ಷೆಯನ್ನು ವ್ಯಕ್ತಪಡಿಸಿದರು. ಇದೇ ಸಮಯದಲ್ಲಿ ಮಹಾರಾಜರೂ ಕೂಡ "ಮೈಸೂರು ದೇಶಕ್ಕೂ ನಿಮ್ಮ ಪ್ರಾಂತಕ್ಕೂ ಇರುವ ಬಾಂಧವ್ಯವು ಸರ್ವತೋಮುಖವಾಗಿ ಬೆಳೆಯಲೆಂದು ಹಾರೈಸುತ್ತೇವೆ ಎಂದು ಹೇಳುವುದರ ಮೂಲಕ ಅವರ ಅಪೇಕ್ಷೆಗೆ ಅನುಗುಣವಾಗಿ ಮಾತಾಡಿದರು".[೧] ಇದು ಮೈಸೂರು ಕರ್ನಾಟಕದೊಳಗೆ ಸೇರಬೇಕೆಂಬ ಜನರ ಅಪೇಕ್ಷೆಯನ್ನೂ ಮೈಸೂರು ಪ್ರಾಂತ್ಯದವರ ಅಭಿಪ್ರಾಯವೇನೆಂಬುದೂ ತಿಳಿಸಿದೆ. ವಿಜಯನಗರ ಸಾಮ್ರಾಜ್ಯದ ಉತ್ತರಾಧಿಕಾರಿಯಾಗಿ ಚಿಕ್ಕದೇವರಾಜ ಒಡೆಯರ ಕಾಲದಿಂದ ಕರ್ನಾಟಕ ಸಾಹಿತ್ಯ ಸಂಸ್ಕೃತಿಯನ್ನೂ ಸಂಪೂರ್ಣವಾಗಿ ಬೆಳೆಸಿಕೊಂಡು ಬಂದ ಮೈಸೂರು ಅರಸರುಗಳು ಕನ್ನಡ ನಾಡಿನ ಅಭಿವೃದ್ಧಿಗಾಗಿಯೇ ದುಡಿದವರು. ಆದರೆ ರಾಜಕೀಯ ಕಾರಣ-ಗಳಿಂದಾಗಿ ಒಡೆದುಹೋಗಿರುವ ಕರ್ನಾಟಕವನ್ನು ಮುನ್ನಡೆಸಬೇಕಾದ ಸಂದರ್ಭದಲ್ಲಿ ಮೈಸೂರು ಮಹಾರಾಜರ ಸಹಕಾರ ಅಗತ್ಯವಾಗಿತ್ತು. ಕರ್ನಾಟಕ ಏಕೀಕರಣ ಸಂದರ್ಭದಲ್ಲಿ ಇದು ಆಗ ಬೇಕಾಗಿರುವ ಕಾರ್ಯವಾಗಿತ್ತು. ಮಹಾರಾಜರ ಕಡೆಯಿಂದ ಇಂತಹ ಪ್ರೋತ್ಸಾಹದ ಕಾರ್ಯಗಳು ನಡೆದವು. ಇದೇ ಸಂದರ್ಭದಲ್ಲಿ ಕನ್ನಡನಾಡಿನ ಏಕೀಕರಣ ಪ್ರಕ್ರಿಯೆ ಎಂದರೆ ಕನ್ನಡನಾಡಿನ ಯಾವುದೇ ಪ್ರದೇಶಗಳು ಕೈಬಿಟ್ಟು ಹೋಗಬಾರದು. ಇದು ನಾಡಿನ ದೃಷ್ಟಿಯಿಂದಾಗಲಿ, ನಾಡಿನ ಜನತೆಯ ಹಿತದ ದೃಷ್ಟಿಯಿಂದಾಗಲಿ ಒಳ್ಳೆಯದಲ್ಲ ಎಂಬ ಅಭಿಪ್ರಾಯವೂ ಕೇಳಿಬರುತ್ತಿತ್ತು. ಈಶ್ವರ ಸಣಕಲ್ಲ ಅವರು ತಮ್ಮ ಪರಿಪೂರ್ಣತೆಗೆ ಆತ್ಮ ಬಲಿದಾನ' ಕವನದಲ್ಲಿ ಕನ್ನಡ ಮಾತಾಡುವ ಪ್ರಾಂತ್ಯಗಳೆಲ್ಲವೂ ಕರ್ನಾಟಕಕ್ಕೇ ಸೇರಬೇಕು. ಬೇರೆ ಬೇರೆ ಕಾರಣಗಳನ್ನೊಡ್ಡಿ ಅವುಗಳಲ್ಲಿ ಕೆಲವನ್ನು ಕರ್ನಾಟಕಕ್ಕೆ ಸೇರಿಸದೇ ಹೋದರೆ ಅದು ಕನ್ನಡ ದೇವಿಗೆ ಅಂಗ ವೈಕಲ್ಯ ಉಂಟು ಮಾಡಿದಂತೆ ಅಭಿಪ್ರಾಯಪಟ್ಟಿದ್ದಾರೆ. ಕನ್ನಡನಾಡು ಒಂದಾಗಿದ್ದ ಸಂದರ್ಭದ ಸೊಬಗನ್ನು ನೆನೆದುಕೊಂಡಿದ್ದಾರೆ.

**"ವಾಸ್ತುಕಲೆ ಶಿಲ್ಪಕಲೆ ಸರ್ವವಿಧ ಲಲಿತ ಕಲೆ**
**ದಿವ್ಯತೆಯ ನವ್ಯತೆಯ ಭವ್ಯತೆಯ ಚೆಲುವ ಬಲೆ**
**ಲೌಕಿಕಾ ಲೌಕಿಕಾ – ಪಾರಲೌಕಿಕ ನೆಲೆ**
**ಹರಡಿತ್ತೋ ನಾಡಿನಲಿ! ಹರಿದಿತ್ತೋ ಶಾಂತಿಸೆಲೆ.....**[೨]. ಆದರೆ ಇಂತಹ

ಕನ್ನಡ ನಾಡು ನಂತರದ ದಿನಗಳಲ್ಲಿ ಒಡೆದ ಕನ್ನಡಿಯಾಯ್ತು. ದೆಸದೆಸೆಗೆ ಸಿಡಿ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೩೩, ಸಂಚಿಕೆ ೩, ಪು. ೧೩೧.
೨. ಈಶ್ವರ ಸಣಕಲ್ಲ, ಪ್ರ.ಕ. ಸಂಪುಟ ೩೮, ಸಂಚಿಕೆ ೧, ಪು. ೮೦.

ಸಿಡಿದು ತುಂಡು ತುಂಡು ತುಂಡಾಯ್ತು. ಅದರ ನಂತರ ಪರಿಸ್ಥಿತಿ ಹೀಗೆಯೇ ಉಳಿಯಲಿಲ್ಲ. ಜಾಗೃತಿಗೊಂಡ ಕನ್ನಡಿಗರು ಕಣ್ಣುತೆಗೆದು ತಮ್ಮ ನಾಡಿಗೆ ಒದಗಿದ ಬಗೆಯನ್ನು ವೀಕ್ಷಿಸಿದರು. ಶತ್ರುಗಳ ಆಕ್ರಮಣದಿಂದಾಗಿ, ಆತ್ಮಾಭಿಮಾನ ಇಲ್ಲದ ಕಾರಣದಿಂದಾಗಿ ಉಂಟಾಗಿದ್ದ ಪರಿಸ್ಥಿತಿಯನ್ನು ಗಮನಿಸಿದರು. ಜಾಗೃತಿಯ ಕಂಠಗಳು ಮೊಳಗಿದವು. ಕನ್ನಡಿಗರ ಕರ್ತವ್ಯ ಯಾವುದು ಎಂಬುದರ ಕಡೆ ಗಮನಹರಿಯಿತು. ಭಾಷಾನುಗುಣ ಪ್ರಾಂತ್ಯಗಳ ರಚನೆಗೆ ಬೇಡಿಕೆ ಬಂದು ಏಕೀಕರಣಕ್ಕೆ ಬೆಂಬಲವೂ ದೊರೆಯಿತು. ಕನಸು ನನಸಾಗುವ ಕಾಲ ಸನ್ನಿಹಿತ-ವಾಯಿತು. ಆದರೂ ಕನ್ನಡ ನಾಡಿಗೆ ಸೇರಬೇಕಾದ ಪ್ರಾಂತಗಳೆಲ್ಲವೂ ಪೂರ್ಣವಾಗಿ ಸೇರದೇ ಹೋದಾಗ ಅದು ಕನ್ನಡಿಗರಲ್ಲಿ ಬೇಗುದಿಯನ್ನು ಸೃಷ್ಟಿಮಾಡಿತು. ಆದುದರಿಂದಲೇ

**ಅಂದಿನದು ಅಂದಾಯ್ತು! ಇಂದಿನದ ನಿಂದು ಬಗೆ**
**ಹಿಂದಿನ ಸಾಧ್ಯವಹ ಮಾತು! ಇಂದೇಕೆ ತೆಗೆ"**[೧] ಎಂದು ನಿರಾಸಕ್ತಿ ತಳೆಯದೆ ಕನ್ನಡಿಗರಾದ ನಾವು ಇದನ್ನು ಒಪ್ಪಿಕೊಳ್ಳಬೇಕೆ? ಬಂದಷ್ಟೇ ಸಾಕು ಎಂದು ತೃಪ್ತಿಗೊಳ್ಳದೆ ಆ ಭಾಗದ ಗತವೈಭವದ ನೆನಪುಗಳು, ಆ ಪ್ರಾಂತಗಳು ನಮ್ಮ ನಾಡಿನ ಅಂಗವಾಗಿತ್ತು ಎಂಬುದನ್ನು ಮರೆಯದೆ ಅದನ್ನು ಕನ್ನಡ ನಾಡಿಗೆ ಸೇರಿಸುವ ಪ್ರಯತ್ನ ಮಾಡಬೇಕು ಎಂಉದರ ಕಡೆ ಗಮನಸೆಳೆಯುತ್ತಾರೆ.

**"ಆವಾವ ಎಡೆಗಳಲಿ ಇಂದು ಕನ್ನಡದುಸಿರು**
**ತೀವಿಹುದೋ, ಅವು ಎಲ್ಲ ಕನ್ನಡದ ನಲ್ಬಸಿರು**
**ಅವುಗಳಲಿಯೊಂದರೆಯು ಕೈಬಿಟ್ಟರೂ ಗ್ಲಾನಿ**
**ಕನ್ನಡ ದೇವಿಗದೆ ಅನಿತನಿತು ಹಾ! ಗ್ಲಾನಿ**[೨] ಎಂಬುದನ್ನು ಅರಿತು-ಕೊಳ್ಳಬೇಕು. ಆದರ್ಶರೂಪನ್ನು ಹೊಂದಿ ಸರ್ವಾಂಗ ಪರಿಪೂರ್ಣೆಯಾಗಿರುವ ಕನ್ನಡಮಾತೆಯ ಅಂದವನ್ನು ಕಾಪಾಡಿಕೊಳ್ಳಬೇಕು. ಅದರಲ್ಲಿ 'ಕಿರುವೆರಳ್ಳದರೂ' ಊನವಾದರೆ ಅಷ್ಟರಮಟ್ಟಿಗೆ ಆಕೆ ಅಂಗ ಊನೆಯಾಗುತ್ತಾಳೆ. ಆದುದರಿಂದ ಆಕೆಯನ್ನು ಪರಿಪೂರ್ಣೆಯನ್ನಾಗಿಸಲು ಕನ್ನಡಿಗರು ಸಿದ್ಧರಾಗಬೇಕು ಎಂಬ ಸಂದೇಶವನ್ನು ನೀಡುತ್ತಾರೆ.

ಆದರೆ ಇಂತಹ ಆಸೆಗಳು ಈಡೇರದ್ದೆ ಆದ ಕೆಲವು ಭಾಗಗಳನ್ನು ಕಳೆದುಕೊಂಡು ಮೈಸೂರು ರಾಜ್ಯ ಉದಯವಾದಗಲೂ ಆ ಅನಿವಾರ್ಯತೆಯನ್ನು ತಾತ್ಕಾಲಿಕವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಕನ್ನಡ ನಾಡು ನಿರ್ಮಾಣವಾಗದೇ

---

೧. ಈಶ್ವರ ಸಣಕಲ್ಲ, ಪ್ರಕ. ಸಂಪುಟ ೩೮, ಸಂಚಿಕೆ ೧, ಪು. ೮೨.
೨. ಈಶ್ವರ ಸಣಕಲ್ಲ, ಪ್ರಕ. ಸಂಪುಟ ೩೮, ಸಂಚಿಕೆ ೧, ಪು. ೮೨.

ಇಲ್ಲವೇನೋ ಎಂಬಂತಹ ಸಂದರ್ಭದಲ್ಲಿ ಅದು ನಿರ್ಮಾಣವಾದುದನ್ನು ಕಂಡಾಗ ಕವಿ ಜಿ.ವರದರಾಜರವರು

**ಪುನರ್ಜನ್ಮ ಪುನರ್ಜನ್ಮ ಪುನರ್ಜನ್ಮ ಪಡೆಯಿತು**
**ಹರಿದು ಹಂಚಿ ಹೋದ ನಾಡು ಮತ್ತೆ ಒಂದಾಯಿತು**
**ಕನ್ನಡ ನಾಡ ಕನಸು ಸತ್ಯವಾಯಿತು**
**ಕನ್ನಡದ ಜನರ ಮನಸ್ಸು ಒಂದುಗೂಡಿತು**
**ಕನ್ನಡದ ಮೂಲೆಯಲ್ಲಿ ಮಾಲೆಯಾಯಿತು.**
**ಕನ್ನಡ ತಾಯಿಗೆಲ್ಲಾ ಲೀಲೆಯಾಯಿತು.........**[೧] ಎಂದು ಸಂಭ್ರಮಪಡುತ್ತಾರೆ. ಹೀಗೆ ಕರ್ಣಾಟಕ ಏಕೀಕರಣವಾದುದ್ದರಿಂದ ಕನ್ನಡಿಗರಿಗೆ ಸಂತೋಷ ಉಂಟಾದರೂ ಇದೇ ಸಂದರ್ಭದಲ್ಲಿ ಅವರ ಜವಾಬ್ದಾರಿಯು ಹೆಚ್ಚಾಯಿತು. ಹಿರಿಯರ ಹೋರಾಟದ ಕಷ್ಟನಷ್ಟಗಳನ್ನು ನೆನೆದುಕೊಂಡು ಇಂದಿನವರನ್ನೆಲ್ಲ ಜೊತೆಗೂಡಿಸಿ-ಕೊಂಡು ಮುನ್ನಡೆಯುವುದು ಅಗತ್ಯವಾಯಿತು. ಮಹಾಕಾವ್ಯಗಳನ್ನು ರಚಿಸಿದ ಕವಿಗಳು, ನಾಡಿಗೆ ರಕ್ಷಣೆಯನ್ನು ನೀಡಿದ ಕಲಿಗಳು, ಶಿಲ್ಪ, ಗೀತೆ, ಚಿತ್ರಕಲೆ ಇವುಗಳ ಮೂಲಕ ಸಂಸ್ಕೃತಿಯ ಸೊಬಗನ್ನು ಹೆಚ್ಚಿಸಿದ ಕುಶಲರೆಲ್ಲರ ಹಾರೈಕೆಯನ್ನು ಹೊತ್ತು ಮುಂದೆ ಸಾಗಬೇಕಾಗಿದೆ. ಒಡೆದ ಮನಸ್ಸಿನವರನ್ನೆಲ್ಲಾ ಮಂದಿ ಒಟ್ಟುಗೂಡಿಸಿಕೊಂಡು ನಡೆವ ಬೆಡಗನ್ನು ಕಲಿತುಕೊಳ್ಳಬೇಕಾಯಿತು. ಇದು ಒಬ್ಬಿಬ್ಬರಿಂದಾಗುವ ಕಾರ್ಯವಲ್ಲ. ಸಮಷ್ಟಿಯ ಬೆಂಬಲ ಇದಕ್ಕೆ ಬೇಕು. ಕನ್ನಡದ ಮುನ್ನಡೆಗೆ ಪ್ರಯತ್ನಿಸಬೇಕಾಗಿದೆ. ಹಾಗಾಗಿಯೇ ಕವಿ ಕನ್ನಡಿಗರೆಲ್ಲರನ್ನು ಕನ್ನಡ ನಾಡಿನ ಸೇವೆಗೆ ಆಹ್ವಾನಿಸಿದ್ದಾರೆ.

**ತೇರನೆಳೆಯ ಎಲ್ಲ ಬನ್ನಿ ಇದು ರಥೋತ್ಸವ**
**ಒಲುಮೆ ಬಲುಮೆ ಎಲ್ಲ ತನ್ನ ಇದು ಮಹೋತ್ಸವ**
**ಅಣ್ಣ ಅಮ್ಮ ಅಕ್ಕ ತಂಗಿ ಒಂದೇ ಮನೆಯಲೆಲ್ಲಾ ತಂಗಿ**
**ಇನ್ನೂ ಬಾಳುವ ಹೆಜ್ಜೆ ಹೆಜ್ಜೆಯನ್ನಿಟ್ಟು ಒಂದೇ ಗುರಿಗೆ**
**ಮನವನಿಟ್ಟು ಇನ್ನು ಸಾಗುವ........**[೨] ಎಂದು ಕೇಳಿಕೊಳ್ಳುತ್ತಾರೆ. ನಮ್ಮ ನಾಡಿ ನಾಡಿಗಳಲ್ಲಿ ಉಸಿರು ಉಸಿರುಗಳಲ್ಲಿ ಕನ್ನಡದ ಏಳಿಗೆಯ ಭಾವನೆ ಮೂಡಬೇಕು. ಆಗ ಮಾತ್ರ ಕನ್ನಡ ನಾಡಿನ ಪರಿಪೂರ್ಣ ವಿಕಸನ ಸಾಧ್ಯ ಎಂಬ ಆಶಯಗಳು ಇಲ್ಲಿ ವ್ಯಕ್ತವಾಗಿವೆ. ಹೀಗೆ ಕನ್ನಡನಾಡು ಏಕೀಕರಣಗೊಳ್ಳಬೇಕು ಎಂಬ ಆಶಯದಿಂದ ಹಿಡಿದು ಆಕೆ ಪರಿಪೂರ್ಣಳಾಗಬೇಕು ಮತ್ತು ಆಕೆಯನ್ನು ಮುನ್ನಡೆಸುವ ಜವಾಬ್ದಾರಿಯನ್ನು ಕನ್ನಡಿಗರು ಹೊರಬೇಕು ಎನ್ನುವವರಿಗೆನ ಸಮಸ್ತ

---

೧. ವರದರಾಜ, ಪ್ರ.ಕ. ಸಂಪುಟ ೩೮, ಸಂಚಿಕೆ ೩, ಪು. ೧೨೨.
೨. ವರದರಾಜ, ಪ್ರ.ಕ. ಸಂಪುಟ ೩೮, ಸಂಚಿಕೆ ೩, ಪು. ೧೨೪.

ವಿಚಾರಗಳು ಏಕೀಕರಣ ಹೋರಾಟದ ವಿವಿಧ ಹಂತಗಳು ಇವುಗಳೆಲ್ಲದರ ಬಗ್ಗೆ ಗಮನಿಸಿರುವ ಪ್ರಬುದ್ಧ ಕರ್ಣಾಟಕದ ಕಾರ್ಯ ದಾಖಲೆಯ ದೃಷ್ಟಿಯಿಂದಲೂ ಪ್ರಮುಖವೆನಿಸುತ್ತದೆ.

**ಸಾಂಸ್ಕೃತಿಕ ಏಕೀಕರಣ**

ಕನ್ನಡ ಭೌಗೋಳಿಕವಾಗಿ ನಾನಾ ಕಾರಣಗಳಿಂದ ಹಂಚಿ ಹೋಗಿ ನಂತರ ಒಂದುಗೂಡಿಸಲು ಸಾಕಷ್ಟು ಪರಿಶ್ರಮ ಹೋರಾಟ ಇವುಗಳನ್ನು ಮಾಡಬೇಕಾಯಿತು. ಆದರೆ ಕರ್ನಾಟಕ ಎಂಬುದು ಕೇವಲ ಭೌಗೋಳಿಕವಾದ ಎಲ್ಲೆಯಿಂದ ನಿರ್ಧಾರವಾಗುವ ವಿಷಯವಲ್ಲ. ಅದು ಸಂಸ್ಕೃತಿಯ ಎಲ್ಲೆಯನ್ನು ಹೊಂದಿರುವುದು ಎಂಬಂತಹ ಅನಿಸಿಕೆ ನಮ್ಮ ಕವಿಗಳದ್ದಾಗಿತ್ತು. ಭೌಗೋಳಿಕವಾಗಿ ಕರ್ನಾಟಕ ಒಂದಾದ ಹಾಗೆಯೇ ಸಾಂಸ್ಕೃತಿಕವಾಗಿಯೂ ಕನ್ನಡ ನಾಡು ಒಂದಾಗಬೇಕು ಎಂಬ ಆಶಯ ನಮ್ಮ ನಮ್ಮ ಕವಿಗಳದ್ದು. ಇದು ಭೌಗೋಳಿಕ ಏಕೀಕರಣದಂತೆ ಜಟಿಲವಾದುದಲ್ಲ ಇದರ ಸೃಷ್ಟಿಗೆ ಯಾವ ನಾಡ ಪ್ರಭುಗಳನ್ನೋ ಆಳುವವರನ್ನೋ ಮರ್ಜಿಗಾಗಿಯೇ ಕನ್ನಡಿಗರು ಕಾಯಬೇಕಾದುದಲ್ಲ.

'ಕರ್ಣಾಟಕ ರಾಜ್ಯೋತ್ಸವದ ಗೀತೆ'ಯಲ್ಲಿ ಕುವೆಂಪು ಅವರು ಹೇಳಿರುವಂತೆ ನಮ್ಮ ಕರ್ನಾಟಕ ಬರಿಯ ದೇಶ ವಿಸ್ತೀರ್ಣಕ್ಕೆ ಸಂಬಂಧ ಪಟ್ಟದಲ್ಲ ಅದನ್ನು ಚದುರ ಮೈಲಿಗಳಿಂದ ಅಳೆದರೆ ಸಾಲದು ಚದರ ವರ್ಷಗಳಿಂದಲೂ ಗುರುತಿಸಬೇಕು. ಕರ್ನಾಟಕಕ್ಕೆ ಅನ್ನಮಯ ರೂಪವಾದ ಭೂಪ್ರದೇಶವಿರುವಂತೆಯೇ ಪ್ರಾಣಮನೋಮಯ ರೂಪವಾದ ಚಿತ್ ಪ್ರದೇಶ ಇದೆ. ಚಿನ್ಮಯವೂ ಆಧ್ಯಾತ್ಮಕವೂ ಆಗಿರುವ ಈ ಸಂಸ್ಕೃತಿ ಕೋಶವೇ ಕರ್ನಾಟಕ ದೇವಿಯ ಸೂಕ್ಷ್ಮ ಶರೀರವನ್ನು ಹೊಂದಿರುತ್ತದೆ. ಇಂತಹ ಸೂಕ್ಷ್ಮ ಶರೀರ ಹೊಂದಿರುವ ಕನ್ನಡ ನಾಡನ್ನು "ಕೃತಕವಾದ ರಾಜಕೀಯ ವಿಭಜನೆ ನೈಜವಾದ ಸಾಂಸ್ಕೃತಿಯ ಏಕತೆಯನ್ನು ಎಂದಿಗೂ ಶಾಶ್ವತವಾಗಿ ನಾಶ ಮಾಡಲಾರದು. ಇಂದಲ್ಲ ನಾಳೆ ನೈಜಕ್ಕೆ ಜಯವಿದೆ. ಕೃತಕಕ್ಕೆ ಪತನವಿದೆ. ಆದ್ದರಿಂದ ವಿವಿಧ ರಾಜಕೀಯ ವಿಭಾಗಗಳಲ್ಲಿ ಹರಿದು ಹಂಚಿ ಹೋದ ಕರ್ಣಾಟಕದ ಉದಾರ ಹೃದಯದ ಜನರಲ್ಲಿ ನುಡಿಯೊಲ್ಮೆಯ ಕಿಡಿಕೆಡದಂತೆ ನಿರಂತರವೂ ಸಾವೇಶ ಪ್ರೋತ್ಸಾಹವೀಯಬೇಕಾದುದೂ ಕರ್ನಾಟಕ ಪುನರುದ್ಧಾರಕ್ಕಾಗಿ ದುಡಿಯಲು ದೀಕ್ಷೆಗೊಂಡ ತಪಸ್ವಿಗಳೆಲ್ಲರ ಕರ್ತವ್ಯ"[೧]ವಾಗಿರುತ್ತದೆ. ಪ್ರಬುದ್ಧ ಕರ್ನಾಟಕವು ಸಾಂಸ್ಕೃತಿಕವಾಗಿ ಕನ್ನಡ ಜನರೆಲ್ಲರೂ ಒಂದು ಎಂಬ ಭಾವನೆಯನ್ನು ಮೊದಲಿನಿಂದಲೂ ಪ್ರದರ್ಶಿಸುತ್ತಾ ಬಂದಿದೆ. ಕನ್ನಡ ನಾಡನ್ನು ಒಂದುಗೂಡಿಸುವ

---

೧. ಕೆ.ವಿ.ಪುಟ್ಟಪ್ಪ, ಪ್ರಕ. ಸಂಪುಟ ೨೦, ಸಂಚಿಕೆ ೩, ಪು. ೭.

ಸಾಧನಗಳಲ್ಲಿ ಪರಸ್ಪರ ಭಿನ್ನಭಿನ್ನ ಪ್ರದೇಶಗಳಲ್ಲಿರುವ ಕಲೆ ಸಾಹಿತ್ಯ ಸಂಸ್ಕೃತಿ ಇವುಗಳು ಬಹು ಪ್ರಮುಖವಾದ ಸ್ಥಾನವನ್ನು ವಹಿಸುತ್ತದೆ ಎಂಬುದನ್ನು ಅರಿತುಕೊಂಡಿದ್ದ ಪ್ರಬುದ್ಧ ಕರ್ಣಾಟಕ ಅದಕ್ಕಾಗಿಯೇ ನಾಡಿನ ವಿವಿಧ ಕಡೆಗಳಲ್ಲಿ ಇರುವ ಕವಿಗಳ ಮನಸ್ಸನ್ನು ಸೆಳೆಯಲು ಪ್ರಯತ್ನಿಸಿದೆ.

ಉತ್ತರ ಕರ್ಣಾಟಕದವರ ಕಡೆಯಿಂದ 'ಪ್ರಬದ್ಧ ಕರ್ಣಾಟಕ ನಮ್ಮ ಸಾಂಸ್ಕೃತಿಕ ತಾಯಿ' ಎಂದು ಹೊಗಳಿಸಿಕೊಂಡ ಈ ಪತ್ರಿಕೆಯು ತನ್ನ ಆರಂಭದ ದಿನಗಳಿಂದಲೂ ಈ ದಿಕ್ಕಿನೆಡೆ ಪ್ರಯತ್ನಿಸಿದೆ. ವಿವಿಧ ಪ್ರಾಂತಗಳಲ್ಲಿರುವ ಕನ್ನಡವು ಒಂದಾಗಬೇಕು. ಕನ್ನಡವು ಒಂದಾದರೆ ಕನ್ನಡಿಗರು ಒಂದಾಗುತ್ತಾರೆ. ಕನ್ನಡಿಗರು ಒಂದಾದರೆ ಏಕೀಕರಣ ಸುಲಭ ಸಾಧ್ಯ ಎಂಬುದನ್ನು ಅರಿತಿರುವ ಪ್ರಬುದ್ಧ ಕರ್ಣಾಟಕವು ಕನ್ನಡ ನಾಡಿನಲ್ಲಿರುವ ವೈವಿಧ್ಯಮಯ ಕನ್ನಡಗಳಲ್ಲಿ ಅಂತಹ ವ್ಯತ್ಯಾಸವೇನೂ ಇಲ್ಲ ಎಂಬುದನ್ನು ಗುರುತಿಸಿದೆ. "ಏಕೆಂದರೆ ಮೈಸೂರು, ಮಂಗಳೂರು ಮಾತಿನಲ್ಲಿ ಭೇದವೆಣಿಸುವಷ್ಟು ವ್ಯತ್ಯಾಸವಿಲ್ಲ. ಉತ್ತರ ಕರ್ಣಾಟಕದ ತುದಿಯಲ್ಲಿ ಮಾತಾಡುವ ಕನ್ನಡಕ್ಕೂ ಮೈಸೂರಿನ ಕನ್ನಡಕ್ಕೂ ವ್ಯತ್ಯಾಸ ಇರಬಹುದು. ಆದರೆ ಇವುಗಳನ್ನು ಬೇರೆ ಬೇರೆ ಎಂದು ಹೇಳುವಷ್ಟು ವ್ಯತ್ಯಾಸವಿಲ್ಲ. ಅವರು ಆಡುವ ಮಾತುಗಳು ಪರಸ್ಪರ ಅರ್ಥವಾಗುವ ಹಾಗೆ ಇದೆ. ಅಲ್ಪಸ್ವಲ್ಪ ಭೇದವಿದ್ದರೂ ಅದರಿಂದ ಯಾವ ನಷ್ಟವೂ ಆಗುವುದಿಲ್ಲ" ಎಂದು ಅಭಿಪ್ರಾಯಪಟ್ಟು ಕರ್ನಾಟಕದಲ್ಲಿ ಈ ರೀತಿ ಕನ್ನಡಗಳಲ್ಲಿ ವ್ಯತ್ಯಾಸ ಉಂಟಾಗುವುದಕ್ಕೆ ಅದರ ವಿಸ್ತೀರ್ಣತೆಯೇ ಕಾರಣ ಎಂಬುದರ ಕಡೆ ಗಮನಸೆಳೆದಿದೆ. ಒಂದೇ ಮನೆಯಲ್ಲೇ ಒಬ್ಬರು ಆಡುವ ಮಾತನ್ನು ಇನ್ನೊಬ್ಬರು ಆಡುವ ಮಾತುಗಳಿಗಿಂತ ಭಿನ್ನವಾಗಿರುತ್ತದೆ. ಆದುದರಿಂದ ಇರುವ ಅಲ್ಪಸ್ವಲ್ಪ ಭೇದಗಳನ್ನು ತೀವ್ರವಾಗಿ ಪರಿಗಣಿಸಬಾರದು ಎಂಬ ವಿವೇಕವನ್ನು ಹೇಳಿದೆ. ಈ ಭಿನ್ನತೆಯ ಬಗ್ಗೆ ಹೇಳುತ್ತಾ ಸಂಪಾದಕರು ಒಂದು ಸುಂದರವಾದ ಉಪಮೆಯನ್ನು ಹನ್ನೊಂದನೆಯ ಸಂಪುಟದಲ್ಲಿ ನೀಡಿದ್ದಾರೆ. ಕಬ್ಬಿನ ತುಂಡು ಒಂದು ಬೆಟ್ಟುದ್ದ ಇದ್ದರೆ ಅದರ ರುಚಿ ಉದ್ದಕ್ಕೂ ಒಂದೇ ಆಗಿರುತ್ತದೆ. ಅದೇ ಒಂದು ಜಲ್ಲೆಯಾದರೆ ಅದರ ಬುಡ ಮಧ್ಯ ತುದಿಗಳ ಆಕಾರ ರುಚಿ ಸ್ವರೂಪಗಳೇ ಬೇರೆ ಬೇರೆಯಾಗಿ ಕಾಣುತ್ತದೆ ಎಂದು ಹೇಳುವುದರ ಮೂಲಕ ಏಕೀಕರಣದ ಹೋರಾಟಕ್ಕೆ ಬೇಕಾಗಿರುವುದು ಮಾನಸಿಕ ಸಂಕಲ್ಪ ಹಾಗೂ ಇರಬಹುದಾದ ಅಲ್ಪ ಸ್ವಲ್ಪತೊಡಕುಗಳನ್ನೇ ಅಗಾಧವಾಗಿ ಪರಿಗಣಿಸುವುದಲ್ಲ ಎಂಬ ಅಂಶವನ್ನು ಸ್ಪಷ್ಟೀಕರಿಸಿದ್ದಾರೆ. ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕರ್ನಾಟಕದವರ ಭಾಷೆಯಲ್ಲಿ ವ್ಯತ್ಯಾಸಗಳಿದ್ದರೂ ಅದನ್ನು ಪ್ರಮುಖವಾಗಿ ಪರಿಗಣಿಸಬಾರದು. ಏಕೆಂದರೆ ಉತ್ತರ ಹಾಗೂ ದಕ್ಷಿಣ ಕರ್ನಾಟಕದ ಕನ್ನಡಗಳಲ್ಲಿ ವ್ಯತ್ಯಾಸವಿದ್ದರೂ ಅವುಗಳು ಅದರದೇ

ವೈಶಿಷ್ಟ್ಯ ಹೊಂದಿರುತ್ತದೆ. ಮೈಸೂರಿನ ಕಡೆಯ ಭಾಷೆ ಮೃದು. ಧಾರವಾಡದ ಕನ್ನಡ ಗಡಸು ಆಗಿದ್ದರೂ ಅದೇ ಆ ಭಾಷೆಯ ವಿಶಿಷ್ಟತೆ. ಕನ್ನಡಿಗರಾದರು ಅದರಲ್ಲಿ ಇರುವ ವಿಶೇಷತೆಯ ಕಡೆ ಗಮನ ಹರಿಸಬೇಕೇ ಹೊರತು ಕುಂದಿನ ಕಡೆ ಅಲ್ಲ. ಈ ವಿಚಾರಕ್ಕೆ ಸಂಬಂಧಿಸಿದಂತೆ ಬಿ.ಎಂ.ಶ್ರೀಕಂಠಯ್ಯನವರು ಹೇಳಿರುವ ಮಾತುಗಳನ್ನು ಇಲ್ಲಿ ಗಮನಿಸಬಹುದು. ಕಳೆದ ಶತಮಾನದ ಆರಂಭದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಅಟ್ಟದ ಮೇಲೆ ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ಮೇಲಿಂದ ಮೇಲೆ ಸಭೆಗಳಾಗುತ್ತಿದ್ದವು. ಮುದವೀಡು ಕೃಷ್ಣರಾಯರು ಹಂಚಿಹೋದ ಕನ್ನಡ ನಾಡು ಒಂದುಗೂಡಲೇಬೇಕೆಂದು ಗರ್ಜಿಸುತ್ತಿದ್ದರು. ಆಗ ಬಿ.ಎಂ.ಶ್ರೀಕಂಠಯ್ಯನವರು ಮೈಸೂರಿನ ಮೃದುವಾದ ಕನ್ನಡದಲ್ಲಿ ಮಾತಾಡುತ್ತಾ "ಧಾರವಾಡ ಕನ್ನಡ ಗಂಡು ಕನ್ನಡ, ಮೈಸೂರು ಕನ್ನಡ ಹೆಣ್ಣು ಕನ್ನಡ. ಈ ಎರಡೂ ಭಾಷೆ ಒಂದುಗೂಡಿದರೆ ಧಾರವಾಡದ ಗಂಡು, ಮೈಸೂರು ಹೆಣ್ಣು ಮದುವೆಯಾದರೆ ಕನ್ನಡ ನಾಡಿನ ಸಂಸಾರ ಸುಖಮಯ. ಆಗ ಕರ್ನಾಟಕ ಏಕೀಕರಣವಾಗುವುದು"[೧] ಎಂದು ಹೇಳುತ್ತಿದ್ದರು. ಹೀಗೆ ಭಿನ್ನ ಪ್ರದೇಶದ ಭಾಷೆಗಳ ನಡುವೆ ಏಕಮತ್ಯ ಉಂಟಾದರೆ ಅದರಿಂದ ಕನ್ನಡಿಗರ ಮನಸ್ಸು ಒಂದುಗೂಡುತ್ತದೆ. ನಾಡಿನ ಏಕೀಕರಣವಾಗಲು ಸಹಕಾರಿಯಾಗುತ್ತದೆ. ಭಾಷೆ ಬಾಂಧವ್ಯವನ್ನು ಬೆಸೆಯುವ ಮಾಧ್ಯಮವಾಗಿ ವರ್ತಿಸುತ್ತದೆ ಎಂಬ ಅಭಿಪ್ರಾಯ ಅಂದಿನ ಸಾಹಿತಿಗಳದ್ದು. ಇದನ್ನು ಸಾಧಿಸಲು ಹಾಗೂ ಸಮನ್ವಯಗೊಳಿಸಲು ಪ್ರಬುದ್ಧ ಕರ್ಣಾಟಕ ಪ್ರಯತ್ನಿಸಿದೆ ಹಾಗೂ ಸಾಕಷ್ಟು ಯಶಸ್ವಿಯೂ ಆಗಿದೆ.

೧೯೩೧ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಕೆರೂರು ವಾಸುದೇವಾಚಾರ್ಯ ಹಾಗೂ ಶಾಂತರಸ ಭಾವಚಿತ್ರಗಳನ್ನು ಅನಾವರಣ ಮಾಡುವ ಸಂದರ್ಭದಲ್ಲಿ ಇದೇ ಭಾವನೆ ವ್ಯಕ್ತವಾಗಿದೆ.[೨] ಆರಂಭದಿಂದಲೂ ಒಂದೇ ಆಗಿದ್ದ ಕರ್ಣಾಟಕ ಐತಿಹಾಸಿಕ ಕಾರಣಗಳಿಂದ ಬೇರೆಯಾಗಿದ್ದರೂ ಉತ್ತರ ಹಾಗೂ ದಕ್ಷಿಣ ಕರ್ನಾಟಕರವರ ನಡುವೆ ಭೇದ ಬರಬಾರದು. ಇದನ್ನು ಸಾಧಿಸಲು ಕರ್ನಾಟಕದ ಹೃದಯ ಭಾಗದಲ್ಲಿದ್ದ ಮೈಸೂರು ಈ ಜವಾಬ್ದಾರಿಯನ್ನು ಹೊರಬೇಕು. ಇದಕ್ಕಾಗಿ ಉತ್ತರ ಕರ್ನಾಟಕ ಹಾಗೂ ದಕ್ಷಿಣ ಕರ್ನಾಟಕದವರ ನಡುವೆ ಸಂಪರ್ಕ ಬಳಕೆ ಹೆಚ್ಚಾಗಬೇಕು. ಕನ್ನಡ ಭಾಷೆ ಒಂದೇ ಆಗಿದ್ದರೂ ಅದನ್ನು ಆಡುವ ರೀತಿ ಭಿನ್ನ ಭಿನ್ನವಾಗಿದ್ದರೂ ಅವುಗಳ ನಡುವೆ ಸಹಮತ್ವ ಬೆಳೆಯಬೇಕು. ಇವೆಲ್ಲವೂ ಪರಸ್ಪರ ನಂಬಿಕೆಯಿಂದ ಆಗಬೇಕಾದ ಕೆಲಸ. ಮಾನಸಿಕವಾಗಿ ನಡೆಯಬೇಕಾದ ಕಾರ್ಯ. ಈ

೧. ಹಂ.ಪ.ನಾಗರಾಜಯ್ಯ(ಪ್ರಧಾನ ಸಂ.), ಶ್ರೀಉತ್ಸವ, ೧೯೮೬, ಪು. ೨೨೮.
೨. ವಸ್ತುಕೋಶ, ಪ್ರ.ಕ. ಸಂಪುಟ ೧೨, ಸಂಚಿಕೆ ೪, ಪು. ೭.

ಕಾರ್ಯಕ್ಕೆ ಈಗಾಗಲೇ ಚಾಲನೆ ದೊರೆತಿದ್ದು ಅದು ತ್ವರಿತಗತಿಯಿಂದ ಸಾಗುತ್ತಿದ್ದು ಭಿನ್ನ ಭಿನ್ನ ಭಾಷೆಗಳಲ್ಲಿ ಪರಸ್ಪರ ಕೊಡು ಕೊಳ್ಳುವಿಕೆಯ ಕಾರಣದಿಂದ ಆಂಶಿಕವಾದ ಬದಲಾವಣೆಯಾಗುತ್ತದೆ. ಅದು ಹೇಗೆಂದರೆ "ಉತ್ತರ ಕರ್ಣಾಟಕ ಭಾಷೆಯಲ್ಲಿ ನಯವು ತೋರಲಾರಂಭಿಸಿದೆ. ಮೈಸೂರು ಪ್ರಾಂತದವರ ಭಾಷೆಯಲ್ಲಿ ಸರಳತೆಯೂ ವ್ಯಕ್ತವಾಗುತ್ತದೆ. ಒಂದು ಭಾಗದ ಗ್ರಂಥಕರ್ತರನ್ನು ಕವಿಗಳನ್ನೂ, ಇನ್ನೊಂದು ಭಾಗದವರು ಪ್ರೇಮ ಭಾವದಿಂದ ಪಠಿಸುತ್ತಿರುವರು. ಸಹಾನುಭೂತಿಯಿಂದ ವಿಮರ್ಶಿಸುತ್ತಲಿರುವರು. ಇವೆಲ್ಲ ಕರ್ಣಾಟಕದ ಐಕ್ಯದ ಕುರುಹುಗಳು. ಭಾವೀ ಏಕೀಕರಣ ಶುಭ ಲಕ್ಷಣಗಳು[೧] ಈ ಸತ್ ಸಂಪ್ರದಾಯವು ಹೀಗೆಯೇ ಸಾಗಬೇಕು. ನಾವು ಹೆಚ್ಚು ನಾವು ಹೆಚ್ಚು ಎಂದು ಕಚ್ಚಾಡದೆ ಪರಸ್ಪರ ಭ್ರಾತೃತ್ವದ ಭಾವ ಬೆಳೆಸಿಕೊಳ್ಳಬೇಕು. ನಮ್ಮ ನಾಡು ಒಡೆದು ಹೋಗಿದ್ದರೂ ಒಂದು ಜನಾಂಗದ ವಿಶಿಷ್ಟತೆಯನ್ನು ಐಕ್ಯತೆಯನ್ನು ಕಾಯುವ ಶಕ್ತಿಗಳೆಂದರೆ ಭಾಷೆ ಹಾಗೂ ಸಂಸ್ಕೃತಿಗಳು ಮಾತ್ರವೇ ಒಂದು ವೇಳೆ ರಾಜಕೀಯ ಕಾರಣಗಳಿಂದ ಆ ನಾಡಿನಲ್ಲಿ ಒಡಕು ಉಂಟಾದರೆ ಆ ಸಂಸ್ಕೃತಿಗೂ ಈ ಸಮಸ್ಯೆಯನ್ನು ಬಗೆಹರಿಸಲು "ಕನ್ನಡದ ತವರಾದ ಕರ್ನಾಟಕದ ಸಿಂಹಾಸನ ನೆಲೆಯಾದ ಕನ್ನಡದ ಕಣ್ಣಾದ ಮೈಸೂರು ಪ್ರಾಂತದವರು ಮೈಸೂರು ವಿಶ್ವವಿದ್ಯಾನಿಲಯವನ್ನೇ ಅಖಿಲ ಕರ್ನಾಟಕ ವಿಶ್ವವಿದ್ಯಾಲಯನ್ನಾಗಿ ಪರಿಣಮಿಸುವಂತೆ ಮಾಡಿದರೆ ಏಕೀಕರಣ ಉದ್ದೇಶವು ಬಹುಮಟ್ಟಿಗೆ ಸಾಧ್ಯವಾಗಬಹುದೆಂಬುದರಲ್ಲಿ ಸಂದೇಹವು ತೋರುವುದಿಲ್ಲ"[೨] ಎಂಬಂತಹ ಮಾತುಗಳು ಗಟ್ಟಿಯಾಗುತ್ತಿದ್ದವು. ಸಾಂಸ್ಕೃತಿಕವಾಗಿ ಸಾಹಿತ್ಯಕವಾಗಿ ಏಕೀಕರಣ-ಗೊಂಡರೆ ಅದಕ್ಕೆ ಪೂರಕವಾದ ವಾತಾವರಣವು ಏರ್ಪಟ್ಟರೆ ಭೌಗೋಳಿಕವಾದ ಏಕೀಕರಣವನ್ನು ಸಾಧಿಸಲು ಮಾರ್ಗ ಸುಲಭವಾಗುತ್ತದೆ.

ಸಾಂಸ್ಕೃತಿಕ ಏಕೀಕರಣದಿಂದ ತಮಗೆ ಆಘಾದವಾದ ಬೆಂಬಲ ದೊರಕುತ್ತದೆ ಎಂಬ ಅರಿವು ನಮ್ಮ ಕವಿಗಳಿಗೆ ಇತ್ತು. ಹಾಗಾಗಿಯೇ ಬೇಂದ್ರೆಯವರು ನಮಗೆ ಬೇಕಾದ ಮೂರು ಬಗೆಯ ಏಕೀಕರಣದ ಬಗ್ಗೆ ಪ್ರಸ್ತಾಪಿಸಿದ್ದಾರೆ. "ಕರ್ನಾಟಕಸ್ಥರಾಗುವುದು ಬೇರೆ, ಕನ್ನಡಿಗರಾಗುವುದು ಬೇರೆ. ಈ ಸೂತ್ರವನ್ನು ಹಿಡಿದು ಮುಂದೆ ಹೊರಟರೆ ನಮಗೆ ಮೂರು ಬಗೆಯ ಏಕೀಕರಣಗಳು ಬೇಕು. ಕನ್ನಡದ ಏಕೀಕರಣ ಕರ್ನಾಟಕದ ಏಕೀಕರಣ ಹಾಗೂ ಕನ್ನಡಿಗರ ಏಕೀಕರಣ"[೩] ಈ ರೀತಿಯ ಏಕೀಕರಣಗಳನ್ನು ಸಾಧಿಸಿಕೊಳ್ಳಬೇಕಾದರೆ ಹಲವಾರು ರೀತಿಯ

---

೧. ವಸ್ತುಕೋಶ, ಪ್ರ.ಕ. ಸಂಪುಟ ೧೨, ಸಂಚಿಕೆ ೪, ಪು. ೨.
೨. ವಸ್ತುಕೋಶ, ಪ್ರ.ಕ. ಸಂಪುಟ ೧೨, ಸಂಚಿಕೆ ೪, ಪು. ೪.
೩. ವಸ್ತುಕೋಶ, ಪ್ರ.ಕ. ಸಂಪುಟ ೩೪, ಸಂಚಿಕೆ ೩, ಪು. ೧೭೩.

ಎಡರುತೊಡರುಗಳು ಎದುರಾಗುವುದು ಸಹಜ. ಮೊದಲು ಆ ತೊಡಕುಗಳನ್ನು ನಿವಾರಿಸಿಕೊಳ್ಳಬೇಕಾದರೆ ಕನ್ನಡದ ಏಕೀಕರಣ ಎಂದರೆ ನಮ್ಮ ಸುತ್ತಲಿನ ಪ್ರದೇಶದಲ್ಲಿರುವ ತುಳು, ಕೊಡಗು, ಕೊಂಕಣಿ, ತೊದ,ಕೋಲ ಇವೇ ಮೊದಲಾದವರುಗಳ ಶಬ್ದಕೋಶದಲ್ಲಿರುವ ಪದಗಳು. ಕನ್ನಡದ ಶಬ್ದಕೋಶದಲ್ಲಿ ಬರೆಯಬೇಕು. ಇದರಿಂದ ಸುತ್ತಲಿನ ಪ್ರದೇಶದವರೆಗೂ ಕರ್ಣಾಟಕದ ಬಗ್ಗೆ ಅಭಿಮಾನ ಮೂಡಲು ಸಾಧ್ಯವಾಗುತ್ತದೆ. ಈ ನಾಡು ನಮಗೂ ಸೇರಿದ ನಾಡು ಎಂಬ ಭಾವನೆ ಆಗಬೇಕಾದ ಪ್ರಕ್ರಿಯೆ. ಕನ್ನಡಿಗರು ತಮ್ಮ ನಡುವೆ ಇರುವ ಜಾತಿ ಭೇದ, ಮತಭೇದ, ಕಾಯಕಭೇದ ಇವುಗಳನ್ನು ದೂರ ಮಾಡಿಕೊಳ್ಳಬೇಕು. ಇದರಿಂದಾಗಿ ಪರಸ್ಪರ ಇರುವ ಅಪನಂಬಿಕೆಗಳು ದೂರವಾಗಿ ಕರ್ಣಾಟಕದ ಏಕೀಕರಣಕ್ಕೆ ಸಹಕಾರಿಯಾಗುತ್ತದೆ. ಈಗ್ಗೆ ಕನ್ನಡಿಗರ ಹಾಗೂ ಕನ್ನಡದ ಏಕೀಕರಣವಾದರೆ ಕರ್ಣಾಟಕದ ಏಕೀಕರಣವಾಗುವುದು ಅಸಂಭವವೇನಲ್ಲ. ಕನ್ನಡ ನಾಡು ತಾತ್ಕಾಲಿಕವಾಗಿ ಒಡೆದು ಹೋಗಿರಬಹುದು. ಆದರೆ ಕನ್ನಡಿಗರು ಹಾಗೂ ಕನ್ನಡಭಾಷೆ ಒಂದಾದರೆ ಅದನ್ನು ಒಂದುಗೂಡಿಸುವುದು ಅಸಾಧ್ಯದ ಕೆಲಸವಲ್ಲ. ಇದಕ್ಕೆ ಕನ್ನಡಿಗರು ಸಾಂಸ್ಕೃತಿಕವಾಗಿ ಒಂದುಗೂಡಬೇಕು ಆಗ ಮಾತ್ರ ಭೌಗೋಳಿಕವಾಗಿ ಒಂದಾಗಲು ದಾರಿ ಸುಗಮವಾಗುತ್ತದೆ. "ಕನ್ನಡ ದೇಶವು ಕನ್ನಡದ ಶಕ್ತಿ ಪೀಠ. ಕನ್ನಡ ನಟರಾಜನ ನಾಟ್ಯರಂಗ, ಕನ್ನಡ ಕೃಷ್ಣನ ರಾಸಲೀಲೆಯ ವೃಂದಾವನ, ಕನ್ನಡ ಜಿನನ ಸಮವಸರಣ, ಭೂಮಿ. ಆದರೆ.... ಕನ್ನಡಿಗರ ಕನ್ನಡ ನಾಡು ಇನ್ನೂ ಪಂಚತ್ವದಲ್ಲಿಯೇ ಇದೆ. ಪಂಚಪ್ರಾಣ ಒಂದಾಗಿಲ್ಲ. ಪಂಚರೊಳಗಿನ ಪರಮೇಶ್ವರ ಆವಿರ್ಭವಿಸಿಲ್ಲ. ನಮ್ಮ ನಾಡು ಇನ್ನೂ ನಮ್ಮದಾಗಿಲ್ಲ. ಒತ್ತೆಯ ಮನೆಯಲ್ಲಿ ಒಕ್ಕಲಂತೆ ನಾವು ಎದುರುನೋಡುತ್ತಿದ್ದೇವೆ. ಕನ್ನಡದ ಕನ್ನಡಿ ಒಡೆದಿದೆ. ಒಂದಾಗುವ ಬಗೆ ಯಾವುದು? ಸುತ್ತಲಿನವರಿಂದ ಬೇರೆ ಒಂದು ದೇಶವಾಗಬೇಕು. ನಮ್ಮೊಳಗೆ ನಾವೇ ಒಂದಾಗಬೇಕು. ಎಲ್ಲರೊಡನೆ ಕೂಡಿ ಕಾರ್ಯ ಮಾಡಬೇಕು."[೧] ಇದು ಅಂದು ಆಗಬೇಕಾದ ಕೆಲಸವಾಗಿದ್ದು ಅದನ್ನು ನಮ್ಮ ನಾಡಿನ ಕವಿಗಳು ಈ ಕಾರ್ಯವನ್ನು ಬಲು ಹಿಂದೆಯೇ ಮಾಡಿದ್ದಾರೆ. ಉತ್ತರ ಕರ್ಣಾಟಕದ ಪಂಪ, ರನ್ನ, ಬಸವೇಶ್ವರ, ಕುಮಾರವ್ಯಾಸ, ಹರಿಹರ, ರಾಘವಾಂಕ, ಇವರುಗಳಾಗಲಿ ದಕ್ಷಿಣ ಕರ್ಣಾಟಕದ ಚಾವುಂಡರಾಯ, ಜನ್ನ, ಷಡಕ್ಷರಿ, ರುದ್ರಭಟ್ಟ, ಇವರುಗಳಾಗಲಿ ಬೇರೆ ಬೇರೆ ಪ್ರಾಂತ್ಯದವರು ಎಂಬ ಭಾವನೆಗಳನ್ನು ಕನ್ನಡಿಗರಲ್ಲಿ ಮೂಡಿಸದೆ ಭಾವನಾತ್ಮಕವಾಗಿಯೂ, ಮಾನಸಿಕವಾಗಿಯೂ ಅವರುಗಳು ಅಖಂಡ ಕರ್ನಾಟಕದ ಕನ್ನಡಿಗರೇ ಆಗಿಹೋಗಿದ್ದಾರೆ. ಕುವೆಂಪು ಅವರ 'ಅಖಂಡ ಕರ್ನಾಟಕ' ಎನ್ನುವ

---

೧. ವಸ್ತುಕೋಶ, ಪ್ರಕ. ಸಂಪುಟ ೩೪, ಸಂಚಿಕೆ ೩, ಪು. ೧೭೩.

ಕವನ ಇದನ್ನು ಬಲು ಶಕ್ತಿಶಾಲಿಯಾಗಿ ಬಿಂಬಿಸಿದೆ. ಈ ಕವನವು ವಿಶೇಷವಾದ ಸಂದರ್ಭದಲ್ಲಿ ರಚನೆಗೊಂಡ ಕವನ. ಕರ್ನಾಟಕ ಏಕೀಕರಣಕ್ಕೆ ಮೈಸೂರಿನ ಕೆಲವರು ವಿರೋಧ ವ್ಯಕ್ತಪಡಿಸುತ್ತಿದ್ದ ಸಂದರ್ಭದಲ್ಲಿ ಕುವೆಂಪು ಅವರು ಏಕೀಕರಣದ ಪರವಾಗಿ ಧ್ವನಿ ಎತ್ತುತ್ತಾರೆ. ಇದು ಕೆಲವು ವಿಚಾರ ಹೀನರ ಹಾಗೂ ಮಾತೃ ದ್ರೋಹಿಗಳ ಕೋಪಕ್ಕೆ ಗುರಿ ಮಾಡುತ್ತದೆ. ಅಭಿಮಾನ ವ್ಯಕ್ತಪಡಿಸಿದ ತಪ್ಪಿಗಾಗಿ ವಿವರಣೆ ನೀಡಬೇಕೆಂದೂ ಇಲ್ಲವಾದರೆ ಉಗ್ರವಾದ ಶಿಕ್ಷೆಗೆ ಗುರಿಯಾಗಬೇಕಾದೀತೂ ಎಂದೂ ಸರ್ಕಾರದಿಂದ ಬೆದರಿಕೆಯ, ಎಚ್ಚರಿಕೆಯ ನೋಟೀಸ್ ಕೂಡ ಬರುತ್ತದೆ. ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿದ್ದವರೊಬ್ಬರು ರಾಜಕೀಯ ಸಮಸ್ಯೆಯೊಂದರ ಬಗ್ಗೆ ಮಾತಾಡಿದ್ದಕ್ಕಾಗಿ ಉತ್ತರ ಕೊಡಬೇಕಾಗಿ ಬರುತ್ತದೆ. ಆ ಉತ್ತರವೇ 'ಅಖಂಡ ಕರ್ನಾಟಕ', ಅಖಂಡ ಕರ್ನಾಟಕ ಎನ್ನುವುದು ಭೌಗೋಳಿಕ ಪ್ರದೇಶವಲ್ಲ ರಾಜಕೀಯ ಲಾಭಕ್ಕಾಗಿ ಮಾಡುತ್ತಿರುವ ನಾಟಕವಲ್ಲ. ಅದೊಂದು ಕವಿಯ ಕಾಲ್ಪನಿಕ ಸಾಮ್ರಾಜ್ಯ ಅದನ್ನು ತಡೆಯಲು ಯಾರಿಂದಲೂ ಅಸಾಧ್ಯ ಏಕೆಂದರೆ ಅದು ಕೋಟಿ ಕೋಟಿ ಮನಸುಗಳ ಆಸೆಯಾಗಿದೆ.

**ಹಿರಿದೊಂದು ಹಿರಿಯ ಕನಸು**
**ಇಂದು ಕೋಟಿ ಕೋಟಿ ಮನಸು**
**ಕೂಡಿ ಮೂಡಿ ನಿನ್ನ ನನಸು**
**ತಡೆವುದೇನೋ ನಿನ್ನ ಕಿನಿಸು**
**ಒಣರುವಲ್ಪ ಜಲ್ಪನೆ**
**ಭುವನ ವರಥ್ಯೆ ಕೇಳ್ ಅವಂಧ್ಯೆ**
**ಕವಿಯ ವಿಂದಯ ಕಲ್ಪನೆ....**[೧] ಹರಿದು ಹಂಚಿ ಹೋಗಿದ್ದ ಕನ್ನಡ ನಾಡು ಒಂದಾಗಬೇಕೆಂದು ಆಸೆಪಟ್ಟು ಆ ದಿಶೆಯಲ್ಲಿ ಕಾವ್ಯ ಭೂಮಿಕೆಯಲ್ಲಿ ಪರಿಶ್ರಮಿಸಿದ್ದವರು ಕುವೆಂಪು ಅವರು. ಅಖಂಡ ಕರ್ನಾಟಕದ ಚಿತ್ರವೊಂದನ್ನು ಕೊಡುತ್ತ ಅದು ರಾಜಕೀಯವಾದುದಲ್ಲವೆಂದೂ ಇಲ್ಲ ನೆಲೆಗೊಳ್ಳುವ ಸಾಮ್ರಾಜ್ಯಕ್ಕೆ ಅಂತ್ಯ ಎಂಬುದೇ ಇಲ್ಲದ ಶಾಶ್ವತವಾದ ಸಾಮ್ರಾಜ್ಯವೆಂದು ಹೇಳುತ್ತಾರೆ. ಈ ಸಾಮ್ರಾಜ್ಯವನ್ನು ಆಳುತ್ತಿರುವವರೂ ಇಂದು ಒಂದು ನಾಳೆ ಹೋಗುವ ತಾತ್ಕಾಲಿಕವಾದ ಸಚಿವರಲ್ಲ ಈ ಅಖಂಡ ಸಾಮ್ರಾಜ್ಯದಲ್ಲಿ

**ನೃಪತುಂಗನ ಚಕ್ರವರ್ತಿ**
**ಪಂಪನಲ್ಲಿ ಮುಖ್ಯಮಂತ್ರಿ**
**ರನ್ನ ಜನ್ನ ನಾಗವರ್ಮ**

---

೧. ಕುವೆಂಪು, ಪ್ರ.ಕ. ಸಂಪುಟ ೩೧, ಸಂಚಿಕೆ ೧, ಪು. ೧.

ರಾಘವಾಂಕ ಹರಿಹರ

ಬಸವೇಶ್ವರ ನಾರಣಪ್ಪ[1]

ಸರ್ವಜ್ಞ ಷಡಕ್ಷರ ಇವರುಗಳೇ ಇಲ್ಲಿ ಆಳ್ವಿಕೆಯ ಜವಾಬ್ದಾರಿಯನ್ನು ವಹಿಸಿಕೊಂಡಿರುವರು. ಇಂತಹ ಸಾಂಸ್ಕೃತಿಕ ಹಿನ್ನೆಲೆಯ ಸಚಿವರುಗಳಿಂದ ಆಳಲ್ಪಡುತ್ತಿರುವ ಈ ನಾಡಿನಲ್ಲಿ ರಾಜಕೀಯವೆಂಬುದು ಹೊಟ್ಟೆ-ಬಟ್ಟೆಗಾಗಿ ಮಾಡುತ್ತಿರುವ ವ್ಯವಹಾರವಲ್ಲ. ಪಕ್ಷಕ್ಕಾಗಿ ಜಾತಿಗಾಗಿ ಅಲ್ಲ. ಹಮ್ಮುಬಿಮ್ಮುಗಳಿಗಾಗಿ ಅಲ್ಲ. ಹಾಗಾಗಿ ಇಂತಹ ಮಹನೀಯರುಗಳಿಂದ ಆಳಲ್ಪಡುತ್ತಿರುವ ಈ ಕನಸಿನ ಈ ಕರ್ನಾಟಕದ ರಚನೆಯನ್ನು ಯಾರಿಂದಲೂ ತಡೆಯಲು ಸಾಧ್ಯವಿಲ್ಲ. ಏಕೆಂದರೆ ಇದು ಬರೀ ಮಣ್ಣಲ್ಲ. ಅದು ಮಂತ್ರದಂತೆ, ಶಕ್ತಿಯಂತೆ, ತಾಯಿಯಂತೆ, ದೇವಿಯಂತೆ, ಬೆಂಕಿಯಂತೆ, ಸಿಡಿಲಿನಂತೆ, ವಿರೋಧಿಗಳ ಪಾಲಿಗೆ ಸ್ಫೋಟಕದಂತೆ ಅದನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಸಾಂಸ್ಕೃತಿಕವಾಗಿ ಕರ್ನಾಟಕವನ್ನು ನಮ್ಮ ಕವಿಗಳು ಕಂಡ ಪರಿ ಇಂತಹದು. ಹೀಗೆ ಸಾಂಸ್ಕೃತಿಕವಾಗಿಯೂ ಕನ್ನಡ ಏಕೀಕರಣವಾಗಬೇಕಾದ ಅನಿವಾರ್ಯತೆಯನ್ನು ಹಾಗೂ ಏಕೀಕರಣಗೊಂಡ ನಂತರಹ ಆ ಭಾವನೆಗಳನ್ನು ಉಳಿಸಿ ಬೆಳೆಸಿಕೊಳ್ಳಬೇಕೆಂಬ ಅಭಿಪ್ರಾಯಗಳನ್ನು ನಮ್ಮ ಕವಿಗಳು ವ್ಯಕ್ತಪಡಿಸಿ ಅದನ್ನು ಸಾಧಿಸುವ ಕಡೆ ಪ್ರಯತ್ನಿಸಿದ್ದಾರೆ ಹಾಗೂ ಬಹುತೇಕ ಸಫಲತೆಯನ್ನು ಕಂಡಿದ್ದಾರೆ.

**ನಾಡಿನ ಏಳಿಗೆ ಮತ್ತು ಆರ್ಥಿಕ ಸಬಲೀಕರಣ**

ಸಾಂಸ್ಕೃತಿಕವಾಗಿ ಹಾಗೂ ಸಾಹಿತ್ಯಕವಾಗಿ ಅಭಿವೃದ್ಧಿ ಸಾಧಿಸಿದ ಕನ್ನಡ ನಾಡು ಇಂದಿನ ಆಧುನಿಕ ಯುಗದಲ್ಲಿ ಆರ್ಥಿಕವಾಗಿ ಮುನ್ನಡೆ ಸಾಧಿಸಬೇಕು. ಎಂಬುದನ್ನು ಅರಿತಿರುವ ಪ್ರಬುದ್ಧ ಕರ್ಣಾಟಕ ಇದರ ಕಡೆ ಗಮನಹರಿಸಿದೆ. ಕರ್ನಾಟಕ ಆರ್ಥಿಕವಾಗಿ ಮುನ್ನಡೆ ಸಾಧಿಸಬೇಕಾದರೆ ಇದಕ್ಕಾಗಿ ನಮ್ಮ ನಾಡಿನಲ್ಲಿ ಎರಡು ಬಗೆಯ ಕಾರ್ಯಗಳು ನಡೆಯಬೇಕಾಗಿದೆ. ಮೊದಲನೆಯದಾಗಿ ಕನ್ನಡ ನಾಡಿನಲ್ಲಿ ಸಮೃದ್ಧವಾಗಿರುವ ಸಂಪನ್ಮೂಲಗಳನ್ನು ಸದುಪಯೋಗವಾಗಬೇಕು, ಎರಡನೆಯದಾಗಿ ಕನ್ನಡ ನಾಡಿನಲ್ಲಿ ಆರ್ಥಿಕವಾಗಿ ಬಲಾಢ್ಯವಾಗಿರುವವರು ತಮ್ಮ ಗಳಿಕೆಯ ಅಲ್ಪಭಾಗವನ್ನಾದರೂ ಕನ್ನಡ ನಾಡಿನ ಏಳಿಗೆಗಾಗಿ ವಿನಿಯೋಗಿಸಬೇಕು. ಆರ್ಥಿಕ-ವಾಗಿ ಸಬಲವಾಗಿರುವ ಕನ್ನಡನಾಡನ್ನು ಕಟ್ಟುವ ಸಂದರ್ಭದಲ್ಲಿ ಇಂತಹ ಕಾರ್ಯಗಳು ಅಗತ್ಯವಾಗುತ್ತದೆ. ಇದನ್ನು ಸಾಧಿಸಿಕೊಳ್ಳುವ ಬಗೆ ಹೇಗೆ ಎಂಬಂತಹ ಚಿಂತನೆಗಳು ಪ್ರಬುದ್ಧ ಕರ್ಣಾಟಕದ ಹಲವಾರು ಬರಹಗಳಲ್ಲಿ ವ್ಯಕ್ತವಾಗಿದೆ. ಬಿ.ಎಂ.ಶ್ರೀ ಅವರು ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ ಎಂಬ ವಿಚಾರವನ್ನು ತಿಳಿಸುವ

---

೧. ಕುವೆಂಪು, ಪ್ರ.ಕ. ಸಂಪುಟ ೩೧, ಸಂಚಿಕೆ ೧, ಪು. ೨.

ಸಂದರ್ಭದಲ್ಲಿ "ಕನ್ನಡ ಭಾಷೆಗೆ ಯಾವುದೇ ರೀತಿಯಲ್ಲಿ ಅಪಾಯ ತಟ್ಟದ ಹಾಗೆ ಕನ್ನಡ ನಾಡಿನಲ್ಲಿ ಅದಕ್ಕೆ ಪ್ರಧಾನ ಸ್ಥಾನವನ್ನು ಕೊಟ್ಟು ಭಗವಂತನು ನಮಗೆ ಕೊಟ್ಟಿರತಕ್ಕ ಬಲವನ್ನು ಧನಬಲವನ್ನು ಮತ್ತು ಬುದ್ಧಿಬಲವನ್ನು ಎರಡನ್ನೂ ಅದಕ್ಕಾಗಿ ವಿನಿಯೋಗಿಸುವುದು ಕನ್ನಡಿಗರ ಕರ್ತವ್ಯ ಎಂದು ನಾನು ಭಾವಿಸಿದ್ದೇವೆ."[೧] ಎಂದು ಅಭಿಪ್ರಾಯಪಡುತ್ತಾರೆ. ಕನ್ನಡನಾಡಿನ ಏಳಿಗೆಗೆ ಆಗಬೇಕಾಗಿರುವುದೂ ಈ ಎರಡೂ ಕಾರ್ಯಗಳೇ. ಒಂದು ನಾಡಿನ ಏಳಿಗೆಗೆ ಆರ್ಥಿಕ ಅಭಿವೃದ್ಧಿ ಅತ್ಯಗತ್ಯ. ರಾಜಕೀಯವಾಗಿ, ಸಾಮಾಜಿಕವಾಗಿ ಎಷ್ಟು ಸದೃಢತೆಯನ್ನು ಸಂಪಾದಿಸುತ್ತೇವೆಯೋ ಆರ್ಥಿಕವಾಗಿಯೂ ನಾಡು ಅಷ್ಟೇ ಸದೃಢವಾಗಬೇಕು. ನಾಡಿನ ಏಕೀಕರಣಕ್ಕಾಗಿ ನುಡಿಯ ಏಳಿಗೆಗಾಗಿ ಚಳುವಳಿಗಳು ಆರಂಭಗೊಂಡಿರುವಂತೆಯೇ ಕನ್ನಡ ನಾಡಿನ ಸಿರಿಯ ಏಳಿಗೆಗಾಗಿ ಹೋರಾಟಗಳು ನಡೆಯಬೇಕು. ಆಗ ಮಾತ್ರ ಕರ್ಣಾಟಕ ಸರ್ವತೋಮುಖವಾಗಿ ಬೆಳೆಯಲು ಸಾಧ್ಯವಾಗುತ್ತದೆ. "ಕನ್ನಡನಾಡಿನ ಸಿರಿಯ ಏಳ್ಗೆಗಾಗಿ ಆರ್ಥಿಕ ಚಳುವಳಿ ಇನ್ನೂ ಸಾಕಷ್ಟು ನಡೆದಿಲ್ಲ. ಇನ್ನೂ ಸ್ಪಷ್ಟವಾಗಿ ರೂಪುಗೊಂಡಿಲ್ಲ. ಆದರೆ ಅದೂ ಇಂದು ನಾಳೆಯೋ ರೂಪುಗೊಳ್ಳಲೇಬೇಕಾಗಿದೆ"[೨] ಹಾಗೆ ರೂಪುಗೊಳ್ಳುವುದರಿಂದ ಕನ್ನಡಿಗರು ಹಾಗೂ ಕನ್ನಡ ನಾಡು ಇವುಗಳೆರಡರ ಅಭಿವೃದ್ಧಿ ಸಾಧ್ಯವಾಗುತ್ತದೆ. ಕನ್ನಡನಾಡಿನಲ್ಲಿ ಕನ್ನಡಿಗರೇ ಆರ್ಥಿಕ ವಹಿವಾಟನ್ನು ಮಾಡಲು ವ್ಯಾಪಾರ ಸಂಸ್ಥೆಗಳನ್ನು ಹುಟ್ಟುಹಾಕಿ, ಕಾರ್ಖಾನೆಗಳನ್ನು ಪ್ರಾರಂಭಿಸಬೇಕು. ಇದರಿಂದಾಗಿ ನಮ್ಮ ನಾಡಿನವರು ದುಡಿದು ಬೇರೆಯವರನ್ನು ಶ್ರೀಮಂತರನ್ನಾಗಿಸುವುದನ್ನೂ ತಪ್ಪಿಸಿದಂತಾಗುತ್ತದೆ. ನಮ್ಮ ನಾಡಿನ ಸಂಪತ್ತು ನಮ್ಮ ನಾಡಿನಲ್ಲೇ ಉಳಿಯುತ್ತದೆ. ಈ ಬಗ್ಗೆ ಕನ್ನಡಿಗರಾದವರು ಚಿಂತಿಸಬೇಕು. "ಕನ್ನಡನಾಡಿನಲ್ಲಿ ಕನ್ನಡಿಗರ ಬ್ಯಾಂಕುಗಳೂ ಕನ್ನಡಿಗರ ಜೀವವಿಮಾ ಕಂಪನಿಗಳೂ ಕನ್ನಡಿಗರ ಕಾರ್ಖಾನೆಗಳು, ಕನ್ನಡಿಗರ ಕೈಗಾರಿಕೆಗಳು ಮತ್ತು ಕನ್ನಡಿಗರ ವ್ಯಾಪಾರ ಸಂಸ್ಥೆಗಳು ಹುಟ್ಟಿ ಬೆಳೆದು ಕರ್ಣಾಟಕದ ಸಂಪದಭ್ಯುಯದ ಮಟ್ಟವನ್ನು ಮೇಲ್ಗೊಳಿಸಬೇಕಾದರೆ ನಮ್ಮವರು ಕಣ್ಣುಮುಚ್ಚಿಕೊಂಡು ಹೊರನಾಡಿಗರ ಕೈಬಾಯಿ ತುಂಬುವ ತಮ್ಮ ದಾನ ಶೌರ್ಯದ ವಿಚಾರದಲ್ಲಿ ಇನ್ನೂ ಹೆಚ್ಚಿನ ವಿವೇಚನೆಯಿಂದ ವರ್ತಿಸಬೇಕಾಗಿರುವ ಕಾಲ ಈಗಲೀಗ ಬಂದಿದೆ"[೩].

ನಮ್ಮ ನಾಡಿನ ಆರ್ಥಿಕ ವ್ಯವಸ್ಥೆಯನ್ನು ಹೇಗೆ ಸುಧಾರಿಸಿಕೊಳ್ಳಬೇಕು ಎಂಬುದನ್ನು ಕುರಿತಂತೆ 'ಮೈಸೂರಿಗೆ ಒಂದು ಆರ್ಥಿಕ' ಯೋಜನೆ' ಎಂಬ ಬರಹ ಒಂದು ರಾಷ್ಟ್ರದ ಸಂಪತ್ತನ್ನು ಅಭಿವೃದ್ಧಿಪಡಿಸಿ ಅಲ್ಲಿನ ಜನರ ನಾಗರಿಕ ಜೀವನಕ್ಕೆ ಬೇಕಾದ ಆಹಾರ ಬಟ್ಟೆ ಮತ್ತು ಭೋಗ್ಯ ವಸ್ತುಗಳನ್ನು ಸಾಕಾದಷ್ಟು ಪ್ರಮಾಣದಲ್ಲಿ

---

೧. ಶ್ರೀ ಸಾಹಿತ್ಯ, ೧೯೮೩, ಪು. ೨೯೧.
೨. ಕುವೆಂಪು, ಪ್ರಕ. ಸಂಪುಟ ೨೦, ಸಂಚಿಕೆ ೩, ಪು. ೬.
೩. ಕುವೆಂಪು, ಪ್ರಕ. ಸಂಪುಟ ೨೦, ಸಂಚಿಕೆ ೩, ಪು. ೭.

ಜನರಿಗೆ ಹೇಗೆ ಒದಗಿಸಬೇಕು ಮತ್ತು ಅವರ ಜೀವನಮಟ್ಟವನ್ನು ಹೇಗೆ ಏರಿಸಬೇಕು ಎಂಬುದನ್ನು ತಿಳಿಸಿಕೊಡುವ ಪ್ರಯತ್ನಮಾಡಿದೆ. ಒಂದು ರಾಷ್ಟ್ರದಲ್ಲಿ ಆರ್ಥಿಕ ವ್ಯವಸ್ಥೆಯನ್ನು ಉತ್ತಮಪಡಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬ ಚಿಂತನೆ ಪ್ರಾಚೀನ ಕಾಲದಿಂದಲೂ ಬೇರೆ ಬೇರೆ ರೀತಿಯಲ್ಲಿ ಪ್ರಕಟಗೊಂಡಿವೆ. ಹಾಗೆಯೇ ಆರ್ಥಿಕ ಯೋಜನೆಯು ಕೂಡ ನಮ್ಮ ಸಂಸ್ಥಾನಕ್ಕೆ ಹೊಸದೇನೂ ಅಲ್ಲ ಆದರೂ ನಮ್ಮ ನಾಡು ಸಾಧಿಸಿರುವ ಪ್ರಗತಿ ಸಾಲದು. ಆದರೆ ಆದಷ್ಟು ಕಡಿಮೆ ಅವಧಿಯಲ್ಲಿ ನಮ್ಮ ಸಂಸ್ಥಾನದ ಸಂಪತ್ತನ್ನು ಅಭಿವೃದ್ಧಿಪಡಿಸಬೇಕಾದ ಅಗತ್ಯ ಈಗ ಹಿಂದೆಂದಿಗಿಂತಲೂ ಹೆಚ್ಚಾಗಿದೆ ಎಂಬ ಆಶಯ ವ್ಯಕ್ತಪಡಿಸುವುದರೊಂದಿಗೆ ನಾಡಿನ ಆರ್ಥಿಕ ಪರಿಸ್ಥಿತಿಯನ್ನು ಹೇಗೆ ಸುಧಾರಿಸಬಹುದು. ಅದಕ್ಕೆ ಯಾವ ಬಗೆಯ ಯೋಜನೆಗಳನ್ನು ಹಾಕಿಕೊಳ್ಳಬಹುದು ಎಂಬ ಸಲಹೆಯನ್ನು ನೀಡಿದೆ. ನಮ್ಮ ನಾಡಿನ ಆಹಾರ ಧಾನಯದ ಉತ್ಪತ್ತಿಯನ್ನು ಹೆಚ್ಚಿಸುವ ಬಗ್ಗೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಡುವ ಬಗ್ಗೆ? ದೇಶದ ವ್ಯವಸಾಯದ ಅಭಿವೃದ್ಧಿಗೂ ಕೈಗಾರಿಕೆಯ ಬೆಳವಣಿಗೆಗೂ ಅವಶ್ಯಕವಾದ ಅರಣ್ಯ ಸಂಪತ್ತನ್ನು ಬೆಳೆಸುವ ಬಗ್ಗೆ ಸಲಹೆಗಳನ್ನು ನೀಡಿದೆ. ನಮ್ಮ ನಾಡಿನಲ್ಲಿ ಹೊಸ ಕೈಗಾರಿಕೆಗಳು ಪ್ರಾರಂಭವಾಗಬೇಕು. ಭೋಗ ವಸ್ತುಗಳ ಕೈಗಾರಿಕೆ ಹಾಗೂ ಮೂಲಭೂತ ಅವಶ್ಯಕತೆಯನ್ನು ಪೂರೈಸುವ ವಸ್ತುಗಳ ಕೈಗಾರಿಕೆ ಇವುಗಳ ಕಡೆ ಗಮನಹರಿಸಬೇಕು. ಅಷ್ಟೆ ಅಲ್ಲದೆ ಗ್ರಾಮ ಕೈಗಾರಿಕೆಗಳನ್ನೂ ಮರೆಯದೆ ಅವುಗಳಿಗೆ ಪ್ರಾಶಸ್ತ್ಯ ನೀಡಬೇಕು. ಯಾವುದೇ ನಾಡಿನ ಆರ್ಥಿಕಾಭಿವೃದ್ಧಿಯಲ್ಲೂ ಸಂಪರ್ಕ ಸಾಧನಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. "ಮೈಸೂರಿನಲ್ಲಿ ರಸ್ತೆಗಳು, ರೈಲ್ವೆಗಳು, ಪ್ರಧಾನ ಪ್ರಯಾನ ಸೌಕರ್ಯಗಳು ಹೊಸದಾಗಿ ಮೂರು ರೈಲ್ವೆ ಮಾರ್ಗಗಳನ್ನು ನಿರ್ಮಿಸಬೇಕೆಂದು ನಾವು ಸೂಚಿಸುತ್ತೇವೆ. ೧. ತಾಳಗುಪ್ಪ–ಭಟ್ಕಳ ೨. ಕಡೂರು–ಚಿಕ್ಕಮಗಳೂರು ೩. ಚಾಮರಾಜನಗರ–ಸತ್ಯಮಂಗಲದ ರೈಲು ಮಾರ್ಗಗಳು ನಿರ್ಮಾಣವಾದರೆ ಕನ್ನಡ ನಾಡಿಗೆ ಹೆಚ್ಚಿನ ಅನುಕೂಲ ಉಂಟಾಗುತ್ತದೆ[೧] ಎಂಬ ಅಭಿಪ್ರಾಯ ಸುಮಾರು ಐವತ್ತು ವರ್ಷಗಳ ಹಿಂದೆಯೇ ಪ್ರಕಟಗೊಂಡಿದ್ದರೂ ಆ ಆಶಯಗಳಲ್ಲಿ ಬಹುತೇಕ ಇನ್ನೂ ಈಡೇರದೇ ಇರುವುದನ್ನು ಗಮನಿಸಬಹುದು. ಇಷ್ಟೇ ಅಲ್ಲದೆ ಬೆಂಗಳೂರು–ಮೈಸೂರು ರೈಲುಗಳನ್ನು ವಿದ್ಯುತ್ತಿನ ಮುಖಾಂತರ ಓಡಿಸುವಂತಾಗಬೇಕು. ರಸ್ತೆ ನಿರ್ಮಾಣದಲ್ಲಿ ಹಳ್ಳಿಯ ರಸ್ತೆಗಳಿಗೆ ಆದ್ಯತೆ ನೀಡಬೇಕು. ದೊಡ್ಡ ರಸ್ತೆಗಳನ್ನು ಸಿಮೆಂಟ್ ರಸ್ತೆಗಳನ್ನಾಗಿ ಮಾಡಬೇಕು. ಭಟ್ಕಳ ಬಂದರನ್ನು ಕೈಗೆತ್ತಿಕೊಂಡು ಅದನ್ನು ಅಭಿವೃದ್ಧಿಪಡಿಸಬೇಕು. ಹೀಗೆ ಹತ್ತು ಸಲಹೆಗಳನ್ನು ನೀಡಿ ಇವುಗಳ ಮುಖಾಂತರ

---

೧. ಡಾ. ಕೃಷ್ಣ ಅಯ್ಯಂಗಾರ್, ಪ್ರ.ಕ. ಸಂಪುಟ ೨೬, ಸಂಚಿಕೆ ೧, ಪು. ೧೧೩.

ನಮ್ಮ ಕನ್ನಡನಾಡು ಹೇಗೆ ಅಭಿವೃದ್ಧಿ ಪಥದತ್ತ ನಡೆಯಬಹುದು ಎಂಬ ಸಲಹೆ ನೀಡಿದೆ. ನಾಡಿನ ಬೆಳವಣಿಗೆಯಲ್ಲಿ ಇಂತಹ ಚಿಂತನೆಗಳು ಅಗತ್ಯವಾಗಿದ್ದು ಪ್ರಬುದ್ಧ ಕರ್ಣಾಟಕವು ಆ ದಿಕ್ಕಿನ ಕಡೆ ಶ್ರಮಿಸಿದೆ.

ಆರ್ಥಿಕ ವಿಚಾರಣೆ (೨೬-೧) ಎಂಬ ಲೇಖನ ಯಾವುದೇ ಗ್ರಾಮದ ಅಭಿವೃದ್ಧಿ ಕಾರ್ಯವನ್ನು ಕೈಗೆತ್ತಿಕೊಳ್ಳುವ ಮೊದಲು ಪರೀಕ್ಷಕರು ಆಯಾ ಸ್ಥಳಗಳಿಗೆ ಹೋಗಿ ಅಲ್ಲಿನ ವಾಸ್ತವಿಕ ಪರಿಸ್ಥಿತಿಯನ್ನು ಅರಿಯಬೇಕು. ಅಲ್ಲಿನ ಸ್ಥಿತಿಯನ್ನು ಕಣ್ಣಾರೆ ಕಂಡು ವಿದ್ಯಾಮಾನಗಳನ್ನು ವಿಚಾರಿಸಿ ವಿಷಯ ಸಂಗ್ರಹಿಸಬೇಕು. ಯಾವುದೇ ಕಲ್ಪಿತವಾದ ವಿಚಾರಗಳು ಇರಬಾರದು. ಆಗ ಮಾತ್ರ ಆ ಸ್ಥಳಗಳ ಬಗ್ಗೆ ಸಮಂಜಸವಾದ ಆರ್ಥಿಕ ನಿಲುವನ್ನು ತೆಗೆದುಕೊಳ್ಳಲು ಸಹಾಯವಾಗುತ್ತದೆ ಎಂಬ ಅಂಶವನ್ನು ವಿವರಿಸಿದೆ. ಕರ್ಣಾಟಕದ ಏಕೀಕರಣದ ಸಂದರ್ಭದಲ್ಲಿ ಭಾಷಾವಾರು ಪ್ರಾಂತ ರಚನೆಯ ಸಮಿತಿಯವರು ಕರ್ಣಾಟಕದ ನಿರ್ಮಾಣದಿಂದ ಆರ್ಥಿಕ ಹೊರೆ ರಾಷ್ಟ್ರದ ಮೇಲೆ ಉಂಟಾಗುತ್ತದೆಯೇ ಎಂಬಂತ ಅನುಮಾನವನ್ನು ವ್ಯಕ್ತಪಡಿಸಿದಾಗ ಅಖಿಲ ಕರ್ಣಾಟಕದ ಏಕೀಕರಣ ಸಂಘದವರು ನೀಡಿರುವ ಉತ್ತರದಲ್ಲಿ ಕರ್ಣಾಟಕದ ಸದ್ಯದ ಆರ್ಥಿಕ ಪರಿಸ್ಥಿತಿ ಅದನ್ನು ಅಭಿವೃದ್ಧಿಪಡಿಸುವ ಮಾರ್ಗಗಳು ಇವೇ ಮೊದಲಾದ ವಿಚಾರಗಳು ಪ್ರಕಟಗೊಂಡಿವೆ.

ಕರ್ಣಾಟಕದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸುವ ಸಂದರ್ಭದಲ್ಲಿ ಹೊಸ ಹೊಸ ಕಾರ್ಖಾನೆಗಳು ಪ್ರಾರಂಭವಾಗಬೇಕು ಎಂಬ ಆಶಯವನ್ನು ಪ್ರಕಟಿಸಿರುವುದರ ಜೊತೆಯಲ್ಲಿ ಖನಿಜ ಸಂಪತ್ತನ್ನು ಪಡೆದಿರುವ ರಾಜ್ಯಗಳಲ್ಲಿ ಎರಡನೇ ಪ್ರಮುಖ ಪ್ರಾಂತವಾಗಿರುವ ಕನ್ನಡನಾಡಿನಲ್ಲಿ ಅವುಗಳ ಸದ್ಬಳಕೆಯನ್ನು ಮಾಡಿಕೊಳ್ಳುವ ಬಗ್ಗೆ ಹಲವಾರು ಲೇಖನಗಳನ್ನು ಪ್ರಕಟಿಸಿದೆ. ಇದಕ್ಕೆ ಸಂಬಂಧಿಸಿದಂತೆ ಕನ್ನಡ ನಾಡಿನ ಹೆಮ್ಮೆಯ ಖನಿಜವಾದ 'ಚಿನ್ನ' ಹಾಗೂ ಅದರ ಗಣಿಗಳು ಕರ್ಣಾಟಕದ ಯಾವ ಯಾವ ಭಾಗದಲ್ಲಿ ಇದೆ ಎಂಬುದನ್ನು ವಿವರಿಸುವ 'ಕನ್ನಡ ನಾಡಿನ ಚಿನ್ನದ ಗಣಿಗಳು' ಎಂಬ ಲೇಖನವನ್ನು ಗಮನಿಸಬಹುದು. ಈ ಲೇಖನವು 'ಚಿನ್ನ' ಕೋಲಾರದಲ್ಲಿ ಮಾತ್ರವಲ್ಲದೆ ಬೇರೆ ಬೇರೆ ಯಾವ ಜಾಗಗಳಲ್ಲಿ ದೊರೆಯುತ್ತವೆ. ಅಲ್ಲಿ ಈಗ ಗಣಿ ಕೈಗಾರಿಕೆಗಳು ನಡೆಯುತ್ತಿವೆಯೇ? ನಡೆಯದೇ ಇದ್ದರೆ ಅದಕ್ಕೆ ಕಾರಣಗಳೇನು ಎಂಬಂತಹ ವಿಚಾರಗಳ ಕಡೆ ಗಮನಸೆಳೆಯುತ್ತದೆ. ಕೋಲಾರ ಮಾತ್ರವಲ್ಲದೆ ತುಂಗಭದ್ರೆ ಹರಿದು ತೋಯಿಸುವ ಪ್ರದೇಶಗಳ ಬಹುತೇಕ ಕಡೆಗಳಲ್ಲಿ ಚಿನ್ನದ ಸಣ್ಣ ರೇಖುಗಳು ದೊರೆಯುವುದರ ಬಗ್ಗೆ ವಿವರಣೆ ಇದೆ. ಹೊನ್ನಾಳಿ, ಹೊನ್ನೇಹಟ್ಟಿ, ಹೊನ್ನೇ ಮರಡಿ, ಹೊನ್ನೇಬಾಗಿ ಹೊನ್ನೂರು, ಹೊನ್ನಾವರ ಇವೇ ಮೊದಲಾದ ಸ್ಥಳಗಳ ಹೆಸರುಗಳನ್ನು ಗಮನಿಸಿ ಚಿನ್ನದ ಅದಿರು ದೊರೆಯುವ

ಸ್ಥಳಗಳಿಗೂ ಈ ಹೆಸರುಗಳಿಗೂ ಏನಾದರೂ ಸಂಬಂಧವಿರಬಹುದೆಂದು ಊಹಿಸುತ್ತಾರೆ. ಇಂತಹ ಸುಸಂಬದ್ಧ ಊಹೆಗಳೇ ಮುಂದಿನ ಸಂಶೋಧನೆಗೆ ಮಾರ್ಗದರ್ಶಿಯಾಗಬಲ್ಲದು ಎಂಬುದನ್ನು ಅರಿತಿರುವ ಪ್ರಬುದ್ಧ ಕರ್ಣಾಟಕ ಆ ದಿಕ್ಕಿನೆಡೆಗೆ ಯೋಚಿಸಲು ಅನುಕೂಲ ಮಾಡಿಕೊಟ್ಟಿದೆ.

ಹೀಗೆ ಪ್ರಬುದ್ಧ ಕರ್ಣಾಟಕವು ಕನ್ನಡ ನಾಡಿನ ಏಳಿಗೆಯ ಕಡೆ ಹರಿಸಿದ ಗಮನದ ಮಹತ್ವವನ್ನು ಕುರಿತು ದೇ.ಜವರೇಗೌಡರು "ಹತ್ತಾರು ವಾಗ್ಮಿಗಳು ನೂರಾರು ವೇದಿಕೆಗಳಿಂದ ಮಾಡಬಹುದಾದ ಕೆಲಸವನ್ನು ಅದೊಂದೇ ಅತ್ಯಂತ ಪರಿಣಾಮಕಾರಿಯಾಗಿ ಮಾಡಿತು. ಅದರ ಉಗಮದೊಡನೆ ಕನ್ನಡನಾಡಿನ ಜಾಗೃತಿಯೂ ಪ್ರಾರಂಭವಾಯಿತೆನ್ನಬಹುದು"[೧] ಎಂದಿರುವುದು ಕನ್ನಡನಾಡನ್ನು ಕಟ್ಟುವ ಸಂದರ್ಭದಲ್ಲಿ ಹಾಗೂ ಅದನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವ ಸಂದರ್ಭದಲ್ಲಿ ವಹಿಸಿದ ಮಹತ್ವದ ಪಾತ್ರವನ್ನು ಅನಾವರಣಗೊಳಿಸಿದೆ.

---

೧. ನಾಯಕ.ಹಾ.ಮಾ., ತಿಪ್ಪೇರುದ್ರಸ್ವಾಮಿ.ಹೆಚ್(ಸಂ), ಎ.ಆರ್.ಕೃ. ಜೀವನ-ಸಾಧನೆ, ೧೯೭೧, ಪು. ೩೩೭-೩೮.

## ಅಧ್ಯಾಯ – ೪

# ಕನ್ನಡ ನುಡಿಯ ಅಭಿವೃದ್ಧಿ

### ಕನ್ನಡ ಭಾಷೆ ಹಾಗೂ ಸಾಹಿತ್ಯದ ಅಭಿವೃದ್ಧಿ

ದ್ರಾವಿಡ ಭಾಷೆಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಕನ್ನಡ ಭಾಷೆ ಸದ್ಯದ ಪರಿಸ್ಥಿತಿಯಲ್ಲಿ ತಮಿಳು ಭಾಷೆಯನ್ನು ಹೊರತುಪಡಿಸಿದರೆ ಎರಡನೆಯ ಪ್ರಾಚೀನ ಭಾಷೆ. ಕನ್ನಡ ಎಂಬ ಶಬ್ದ ಆ ಭಾಷೆಯನ್ನು ಆಡುವ ಜನರನ್ನು ಹಾಗೂ ಅವರು ಆಡುವ ಭಾಷೆಯನ್ನು ಹೆಸರನ್ನು ಸೂಚಿಸುತ್ತದೆ. "ಕನ್ನಡ ಭಾಷೆಯನ್ನು ಕ್ರಿಸ್ತಶಕ ಪೂರ್ವದಲ್ಲಿ ಮಧ್ಯಭಾರತದ ನರ್ಮದಾ ತೀರದಲ್ಲಿ ಒಂದು ಗಿರಿ ಜನಾಂಗವು ಬಳಸುತ್ತಿತ್ತೆಂದೂ ಆ ಜನಾಂಗ ವಿಂಧ್ಯ ಪರ್ವತ ತಪ್ಪಲು ಪ್ರದೇಶದಲ್ಲಿ ನೆಲೆಯೂರಿತ್ತೆಂದೂ ತಿಳಿದುಬರುತ್ತದೆ".[೧] ಮಹಾಭಾರತದ ಭೀಷ್ಮಪರ್ವ ಮತ್ತು ಸಭಾಪರ್ವಗಳಲ್ಲಿ, ಸಂಸ್ಕೃತದ ಮೃಚ್ಛಕಟಿಕ ನಾಟಕ ಪದ್ಮಪುರಾಣ, ಮಾರ್ಕಂಡೇಯ ಪುರಾಣ, ಇವೇ ಮೊದಲಾದ ಗ್ರಂಥಗಳಲ್ಲಿ ಕನ್ನಡ ಹಾಗೂ ಕರ್ಣಾಟಕದ ಉಲ್ಲೇಖಗಳಿವೆ. ಆನಂತರದ ದಿನಗಳಲ್ಲಿ ಜನಸಾಮಾನ್ಯರಿಂದ, ರಾಜಮಹಾರಾಜರು–ಗಳಿಂದ, ಕವಿಗಳಿಂದ ಮಾನ್ಯತೆ ಪಡೆದ ಕನ್ನಡಕ್ಕೆ ಅದೇ ಪ್ರಾಶಸ್ತ್ಯವನ್ನು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕಳೆದ ಶತಮಾನದ ಆರಂಭದಲ್ಲಿಯಂತೂ ಕನ್ನಡ ಭಾಷೆ ಅನಾದರಣೆಗೆ ಒಳಗಾಗಿತ್ತು. ಕನ್ನಡಿಗರ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಕನ್ನಡ ಸೊರಗಿ ಹೋಗುತ್ತಿತ್ತು. ಇಂಗ್ಲಿಷ್ ಭಾಷೆಯ ವಿದ್ಯಾಭ್ಯಾಸದ ಅರಿವು ಹಾಗೂ ಅದರಿಂದ ದೊರೆಯುತ್ತಿದ್ದ ಸೌಲಭ್ಯಗಳ ಕಾರಣದಿಂದಾಗಿ ವಿದ್ಯಾವಂತರು ಕನ್ನಡದ ಏಳಿಗೆಯ ಕಡೆ ಆಸಕ್ತಿ ತೋರುತ್ತಿರಲಿಲ್ಲ. ಜನಸಾಮಾನ್ಯರು ಬದುಕಿನ ಅಗತ್ಯಗಳ ಕಡೆ ನಿಗಾ ಹರಿಸುತ್ತಿದ್ದರೇ ವಿನಃ ಭಾಷೆ, ಅದರ ಅಭಿವೃದ್ಧಿ ಇತ್ಯಾದಿ ವಿಚಾರಗಳ ಕಡೆ ಗಮನ ಹರಿಸುತ್ತಿರಲಿಲ್ಲ. ಇಂತಹ ಸ್ಥಿತಿಯಲ್ಲಿ ಯಾರ ಆದರಕ್ಕೂ ಪಾತ್ರವಾಗದೆ ಇದ್ದ ಕನ್ನಡ ಭಾಷೆಗೆ ಜೀವವನ್ನು ತುಂಬುವ ಹಾಗೂ ಜನಸಾಮಾನ್ಯರ ಬಳಿಗೆ ಕೊಂಡೊಯ್ಯುವ ಕಾರ್ಯ ನಡೆಯಬೇಕಾಗಿತ್ತು. ಪ್ರಬುದ್ಧ ಕರ್ಣಾಟಕ ಈ ಕಾರ್ಯವನ್ನು ನೆರವೇರಿಸುವ ಸಂಕಲ್ಪವನ್ನು ಮಾಡಿತು. ಕನ್ನಡ ಭಾಷೆಯ ಬಗ್ಗೆ ಅಭಿಮಾನ, ಕನ್ನಡ ಭಾಷೆಗೆ ಸಿಗಬೇಕಾದ ಸ್ಥಾನಮಾನ, ಕನ್ನಡ ಭಾಷೆಯ ವೈಶಿಷ್ಟ್ಯತೆ ಇವುಗಳ ಕಡೆ ಕನ್ನಡಿಗರ ಗಮನಸೆಳೆಯಿತು.

ಕನ್ನಡ ಭಾಷೆಯ ಪ್ರಾಚೀನತೆಯ ಬಗೆಗೆ ಕನ್ನಡ ಭಾಷಾ ಶುದ್ಧತೆಯ ಬಗೆಗೆ ಚರ್ಚಿಸಿರುವ ಪ್ರಬುದ್ಧ ಕರ್ಣಾಟಕ ಆಧುನಿಕ ವಿಚಾರಗಳನ್ನು ಜನಸಾಮಾನ್ಯರ ಬಳಿ

---

೧. ಸಂಗಮೇಶ ಸವದತ್ತಿ ಮಠ, ಕನ್ನಡ ಭಾಷಾ ಸ್ವರೂಪ, ಪು. ೩೦.

ಕೊಂಡೊಯ್ಯುವ ಸಾಧನವಾಗಿ ಅದು ಕರ್ತವ್ಯವನ್ನು ನಿರ್ವಹಿಸುವ ಬಗೆಗೂ ಚಿಂತಿಸಿದೆ. ಪ್ರಬಲ ಭಾಷೆಯಾಗಿ ಬೆಳೆಯುವುದರಿಂದ ಅದಕ್ಕೆ ಲಭಿಸುವ ಲಾಭ, ಶಿಕ್ಷಣ ಮಾಧ್ಯಮವಾದಾಗ ಅದರಿಂದಾಗುವ ಪ್ರಯೋಜನ ಇವೇ ಮೊದಲಾದ ಅಂಶಗಳ ಕಡೆ ಗಮನಸೆಳೆಯುವ ಪ್ರಯತ್ನ ಮಾಡಿದೆ.

ಕನ್ನಡ ಭಾಷೆಯ ಪ್ರಾಚೀನತೆಯನ್ನು ಸಾಧಿಸಲು ಇಂದು ಕನ್ನಡಿಗರು ಒದಗಿಸುತ್ತಿರುವ ಪ್ರಮುಖ ಉಲ್ಲೇಖವೆಂದರೆ ಅದು ಹಲ್ಮಿಡಿ ಶಾಸನ. ಇದು ಕನ್ನಡಿಗರಿಗೆ ದೊರೆತಿರುವ ಅತಿ ಪ್ರಾಚೀನವಾದ ಶಾಸನ. ಇದರ ಕಾಲ ಕ್ರಿ.ಶ.೪೫೦. ಈ ಶಾಸನ ಅತಿ ಪ್ರಾಚೀನವಾದದ್ದು ಎಂದು ಒಪ್ಪಿಗೆಯಾಗುವವರೆಗೆ ಆರನೆಯ ಶತಮಾನದ ಶಾಸನವೇ ಪ್ರಾಚೀನ ಶಾಸನವೆಂದು ಪರಿಗಣಿಸಲ್ಪಟ್ಟಿತ್ತು. ಕನ್ನಡ ಕೈಪಿಡಿಯ ಆರಂಭದ ಆವೃತ್ತಿಯಲ್ಲಿ ಕೈಪಿಡಿಕಾರರು ಕನ್ನಡದ ಪ್ರಥಮ ಪರಿಚಯವಾಗುವುದು ಆರನೆಯ ಶತಮಾನದಿಂದ. ಹಾಗಾಗಿ ಕನ್ನಡವು ಆರನೆಯ ಶತಮಾನದವರೆವಿಗೂ ಗ್ರಾಂಥಿಕ ರೂಪವನ್ನು ಪಡೆದಿರಲಿಲ್ಲ ಎಂಬ ಅನುಮಾನವನ್ನು ವ್ಯಕ್ತಪಡಿಸಿದ್ದೂ ಉಂಟು. ಕನ್ನಡದ ಪ್ರಾಚೀನತೆಯನ್ನು ಗುರುತಿಸಲು ಕೀರ್ತಿವರ್ಮನ ಶಾಸನ ಹಾಗೂ ಮಂಗಳೇಶನ ಮೇಗುತಿ ದೇವಾಲಯದ ಶಾಸನವನ್ನೇ ಆಧಾರವಾಗಿ ಇಟ್ಟುಕೊಳ್ಳಲಾಗಿತ್ತು. ಇಂತಹ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕ ಹಲ್ಮಿಡಿ ಶಾಸನವನ್ನು ಪ್ರಕಟಿಸಿ ಅದರ ವೈಶಿಷ್ಟ್ಯವನ್ನು ಅದರ ಕಾಲವನ್ನು ನಿರ್ಧರಿಸಿ ಅದು ಕ್ರಿ.ಶ. ೪೫೦ಕ್ಕೆ ಸೇರಿದ ಶಾಸನವೆಂಬ ಹಾಗೂ ಅದೇ ಕನ್ನಡದ ಅತಿ ಪ್ರಾಚೀನ ಶಾಸನವೆಂಬ ಅಂಶದ ಕಡೆ ಬೆಳಕು ಚೆಲ್ಲಿದೆ. ಎಚ್.ಎಂ.ಕೃಷ್ಣ ಅವರ ಈ ಲೇಖನ ಇಪ್ಪತ್ತನೇ ಸಂಪುಟದ ಮೂರನೇ ಸಂಚಿಕೆಯಲ್ಲಿ ಪ್ರಕಟವಾಗಿದೆ. ಈ ಲೇಖನವು ಹಲ್ಮಿಡಿ ಶಾಸನದ ಸಂಪೂರ್ಣ ಚಿತ್ರಣವನ್ನು ವಾಚಕರಿಗೆ ಒದಗಿಸಿದೆ. ಅದರ ಆಕಾರ, ಅದರಲ್ಲಿ ಬಳಕೆಯಾಗಿರುವ ಪದಗಳು ಹಾಗೂ ಅದರ ಹಿನ್ನೆಲೆಯಲ್ಲಿ ಅದು ಹಳಗನ್ನಡವೋ ಪೂರ್ವದ ಹಳೆಗನ್ನಡವೋ ಎಂದು ನಿರ್ಧರಿಸುವ ವಿಚಾರಗಳ ಕಡೆ ಈ ಲೇಖನ ಗಮನಸೆಳೆದಿದೆ. ಈ ಶಾಸನದಲ್ಲಿ ಅದರ ಕಾಲವನ್ನು ಕೊಟ್ಟಿರದೇ ಇದ್ದರೂ ಅದರಲ್ಲಿ ಬಂದಿರುವ ವಿಷಯಗಳ ಆಧಾರದ ಮೇಲೆ ಅದರ ಕಾಲವನ್ನು ನಿರ್ಧರಿಸಲಾಗಿದ್ದು ಕನ್ನಡ ಭಾಷೆಯ ಚರಿತ್ರೆಯ ಗುರುತಿಸುವಿಕೆಗೆ ಈ ಶಾಸನ ಬಹಳ ಉಪಯುಕ್ತಕಾರಿಯಾಗಿದೆ. ಇಂತಹ ಅತ್ಯಮೂಲವಾದ ದಾಖಲೆಯನ್ನು ಕನ್ನಡಿಗರಿಗೆ ಒದಗಿಸಿ ಕನ್ನಡ ಭಾಷೆಯ ಪ್ರಾಚೀನತೆಯ ಬಗ್ಗೆ ಹೆಮ್ಮೆಪಡುವಂತೆ ಮಾಡುವ ಕಾರ್ಯ ನಡೆದದ್ದು ಪ್ರಬುದ್ಧ ಕರ್ಣಾಟಕದಲ್ಲಿ.

ಕನ್ನಡ ಭಾಷೆಯ ಪ್ರಾಚೀನತೆಯನ್ನು ಕುರಿತಂತೆ ಕನ್ನಡಿಗರು ಒದಗಿಸುವ ಮತ್ತೊಂದು ಸಾಧನವೆಂದರೆ ಆಕ್ಸಿರಿಂಕಸ್ ಪ್ಯಾಪಿರಿ ಎಂಬ ಹೆಸರಿನ ಗ್ರೀಕ್ ಪ್ರಹಸನ.

ಈಜಿಪ್ಟಿನಲ್ಲಿರುವ ಆಕ್ಸಿರಿಂಕಸ್ ಎಂಬ ಸ್ಥಳದಲ್ಲಿ ದೊರೆತ, ಕ್ರಿಸ್ತಶಕ ಎರಡನೆಯ ಶತಮಾನದಲ್ಲಿ ರಚಿತವಾದದ್ದು ಎಂದು ನಂಬಲಾದ ಈ ನಾಟಕದಲ್ಲಿ ಕೆಲವು ಗ್ರೀಕೇತರ ಶಬ್ದಗಳಿದ್ದು ಅವುಗಳು ಕನ್ನಡ ಭಾಷೆಯದ್ದೇ ಇರಬೇಕೆಂದು ಹಿರಿಯ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕೆ ಸಂಬಂಧಿಸಿದಂತೆ ಪ್ರಬುದ್ಧ ಕರ್ಣಾಟಕ ಆರ್. ಶಾಮಶಾಸ್ತ್ರಿಗಳ ಗ್ರೀಕ್ ನಾಟಕದಲ್ಲಿ ಕನ್ನಡ ಮಾತು (೯-೧) ಹಾಗೂ ಎಂ.ಗೋವಿಂದ ಪೈ ಅವರ ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳು (೧೧-೧) ಎಂಬ ಲೇಖನಗಳನ್ನು ಪ್ರಕಟಿಸಿದೆ. ಇದರಲ್ಲಿ ಶಾಮಾಶಾಸ್ತ್ರಿಗಳ ಲೇಖನ ೧೯೨೫-೨೬ನೇ ಇಸವಿಯ ಶಾಸನ ಇಲಾಖೆಯ ವರದಿಯಾಗಿ ಬಂದದ್ದು. ಕನ್ನಡ ಭಾಷೆಯ ಬಗ್ಗೆ ಕುತೂಹಲ ಇರುವವರಿಗೆ ಅನುಕೂಲವಾಗಲಿ ಎಂಬ ದೃಷ್ಟಿಯಿಂದ ಅದನ್ನು ಸಂಗ್ರಹಿಸಿ ಪ್ರಕಟಿಸಿದೆ. ಗೋವಿಂದ ಪೈ ಹಾಗೂ ಶಾಮಾಶಾಸ್ತ್ರಿಗಳ ಈ ಲೇಖನಗಳು ನಂತರ ಸಾಕಷ್ಟು ಚರ್ಚೆಗೆ ಗ್ರಾಸವನ್ನು ಒದಗಿಸಿತು. ಪ್ರಬುದ್ಧ ಕರ್ಣಾಟಕದ ಇಂತಹ ಪ್ರಯತ್ನಗಳು ಕನ್ನಡ ಭಾಷೆಯ ಪ್ರಾಚೀನತೆಯನ್ನು ಸಾಬೀತುಪಡಿಸುವಲ್ಲಿ ಸಹಕಾರಿಯಾಗಿವೆ. ಅಷ್ಟೇ ಅಲ್ಲದೆ ಕನ್ನಡ ಭಾಷೆಗೆ ಪುರಾತನ ಕಾಲದಿಂದಲೂ ಇತಿಹಾಸವಿದೆ ಎಂಬ ಅಭಿಮಾನವನ್ನು ಕನ್ನಡಿಗರಲ್ಲಿ ಮೂಡಿಸಿದೆ.

**ಕನ್ನಡ ಭಾಷೆಯ ಬಗ್ಗೆ ಅಭಿಮಾನ**

ಕನ್ನಡದ ಬಗ್ಗೆ ನಿರ್ಲಕ್ಷ್ಯ ಭಾವನೆ ತಳೆದಿದ್ದ ಕನ್ನಡಿಗರಲ್ಲಿ ಅದರ ಬಗ್ಗೆ ಅಭಿಮಾನ ಮೂಡುವಂತೆ ಮಾಡಲು ಪ್ರಬುದ್ಧ ಕರ್ಣಾಟಕ ತನ್ನ ಆರಂಭದ ಕಾಲದಿಂದಲೂ ನಿರಂತರವಾಗಿ ಪ್ರಯತ್ನಗಳನ್ನು ಮಾಡಿದೆ. ಕನ್ನಡ ಭಾಷೆಯ ಕವಿ ಪರಂಪರೆ ಅದರ ಇತಿಹಾಸ ಇವುಗಳ ಬಗ್ಗೆ ಪರಿಚಯಿಸುವ ಹಲವಾರು ಬರಹಗಳನ್ನು ಪ್ರಕಟಿಸಿದೆ. ಈಶ್ವರ ಸಣಕಲ್ಲ ಅವರ "ನಿನ್ನ ಪರಿಪೂರ್ಣತೆಗೆ ಆತ್ಮ ಬಲಿದಾನ" ಎನ್ನುವ ಕವನದಲ್ಲಿ ಭಾಷೆಯ ಮಹತ್ವವನ್ನೂ ಅದರ ಮೂಲಕ ಪಡೆಯಬಹುದಾದ ಶಕ್ತಿ ಸಾಮರ್ಥ್ಯಗಳನ್ನು ಕುರಿತ ವಿಚಾರಗಳಿದ್ದು ನಮ್ಮ ಭಾಷೆಯಾದ ಕನ್ನಡದ ಮೂಲಕವೇ ಅದನ್ನು ಪಡೆಯಬಹುದೆಂಬ ಆಶಯ ವ್ಯಕ್ತವಾಗಿದೆ.

**ಭಾಷೆಯಿದು ಹೃದಯದಿಂ ನಿತ್ಯವೂ ಪುಟನೆಗೆವ**
**ಭಾವತೇಜದ ಕಿಡಿಯು! ಸಂಸ್ಕೃತಿಯ ಸಿರಿಗುಡಿಯು!**
**ಸಾಹಿತ್ಯ ಸಂಗೀತ ರಮ್ಯ ಹರ್ಮ್ಯದೊಳೆಗೆವ**
**ಚಂದ್ರಿಕಾ ಧವಳ ನಂದ-ದೀಪದಾರುಡಿಯು**
**ಜನಜನರ ಮನಮನವ ಸೆಳೆದೇಕ ದೇಶದಲಿ**
**ನಿಲ್ಲಿಸುವ ಪ್ರಬಲ ಪ್ರಭಾವಯುತ ಗಾರುಡಿಯು**[೧] ಎನ್ನುವ ಸಾಲುಗಳು ಭಾಷೆಯ ಮಹತ್ವವನ್ನು ಹಾಗೂ ಅದು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಶಕ್ತಿ

---

೧. ಈಶ್ವರ ಸಣಕಲ್ಲ, ಪ್ರಬುದ್ಧ ಕರ್ಣಾಟಕ, ಸಂಪುಟ-೩೮, ಸಂಚಿಕೆ -೧, ಪು. ೮೦.

ಪಡೆದಿರುವನ್ನು ಸೂಚಿಸುತ್ತಿದೆ. ಹೀಗೆ ಸಂಸ್ಕೃತಿ ವಾಹಕವಾಗಿರುವ ಭಾಷೆ ಜನಗಳ ಸರ್ವಸ್ವವಾಗಿದೆ. ಜನಾಂಗಕ್ಕೆ ತ್ರಾಣವನ್ನು ತುಂಬುವ ಸಾಧನವಾಗಿದೆ. ಇಂತಹ ಸಾಧನ ಕನ್ನಡಿಗರ ಪಾಲಿಗೆ ಕನ್ನಡವಾಗಿದ್ದು ಅದರ ಬಗ್ಗೆ ಪ್ರೀತಿ ಇರಬೇಕು.

**ನಮ್ಮ ನುಡಿ ಕನ್ನಡವು – ನಮ್ಮ ನೆಲ ಕನ್ನಡವು**

**ನಮ್ಮ ಕುಲಬಲಛಲಗಳೆಲ್ಲವೂ ಕನ್ನಡವು**[೧] – ಎಂಬ ಅಭಿಮಾನ ಇರಬೇಕು. ಈ ರೀತಿ ಅಭಿಮಾನಪಡುವುದಕ್ಕೆ ಕಾರಣಗಳೂ ಇವೆ. ಪುರಾತನ–ವಾಗಿರುವ ಕನ್ನಡ ಭಾಷೆಯು ಪ್ರಾಚೀನ ಕಾಲದಿಂದಲೂ ಭಿನ್ನಭಿನ್ನವಾದ ಸಾಹಿತ್ಯದ ರೂಪುಗಳನ್ನು ಪಡೆದು ಪ್ರಬುದ್ಧತೆಯನ್ನು ಸಾಧಿಸಿಕೊಂಡಿದೆ. 'ಕನ್ನಡ ನುಡಿವೆಣ್ಣಿನ ಜಾಣ್ನುಡಿ' ಕವನದಲ್ಲಿ ಎಂ.ಎಸ್.ಬಸವಲಿಂಗಯ್ಯ ಅವರು ಕನ್ನಡ ಭಾಷೆಯು ಭಿನ್ನಭಿನ್ನವಾದ ಕಾಲಗಳಲ್ಲಿ ಬೆಳೆದು ಬಂದ ಪರಿಯನ್ನು ಸೊಗಸಾಗಿ ವಿವರಿಸಿದ್ದಾರೆ. ಜೈನ, ವೀರಶೈವ, ಬ್ರಾಹ್ಮಣ, ಆಧುನಿಕ ಸಾಹಿತ್ಯಗಳು ಕನ್ನಡದ ವಿವಿಧ ಘಟ್ಟಗಳಾದ ಹಳೆಗನ್ನಡ, ನಡುಗನ್ನಡ, ಹೊಸಗನ್ನಡಗಳಲ್ಲಿ ಬೆಳೆದುಬಂದ ರೀತಿಯನ್ನು ಗಮನಿಸಿ ಆಯಾಕಾಲದ ಸಾಹಿತ್ಯದ ವೈಶಿಷ್ಟ್ಯಗಳನ್ನು ಹಾಗೂ ಅದರಲ್ಲಿ ಬಳಕೆಯಾಗಿರುವ ಭಾಷೆಗಳ, ವೈವಿಧ್ಯತೆಯನ್ನು ಗುರುತಿಸಿದ್ದಾರೆ. ವೀರಶೈವ ಧರ್ಮದ ಸಾಹಿತ್ಯ ಸೃಷ್ಟಿಯ ಸಂದರ್ಭದಲ್ಲಿ ಬಳಕೆಯಾದ ಕನ್ನಡದ ಸ್ವರೂಪವನ್ನು ಕುರಿತಂತೆ ಅವರು ಆಡಿರುವ ಮಾತುಗಳಲ್ಲಿ ಅದನ್ನು ಗುರುತಿಸಬಹುದು.

**ಪರಭಾಷೆಗಳ ಗೊಂದಲದ ಸಾಲದೆಯೆ ನಾನು**
**ತಿರೆಯೊಳಗೆ ಮುಖವೆತ್ತಿ ಬಾಳುವುದು**
**ವೀರಶೈವರ ಮೈತ್ರಿಯಿಂದಾಗಳಾದ**
**ವೀರತ್ವವೇ ಹೇತುವೆಂದೊರೆವೆನೀಗ**[೨] – ಎಂಬ ಕನ್ನಡ ನುಡಿವೆಣ್ಣಿನ ನುಡಿಗಳು ಕನ್ನಡಕ್ಕೆ ವಿಶ್ವಮಾನ್ಯತೆಯನ್ನು ದೊರಕಿಸಿಕೊಟ್ಟ ವಚನ ಸಾಹಿತ್ಯ ಹಾಗೂ ಅದರಲ್ಲಿ ಬಳಕೆಯಾಗಿರುವ ಸಂಸ್ಕೃತ ಭೂಯಿಷ್ಠವಲ್ಲದ ಜನಸಾಮಾನ್ಯರ ಸರಳವಾದ ಕನ್ನಡದ ಬಗ್ಗೆ ಗಮನ ಸೆಳೆಯುತ್ತದೆ. ನಮ್ಮ ಭಾಷೆಯಲ್ಲಿ ಇಷ್ಟೆಲ್ಲಾ ಬಗೆಯ ಸಾಹಿತ್ಯಗಳು ರಚನೆಯಾಗಿದೆ ಹಾಗೂ ಅದರ ಸ್ವರೂಪಗಳು ಹೀಗಿದೆ ಎಂಬ ಭಾವನೆಗಳೇ ಓದುಗರ ಮನಸ್ಸನ್ನು ಕನ್ನಡದತ್ತ ಸೆಳೆಯುತ್ತದೆ. ಇದೇ ಬಗೆಯಲ್ಲಿ ತಮ್ಮ ಕವಿ ಪರಂಪರೆಯನ್ನು ನೆನಪಿಸಿಕೊಳ್ಳುವ ಹಾಗೂ ಅದರ ಮೂಲಕ ಆತ್ಮವಿಶ್ವಾಸವನ್ನು ಪ್ರದರ್ಶಿಸುವ ಅಂಶ "ಕನ್ನಡ ತಾಯ್ಗೆ" ಕವನದಲ್ಲಿ ವ್ಯಕ್ತವಾಗಿದೆ. ಕನ್ನಡನಾಡಿನಲ್ಲಿ ರತ್ನತ್ರಯರೆನಿಸಿಕೊಂಡ, ಕವಿಚಕ್ರವರ್ತಿಗಳೆನಿಸಿಕೊಂಡ ಕವಿಗಳಿದ್ದು ಅವರು "ಕನ್ನಡ ಕೀರ್ತಿ ಧ್ವಜವನ್ನು

---

೧. ಈಶ್ವರ ಸಣಕಲ್ಲ, ಪ್ರಬುದ್ಧ ಕರ್ನಾಟಕ, ಸಂಪುಟ–೩೮, ಸಂಚಿಕೆ –೧, ಪು. ೮೦.
೨. ಎಂ.ಎಸ್.ಬಸವಲಿಂಗಯ್ಯ, ಕನ್ನಡ ನುಡಿವೆಣ್ಣಿನ ಜಾಣ್ನುಡಿ, ಪು. ೩೦.

ನಾಡಿನಲ್ಲಿ ಹಾರಿಸಿದ್ದಾರೆ. ಕವಿ ಬಿ.ಎಚ್.ಶ್ರೀಧರ್ ಅವರು ಗುರುತಿಸುವಂತೆ ಕನ್ನಡ ತಾಯಿಯು

**ಮಾತೆ ಸರಸತಿಯನಳಿದೋಳ ತೆಕ್ಕೆಯೊಳಿರ್ದ**
**ಖ್ಯಾತ ಕವಿಸಾರ್ವಭೌಮರ ಕರೆದು ಹಾಡಿಸಿದೆ**
**ಕನ್ನಡ ಮಾಮರವ ಬಗ್ಗಿಸುವ ಕೋಗಿಲೆಗ**
**ಳಿನ್ನಾರು ಪಂಪರನ್ನರನ್ನುಳಿದು ಎನಿಸಿರ್ಪ**
**ರಸಿಕ ಪಂಡಿತ ಗಮಕಿಗಳಿಂದ ವಾದಿವಾಗ್ಮಿಗಳಿಂದ**
**ಮಸಗಿ ದಿಗ್ದೇಶಮಂಗೆಲಿಸಿರ್ಪ**[೧] ಕನ್ನಡ ತಾಯಿ ಮಾಡಿರುವ ಈ ಕಾರ್ಯಗಳಿಗಿಂತ ಆಕೆಯಿಂದ ಇನ್ನೇನನ್ನು ತಾನೆ ಹೆಚ್ಚಿಗೆ ನಿರೀಕ್ಷಿಸಲು ಸಾಧ್ಯ? ಇಷ್ಟನ್ನೆಲ್ಲಾ ನೀಡಿರುವ ಕನ್ನಡ ತಾಯಿಯ ಬಗ್ಗೆ ಆದರವಿರಬೇಕು, ಗೌರವವಿಬೇಕು. ಕನ್ನಡಿಗರಿಗೆ ಕನ್ನಡವೇ ತಮ್ಮ 'ಜೀವವಾಣಿ' ಎಂಬುದರ ಅರಿವಿರಬೇಕು. ಕನ್ನಡದೊಡನೆ ಎಷ್ಟೇ ಭಾಷೆಗಳು ಬೆರೆತಿರಲಿ ಕನ್ನಡಿಗರು ಗಮನಿಸಬೇಕಾದ ಪ್ರಮುಖವಾದ ವಿಷಯ ಅದಲ್ಲ. ಬೇರೆ ಭಾಷೆಗಳು ನಮ್ಮ ಭಾಷೆಯೊಡಗೂಡಿ ಸೌಹಾರ್ದತೆಯಿಂದ ಸ್ನೇಹದಿಂದ ಇದ್ದಾಗ ಅವುಗಳಿಂದ ಅಪಾಯವಿಲ್ಲ. ಆದರೆ ಬೇರೆ ಕಡೆಯಿಂದ ಬಂದ ಭಾಷೆಯೇ ನಮ್ಮ ಮೇಲೆ ದಬ್ಬಾಳಿಕೆಗೆ ನಡೆಸಿದರೆ ಅದನ್ನು ಸಹಿಸಲು ಸಾಧ್ಯವಿಲ್ಲ. ಕನ್ನಡ ನಾಡಿನಲ್ಲಿ ಕನ್ನಡಕ್ಕೇ ಅಗ್ರಸ್ಥಾನ ಸಿಗಬೇಕು. ಜೀವವಾಣಿ ಎಂಬ ಕವನದಲ್ಲಿ ಹೇಳುವ ಹಾಗೆ

**ಕನ್ನಡದ ಮನೆಯಲ್ಲಿ ಕನ್ನಡವೇ ಯಜಮಾನಿ**
**ಮಿಕ್ಕ ಹೆಂಗಸರೆಲ್ಲ ಒಕ್ಕಲಷ್ಟೆ**
**ಭಿನ್ನಾಣದಳಿವೆಣ್ಣು ಚುಂಬಿಸಲು ಫಲವೇನು**
**ಕಣ್ಣೋಟವೇ ಸಾಕು ಮನದನ್ನೆಯರು**
**ಶಾಯಿ – ಲೇಖನಿಯಲ್ಲ ಯಾರು ಕೊಟ್ಟರೇ**
**ತಾಯಿನುಡಿ ನಾವೀಗ ಬರವುದೆಲ್ಲ**[೨]

ಕನ್ನಡಕ್ಕೆ ವಸ್ತು ವಿಷಯಗಳು ಬೇರೆಡೆಯಿಂದ ಬಂದರೂ ಅದು ನಮ್ಮಲ್ಲಿಗೆ ಬಂದ ನಂತರ ನಮ್ಮವೇ ಆಗಿಬಿಡುತ್ತವೆ. ಆಂಗ್ಲ ಸಂಸ್ಕೃತಗಳೆಂಬ ಕನ್ನಡಕ ಹಾಕಿಕೊಂಡರೆ ಹಾಕಿಕೊಂಡರೆ ದೃಷ್ಟಿ ಚೆನ್ನಾಗಿ ಕಾಣಬಹುದೇ ಹೊರತು ಕಣ್ಣುಗಳು ನಮ್ಮವೇ ಆಗಿರುತ್ತದೆ. ಕನ್ನಡಕ ಹೊರಗಿನಿಂದ ಹಾಕಿಕೊಳ್ಳುವ ಸಾಮಗ್ರಿಯಾದರೆ ಕಣ್ಣು ಬದುಕಿನೊಡನೆ ಬಂದ ಅವಿಭಾಜ್ಯ ಅಂಗ ಇದನ್ನು ಕನ್ನಡಿಗನು

---

೧. ಬಿ.ಎಚ್.ಶ್ರೀಧರ್, ಪ್ರಕ. ಸಂಪುಟ ೨೧, ಸಂಚಿಕೆ ೨, ಪು. ೧–೨.
೨. ಬಿ.ಎಚ್.ಶ್ರೀಧರ್, ಪ್ರಕ. ಸಂಪುಟ ೨೩, ಸಂಚಿಕೆ ೪, ಪು. ೧೩.

ಅರಿತುಕೊಳ್ಳಬೇಕು. ಕನ್ನಡದಲ್ಲಿ ಇಲ್ಲದೇ ಇರುವ ಅಪೂರ್ವವಾದ ವಿಚಾರಗಳು ಬೇರೆ ಭಾಷೆಯಲ್ಲಿ ಇದೆ. ಕನ್ನಡ ಭಾಷೆಯಲ್ಲಿ ಏನೂ ಇಲ್ಲ ಎಂಬ ಭ್ರಮೆಗೆ ಒಳಗಾದವರು ಸತ್ಯವನ್ನು ಅರಿತುಕೊಳ್ಳಬೇಕಾಗುತ್ತದೆ. ಸುಸಂಸ್ಕೃತದ ಭಾಷೆಯಾದ ಕನ್ನಡದಲ್ಲೂ ನಾವು ಅರಿಯಬೇಕಾಗಿರುವ ವಿಷಯಗಳು ಸಾಕಷ್ಟಿವೆ ಎಂಬ ನಿಜವನ್ನು ತಿಳಿದುಕೊಳ್ಳಬೇಕಾಗುತ್ತದೆ. ಕೆ.ಎಸ್.ನರಸಿಂಹಸ್ವಾಮಿಯವರ ಮಾತುಗಳನ್ನೇ ಗಮನಿಸುವುದಾದರೆ

**ಕನ್ನಡದಲ್ಲೇನೆಂದು ಇಂಗ್ಲಿಷ್‌ನೋದಿದೆವು**
**ಹಡಗನೇನೂ ಹತ್ತಲಿಲ್ಲ**
**ಸಂಸ್ಕೃತವೆ ನಮಗೆಂದು ಭಕ್ತಿಯಲಿ ಭಜಿಸಿದೆವು**
**ವೇದ ಪುರುಷನು ಕಣ್ಣ ಹರಸಲಿಲ್ಲ**
**ಕಟ್ಟಕಡೆಗುಕ್ಕುಹುದು ಕನ್ನಡದ ಅಭಿಮಾನ**
**ಕನ್ನಡವೆ ಪ್ರಾಣಪದಕ**
**ಇಂತಾದುದೇಕೆಂದು ಕೇಳುವುದು ತಪ್ಪಲ್ಲ**
**ಚಿಂತೆಗೂ ಇದರೊಳಗೆ ಅವಕಾಶ ಇಲ್ಲ"**[೧] ಕನ್ನಡಿಗರು ಯಾವುದೇ ಭಾಷೆಗೆ ಆದ್ಯತೆ ನೀಡಿದರೂ ಕನ್ನಡಿಗರ ಉನ್ನತಿಗೆ, ಕನ್ನಡಿಗರ ಏಳಿಗೆಗಾಗಿ, ಕನ್ನಡಿಗರ ಬೆನ್ನ ಹಿಂದೆ ನಿಂತು ಕಾಯುವ ಮಾಧ್ಯಮವೆಂದರೆ ಅದು ಕನ್ನಡಭಾಷೆ. ಸಂಸ್ಕೃತ ಆಂಗ್ಲಭಾಷೆಗಳನ್ನು ಕಲಿಯುವುದರಿಂದಷ್ಟೇ ಕನ್ನಡದ ಏಳಿಗೆ ಸಾಧ್ಯವಿಲ್ಲ. ಈ ವಿಚಾರ ಕುರಿತಂತೆ ಯಾವುದೇ ಅನುಮಾನಬೇಕಾಗಿಲ್ಲ. ಕನ್ನಡಕ್ಕೆ ಪ್ರಾಧಾನ್ಯತೆಯನ್ನು ನೀಡುವುದಷ್ಟೇ ಕನ್ನಡಿಗರ ಮುಂದಿನ ಗುರಿಯಾಗಿರಬೇಕು. ಕನ್ನಡಿಗರು ಯಾರಿಗೂ ಹೆದರಬೇಕಾಗಿಲ್ಲ. ಅಳುಕಬೇಕಾಗಿಲ್ಲ. ಕನ್ನಡ ಭಾಷೆ ಸತ್ವಯುತವಾಗಿದ್ದು ಕನ್ನಡಿಗರ ಮುಂದೆ ಎಷ್ಟೇ ಭಾಷೆಗಳಿದ್ದರೂ ಅವು ಎಷ್ಟೇ ಪ್ರಬಲವಾಗಿದ್ದರೂ ಯಾವ ಭಾಷೆಗೂ ಕನ್ನಡದ ಅಸ್ತಿತ್ವವನ್ನು ನಾಶಮಾಡಲು ಆಗುವುದಿಲ್ಲ. ಆದುದರಿಂದ ಕುವೆಂಪು ಅವರು 'ಅಳುಕದೀ ಕನ್ನಡ'ದಲ್ಲಿ

**ಪಂಪ ರನ್ನರ್ ಕುಮಾರವ್ಯಾಸ ಲಕ್ಷ್ಮೀಶ**
**ಹರಿಹರಾದಿಗಳುಸಿರ್ ನಮ್ಮೊಳಿರ್ಪನ್ನಗಾ**
**ಅಳುಕದೀ ಕನ್ನಡ। ಅಳಿಯದೀ ಕನ್ನಡ**
**ಉಳಿವುದೀ ಕನ್ನಡ**[೨] – ಎಂದಿದ್ದಾರೆ ನಮ್ಮ ಭಾಷೆಗೆ ಅಳಿವಿಲ್ಲ. ನಮ್ಮ ಭಾಷೆಗೆ ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶರಂತಹ ಹಿರಿಯರ ಹಾರೈಕೆಯಿದೆ.

---

೧. ಕೆ.ಎಸ್.ನರಸಿಂಹಸ್ವಾಮಿ, ಪ್ರ.ಕ., ಸಂಪುಟ ೨೬, ಸಂಚಿಕೆ ೨, ಪು. ೭೫.
೨. ಕುವೆಂಪು, ಪ್ರ.ಕ., ಸಂಪುಟ ೩೨, ಸಂಚಿಕೆ ೧, ಪು. ೬.

ಅವರು ತಮ್ಮ ಸತ್ವಯುತವಾದ ಬರವಣಿಗೆಗಳಿಂದ ಕನ್ನಡಕ್ಕೆ ಶಕ್ತಿ ತುಂಬಿದ್ದಾರೆ. ಹಾಗಾಗಿಯೇ ಕನ್ನಡ ಶಾಶ್ವತವಾದದ್ದು. ಆದರೂ ಇದೇ ಮೊಂಡು ಧೈರ್ಯದಿಂದ ಕನ್ನಡಕ್ಕೆ ಏನೂ ಆಗುವುದಿಲ್ಲ, ಕನ್ನಡಿಗರು ಕನ್ನಡದ ಬಗ್ಗೆ ಚಿಂತಿಸದಿದ್ದರೂ ಅದು ಉಳಿದೇ ತೀರುತ್ತದೆ ಎಂಬ ಅಸಡ್ಡೆಯನ್ನು ತೋರಿಸಿದರೆ ಅದು ತೊಂದರೆಯನ್ನು ಅನುಭವಿಸಬೇಕಾಗುತ್ತದೆ. ಅನಂತರದ ದಿನಗಳಲ್ಲಿ ಉಳಿಯುವುದೇ ಕಷ್ಟವಾಗುತ್ತದೆ. ರಾಷ್ಟ್ರಭಾಷೆಯಾದ ಹಿಂದಿ, ಅಂತಾರಾಷ್ಟ್ರೀಯ ಭಾಷೆಯಾದ ಇಂಗ್ಲಿಷ್, ದೇವನುಡಿ-ಯೆಂದು ಸಂಸ್ಕೃತ ಹೀಗೆ ಹಲವಾರು ಭಾಷೆಗಳು ಕನ್ನಡದ ಆಕ್ರಮಣಮಾಡಿ ಅದನ್ನು ದುರ್ಬಲಗೊಳಿಸಲು ಯತ್ನಿಸುತ್ತದೆ. ಇವುಗಳನ್ನೆಲ್ಲ ಸಮರ್ಥವಾಗಿ ಎದುರಿಸಬೇಕು. ಕನ್ನಡಕ್ಕೆ ಹೀನಸ್ಥಿತಿ ಒದಗದಂತೆ ನೋಡಿಕೊಳ್ಳಬೇಕು. ಆದುದರಿಂದಲೇ ಕುವೆಂಪು ಅವರು ಕನ್ನಡಿಗರನ್ನು "ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರಾ' ಎಂದು ಎಚ್ಚರಿಸಿ ಅದು ಸಾಯದಂತೆ ನೋಡಿಕೊಳ್ಳಬೇಕಾದ ಜವಾಬ್ದಾರಿ ಕನ್ನಡಿಗರ ಮೇಲಿರುವುದನ್ನು ಜ್ಞಾಪಿಸಿದರು. ಪರಭಾಷೆಗಳ ಭಾರದಿಂದ ಕನ್ನಡಮ್ಮನ ಮೂಳೆ ಮುರಿಯುತ್ತಿದೆ. ತಾಯಿನುಡಿ ಎಂಬುದು ತಾಯಿಯ ಆರೈಕೆಯೊಂದಿಗೇ ಬೆಳೆದು ಬಂದದ್ದು ಅಂಥ ಭಾಷೆಯನ್ನು ಮರೆತರೆ ಅವು ತಾಯಿಯನ್ನೇ ಮರೆತಂತೆ ಮಾತೃಭಾಷೆಯು ಅನುಭವಿಸುತ್ತಿರುವ ಈ ನೋವನ್ನು ನೋಡಿಯೂ ಪರಭಾಷೆಗೇ ಅತಿಯಾದ ಪ್ರಾಶಸ್ತ್ಯ ನೀಡಿ ಮಾತೃಭಾಷೆಯನ್ನು ಕಡೆಗಣಿಸುವುದು ದಾಸ್ಯದ ಸಂಕೇತ. ಪೌರುಷಹೀನರಾಗಿ ನಿರ್ವೀಯರಾಗಿರುವ ಸಂಕೇತ ಆದುದರಿಂದಲೇ ಕವಿ

**ನಿಮ್ಮ ನುಡಿ ಗಂಡಸುತನಕೆ ಹಿರಿಸಾಕ್ಷಿ**
**ಗೆಲುವಿದ್ದರೆದಕೆ ನಿಮಗಿಹುದು ಶಕ್ತಿ**
**ನುಡಿಮಡಿದವರೆಲ್ಲರೂ ಮೂಕ ಜಂತುಗಳಂತೆ**
**ಬಾಲವಲ್ಲಾಡಿಪುದೆ ಪರಮ ಭಕ್ತಿ**[೧] ಎಂದು ವಿಡಂಬಿಸಿದ್ದಾರೆ. ತನ್ನ ಮಾತೃಭಾಷೆಯನ್ನು ಮರೆತವನ ಸ್ಥಿತಿ ಬಾಲವಾಡಿಸುವ ಪ್ರಾಣಿಯಂತೆ ಎಂದಿರುವುದು ಆತನ ಹೀನಸ್ಥಿತಿಯನ್ನು ತಿಳಿಸುತ್ತದೆ. ಕನ್ನಡಿಗರಲ್ಲಿ ಬಲ ಬಂದರೆ ಅದು ಕನ್ನಡ ನುಡಿಗೆ ಬಲ ಬಂದಂತೆ ಯಾರು ಪ್ರಬಲರೋ ಅವರ ನುಡಿಯೂ ಪ್ರಬಲ-ವಾಗಿರುತ್ತದೆ. ನೆರೆಹೊರೆಯ ರಾಜ್ಯಗಳಲ್ಲಿ ಅವರ ಭಾಷೆಗಳು ಪ್ರಬಲವಾಗಿ ಬೆಳೆಯಲು ಆ ಜನರು ತಮ್ಮ ಭಾಷೆಯಲ್ಲಿ ತೋರಿಸುವ ಅಭಿಮಾನವೇ ಕಾರಣ. ಕನ್ನಡಕ್ಕೂ ಸತ್ವ ಬರಬೇಕಾದರೆ ಕನ್ನಡಿಗರಾದ ನಾವೂ ಸತ್ವಯುತರಾಗಿ ಕನ್ನಡದ ಬಗ್ಗೆ ಸದಭಿಮಾನಪೂರ್ವಕವಾಗಿ ನಿಷ್ಠೆ ತಳೆಯಬೇಕು. ಕನ್ನಡಿಗರು ತಮ್ಮಲ್ಲಿರುವ

---

೧. ಕುವೆಂಪು, ಪ್ರ.ಕ., ಸಂಪುಟ ೩೨, ಸಂಚಿಕೆ ೧, ಪು. ೪೩

ಕುರಿತನವನ್ನು ನೀಗಿಕೊಂಡು ಸಿಂಹದಂತೆ ಗರ್ಜಿಸುವುದನ್ನು ಕಲಿಯಬೇಕು. ತಾಯಿ ನುಡಿಯಿಂದ ಪುಷ್ಟಿಗೊಂಡು ಬೆಳೆಯಬೇಕು.

ತಾಯಿತ್ತ ಮೊಲೆಹಾಲು ಮೈಗಾಗದಿರೆ 'ಹೊತ್ತ ಹೊರೆ' ಬಲಕಾರಿ ನೆತ್ತರಾಗಲು ಸಾಧ್ಯವಿಲ್ಲ. ಇದು ಅಸಾಧ್ಯದ ಮಾತು. ಕನ್ನಡಿಗರು ತಮ್ಮ ಮಾತೃಭಾಷೆಯಿಂದ ಏಳಿಗೆಯನ್ನು ಸಾಧಿಸಬಹುದೇ ಹೊರತು ಹೊತ್ತ ಹೊರೆಯಂತಿರುವ ಅನ್ಯಭಾಷೆಯಿಂದಲ್ಲ. ಹೀಗೆ ಜನಗಳನ್ನು ಚುಚ್ಚಿ ಎಚ್ಚರಿಸದೇ ಹೋದರೆ ಅವರು ಜಾಗೃತರಾಗುವುದಿಲ್ಲ. ಅನ್ಯಭಾಷಾ ವ್ಯಾಮೋಹವನ್ನು ತೊರೆಯುವುದಿಲ್ಲ ಎಂಬುದನ್ನು ಅರಿತಿರುವ ಕವಿಗಳು ಕನ್ನಡಿಗರನ್ನು ಬಡಿದು ಎಬ್ಬಿಸಿ ಅವರಲ್ಲಿ ಕನ್ನಡತ್ವದ ಭಾವನೆ ತರಲು ಯತ್ನಿಸಿದ್ದಾರೆ. ಇಂತಹ ಕಾರ್ಯಗಳು ಸಫಲಗೊಂಡಾಗ ಮಾತ್ರ ತಾಯಿನುಡಿಗೆ ಯಾವುದೇ ರೀತಿಯ ಅಪಾಯವಾಗದ ಹಾಗೆ ಅದನ್ನು ಕಾಪಾಡುವ ಭರವಸೆಗಳು ದೊರೆಯುತ್ತದೆ. ಅದನ್ನು ಕಾಪಾಡಲು ಕಂಕಣಬದ್ಧರಾಗಿ ಸೇವೆ ಸಲ್ಲಿಸಲು ಸಿದ್ಧರಾಗಿರುವುದರ ಸೂಚನೆಗಳು ದೊರೆಯುತ್ತದೆ. ಆದ್ದರಿಂದಲೇ ರಾ.ಮಂ. ಅವರು ರಚಿಸಿರುವ 'ನುಡಿಗಳ ಹಗೆ ಕಿತ್ತಹಾಕೈ' ಕವನದಲ್ಲಿ ಕನ್ನಡಕ್ಕೆ ರಕ್ಷಣೆ ಕೊಡುವ ಧ್ವನಿ ಕೇಳಿಸುತ್ತದೆ.

**"ತಾಯ ಮೊಲೆವಾಲಿನೊಂದಿಗೆ ಸೇವಿಸಿದ ನುಡಿಯ**
**ಸಾಯ ಬಿಡುವೆವೆ ನಮ್ಮ ಬಾಲದಾಯವನು**
**ರಾಯವಿರುವನ್ನೆಗಂ ನಮ್ಮ ಗತಿ ವಿಧದಿಂದ**
**ಮಾಯವಾಗಲು ಬಿಡುವೆವೇ ಕನ್ನಡವನು**[೧] – ಎಂಬ ಆಶ್ವಾಸನೆ ಕವಿಯಿಂದ ದೊರೆಯುತ್ತದೆ. ತಮ್ಮ ಪ್ರಾಣವಿರುವ ತನಕ ಯಾವುದೇ ಕಾರಣದಿಂದಲೂ ಕನ್ನಡಕ್ಕೆ ಅಪಾಯವಾಗದಂತೆ ನೋಡಿಕೊಳ್ಳುವ ಭರವಸೆ ಇಲ್ಲಿದೆ.

ಕನ್ನಡ ಎಂಬುದನ್ನು ಕೇವಲ ಭಾಷೆಯೆಂದು ಪರಿಗಣಿಸದೆ ಅದೇ ಕನ್ನಡಿಗರ ಜೀವನ ಎಂದು ಭಾವಿಸಿದಾಗ ಅದಕ್ಕೆ ರಕ್ಷಣೆ ದೊರೆಯುತ್ತದೆ. ಕನ್ನಡವೇ ಜೀವನದ ಕ್ರಮವಾಗಬೇಕು, ಕನ್ನಡದ ಕಂದ ಭ್ರೂಣಾವಸ್ಥೆಯಲ್ಲಿ ಇರುವಾಗಿನಿಂದಲೇ ಅದರಲ್ಲಿ ಕನ್ನಡದ ಭಾವನೆಯನ್ನು ತುಂಬಿ ಕನ್ನಡದ ಖಣಜವನ್ನು ತುಂಬುವಂತೆ ದುಡಿಯಲು ಪ್ರೇರೇಪಣೆಯನ್ನು ನೀಡಬೇಕು ಕನ್ನಡವನ್ನು ಕಾಪಾಡುವ ಜವಾಬ್ದಾರಿಯನ್ನು ಅವರಿಗೆ ನೀಡಬೇಕು ಎಂಬ ಆಶಯ ಎಸ್.ವಿ.ರಂಗಣ್ಣನವರದ್ದು. ಅವರು ತಮ್ಮ ರಂಗಯ್ಯನ ವಚನವೊಂದರಲ್ಲಿ ತಾಯಿಯ ಗರ್ಭದಿಂದ ಹಿಡಿದು ಜೀವನಪರ್ಯಂತ ಕನ್ನಡವು ಜೀವನದ ಹಾಸುಹೊಕ್ಕಾಗಿ ಕನ್ನಡ ಬೆಳೆದು ಬರಬೇಕಾದ ಪರಿಯನ್ನು ಸೊಗಸಾಗಿ ಚಿತ್ರಿಸಿದ್ದಾರೆ.

---

೧. ರಾ.ಮಂ., ಪ್ರ.ಕ., ಸಂಪುಟ ೧೯, ಸಂಚಿಕೆ ೧, ಪು. ೨೯.

ಏಳನೆಯ ಮಾಸದಲ್ಲಿ ಬಸುರಿ ಬಲಬಾಹುವಿಗೆ ಕನ್ನಡ ರಕ್ಷಣೆ ಕಟ್ಟಬೇಕು ಎನ್ನುವುದರಿಂದ ಪ್ರಾರಂಭವಾಗುವ ವಚನ ಮಗುವಿನ ಜವನದ ಕಾಲದಲ್ಲಿ ಮಗುವಿನ ಜಜೆ ಬೆಣ್ಣೆ ತಿನ್ನಿಸುವ ಸಂದರ್ಭದಲ್ಲಿ, ಚುಚ್ಚುಮದ್ದು ಹಾಕಿಸುವಾಗ, ಚೌಲದ ಸಂದರ್ಭ, ಅಕ್ಷರಾಭ್ಯಾಸದ ಸಂದರ್ಭ, ಉಪನಯನ, ಮದುವೆ ಈ ಎಲ್ಲ ಕಾರ್ಯಗಳೂ ನಡೆಯುವಾಗ ಕನ್ನಡತನದ ಭಾವನೆ ತುಂಬಬೇಕು

**"ಕನ್ನಡ ಮಾಂಗಲ್ಯ, ಕನ್ನಡ ಸಂಕಲಿಕೆ, ಕನ್ನಡ ಸಂಕಲ್ಪ, ತರುವಾಯ**
**ಮನೆ ಕಟ್ಟಬೇಕು ಕನ್ನಡ ಬಾವುಟದ ಕೆಳಗೆ, ಆ ನಾಡು ಈ ನಾಡುನುಡಿಗಳೆವೆಲ್ಲ**
**ನೆಮ್ಮದಿಯ ದಾಸದಾಸಿಯರಾಗಿ ಓಡಾಡಿ ಗೆಯ್ಮದುಡಿದು ತಂದು ತುಂಬಿಸಿ**
**ಕುಟುಂಬ ಖಣಜವನು ಕನ್ನಡ ಕುಳವ ಭಾರಿಯದಾಗಿ ಬೆಳೆಸಿ ಏಳಿಸಲಿ"**[೧] – ಎಂಬ ಆಶಯದೊಂದಿಗೆ ಮುಕ್ತಾಯವಾಗುತ್ತದೆ. ಇದು ಅವಶ್ಯಕವಾಗಿ ಆಗಲೇಬೇಕಾಗಿರುವ ಕರ್ತವ್ಯ. ಏಕೆಂದರೆ ವಚನದ ಆರಂಭದಲ್ಲಿಯೇ ಕರ್ನಾಟಕ ಜನಪದ ಈಗ ಕುರಿಮಂದೆ, ನರಿಬಳಗ, ಹೆಬ್ಬಾವು, ಸಂಸಾರ, ಎಮ್ಮೆದೊಡ್ಡಿ, ತಟ್ಟುಕೊಟ್ಟಿಗೆ, ಇರುವೆಗೂಡು, ಎಲ್ಲವನು ಎಚ್ಚರಿಸಿ ಇದಿರು ನಿಲ್ಲಿಸಿ ಶಾಸನವ ಪಾಲಿಸಯ್ಯ ಕನ್ನಡ ಕಾಪಾಡಲು ಕೆಲಸ, ತಿಳಿಸಯ್ಯ, ಕುಶಲ ಕಲಿಸಯ್ಯ ಎಂಬ ಬೇಡಿಕೆಯಿದೆ. ಇಂಥ ಪರಿಸ್ಥಿತಿಯಲ್ಲಿ ಕನ್ನಡವೇ ಜೀವನದ ಉಸಿರಾಗದಿದ್ದರೆ ಕನ್ನಡ ಉಳಿಯುವುದು ಕಷ್ಟವಾಗುತ್ತದೆ.

ಹೀಗೆ ಪ್ರಬುದ್ಧ ಕರ್ಣಾಟಕವು ಕನ್ನಡಿಗರಲ್ಲಿ ಕನ್ನಡದ ಬಗ್ಗೆ ಅಭಿಮಾನ ಬೆಳೆಸುವ, ಕಾರ್ಯವನ್ನು ನೆರವೇರಿಸಿತು. ತಮ್ಮ ಭಾಷೆಯ ಬಗ್ಗೆ ಅಭಿಮಾನ ತಳೆಯಲು ಇರುವ ಕಾರಣಗಳೇನು ಎಂಬುದನ್ನು ಕನ್ನಡ ಜನತೆಯ ಮುಂದೆ ತೆರೆದಿಟ್ಟಿತು. ಪರಭಾಷೆಗಳ ವ್ಯಾಮೋಹದಿಂದ ಬಿಡುಗಡೆ ಹೊಂದಿ ಕನ್ನಡಕ್ಕಾಗಿ ದುಡಿಯಬೇಕೆಂಬ ಭಾವನೆಯನ್ನು ಕನ್ನಡಿಗರಲ್ಲಿ ಜಾಗೃತಿಗೊಳಿಸಿತು. ಕನ್ನಡದ ಪರ ಹೋರಾಡುವುದಕ್ಕೆ ಬೇಕಾದ ಕೆಚ್ಚನ್ನು ತುಂಬಿತು. ನಮ್ಮ ಭಾಷೆ ಉತ್ಕೃಷ್ಟವಾದದ್ದು. ಭಾರತದಲ್ಲಿ ಮಾತ್ರವಲ್ಲದೆ ವಿಶ್ವಮಟ್ಟದಲ್ಲೂ ಗಮನಸೆಳೆಯುವ ಕವಿಗಳು ಅವರ ವಿಚಾರಧಾರೆಗಳು ನಮ್ಮ ಭಾಷೆಯಲ್ಲೂ ಇದೆ ಎಂಬ ಆತ್ಮವಿಶ್ವಾಸವನ್ನು ತುಂಬಿತು. ಆತ್ಮಾಭಿಮಾನದಿಂದ ಕನ್ನಡಿಗರು ತಮ್ಮ ನುಡಿಯ ಬಗ್ಗೆ ಹೆಮ್ಮೆಪಡುವಂತೆ ಮಾಡುವುದಷ್ಟೇ ಅಲ್ಲದೆ ಕನ್ನಡವನ್ನು ಆಧುನಿಕಗೊಳಿಸುತ್ತಾ ಪುಷ್ಟಿ ನೀಡಬೇಕೆಂಬ ಪ್ರಚೋದನೆಯನ್ನು ನೀಡಿತು. ಹೀಗೆ ಕನ್ನಡಿಗರಲ್ಲಿ ಕನ್ನಡಾಭಿಮಾನವನ್ನು ಬೆಳೆಸುವುದರಲ್ಲಿ ಈ ಪತ್ರಿಕೆ ನಿರ್ವಹಿಸಿದ ಪಾತ್ರ ಹಿರಿದಾದದ್ದು. ಇದೇ ಸಂದರ್ಭದಲ್ಲಿಯೇ ಕನ್ನಡ ಭಾಷೆ ಮಾಧ್ಯಮದ ಭಾಷೆಯಾಗಿ ಶಿಕ್ಷಣದಲ್ಲಿ

---

೧. ಎಸ್.ವಿ.ರಂಗಣ್ಣ, ಪ್ರ.ಕ., ಸಂಪುಟ ೨೦, ಸಂಚಿಕೆ ೩, ಪು. ೧೪.

ಬಳಕೆಯಾಗುವುದರಿಂದ ಅದರ ಉಪಯುಕ್ತತೆ ಹೆಚ್ಚು ಎಂಬುದನ್ನು ಗಮನಿಸಿರುವ ಪತ್ರಿಕೆ ದೊರಕಿಸಿಕೊಡುವ ಪ್ರಯತ್ನಮಾಡಿದೆ.

**ಶಿಕ್ಷಣ ಕ್ಷೇತ್ರದಲ್ಲಿ ಕನ್ನಡಕ್ಕೆ ಆದ್ಯತೆ**

ಕರ್ಣಾಟಕದಲ್ಲಿ ದೇಶಭಾಷೆಯಾದ ಕನ್ನಡದಲ್ಲಿಯೇ ಪಾಠ ನಡೆಯಬೇಕು ಎಂದು ತನ್ನ ಆರಂಭದ ದಿನಗಳಿಂದಲೂ ಪ್ರಬುದ್ಧ ಕರ್ಣಾಟಕವು ಪ್ರತಿಪಾದಿಸುತ್ತಾ ಬಂದಿದೆ. ಆ ವಿಚಾರಕ್ಕೆ ಸಂಬಂಧಿಸಿದಂತೆ ಅಲ್ಲಲ್ಲಿ ಏಳುತ್ತಿದ್ದ ತಕರಾರುಗಳಿಗೆ ಉತ್ತರವನ್ನು ನೀಡುತ್ತಾ ಕನ್ನಡದ ಪರವಾಗಿ ಸದೃಢವಾಗಿ ನಿಂತಿದೆ. ಆಯಾ ಪ್ರಾಂತ್ಯಗಳಲ್ಲಿ ಯಾವುದು ದೇಶಭಾಷೆಯಾಗಿರುತ್ತದೋ ಅಂಥ ಭಾಷೆಗಳಲ್ಲೇ ಪಾಠಪ್ರವಚನ ನಡೆಯಬೇಕು ಎಂಬುದನ್ನು ತನ್ನ ಸಂಪಾದಕೀಯಗಳ ಮೂಲಕ ಬೆಂಬಲಿಸಿದೆ ಮತ್ತು ತನ್ನ ವಿಚಾರಗಳನ್ನು ಬೆಂಬಲಿಸುವವರ ಅಭಿಪ್ರಾಯಗಳನ್ನು ಆಯ್ದು ಪ್ರಕಟಿಸುವುದರ ಮೂಲಕ ಬೆಂಬಲವನ್ನು ಕ್ರೋಢೀಕರಿಸಿಕೊಡುವ ಪ್ರಯತ್ನ ನಡೆಸಿದೆ. ಶಿಕ್ಷಣ ಕ್ಷೇತ್ರದ ಒಡನಾಟದಿಂದ ಅದರಲ್ಲಿಯ ಸಮಸ್ಯೆಗಳ ಬಗ್ಗೆ, ಕಾರಣಗಳ ಬಗ್ಗೆ ಸ್ಪಷ್ಟ ಅರಿವಿರುವ ಕಾರಣ ಶಿಕ್ಷಣ ವಿಚಾರಗಳ ಕಡೆ ಹೆಚ್ಚಿನ ಗಮನಹರಿಸಿದೆ. ವಿಶ್ವವಿದ್ಯಾಲಯದ ಅಧ್ಯಾಪಕರ ನೇತೃತ್ವದಲ್ಲಿ ಪ್ರಕಟಗೊಳ್ಳುತ್ತಿದ್ದ ಪತ್ರಿಕೆಯಾದುದರಿಂದ ಇದರಲ್ಲಿ ಪ್ರಕಟಗೊಂಡ ವಿಷಯಗಳಿಗೆ ಹೆಚ್ಚಿನ ಮಹತ್ವವಿದೆ.

ದೇಶೀಭಾಷೆಯ ಮೂಲಕವೇ ಎಂದರೆ ಕನ್ನಡದ ಮೂಲಕವೇ ಶಿಕ್ಷಣ ದೊರೆಯಬೇಕೆಂಬ ವಿಚಾರಕ್ಕೆ ಪ್ರಾಧಾನ್ಯತೆ ನೀಡಿದ ಸಂಪಾದಕರು ಕನ್ನಡವು ಪಾಠಪ್ರವಚನದ ಭಾಷೆಯಾಗಿ ಪ್ರಥಮ ಭಾಷೆಯಾಗಿ, ಕಡ್ಡಾಯ ಭಾಷೆಯಾಗಿ, ಕನ್ನಡವು ಬಳಕೆಗೊಳ್ಳುವ ಸಂದರ್ಭದ ಸಾಧಕ ಭಾದಕಗಳ ಬಗೆಗೆ ಚರ್ಚಿಸಿದ್ದಾರೆ. ದೇಶಭಾಷಾ ಸಾಹಿತ್ಯ ಹಾಗು ಜನಜೀವನದಲ್ಲಿ ಉಂಟಾಗಿರುವ ದೌರ್ಬಲ್ಯಕ್ಕೆ ನಮ್ಮಲ್ಲಿ ಇರುವ ವಿದ್ಯಾಭ್ಯಾಸದ ಪರಿಸ್ಥಿತಿಯೇ ಕಾರಣವೆಂಬುದನ್ನು ಪ್ರಬುದ್ಧ ಕರ್ಣಾಟಕದ ಸಂಪಾದಕರು ಆರಂಭದಲ್ಲಿಯೇ ಗುರುತಿಸಿದ್ದಾರೆ. ಆ ಕಾಲಘಟ್ಟದಲ್ಲಿ ಕರ್ನಾಟಕದ ನೆರೆಹೊರೆಯ ಹೈದರಾಬಾದ್ ಹಾಗೂ ಕಲ್ಕತ್ತೆಯ ವಿಶ್ವವಿದ್ಯಾನಿಲಯದಲ್ಲಿ ಆಯಾ ದೇಶಭಾಷೆಯಲ್ಲೇ ಪಾಠಪ್ರವಚನ ನಡೆಸಲು ಆದ್ಯತೆ ನೀಡಿರುವಂತೆಯೇ ಕನ್ನಡನಾಡಿನಲ್ಲೂ ಅದೇ ಆದ್ಯತೆ ಸಿಗಬೇಕೆಂದು ಆಶಿಸಿದ್ದಾರೆ. ಅವರು ಸುಮಾರು ನೂರು ವರ್ಷಗಳ ಹಿಂದೆಯೇ ಚರ್ಚಿಸಿದ ವಿಷಯಗಳು ನೀಡಿದ ಸಲಹೆಗಳು ಇಂದಿಗೂ ಔಚಿತ್ಯಪೂರ್ಣವಾಗಿದ್ದು ಮಾರ್ಗದರ್ಶಿಯಾಗಿದೆ.

ದೇಶೀಭಾಷೆಯಲ್ಲಿ ಪಾಠಗಳನ್ನು ನಡೆಸಲು ಹೊರಟರೆ ಅದರಿಂದ ಸಾಕಷ್ಟು ತೊಂದರೆಗಳು ಎದುರಾಗುತ್ತವೆ ಎಂದು ವಾದಿಸಿ ಅಡ್ಡಿ ಉಂಟುಮಾಡುವವರನ್ನು ವಿರೋಧಿಸಿದ್ದಾರೆ. "ನಿಜ ಯಾವುದಕ್ಕೆ ಭಾದಕಗಳಿಲ್ಲ. ಊಟಮಾಡುವುದಕ್ಕಿಲ್ಲವೇ?

ಊತಣ ಊಟ ಮಾಡುತ್ತಿರುವಾಗ ಡಾಕ್ಟರುಗಳು ಎದುರಿಗೆ ಬಂದು "ವಾಂಕಾಯಿವಾತಂ ತೆಂಕಾಯಿ ಪಿತ್ತಂ" ಎಂದು ದೋಷೋದ್ಘಾಟನಕ್ಕೆ ಕುಳಿತರೆ ದಿವ್ಯ ಭೋಜನವನ್ನು ಬಿಟ್ಟು ಎದ್ದು ಹೋಗಿಬಿಡೋಣವೆನ್ನಿಸುವುದು. ಆದರೆ ಊಟದಲ್ಲಿ ನಾವು ಗುಣಗ್ರಾಹಿಗಳು, ವಿವೇಕಿಗಳು, ಡಾಕ್ಟರೂ ಊಟಮಾಡಿ ತೇಗುವರು ನಾವೂ ತೃಪ್ತಿಯಾಗಿ ಊಟಮಾಡಿ ಸುಖಪಟ್ಟು ಬಿಡುವೆವು[೧] ಎಂದು ವ್ಯಂಗ್ಯಮಾಡಿದ್ದಾರೆ. ಸಮಸ್ಯೆಗಳು ಅಡಚಣೆಗಳು ಎಲ್ಲದರಲ್ಲೂ ಇರುತ್ತವೆ. ಅಲ್ಪವಾದ ಸಮಸ್ಯೆಗಳನ್ನೇ ಹೆಚ್ಚು ಮಾಡಿ ನೋಡಿದಾಗ ಅವು ಬೃಹದಾಕಾರವಾಗಿ ಕಾಣುವುದೇ ಹೊರತು ಅದನ್ನು ನಿರ್ಲಕ್ಷಿಸಿ ಮುನ್ನಡೆದಾಗ ಮಾತ್ರ ನಮಗೆ ಬೇಕಾದ ಗುರಿ ತಲುಪಬಹುದು. ಹಾಗೆಯೇ ಭಾಷೆಯ ವಿಚಾರವೂ ಕೂಡ. ಊಟ ಮಾಡುವ ಸಂದರ್ಭದಲ್ಲಿ ನಾವು ಹೇಗೆ ನಮ್ಮ ಕಾರ್ಯ ಸಿದ್ಧಿಸಿಕೊಳ್ಳುತ್ತೇವೆಯೋ ಹಾಗೆಯೇ ದೇಶಭಾಷೆಯಲ್ಲಿ ನಡೆಯಬೇಕಾದ ಪಾಠಪ್ರವಚನಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳು ಮುಂದೆ ಬರಬಹುದೆಂದು ಊಹಿಸುತ್ತಾ ಆ ಕಾರ್ಯವನ್ನೇ ಮುಂದೂಡುವುದು ಸರಿಯಲ್ಲ. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಯಾವ ಸ್ಥಾನವೂ ದೊರಕುತ್ತಿಲ್ಲ. ಅದು ವಿದ್ಯಾಭ್ಯಾಸದ ಸಂದರ್ಭದಲ್ಲಿಯಂತೂ ದೊರೆಯಲೇ ಬೇಕಾಗಿದೆ. ಹಾಗಾಗಿಯೇ ಸಂಪಾದಕರು "ಅದನ್ನು ಮೇಲಿನ ತರಗಳಲ್ಲದಿದ್ದರೆ ಸ್ಕೂಲ್ ಫೈನಲ್ ತರಗತಿಯವರೆವಿಗಾದರೂ ಇತರ ಕಡೆಗಳಲ್ಲಿ ಬಳಕೆಗೆ ಬರುತ್ತಿರುವಂತೆ ಪಾಠ ಹೇಳುವ ಭಾಷೆಯನ್ನಾಗಿ ಇಟ್ಟುಕೊಳ್ಳಬಾರದೇಕೆ?[೨] ಎಂದು ಪ್ರಶ್ನಿಸಿದ್ದಾರೆ. ದೇಶೀ ಭಾಷೆಯೇ ಮಾಧ್ಯಮದ ಭಾಷೆಯಾಗಬೇಕೆಂಬ ಆಲೋಚನೆ ಬೇರೆ ಬೇರೆ ಬಗೆಯಲ್ಲಿ ವ್ಯಕ್ತವಾಗುತ್ತಿದ್ದರೂ ಅದು ನಾಡಿನಲ್ಲಿ ಕಾರ್ಯರೂಪಕ್ಕೆ ಬರಬೇಕಾಗಿತ್ತು. ಈ ಸಂದರ್ಭದಲ್ಲಿ ಕಾಲ ಸ್ವಲ್ಪ ಪಕ್ವವಾಗಿರುವಂತೆ ತೋರುತ್ತಿದ್ದುದರಿಂದ ಭಾಷೆಯ ಬಗ್ಗೆ ಅಭಿಮಾನ ಇರುವವರು ಅಧಿಕಾರ ಇರುವವರು ಈ ಕಡೆ ಗಮನಹರಿಸಬೇಕಾಗಿತ್ತು.

ಪ್ರಬುದ್ಧ ಕರ್ಣಾಟಕ ಇಂತಹ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದ ಸಮಯದಲ್ಲೇ ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್ ಪತ್ರಿಕೆಯು ದೇಶಭಾಷಾ ಮಾಧ್ಯಮದ ಆಚರಣೆಗೆ ಇರುವ ಸಮಸ್ಯೆಗಳನ್ನು ಪ್ರಸ್ತಾಪಸಿ ಲೇಖನವೊಂದನ್ನು ಪ್ರಕಟಿಸಿತು. ಅದು ಪ್ರಸ್ತಾಪಸಿದ ಸಮಸ್ಯೆಗಳಲ್ಲಿ ಪ್ರಮುಖವಾದದ್ದು ದೇಶ ಭಾಷೆಗಳಲ್ಲೇ ಪಾಠ ಪ್ರವಚನಗಳನ್ನು ಪ್ರಾರಂಭಿಸಿದರೆ ಅದಕ್ಕೆ ಬೇಕಾದ ಪಠ್ಯಪುಸ್ತಕಗಳು ಎಲ್ಲಿವೆ? ದೇಶಭಾಷೆಯಲ್ಲೇ ಪಾಠ ಹೇಳುವ ಉಪಾಧ್ಯಯರು ಎಲ್ಲಿದ್ದಾರೆ? ಒಂದು ನಾಡಿನಲ್ಲಿ ಎಷ್ಟು ದೇಶ ಭಾಷೆಗಳಲ್ಲಿ ಬೋಧನೆ ಏರ್ಪಾಡು ಮಾಡಲು ಸಾಧ್ಯ? ಕನ್ನಡದಲ್ಲಿಯೇ

---

೧. ವಸ್ತುಕೋಶ, ಪ್ರಕ. ಸಂ. ೪, ಸಂ. ೧, ಪು. ೩.
೨. ವಸ್ತುಕೋಶ, ಪ್ರಕ. ಸಂ. ೪, ಸಂ. ೧, ಪು. ೩.

ಎಲ್ಲವನ್ನೂ ಕಲಿತುಕೊಂಡರೆ ಮುಂದಕ್ಕೆ ಅಂಥವರ ಭವಿಷ್ಯವೇನು? ಇತ್ಯಾದಿ. ಪ್ರಬುದ್ಧ ಕರ್ಣಾಟಕದ ಸಂಪಾದಕರು ಇಂತಹ ಸಮಸ್ಯೆಗಳ ಕಡೆ ಗಮನಹರಿಸಿದ್ದಾರೆ. ದೇಶಭಾಷೆಯಲ್ಲೇ ಪಾಠಪ್ರವಚನಗಳು ಆರಂಭವಾಗಿ ಬಿಟ್ಟರೆ ಗತಿಯೇನು ಎಂದು ಗಾಬರಿಗೊಂಡವರಿಗೆ ಸಾಂತ್ವನ ಹೇಳುತ್ತಾರೆ. ಹೈಸ್ಕೂಲು ಪತ್ರಿಕೆ ಎತ್ತಿದ ಆಕ್ಷೇಪಗಳಲ್ಲಿ ಒಂದೊಂದನ್ನೇ ಪರಿಗಣಿಸಿ ಅದಕ್ಕೆ ಸಮರ್ಪಕ ಉತ್ತರ ನೀಡಿದ್ದಾರೆ.[೧]

ದೇಶಭಾಷೆಯಲ್ಲಿ ಪಾಠಪ್ರವಚನ ಮಾಡುವುದಕ್ಕೆ ಬೇಕಾದಷ್ಟು ಪಠ್ಯಪುಸ್ತಕಗಳು ದೊರಕುವುದಿಲ್ಲ ಎಂಬ ಆಕ್ಷೇಪಣೆಗೆ ವಿದ್ಯಾ ಇಲಾಖೆಯವರು ತೋರಿಸಿದ ಆಸಕ್ತಿಯ ಪರಿಣಾಮವಾಗಿ ಭೌತಶಾಸ್ತ್ರದ ಬಗ್ಗೆ ಸುಮಾರು ೧೫೦೦ ಪುಟಗಳಿಗಿಂತ ಹೆಚ್ಚು ಅಧಿಕವಾದ ಗ್ರಂಥಗಳು ಹುಟ್ಟಿಕೊಂಡಿದೆ. ಇದೇ ರೀತಿಯ ಆಸಕ್ತಿಯನ್ನು ಉಳಿದ ವಿಷಯಗಳ ಮೇಲೂ ತೋರಿದರೆ ಅವಶ್ಯಕತೆಯನ್ನು ಪೂರೈಸಬಲ್ಲ ಗ್ರಂಥಗಳು ರಚಿತವಾಗುವುದು ಕಷ್ಟವೇನಲ್ಲ. ಇನ್ನು ದೇಶಭಾಷೆಯಲ್ಲಿ ಪಾಠ ಮಾಡುವ ವಿಚಾರಕ್ಕೆ ಬಂದರೆ ಬಂಗಾಳದಲ್ಲಿ ಜಗದೀಶ ಚಂದ್ರಬೋಸರು ತಾವು ಮಾಡುವ ಸಂಶೋಧನಾ ಕಾರ್ಯಗಳನ್ನು ಬಂಗಾಳಿಯಲ್ಲಿ ಬರೆಯುತ್ತಿದ್ದಾರೆ. ತೆಲುಗಿನಲ್ಲಿ ವಿಜ್ಞಾನ ಚಂದ್ರಿಕೆ ಬರುತ್ತಿದೆ. ವಸ್ತುಸ್ಥಿತಿ ಹೀಗಿರುವಾಗ ಕನ್ನಡನಾಡಿನಲ್ಲೂ ಉತ್ಸಾಹಶಾಲಿಗಳಿದ್ದು ಅವರೂ ಕನ್ನಡದಲ್ಲಿ ಗ್ರಂಥಗಳನ್ನು ಬರೆಯುವುದಾಗಲೀ ಕನ್ನಡದಲ್ಲಿಯೂ ಬೋಧಿಸುವುದಾಗಲೀ ಕಷ್ಟದ ವಿಚಾರವಾಗಲಾರದು. ಒಂದು ನಾಡಿನಲ್ಲಿ ಎಷ್ಟು ದೇಶ ಭಾಷೆಗಳಲ್ಲಿ ಬೋಧನೆ ಏರ್ಪಾಟು ಮಾಡಬೇಕು ಎಂಬ ಪ್ರಶ್ನೆಯೇ ಸರಿಯಾದುದಲ್ಲ. ಏಕೆಂದರೆ ಮೈಸೂರಿನ ದೇಶಭಾಷೆ ಕನ್ನಡ ಇದು ತಕ್ಷಣವಲ್ಲದಿದ್ದರೂ ಕ್ರಮೇಣವಾಗಿಯಾದರೂ ಅಭಿವೃದ್ಧಿಯನ್ನು ಪಡೆದೇ ತೀರುತ್ತದೆ. ಇಂಥ ಸಂದರ್ಭದಲ್ಲಿ ಕನ್ನಡನಾಡಿನಲ್ಲಿದ್ದೂ ಕನ್ನಡವನ್ನರಿಯದವರೂ ಕೂಡ ದೇಶಭಾಷೆ-ಯನ್ನು ಕಲಿಯಲೇಬೇಕಾಗುತ್ತದೆ. ಕೊನೆಯದಾಗಿ ಕನ್ನಡ ಭಾಷೆಯಲ್ಲೇ ಎಲ್ಲವನ್ನೂ ಕಲಿತುಕೊಂಡರೆ ಮುಂದೆ ಪ್ರಯೋಜನವಾಗುವುದಿಲ್ಲ ಎಂಬ ಅಭಿಪ್ರಾಯವೇ ಸರಿಯಾದುದಲ್ಲ. ಏಕೆಂದರೆ ಇಂಗ್ಲಿಷ್ ಭಾಷೆಯಲ್ಲೇ ಎಲ್ಲವನ್ನೂ ಕಲಿತು ಮುಂದೇನು ಮಾಡಬೇಕೆಂದು ತೋಚದೆ ಇರುವ ನೂರಾರು ವಿದ್ಯಾವಂತರು ನಮ್ಮ ಸುತ್ತಮುತ್ತಲಿದ್ದಾರೆ. ಕಲಿಯುವ ವಿದ್ಯೆ ಪ್ರಮುಖವಾಗಬೇಕೇ ಹೊರತು ಅದು ಇದೇ ಮಾಧ್ಯಮದ ಮೂಲಕವೇ ನಡೆಯಬೇಕೆನ್ನುವುದು ಸರಿಯಲ್ಲ. ಇಂತಹ ತಪ್ಪು ತಿಳುವಳಿಕೆಗಳು ಸಮಾಜದ ಮೇಲೆ ದೀರ್ಘಕಾಲದ ಸಮಸ್ಯೆಗಳನ್ನು ಉಂಟು-ಮಾಡುತ್ತದೆ. ಇದು ಪ್ರಬುದ್ಧ ಕರ್ಣಾಟಕದ ನಂಬಿಕೆ.

---

೧. ಹೆಚ್ಚಿನ ವಿವರಗಳು ಪ್ರ.ಕ. ಸಂ. ೪ ಸಂ. ೨ರಲ್ಲಿ ಲಭ್ಯವಿದೆ.

ಅಂದು ಸಂಪಾದಕರು ನೀಡಿದ ಈ ಉತ್ತರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಕನ್ನಡನಾಡಿನಲ್ಲಿರುವವರು ಕನ್ನಡವನ್ನು ಕಲಿಯಲೇಬೇಕಾಗುತ್ತದೆ ಎಂಬ ಆಶಾಭಾವನೆಯನ್ನೂ ಹಾಗೆ ಕಲಿಯುವ ವಿದ್ಯೆಯು ದೇಶಭಾಷೆಯ ಮೂಲಕವೇ ದೊರೆತಾಗ ಹೆಚ್ಚು ಪ್ರಯೋಜನಕಾರಿ ಎಂಬ ನಂಬುಗೆಯನ್ನು ವ್ಯಕ್ತಗೊಂಡಿರು-ವುದನ್ನು ಗಮನಿಸಬಹುದು. ನಂತರದ ದಿನಗಳಲ್ಲಿ ಪ್ರಾಥಮಿಕ ಮಟ್ಟದಲ್ಲಿ ಅಷ್ಟೇ ಅಲ್ಲದೆ ಹೈಸ್ಕೂಲಿನವರೆಗೂ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು. ಇದಕ್ಕೆ ಕಾರಣಗಳು ಇವೆ ಎಂಬುದನ್ನು ಸ್ಪಷ್ಟಪಡಿಸುವ ಪ್ರಬುದ್ಧ ಕರ್ಣಾಟಕ ಅದರ ಕಡೆ ಗಮನಸೆಳೆಯುವ ಪ್ರಯತ್ನ ಮಾಡಿದೆ. ಕನ್ನಡ ಭಾಷೆಯೇ ಶಿಕ್ಷಣ ಮಾಧ್ಯಮ-ವಾಗಬೇಕು ಎಂಬ ಅದರ ಆಸೆ ಕಾಲದಿಂದ ಕಾಲಕ್ಕೆ ವಿಸ್ತೃತಗೊಳ್ಳುತ್ತಾ ಸಾಗಿದುವು ಗಮನಿಸಬೇಕಾದ ಅಂಶ.

ಹೈಸ್ಕೂಲು ವಿದ್ಯಾರ್ಥಿಗಳಿಗೆ ಆಂಗ್ಲಭಾಷಾ ಜ್ಞಾನ ಚೆನ್ನಾಗಿ ಇರುವುದಿಲ್ಲ. ಅದನ್ನು ಸ್ವತಂತ್ರವಾಗಿ ಉಪಯೋಗಿಸುವ ಶಕ್ತಿ ಇರುವುದಿಲ್ಲ. ಪರೀಕ್ಷೆಯ ದೃಷ್ಟಿಯಿಂದ ಕಷ್ಟಪಟ್ಟು ಅಭ್ಯಾಸಮಾಡಿ ತೇರ್ಗಡೆಹೊಂದಬಹುದೇ ಹೊರತು ಅದರಿಂದ ಜ್ಞಾನದ ಅಭಿವೃದ್ಧಿಯಾಗುವುದಿಲ್ಲ. ಆದರೆ ಸ್ವಭಾಷೆಯಿಂದ ವಿದ್ಯೆಯನ್ನು ಕಲಿಸುವುದರಿಂದ ಅದು ವಿದ್ಯಾರ್ಥಿಗಳ ಜ್ಞಾನವನ್ನು ಅಭಿವೃದ್ಧಿಮಾಡುತ್ತದೆ ಎಂಬ ಈ ವಿಚಾರಗಳನ್ನು ಅರಿತಿರುವ ಸಂಪಾದಕರು "ಸಾರ್ವತ್ರಿಕವಾಗಿರುವ ಕನ್ನಡವನ್ನು ನಮ್ಮ ಹೈಸ್ಕೂಲು ಪಾಠದ ಭಾಷೆಯನ್ನಾಗಿ ಮಾಡುವುದರ ಮೂಲಕ ವಿದ್ಯಾರ್ಥಿಗಳ ಶ್ರಮವನ್ನು ತಗ್ಗಿಸಿ ಪ್ರಯೋಜನವನ್ನು ಹೆಚ್ಚಿಸುವುದು ನಮ್ಮ ಸದ್ಯದ ಕರ್ತವ್ಯವಲ್ಲವೇ"[೧] ಎಂದು ಪ್ರಶ್ನಿಸಿದ್ದಾರೆ. ಪ್ರಶ್ನೆಯಲ್ಲೇ ಉತ್ತರವೂ ಅಡಗಿದೆ. ಹೈಸ್ಕೂಲು ಮಟ್ಟದ-ವರೆವಿಗಾದರೂ ಕನ್ನಡ ಭಾಷೆಯೇ ಶಿಕ್ಷಣದ ಮಾಧ್ಯಮವಾಗಲೇಬೇಕೆಂಬ ಧ್ವನಿ ಕೇಳಿಸುತ್ತಿದೆ. ಈ ರೀತಿ ಕನ್ನಡ ಪರವಾದ ಧ್ವನಿ ಕೇಳಿಬರುತ್ತಿದ್ದ ಸಂದರ್ಭದಲ್ಲಿಯೇ ಅಲ್ಲಲ್ಲಿ ಭಿನ್ನಾಭಿಪ್ರಾಯಗಳೂ ವ್ಯಕ್ತವಾಗುತ್ತಿದ್ದು ಉಂಟು. ಕನ್ನಡವನ್ನೇ ಶಿಕ್ಷಣ ಮಾಧ್ಯಮವನ್ನಾಗಿಸಿದರೆ ಬೇರೆ ಭಾಷಿಕರಿಗೆ ತೊಂದರೆ ಆಗುವುದಿಲ್ಲವೇ? ಆದುದರಿಂದ ಅವರುಗಳನ್ನು ಒತ್ತಾಯಪಡಿಸುವುದು ಬೇಡ ಬದಲಾಗಿ ಅವರ ಮನವೊಲಿಸಿ ಕನ್ನಡದ ಕಡೆ ತಿರುಗುವಂತೆ ಮಾಡಬೇಕು ಎಂಬ ಅಭಿಪ್ರಾಯಗಳು ಕೇಳಿಬರುತ್ತಿದ್ದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕ ಅದನ್ನು ಪ್ರಬಲವಾಗಿ ವಿರೋಧಿಸುತ್ತದೆ.

ಕನ್ನಡವನ್ನು ನಿರ್ಬಂಧದ ಭಾಷೆಯನ್ನಾಗಿ ಮಾಡುವ ವಿಚಾರಕ್ಕೆ ಸಂಬಂಧಿಸಿದಂತೆ ೧೯೨೮ರಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯಲ್ಲಿ ಅಂದಿನ

---

೧. ವಸ್ತುಕೋಶ, ಪ್ರ.ಕ. ಸಂಪುಟ ೧೫, ಸಂಚಿಕೆ ೨, ಪು. ೧೦೭.

ಶಿಕ್ಷಣಸಚಿವರು "ನಾಡಿನ ಅಭ್ಯುದಯಕ್ಕೆ ಮಾತೃಭಾಷೆಯ ಮೂಲಕ ಕೊಡುವ ಶಿಕ್ಷಣವೇ ಮೂಲ. ಆದರೆ ಮುಸಲ್ಮಾನ ಬಂಧುಗಳನ್ನು ಒತ್ತಾಯಪಡಿಸದೆ ಅವರಾಗಿ ಅವರೇ ಕನ್ನಡ ಕಲಿಯುವಂತೆ ಮಾಡಬೇಕು"[೧] ಎಂಬ ಅಭಿಪ್ರಾಯವ್ಯಕ್ತಪಡಿಸಿದಾಗ ಸಂಪಾದಕರು ಅದಕ್ಕೆ ಖಾರವಾಗಿಯೇ ಪ್ರತಿಕ್ರಿಯೆಯನ್ನು ನೀಡಿದರು. ಮುಸಲ್ಮಾನ ಬಂಧುಗಳನ್ನು ಒತ್ತಾಯಪಡಿಸಬಾರದು ಎಂಬ ವಿಚಾರಕ್ಕೆ ಸಂಬಂಧಿಸಿದಂತೆ ಹುಟ್ಟಿನಿಂದ ಯಾವುದೇ ಧರ್ಮಕ್ಕೆ ಸೇರಿದವನಾದರೂ ಭಾಷೆಯ ವಿಷಯ ಬಂದಾಗ ಎಲ್ಲರೂ ಒಂದೇ ಎಂಬ ನಿಲುವನ್ನು ಪ್ರತಿಪಾದಿಸಿದರು. ಬೇರೆ ಸಮುದಾಯದ ಜನರಿಂದ ವಿರೋಧವು ವ್ಯಕ್ತವಾಗಬಹುದು ಎಂಬ ಅಂಜಿಕೆಯೂ ಇಲ್ಲದೆ ತಮ್ಮ ಅಭಿಪ್ರಾಯಗಳನ್ನು ಪ್ರತಿಪಾದಿಸಿದರು. ಭಾಷೆಯ ವಿಷಯ ಬಂದಾಗ ಅಗತ್ಯವಾಗಿ ತೋರಬೇಕಾದ ಧೈರ್ಯವನ್ನು ತೋರಿಸಿದರು. ಇಂತಹ ನಿಲುವುಗಳಿಂದಲೇ ಭಾಷೆಗೆ ಸಿಗಬೇಕಾದ ಸ್ಥಾನ ದೊರೆಯಲು ಸಾಧ್ಯವಾಗುತ್ತದೆ ಎಂಬುದನ್ನು ಗಮನಿಸಬಹುದು. ಈ ವಿಚಾರಕ್ಕೆ ಸಂಬಂಧಿಸಿದಂತೆ ಪ್ರಬುದ್ಧ ಕರ್ಣಾಟಕವು ತನ್ನ ಹತ್ತನೆಯ ಸಂಪುಟದ ವಸ್ತುಕೋಶದಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಗಮನಾರ್ಹವಾಗಿದೆ. ವೈಯಕ್ತಿಕ ವಿಚಾರಗಳು ಬಂದಾಗ ಪ್ರತಿಯೊಬ್ಬ ವ್ಯಕ್ತಿಯೂ ಮೊದಲು ತನ್ನ ಯೋಗಕ್ಷೇಮ ನೋಡಿಕೊಳ್ಳುತ್ತಾನೆ. ನಂತರ ತನ್ನ ಕುಟುಂಬದ ವಿಷಯದಲ್ಲಿ ನಿರ್ವಹಿಸಬೇಕಾದ ಕರ್ತವ್ಯಗಳಿರುತ್ತದೆ. ಹಾಗೆಯೇ ತನ್ನ ನಾಡಿನ ವಿಷಯದಲ್ಲೂ ಉಚ್ಚತರವಾದ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಇದಕ್ಕೆ ವೈಯಕ್ತಿಕ ಸ್ವಾರ್ಥವಾಗಲೀ ಕುಟುಂಬದ ಸ್ವಾರ್ಥವಾಗಲೀ ಅಡ್ಡ ಬರಬಾರದು. ನಾಡಿನ ವಿಚಾರ ಬಂದಾಗಲಂತೂ ನಾಡಿನಲ್ಲಿರುವ ಪ್ರತಿ ಕುಟುಂಬದವರು ಎಂದರೆ ಅವರು ಯಾವುದೇ ಜಾತಿ, ಧರ್ಮ, ಪಂಗಡದವರಾಗಿರಲೀ ಅವರು ಸರ್ಕಾರದೊಡನೆ ಸಹಕರಿಸಬೇಕು. ತಾನು ಉಳಿದವರಿಗಿಂತ ಭಿನ್ನ ಎಂಬ ಅಭಿಪ್ರಾಯವನ್ನು ತೊರೆದು ಒಟ್ಟು ನಾಡಿನ ಶ್ರೇಯಸ್ಸಿಗೆ ಹಾಗೂ ಅದರ ಮೂಲಕ ತನ್ನ ಶ್ರೇಯಸ್ಸಿಗೆ ದುಡಿಯಬೇಕು. ಕರ್ನಾಟಕದ ನಾಡಭಾಷೆ ಕನ್ನಡ ಹಾಗಾಗಿ ಇಲ್ಲಿರುವವರೆಲ್ಲರೂ ಕನ್ನಡವನ್ನು ಕಲಿಯಲೇಬೇಕು. ಮತ ಧರ್ಮ ಆಚಾರ ಇವೆಲ್ಲವೂ ಅವರವರ ಗೃಹಕೃತ್ಯದ ಹಾಗೆ. ಇದನ್ನು ಪಾಲಿಸುವುದರಿಂದ ಅವರವರು ಮಾತ್ರ ಉದ್ಧಾರವಾಗಬಹುದೇ ಹೊರತು ಎಲ್ಲರೂ ಅಲ್ಲ. ಹಾಗೆಯೇ ಇಸ್ಲಾಂ ಸಂಸ್ಕೃತಿ ಭಿನ್ನವಾಗಿರಬಹುದು. ಅಂದ ಮಾತ್ರಕ್ಕೆ ಪಾಠ ಪ್ರವಚನಗಳನ್ನು ಅವರ ಭಾಷೆಯ ಮೂಲಕವೇ ತಿಳಿದುಕೊಳ್ಳಬೇಕಾಗಿಲ್ಲ. ಗ್ರೀಕ್, ಚೈನಾ, ಮೊದಲಾದ ದೇಶಗಳ ಸಂಸ್ಕೃತಿಗಳನ್ನು ನಾವು ಆಂಗ್ಲಭಾಷೆಯ ಮೂಲಕ

---

೧. ವಸ್ತುಕೋಶ, ಪ್ರಕ. ಸಂಪುಟ ೧೫, ಸಂಚಿಕೆ ೨, ಪು. ೧೦೭.

ಪಡೆದುಕೊಳ್ಳುತ್ತಿರುವಂತೆಯೇ ಮಹಮ್ಮದೀಯರೂ ಅವರ ಭಾಷೆಯಲ್ಲಿರುವ ಗ್ರಂಥಗಳನ್ನೂ ಕನ್ನಡದ ಮೂಲಕವೇ ಓದುವಂತಾಗಬೇಕು.

ನಮ್ಮ ನಾಡಿಗೆ ಪರದೇಶದಿಂದ ಬಂದ ಕ್ರೈಸ್ತ ಪಾದ್ರಿಗಳು, ಧರ್ಮಗ್ರಂಥಗಳು ದೇಶಭಾಷೆಗೆ ಬರುವುದು ಮೊದಲು ಸೋಪಾನವೆಂದು ಬಗೆದು ಕನ್ನಡವನ್ನು ಕಲಿತು ಗ್ರಂಥಗಳನ್ನು ರಚಿಸಿ ಅದರಲ್ಲಿ ಯಶಸ್ಸು ಗಳಿಸಿರುವಂತೆಯೇ ಮಹಮದ್ದೀಯರೂ ಮಾಡಬಹುದು. ಇದರಿಂದಾಗಿ ಅವರಿಗೆ ಎರಡು ಮೂರು ಭಾಷೆಗಳನ್ನು ಕಲಿಯುವ ಕಷ್ಟ ಎದುರಾಗಬಹುದು. ಆದರೆ ಸಮಾಜದ ವ್ಯವಹಾರಗಳನ್ನು ಗಮನಿಸಿದರೆ ಅವಿದ್ಯಾವಂತರೂ ಕೂಡ ಎರಡು ಮೂರು ಭಾಷೆಗಳನ್ನು ಸುಲಭವಾಗಿ ಕಲಿತಿರುತ್ತಾರೆ. ಇದು ಅವರಿಗೇ ಸಾಧ್ಯವಾಗುವಾಗ ವಿದ್ಯಾವಂತರಿಗೇಕೆ ಸಾಧ್ಯವಾಗುವುದಿಲ್ಲ. ಗ್ರಾಮೀಣ ಪ್ರದೇಶಗಳಲ್ಲಂತೂ ಮಹಮದ್ದೀಯರು ಕನ್ನಡಿಗರ ಜೊತೆ ಬೆರೆತು-ಹೋಗಿದ್ದಾರೆ. ಅವರ ಉಚ್ಚಾರಣೆಗಳಲ್ಲಿ ಯಾವುದೇ ಲೋಪದೋಷಗಳನ್ನು ಹುಡುಕಲು ಸಾಧ್ಯವಾಗುವುದಿಲ್ಲ. ವಸ್ತುಸ್ಥಿತಿ ಹೀಗಿರುವಾಗ ಕನ್ನಡ ಮಾಧ್ಯಮದ ವಿಚಾರವನ್ನು ಐಚ್ಛಿಕವಾಗಿ ಅವರವರ ಅನುಕೂಲಕ್ಕೆ ಬಿಡುವುದರಿಂದ ಕನ್ನಡ ನಷ್ಟ ಅನುಭವಿಸಬೇಕಾಗುತ್ತದೆ. ಆದುದರಿಂದ ಕನ್ನಡ ನಾಡಿನಲ್ಲಿ ಕನ್ನಡವೇ ಮಾಧ್ಯಮ ಭಾಷೆಯಾಗಿ ಎಲ್ಲರೂ ಕನ್ನಡದಲ್ಲೇ ಕಲಿಯುವಂತಾಗಬೇಕು. ಇದರಿಂದ ಕನ್ನಡ ಜನತೆ ಹಾಗೂ ವಿಶ್ವವಿದ್ಯಾನಿಲಯದ ನಡುವೆ ಇರುವ ಅಂತರವನ್ನು ಕಡಿಮೆ ಮಾಡಬಹುದು. ಇದು ದೇಶಭಾಷೆಯನ್ನೇ ಶಿಕ್ಷಣದ ಮಾಧ್ಯಮವನ್ನಾಗಿ ಮಾಡು-ವುದರಿಂದ ಸಾಧಿಸಬಹುದಾದ ಕಾರ್ಯ. ಆದರೆ ವಿಶ್ವವಿದ್ಯಾನಿಲಯದ ಬೋಧನೆಯ ಭಾಷೆ ಇಂಗ್ಲಿಷ್ ಆಗಿರುವುದು ಜನಜೀವನಕ್ಕೂ ವಿದ್ಯಾರ್ಥಿ ವರ್ಗದವರಿಗೂ ಉಂಟಾಗಿರುವ ಅಂತರಕ್ಕೆ ಮುಖ್ಯ ಕಾರಣವಾಗಿದೆ ಎಂಬ ವಿಚಾರಗಳನ್ನು ಗಮನಿಸಿರುವ ಸಂಪಾದಕರು ಇಂಗ್ಲಿಷ್ ಭಾಷೆಯ ಮಾಧ್ಯಮಕ್ಕೆ ಒತ್ತು ನೀಡುವ ಕಾಲ ಮುಗಿದಿದ್ದು ಅದಕ್ಕೆ ಹೆಚ್ಚಿನ ಮಹತ್ವ ನೀಡಬೇಕಾಗಿಲ್ಲ ಎಂಬ ನಿಲುವಿಗೆ ಬಂದಿದ್ದಾರೆ. ಸಂಪಾದಕರು ಗುರುತಿಸುವ ಹಾಗೆ "ಇಂಗ್ಲಿಷ್ ಭಾಷೆ ಒಂದಾನೊಂದು ಕಾಲದಲ್ಲಿ ಅವಶ್ಯಕವಾಗಿತ್ತು. ಈಗಲೂ ಅದು ಬೇಕು ಆದರೆ ಅದಕ್ಕೇ ಅತಿಯಾದ ಪ್ರಾಮುಖ್ಯತೆ ನೀಡಬೇಕಾಗಿಲ್ಲ. ಅದನ್ನೇ ಬೋಧನೆಯ ಭಾಷೆಯಾಗಿ ಬಳಸುವುದರಿಂದ ಆತನ ಸಾಮರ್ಥ್ಯವನ್ನೆಲ್ಲಾ ಅದು ತನ್ನೆಡೆಗೇ ಸೆಳೆದುಕೊಳ್ಳುತ್ತದೆ"[೧] ವಿದ್ಯಾರ್ಥಿಯು

---

೧. ಸಂಪಾದಕೀಯ, ಪ್ರ.ಕ. ಸಂಪುಟ ೨೦, ಸಂಚಿಕೆ ೨, ಪು. ೧೫೪.
ಇಂಗ್ಲಿಷ್ ಭಾಷೆಗೆ ಪ್ರಾಮುಖ್ಯತೆ ಬೇಡವೆಂದರೆ ಅದರ ಸಂಪರ್ಕ, ಪರಿಚಯ, ಜ್ಞಾನ ಇವುಗಳ ಅವಶ್ಯಕತೆಯೇ ಇಲ್ಲ ಎಂದು ಅರ್ಥವಲ್ಲ. ಆದರೆ ಒತ್ತಾಯಪೂರ್ವಕವಾಗಿ ಆಂಗ್ಲಭಾಷೆಯನ್ನು ಕನ್ನಡಿಗರ ಮೇಲೆ ಹೇರಬಾರದು. ಇದರಿಂದಾಗಿ ಅವರ ಸೃಜನಾತ್ಮಕ ಶಕ್ತಿ ಕುಂಠಿತವಾಗುತ್ತದೆ.

ಅನಿವಾರ್ಯವಾಗಿ ಅದರಲ್ಲೇ ಅಭ್ಯಾಸ ಮಾಡುವುದರ ಕಡೆಗೆ ತನ್ನ ಬುದ್ಧಿಶಕ್ತಿಯನ್ನು ವಿನಿಯೋಗಿಸಬೇಕಾಗುತ್ತದೆ. ಇದು ಸರಿಯಾದ ಕ್ರಮ ಅಲ್ಲ. ಅದರ ಬದಲಾಗಿ ಪಠ್ಯವಿಷಯಗಳಲ್ಲಿ ಇಂಗ್ಲಿಷ್ ಕೂಡ ಒಂದು ಎಂದು ಪರಿಗಣಿಸಬೇಕು. ಮಾತೃ ಭಾಷೆಯಲ್ಲೇ ಪಾಠಗಳನ್ನು ಹೇಳುವುದು ಮತ್ತು ಅದರಲ್ಲೇ ಉತ್ತರಗಳನ್ನು ನಿರೀಕ್ಷಿಸುವುದರಿಂದ ಮಾತ್ರ ವಿದ್ಯಾರ್ಥಿಗಳ ಏಳಿಗೆ ಸಾಧ್ಯ ಎಂಬ ನಿಲುವಿಗೆ ಬದ್ಧರಾಗಿ ಮಾತೃಭಾಷಾ ಮಾಧ್ಯಮದ ಅಗತ್ಯತೆಗೆ ಪ್ರಾಮುಖ್ಯತೆ ನೀಡಿದ್ದಾರೆ.

ಜ್ಞಾನ ಪ್ರಸರಣ ನಾಲ್ಕು ಗೋಡೆಗಳ ನಡುವೆ ನಾಲ್ಕಾರು ಜನಗಳಿಗೆ ಮಾತ್ರ ಸೀಮಿತವಾಗದೆ ಸಮಾಜದೆಡೆಗೆ ಇಳಿದು ಬರಬೇಕು. ಇದು ಆಗಬೇಕಾದರೆ ಅದು ಮಾತೃಭಾಷಾ ಶಿಕ್ಷಣದಿಂದ ಮಾತ್ರ ಸಾಧ್ಯ ಎಂಬ ಭಾವನೆ ಪತ್ರಿಕೆಯದ್ದು. ಈ ಸಮಯದಲ್ಲೇ ಮಾತೃಭಾಷಾ ಶಿಕ್ಷಣದ ಕುರಿತಾಗಿ ಶ್ರೀ ಆಂಡ್ರೂಸ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ ಹೇಳಿದ ಮಾತುಗಳು ತನ್ನ ಅಭಿಪ್ರಾಯಗಳನ್ನೇ ಪ್ರತಿಧ್ವನಿಸುತ್ತಿರುವುದರಿಂದ ಪ್ರಬುದ್ಧ ಕರ್ಣಾಟಕ ಅವರು ಮಾಡಿದ ಭಾಷಣದಲ್ಲಿ ಕನ್ನಡ ಪರವಾಗಿರುವ ಅಂಶಗಳನ್ನು ಸಂಗ್ರಹಿಸಿಕೊಟ್ಟಿದೆ. ಅದು ಕನ್ನಡಿಗರ ಭಾವನೆಗಳನ್ನು ಪ್ರತಿಬಿಂಬಿಸುತ್ತದಾದ್ದರಿಂದ ಇಂತಹ ವಿಷಯಗಳ ಪ್ರಕಟಣೆ ಅಗತ್ಯವೆಂದು ಪ್ರಬುದ್ಧ ಕರ್ಣಾಟಕ ಭಾವಿಸಿದೆ. ಶ್ರೀ ಆಂಡ್ರೂಸ್ ಅವರು ಹೇಳುವ "ಇಂಗ್ಲಿಷ್ ಕಲಿಯಲೇ ಬೇಕು. ಆದರೆ ಇನ್ನು ಮುಂದೆ ಬೋಧನೆಯ ಭಾಷೆಯಾಗಿ ಇರಕೂಡದು ಮಾತೃಭಾಷೆಯೇ ಆ ಸ್ಥಾನಕ್ಕೆ ಬರಬೇಕು....... ಸ್ಕೂಲಿನಿಂದ ಹಿಡಿದು ವಿಶ್ವವಿದ್ಯಾನಿಲಯದವರೆವಿಗೆ ಪರಕೀಯ ಭಾಷೆಯಲ್ಲೇ ಶಿಕ್ಷಣ ಕೊಡುತ್ತಿರುವ ದೇಶ ಇಂಡಿಯಾ ದೇಶವೊಂದು ಹೊರತಾಗಿ ಪ್ರಪಂಚದಲ್ಲಿ ಬೇರೆ ಯಾವುದಾದರೂ ಇದೆಯೇ"[೧] ಎಂದು ಪ್ರಶ್ನಿಸಿದ ಅವರ ಮಾತುಗಳನ್ನು ಪ್ರಬುದ್ಧ ಕರ್ಣಾಟಕ ಗಂಭೀರವಾಗಿ ಪರಿಗಣಿಸಿದೆ. ಕನ್ನಡಿಗರ ಕನ್ನಡತ್ವದ ಭಾವನೆಯನ್ನು ಕೆರಳಿಸಿ

---

ಈ ವಿಷಯ ಕುರಿತಂತೆ ಪ್ರಬುದ್ಧ ಕರ್ಣಾಟಕ ಹಲವಾರು ಸಂಚಿಕೆಗಳಲ್ಲಿ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದಾದರೂ ಅವುಗಳೆಲ್ಲವುಗಳ ಧ್ವನಿಯಂತೆ ಕುವೆಂಪು ಅವರ 'ನಮಗೆ ಬೇಕಾದ ಇಂಗ್ಲಿಷ್' ಎಂಬ ಪ್ರಬಂಧ ಮೂವತ್ತೇಳನೇ ಸಂಚಿಕೆ ನಾಲ್ಕರಲ್ಲಿ ಪ್ರಕಟವಾಗಿದ್ದು ಅದನ್ನು ಗಮನಿಸಿದ್ದೇನೆ. ಆಂಗ್ಲಭಾಷೆಯೇ ಬೇಡವೆನ್ನುವವರನ್ನು ಪ್ರಚ್ಛನ್ನ ದೇಶದ್ರೋಹಿಗಳೆಂದು ಗುರುತಿಸಿರುವ ಲೇಖಕರು ಯಾರಿಗೆ ಯಾವ ಪ್ರಮಾಣದಲ್ಲಿ ಆಂಗ್ಲಭಾಷೆಯ ಅವಶ್ಯಕತೆ ಇದೆ. ಆಂಗ್ಲಭಾಷೆಯ ಕಲಿಕೆ ಎಲ್ಲರಿಗೂ ಅಗತ್ಯವೇ? ಆಂಗ್ಲಭಾಷೆಯಲ್ಲಿರುವುದೆಲ್ಲವನ್ನೂ ಕನ್ನಡದ ಮೂಲಕ ಪಡೆಯಲು ಸಾಧ್ಯವಿರುವಾಗ ವಿದ್ಯಾರ್ಥಿಗಳ ಮೇಲೆ ಒತ್ತಾಯಪೂರ್ವಕವಾಗಿ ಆಂಗ್ಲಭಾಷೆಯನ್ನು ಹೇರುವುದು ಉಚಿತವಲ್ಲ ಎಂದಿರುವ ವಿಷಯ ಇಂದಿಗೂ ಪ್ರಸ್ತುತವಾಗಿದೆ.

೧. ಸಂಪಾದಕೀಯ, ಪ್ರ.ಕ. ಸಂಪುಟ ೨೦, ಸಂಚಿಕೆ ೨, ಪು. ೧೪೪.

ಮಾತೃಭಾಷೆಯಲ್ಲಿ ಶಿಕ್ಷಣದ ಅವಶ್ಯಕತೆಯ ಬಗ್ಗೆ ಜಾಗೃತಿ ಮೂಡಿಲು ಪ್ರಯತ್ನಿಸಿದ ಇದರ ಕಾರ್ಯ ಪ್ರಚೋದನಕಾರಿಯಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮ ಎಂಬ ಲೇಖನದಲ್ಲಿ ಸಂಪಾದಕರಾದ ಎ.ಆರ್.ಕೃಷ್ಣಶಾಸ್ತ್ರಿಗಳು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ವಿಶ್ವವಿದ್ಯಾನಿಲಯ ಪ್ರಾರಂಭಿಸಿದರ ಹಿಂದೆ ದೇಶಭಾಷೆಗೆ ಪ್ರಾಮುಖ್ಯತೆ ನೀಡಬೇಕೆಂಬ ಆಶಯವಿದ್ದುದನ್ನು ಗಮನಿಸಿ ಅದು ಫಲಕಾರಿಯಾಗದೇ ಇದ್ದುದನ್ನು ಗುರುತಿಸಿದ್ದಾರೆ. ನಂತರ ಏರಿಳಿತಗಳನ್ನು ಕಂಡ ಕನ್ನಡ ಭಾಷೆಯ ಬಗ್ಗೆ ಜನಗಳಲ್ಲಿ ಜಾಗೃತಿ ಉಂಟಾಗಿ ಅದಕ್ಕೆ ಸ್ಥಾನಮಾನ ದೊರಕಿಸಿಕೊಡುವ ಮನಃಸ್ಥಿತಿ ಮುಟ್ಟಿದ್ದನ್ನು ಗಮನಿಸಿ "ಯಾವ ನಾಡಿನ ಜನ ತಿಳುವಳಿಕೆ ಪಡೆಯಬೇಕಾದುದು ತನ್ನ ನುಡಿಯಿಂದಲೇ ಸಾಧ್ಯ ಎಂಬ ತತ್ವವನ್ನು ಈಗ ನಿರಾತಂಕವಾಗಿ ನಿರ್ವಿವಾದವಾಗಿ ಎಲ್ಲರೂ ಒಪ್ಪಿದ್ದಾರೆ"[೧] ಎಂದಿದ್ದಾರೆ. ಅಷ್ಟೇ ಅಲ್ಲದೆ ಅದನ್ನು ಕಾರ್ಯರೂಪಕ್ಕೆ ತರಲು ಕೇವಲ ತಾವು ಒಪ್ಪಿಕೊಳ್ಳುವುದರಿಂದಷ್ಟೇ ಅಲ್ಲದೆ ಎಲ್ಲರ ಸಂಘಟಿತ ಪ್ರಯತ್ನ ಅಗತ್ಯ ಎಂಬುದನ್ನು ಅರಿತು ಅದಕ್ಕಾಗಿ ದುಡಿಯಬೇಕು ಎಂಬುದರ ಕಡೆ ಗಮನ ಸೆಳೆಯುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ದುಡಿಯುತ್ತಿದ್ದ ಹಲವಾರು ಮಹನೀಯರು ಕಾಲದಿಂದ ಕಾಲಕ್ಕೆ ಮಾಡಿದ ಪ್ರಯತ್ನಗಳ ಬಗ್ಗೆ ಶ್ಲಾಘಿಸಿದ್ದಾರೆ. ಮೈಸೂರಿನ ಪ್ರಜಾಸಭೆಯಲ್ಲಿ ಶ್ರೀಮಾನ್ ಬಿ.ತಿಮ್ಮಾಜಯ್ಯನವರು ಕನ್ನಡ ಶಿಕ್ಷಣ ಮಾಧ್ಯಮದ ಬಗ್ಗೆ ಸೂಚನೆಯೊಂದನ್ನು ತಂದು ಸಮ್ಮತಿಯನ್ನು ಪಡೆಯಲು ಯಶಸ್ವಿಯಾದುದನ್ನು, ಜಿ.ಮಲ್ಲಾರಾಧ್ಯರು ೧೯೪೮ರಿಂದ ಪ್ರಾರಂಭವಾಗಿ ೧೯೫೩ರ ಹೊತ್ತಿಗೆ ನಮ್ಮ ವಿಶ್ವವಿದ್ಯಾನಿಲಯದ ತರಗಳಲ್ಲೆಲ್ಲಾ ಭಾಷೇತರ ವಿಷಯಗಳಿಗೆ ಕನ್ನಡ ಮಾಧ್ಯಮವಾಗಬೇಕೆಂಬ ನಿರ್ಣಯವನ್ನು ತಂದು ಅದು ಅಂಗೀಕಾರವಾಗುವಂತೆ ಮಾಡಿದ್ದನ್ನು ಸ್ಮರಿಸುತ್ತಾರೆ. ಕನ್ನಡ ಭಾಷೆ ಶಿಕ್ಷಣ ಮಾಧ್ಯಮವಾಗಬೇಕಾದರೆ ಅದರ ಹಿಂದೆ ಏನೆಲ್ಲ ಪ್ರಯತ್ನಗಳು ನಡೆದವು ಎಂಬ ಮಾಹಿತಿಗಳನ್ನು ಕನ್ನಡಿಗರಿಗೆ ದೊರಕಿಸಿಕೊಟ್ಟು ಅವರಲ್ಲಿ ಜಾಗೃತಿ ಉಂಟು-ಮಾಡಿದ್ದಾರೆ. ತೆರೆಯ ಹಿಂದೆ ನಡೆದ ಇಷ್ಟೆಲ್ಲ ಪ್ರಯತ್ನಗಳನ್ನು ಜನರ ಮುಂದೆ ತಂದು ಅವರಲ್ಲಿ ಕನ್ನಡದ ಬಗ್ಗೆ ವಿಶ್ವಾಸವನ್ನು ಹೆಚ್ಚಿಸುವ ಕಾರ್ಯಕ್ಕೆ ಒತ್ತುನೀಡಿದ್ದಾರೆ.

ಇಂತಹ ಹಲವು ಪ್ರಯತ್ನಗಳಲ್ಲಿ ಶಿಕ್ಷಣ ಮಾಧ್ಯಮ ಕನ್ನಡವೇ ಆಗಬೇಕು ಎಂಬ ಅಭಿಪ್ರಾಯಕ್ಕೆ ಸಮಾಜದಲ್ಲಿ ಮಾನ್ಯತೆ ದೊರಕತೊಡಗಿದ ಸಂದರ್ಭದಲ್ಲಿಯೇ ವಿಶ್ವವಿದ್ಯಾನಿಲಯದ ವಿದ್ಯಾಭ್ಯಾಸದ ಮಾಧ್ಯಮ ಇಂಗ್ಲಿಷಿನಲ್ಲೋ? ರಾಷ್ಟ್ರ ಭಾಷೆಯಲ್ಲೋ? ಪ್ರಾಂತಭಾಷೆಯಲ್ಲೋ? ಯಾವುದರಿಂದ ವಿದ್ಯಾರ್ಥಿಯ ಶ್ರೇಯಸ್ಸು

---

೧. ಸಂಪಾದಕೀಯ, ಪ್ರ.ಕ. ಸಂಪುಟ ೨೫, ಸಂಚಿಕೆ ೪, ಪು. ೮೭.

ಸಾಧ್ಯ ಎಂಬ ಚರ್ಚೆಗಳು ಪ್ರಾರಂಭಗೊಂಡಿದ್ದವು. ಈ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕ ಅದು ಪ್ರಾಂತಭಾಷೆಯಾದ ಕನ್ನಡದಲ್ಲೇ ಇರಬೇಕು ಎಂದು ಭಾವಿಸಿದೆ. ಉನ್ನತ ಶಿಕ್ಷಣವನ್ನು ಕಲಿಯುವ ಸಂದರ್ಭದಲ್ಲಿ ಕನ್ನಡದಲ್ಲಿಯೇ ಎಲ್ಲವನ್ನೂ ಕಲಿಸುತ್ತೇನೆ ಎನ್ನಲಾಗುವುದಿಲ್ಲ. ಯಾವುದೇ ವಿಷಯದ ವರ್ಣನಾ ಭಾಗ, ವಿವರಣಭಾಗ ಪ್ರತಿಪಾದನೆಯ ಭಾಗ ಇವುಗಳು ಕನ್ನಡದಲ್ಲಿ ಇದ್ದು ಗಣಿತವಾಗಲೀ, ಸಂಕೇತಪದಗಳಾಗಲಿ ಸಮೀಕರಣಗಳಾಗಲೀ ಪರಿಭಾಷೆಯೇ ಆಗಿರಲಿ ಅವು ಅಂತಾರಾಷ್ಟ್ರೀಯವಾಗಿಯೇ ಉಳಿಯುವುದು ಸೂಕ್ತ. ಇವುಗಳೆಲ್ಲದರಲ್ಲಿ ವಿದ್ಯಾರ್ಥಿಗಳು ಕಲಿಯಬೇಕಾದದ್ದು ಭಾಷೆಯಲ್ಲಿ ಶಾಸ್ತ್ರೀಯ ವಿಷಯವನ್ನು ಕನ್ನಡ ನಮ್ಮ ನಾಡಿನ ಜನತೆಗೆ ಎಲ್ಲ ವಿಷಯಗಳ ಪರಿಜ್ಞಾನ ಸುಲಭವಾಗಿ ಆಗಬೇಕಾದರೆ ಶಿಕ್ಷಣದ ಮಾಧ್ಯಮ ಕನ್ನಡ ನುಡಿಯಾಗಬೇಕು. ಎಷ್ಟೇ ಓದಿದರೂ ಸಂಪೂರ್ಣ ಕೈ ವಶವಾಗದ ಆಂಗ್ಲಭಾಷೆಯನ್ನು ಕಲಿಯಲು ವಿದ್ಯಾರ್ಥಿಗಳ ಬದುಕನ್ನು ವ್ಯಯಮಾಡೆನ್ನುವುದು ಬಾಳಿನ ಅಪವ್ಯಯ ಎಂಬುದನ್ನು ಅರಿಯಬೇಕು. ನಮ್ಮದಲ್ಲದ ಎಷ್ಟೇ ಪ್ರಯತ್ನಪಟ್ಟರೂ ನಮ್ಮದಾಗದ ಭಾಷೆಯಲ್ಲಿ ವ್ಯಾಸಂಗ ಮಾಡಲು ಕಾಲವನ್ನು ವ್ಯರ್ಥಮಾಡಬೇಕಾಗಿಲ್ಲ. ಈ ವಿಚಾರಗಳನ್ನು ಅರಿತಿರುವ ಪ್ರಬುದ್ಧ ಕರ್ಣಾಟಕವು ಕನ್ನಡ ಭಾಷೆಯಲ್ಲಿ ಕಲಿತವರು, ಆಂಗ್ಲ ಭಾಷೆಯಲ್ಲಿ ಕಲಿತವರಿಗಿಂತ ಅಂಕಗಳಿಸುವುದರಲ್ಲಿ ಹಿಂದೆಬೀಳುತ್ತಾರೆ. ಆಂಗ್ಲಭಾಷೆಯಲ್ಲಿ ಕಲಿತವರಿಗೆ ಜ್ಞಾನ ಹಾಗೂ ತಿಳುವಳಿಕೆ ಹೆಚ್ಚು ಎಂಬ ಅಪನಂಬಿಕೆಯನ್ನು ಹೊಂದಿದ್ದವರ ಭಾವನೆಗಳನ್ನು ದೂರಮಾಡಲು ವಿಶ್ವವಿದ್ಯಾನಿಲಯದ ಮಟ್ಟದಲ್ಲಿ ನಡೆದಿದ್ದ ಒಂದು ಸಂಶೋಧನೆಯ ವಿವರಗಳನ್ನು ಪ್ರಕಟಿಸಿದೆ. ಆ ಸಂಶೋಧನೆಯ ಅನ್ವಯ ಪ್ರೌಢಶಾಲೆಯಲ್ಲಿ ಆಂಗ್ಲ ಭಾಷೆಯಲ್ಲಿ ಕಲಿತ ೩೦೫ ಮಂದಿ ಹಾಗೂ ಕನ್ನಡ ಭಾಷೆಯಲ್ಲಿ ಕಲಿತು ವಿಶ್ವವಿದ್ಯಾನಿಲಯಕ್ಕೆ ಬಂದ ೨೫೨ ಮಂದಿಯನ್ನು ಪರೀಕ್ಷಿಸಲಾಗಿದ್ದು ಇವರುಗಳಲ್ಲಿ ಆಂಗ್ಲಭಾಷೆ ಹಾಗೂ ಅರ್ಥಶಾಸ್ತ್ರ ಹೊರತುಪಡಿಸಿ ಉಳಿದ ವಿಷಯಗಳಲ್ಲಿ ಎಂದರೆ "ಕನ್ನಡ, ರಸಾಯನಶಾಸ್ತ್ರ, ಗಣಿತ, ಭೌತಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರ, ಚರಿತ್ರೆ, ತರ್ಕ ಇವುಗಳಲ್ಲಿ ಈ ಎರಡೂ ಗುಂಪುಗಳಿಗೂ ವ್ಯತ್ಯಾಸವಿರಲಿಲ್ಲ". ಈ ಸಂಶೋಧನೆಯು ಜ್ಞಾನಾರ್ಜನೆಯನ್ನು ಇಂಗ್ಲಿಷ್ ಭಾಷೆಯ ಮೂಲಕವೇ ಮಾಡಬೇಕೆಂಬುದು ನಿರಾಧಾರವಾದದ್ದು ಎಂದು ದೃಢಪಡಿಸಿದೆ. ಜನರ ಮನದಲ್ಲಿದ್ದ ಕನ್ನಡ ಮಾಧ್ಯಮ ವಿರೋಧೀ ಭಾವನೆಯನ್ನು ದೂರಮಾಡಲು ಈ ಮೂಲಕ ಪ್ರಯತ್ನಪಟ್ಟಿದೆ. ಇಂಗ್ಲಿಷ್ ಭಾಷೆಯಲ್ಲೇ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿದ ಹುಡುಗರು ಬೇರೆ ಹುಡುಗರಿಗಿಂತ ಉತ್ತಮಸ್ಥಿತಿಯಲ್ಲೇನೂ ಇಲ್ಲ ಎಂಬುದು ಇದರಿಂದ ಸಿದ್ಧವಾಗುತ್ತದೆ. ಪ್ರಬುದ್ಧ ಕರ್ಣಾಟಕದ ಸಂಪಾದಕರು ಇಂತಹ ಉಪಯುಕ್ತ ಸಂಶೋಧನೆಯ ಮಾಹಿತಿಯನ್ನು ವಿಶ್ಲೇಷಿಸಿ ಜನರ ಮನದಲ್ಲಿ ಕನ್ನಡ

ಭಾಷಾ ಮಾಧ್ಯಮದ ಬಗ್ಗೆ ಇರಬಹುದಾದ ಕಾಲ್ಪನಿಕ ಭೀತಿಯನ್ನು ಹೊಡೆದೋಡಿಸಲು ಯತ್ನಿಸಿದರು ಮತ್ತು ಬರಿಯ ಬರಹಗಳ ಮೂಲಕವಷ್ಟೇ ಅಲ್ಲದೆ ಸುಸಂಬದ್ಧವಾಗಿ ಸಂಶೋಧನೆಯ ಮೂಲಕ ಬಂದ ಫಲಿತಾಂಶಗಳನ್ನು ಪ್ರಕಟಿಸಿ ಅದಕ್ಕೆ ಬೆಂಬಲ ಸೂಚಿಸಿದರು.

ಹೀಗೆ ಶಿಕ್ಷಣತಜ್ಞರು ಬುದ್ಧಿಜೀವಿಗಳು ಸಮಾಜಸೇವಕರು ಕನ್ನಡದಲ್ಲೇ ಶಿಕ್ಷಣ ದೊರೆಯಬೇಕೆಂದು ಪ್ರಯತ್ನಿಸಿದರೂ ಅದರ ಅರಿವಿಲ್ಲದೆ ಆಂಗ್ಲಭಾಷಾ ಮಾಧ್ಯಮದ ಕಡೆಗೆ ಕೆಲವರು ಒಲವು ಇರುವುದನ್ನು ಗಮನಿಸಿರುವ ಪತ್ರಿಕೆ ಅದಕ್ಕೆ ಕಾರಣಗಳೇನಿರಬಹುದೆಂದು ಗುರುತಿಸಲು ಪ್ರಯತ್ನಿಸಿದೆ. ಮೊದಲನೆಯದಾಗಿ ಸಮಗ್ರ ವ್ಯಾಸಂಗ ಕ್ರಮದಲ್ಲಿ ಕನ್ನಡವನ್ನೇ ಬೋಧಕ ಭಾಷೆ ಮಾಡದೇ ಇರುವುದೇ ಇದಕ್ಕೆ ಕಾರಣವೆಂದು ಅಭಿಪ್ರಾಯಪಟ್ಟಿದೆ. ಹೈಸ್ಕೂಲಿನಲ್ಲಿ ಮೂರುವರ್ಷ ಕನ್ನಡ ಮಾಧ್ಯಮದ ಮೂಲಕ ವ್ಯಾಸಂಗ ಮಾಡಿದ ವಿದ್ಯಾರ್ಥಿಗೆ ಕಾಲೇಜಿಗೆ ಹೋದ ತಕ್ಷಣ ತಾನು ಅಭ್ಯಾಸ ಮಾಡಬೇಕಾದ ಶಾಸ್ತ್ರ ವಿಷಯಗಳನ್ನೆಲ್ಲಾ ಇಂಗ್ಲೀಷಿನ ಮೂಲಕವೇ ಕಲಿಯ ಬೇಕಾಗಿರುವುದರಿಂದ ಕನ್ನಡದಲ್ಲೇ ಹೈಸ್ಕೂಲ್ ಓದಿದರೆ ಅದು ಕಷ್ಟವಾಗುತ್ತದೆ ಎಂದು ಭಾವಿಸುತ್ತಾನೆ. ಇದಕ್ಕೆ ಬದಲಾಗಿ ಕಾಲೇಜಿನಲ್ಲೂ ತರಗತಿಗಳು ಕನ್ನಡದಲ್ಲೇ ನಡೆದರೆ ಅವನಿಗೆ ಯಾವ ಕಷ್ಟವೂ ಎದುರಾಗದೆ ಇರುವುದರಿಂದ ಆತ ಹೈಸ್ಕೂಲಿನಲ್ಲೂ ಆತ ಕನ್ನಡವನ್ನೇ ಆರಿಸಿಕೊಳ್ಳುತ್ತಾನೆ. ಆದ್ದರಿಂದ ಕಾಲೇಜಿನ ಮಟ್ಟದಲ್ಲೂ ಶಿಕ್ಷಣ ಮಾಧ್ಯಮ ಕನ್ನಡವೇ ಆದಾಗ ಈ ಸಮಸ್ಯೆಗೆ ಪರಿಹಾರ ದೊರೆತಂತಾಗುತ್ತದೆ. ಕನ್ನಡವನ್ನಷ್ಟೇ ಕಲಿತರೆ ಭಾರತದ ಇತರ ಭಾಗಗಳ ಜೊತೆ, ಬೇರೆ ಭಾಷಿಕರ ಜೊತೆ ಸಂಪರ್ಕ ಇಟ್ಟುಕೊಳ್ಳಲು ಕಷ್ಟವಾಗುತ್ತದೆ ಎಂಬ ಭಯದ ಕಾರಣದಿಂದಲೂ ಆಂಗ್ಲಭಾಷಾ ಮಾಧ್ಯಮವನ್ನು ಆರಿಸಿಕೊಳ್ಳುತ್ತಿರಬಹುದು. ಆದರೆ ಆ ಭಯ ಸಕಾರಣವಾದುದಲ್ಲ ಮತ್ತು ಅದಕ್ಕೆ ಪರಿಹಾರವೂ ಉಂಟು.

ಇಡೀ ಭಾರತದೊಡನೆಯೂ ಪ್ರಪಂಚದ ಇತರ ಭಾಗದೊಡನೆಯೂ ವ್ಯವಹರಿಸಲು ಯಾವ ಅಡಚಣೆಯೂ ಆಗದಂತೆ "ಅಂದರೆ ಇಂಗ್ಲಿಷನ್ನು ಕಡ್ಡಾಯದ ದ್ವಿತೀಯ ಭಾಷೆಯನ್ನಾಗಿಯೂ ಹಿಂದಿಯನ್ನು ಸೆಕೆಂಡರಿ ಶಾಲೆಗಳಲ್ಲಿ ಕಡ್ಡಾಯದ ಭಾಷೆಯನ್ನಾಗಿಯೂ ಕಾಲೇಜುಗಳಲ್ಲಿ ಐಚ್ಛಿಕ ಭಾಷೆಯನ್ನಾಗಿಯೂ ಕನ್ನಡ ಮಾಧ್ಯಮವನ್ನು ಜಾರಿಗೆ ತಂದು ಅವರ ಅಭಿರುಚಿಯನ್ನು ತಿದ್ದಿ ಪುರೋಭಿವೃದ್ಧಿ- ಯನ್ನು ಸಾಧಿಸಬಹುದು"[೧] ಎಂಬ ಸಂಪಾದಕರ ಅಭಿಪ್ರಾಯ ಸರಿಯಾಗಿಯೇ ಇದೆ. ಹೀಗೆ ಶಿಕ್ಷಣ ಮಾಧ್ಯಮ ಕನ್ನಡವೇ ಆಗಿರಬೇಕೆಂದು ಪ್ರತಿಪಾದಿಸುವ ಪ್ರಬುದ್ಧ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೩೪, ಸಂಚಿಕೆ ೨, ಪು. ೮೯.

ಕರ್ಣಾಟಕ ಆಧುನಿಕ ವಿದ್ಯಾಭ್ಯಾಸದ ಹೆಸರಿನಲ್ಲಿ ಆಂಗ್ಲಭಾಷೆಯನ್ನು ಕಡ್ಡಾಯವಾಗಿ ಎಲ್ಲರೂ ಕಲಿಯಲೇಬೇಕು ಎಂಬ ವಿಚಾರಕ್ಕೆ ಸಂಬಂಧಿಸಿದಂತೆ ಬಂದ ಚರ್ಚೆಗಳನ್ನು ಗಮನಿಸಿದೆ. ಭಾಷೆಯಾಗಿ ಕನ್ನಡಕ್ಕೆ ಸಿಗಬೇಕಾದ ಸ್ಥಾನವೇನು? ಯಾವುದಕ್ಕೆ ಮೊದಲ ಆದ್ಯತೆ ನೀಡಬೇಕು? ಎಂಬಂತಹ ವಿಚಾರಗಳ ಬಗ್ಗೆ ವಿಶ್ಲೇಷಿಸಿದೆ. ನೆರೆಯ ರಾಜ್ಯವಾದ ತಮಿಳುನಾಡಿನಲ್ಲಿ ಇಂಗ್ಲಿಷ್ ಹಾಗೂ ಹಿಂದಿಯನ್ನು ಒತ್ತಾಯದ ದ್ವಿತೀಯ ಹಾಗೂ ತೃತೀಯ ಭಾಷೆಯಾಗಿ ಮಾಡಿ ತಮಿಳನ್ನು ಇತರ ಪ್ರಾಚೀನ ಭಾರತ ಭಾಷೆಗಳ ಜೊತೆಯಲ್ಲಿ ಐಚ್ಛಿಕ ಪ್ರಥಮ ಭಾಷೆಯನ್ನಾಗಿ ಮಾಡಿದ್ದ ಸಂದರ್ಭದಲ್ಲಿ ತಮಿಳುನಾಡಿನಲ್ಲಿ ಇದಕ್ಕೆ ತೀವ್ರವಾದ ವಿರೋಧ ವ್ಯಕ್ತವಾದಾಗ ಅಲ್ಲಿನ ವಿದ್ಯಾಮಂತ್ರಿಗಳು ಒಂದು ಪರಿಹಾರವನ್ನು ಘೋಷಿಸಿದರು. ಅದರ ಪ್ರಕಾರ ಮೊದಲ ಭಾಗದಲ್ಲಿ ಪ್ರಾಂತ ಭಾಷೆ ಮತ್ತು ಇಂಗ್ಲಿಷ್ ಭಾಷೆ ಕಡ್ಡಾಯ ಭಾಷೆ ಆಗಿರುತ್ತದೆ. ಇದನ್ನು ಎಲ್ಲರೂ ವ್ಯಾಸಂಗ ಮಾಡಿಯೇ ತೀರಬೇಕು. ಎರಡನೆಯ ಭಾಗದಲ್ಲಿ ಮಾತೃಭಾಷೆ ಪ್ರಾಂತಭಾಷೆ ಭಾರತೀಯ ಪ್ರಾಚೀನ ಭಾಷೆ ಇವುಗಳಲ್ಲಿ ಒಂದನ್ನು ಹಿಂದಿ ಅಥವಾ ಯಾವುದಾದರೂ ಒಂದು ವೃತ್ತಿಯ ವ್ಯಾಸಂಗವನ್ನು ಆರಿಸಿಕೊಳ್ಳಬಹುದು. ಇದರಿಂದ ವಿದ್ಯಾರ್ಥಿ ನಾಲ್ಕು ಭಾಷೆಯನ್ನು ಅಭ್ಯಾಸ ಮಾಡಬಹುದು. ಎರಡನ್ನಂತೂ ಅಭ್ಯಾಸ ಮಾಡಿಯೇ ತೀರಬೇಕು. ಇದು ತಮಿಳುನಾಡಿನ ವಿದ್ಯಾಮಂತ್ರಿಗಳು ಸೂಚಿಸಿದ ಪರಿಹಾರ, ಪ್ರಬುದ್ಧ ಕರ್ಣಾಟಕವು ತನ್ನ ಸುತ್ತಮುತ್ತಲಿನ ರಾಜ್ಯಗಳಲ್ಲಿ ಭಾಷೆಗಳ ವಿಚಾರವಾಗಿ ನಡೆಯುವ ಇಂತಹ ಚರ್ಚೆಗಳನ್ನು ಗಮನಿಸಿ ಅದರ ಒಳಿತು ಕೆಡಕುಗಳ ಬಗ್ಗೆ ಚಿಂತಿಸಿ ಅದರಲ್ಲಿಯ ಉತ್ತಮ ಅಂಶಗಳನ್ನು ಸ್ವೀಕರಿಸಿ ನಾಡಿನ ಮುಂದಿಟ್ಟಿದೆ. ತಮಿಳುನಾಡಿನವರು ಅನುಸರಿಸಿದ ಮಾರ್ಗ ಅದಕ್ಕೆ ಸೂಕ್ತವೆಂದು ತೋರಿದೆ. ಕನ್ನಡ ನಾಡಿನಲ್ಲೂ ಕಡ್ಡಾಯವಾಗಿ ಕನ್ನಡವನ್ನು ಪ್ರಥಮ ಐಚ್ಛಿಕ ಭಾಷೆಯಾಗಿ ಮಾಡುವುದು ಉಚಿತವೆಂದು ಭಾವಿಸಿದೆ. "ನಮ್ಮ ಮೈಸೂರು ದೇಶದಲ್ಲಿಯೂ ಸ್ವಲ್ಪ ಮಾರ್ಪಾಡಿನಿಂದ ಇದನ್ನು ಅನುಸರಿಸುವುದರಿಂದ ವಿಶೇಷ ಪ್ರಯೋಜನ ಉಂಟು. ಭಾರತಕ್ಕೆ ಸ್ವಾತಂತ್ರ್ಯ ದೊರೆತಂದಿನಿಂದ ಕನ್ನಡ ದೇಶದಲ್ಲಿ ಕನ್ನಡಕ್ಕೆ ನ್ಯಾಯ ಪ್ರಾಪ್ತವಾದ ಸ್ಥಾನದೊಂದಿಗೆ ದೊರಕೀತೆಂದು ಎಲ್ಲರೂ ಕುತೂಹಲದಿಂದ ಹಾತೊರೆಯುತ್ತಿದ್ದಾರೆ. ಸಂಬಂಧಪಟ್ಟವರು ಈ ವಿಷಯವನ್ನು ತಕ್ಷಣ ಗಮನಕ್ಕೆ ತಂದುಕೊಂಡು ಮೈಸೂರು ದೇಶದ ಎಲ್ಲ ಶಾಲೆಗಳಲ್ಲಿ ಕನ್ನಡವನ್ನು ಒತ್ತಾಯದ ಪ್ರಥಮ ಭಾಷೆಯನ್ನಾಗಿ ಏರ್ಪಡಿಸುತ್ತಾರೆಂದು ನಂಬುತ್ತೇವೆ".[೧] ಇದು ಸಂಪಾದಕರ ಮನಃಪೂರ್ವಕವಾದ ಆಶಯ. ಹೀಗೆ ಕನ್ನಡ ಮಾಧ್ಯಮ, ಕನ್ನಡ ಪ್ರಥಮ ಭಾಷೆ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೩೨, ಸಂಚಿಕೆ ೭, ಪು. ೯೨.

ಇವುಗಳ ಬಗ್ಗೆ ಪೂರಕವಾದ ವಾತಾವರಣ ಏರ್ಪಡುತ್ತಿದ್ದ ಇಂತಹ ಪ್ರಯತ್ನಗಳ ನಡುವೆಯೇ ಕನ್ನಡವು ವಿಶ್ವವಿದ್ಯಾನಿಲಯದ ಮಾಧ್ಯಮದ ಭಾಷೆಯಾಗಲು ಪರಿಪಕ್ವವಾಗಿಲ್ಲ ಎಂದು ಕುಂಟುನೆಪಗಳನ್ನು ಹೇಳಿ ಮುಂದೂಡುತ್ತಾ ಬಂದಾಗ ಕೆಲವರು ಕೋಪವನ್ನು ವ್ಯಕ್ತಪಡಿಸಿದ್ದೂ ಉಂಟು.

ಮೂವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಮೈಸೂರಿನ ಪುರಸಭಾಧ್ಯಕ್ಷರಾದ ಶ್ರೀ ಕೆ.ಪುಟ್ಟಸ್ವಾಮಿಯವರು, ಶಿಕ್ಷಣ ಮಾಧ್ಯಮವಾಗಿ ಕನ್ನಡ ಅನುಷ್ಠಾನಗೊಳ್ಳದೇ ಇರಲು ಸ್ವಾತಂತ್ರ್ಯ ಬರುವ ಮುನ್ನ ಶಿಕ್ಷಣ ತತ್ವಗಳ ವಿಷಯವಾಗಿ ಸರಕಾರಕ್ಕೆ ಸಲಹೆಗಾರರಾಗಿದ್ದ ವರ್ಗದ ಜನರೇ ಇಂದೂ ಸಲಹೆಗಾರರಾಗಿದ್ದಾರೆ. ರಕ್ತಪೂರ್ಣ ಕ್ರಾಂತಿಯಿಂದ ಸ್ವಾತಂತ್ರ್ಯ ಬಂದಿದ್ದರೆ ಸಲಹೆಗಾರರೆಲ್ಲರೂ ಬದಲಾಗಿ ದೇಶದ ಪುನರ್‌ನಿರ್ಮಾಣದ ಕನಸು ನನಸಾಗುತ್ತಿತ್ತು. ಆದರೆ ರಕ್ತರಹಿತ ಕ್ರಾಂತಿಯಿಂದ ಸ್ವಾತಂತ್ರ್ಯ ಲಭ್ಯವಾದುದರಿಂದ ಎಲ್ಲಾ ಸುಧಾರಣೆಗಳಂತೆ ವಿದ್ಯಾ ಸುಧಾರಣೆಯೂ ಕಾಲವು ವಿಳಂಬವಾಗುತ್ತಿದೆ ಎಂದು ಅಭಿಪ್ರಾಯಪಟ್ಟಿದ್ದನ್ನು ಪ್ರಬುದ್ಧ ಕರ್ಣಾಟಕ ಗಮನಿಸಿದೆ.

ಹೀಗೆ ಕಾಲದಿಂದ ಕಾಲಕ್ಕೆ ಭಾಷಾ ಮಾಧ್ಯಮಕ್ಕೆ, ಪ್ರಥಮಭಾಷೆಗೆ ಸಂಬಂಧಿಸಿದಂತೆ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಸಂಪಾದಕೀಯಗಳನ್ನು ಬರೆಯುವ ಮೂಲಕ ವಿಶ್ವವಿದ್ಯಾನಿಲಯದ ಗಮನ ಸೆಳೆದು ಅದಕ್ಕೆ ನ್ಯಾಯವಾಗಿ ಸಿಗಬೇಕಾದ ಸ್ಥಾನ ದೊರಕುವಂತೆ ಮಾಡುವಲ್ಲಿ ಇದರ ಪ್ರಯತ್ನ ಮಹತ್ವದ್ದಾಗಿದೆ. "ಕನ್ನಡ ಕೂಡಲೆ ಶಿಕ್ಷಣ ಮಾಧ್ಯಮವಾಗಲಿ" (೩೫-೩) 'ಶಿಕ್ಷಣ ಮಾಧ್ಯಮ' (೩೬-೨) ಇಂತಹ ಸಂಪಾದಕೀಯಗಳು ಕನ್ನಡ ಮಾಧ್ಯಮವಾಗಬೇಕೆಂಬ ಆಶಯವನ್ನು ಬಿಂಬಿಸಿದರೆ 'ಕನ್ನಡ ಸಿಂಹಾಸನವನ್ನೇರುತ್ತಿದೆ' (೩೭-೩) ಇದು ಕನ್ನಡ ವಿಶ್ವವಿದ್ಯಾನಿಲಯದ ಮೊದಲ ತರಗತಿಯಲ್ಲಿ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ದೊರಕಬೇಕೆಂದು ಕೌನ್ಸಿಲ್ ನಿರ್ಧರಿಸಿದಾಗ ಸಂತೋಷವನ್ನು ವ್ಯಕ್ತಪಡಿಸಿ ಬಂದಿರುವ ಸಂಪಾದಕೀಯ, ಹಲವಾರು ವರ್ಷಗಳ ತನ್ನ ಆಸೆ ಆಕಾಂಕ್ಷೆಗಳು ಈಡೇರಿದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕಕ್ಕೆ, ಕನ್ನಡವು ಪಡೆದುಕೊಂಡ ಸ್ಥಾನ ಸಂತೋಷ ತಂದಿದೆ. ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಣದ ಮಾಧ್ಯಮ ದೇಶೀಭಾಷೆಯಲ್ಲಿ ಇರಬೇಕೆಂಬ ಪ್ರಾರಂಭಗೊಂಡ ಪ್ರಬುದ್ಧ ಕರ್ಣಾಟಕದ ಬೇಡಿಕೆ ವಿಶ್ವವಿದ್ಯಾನಿಲಯದ ಮಟ್ಟದವರೆವಿಗೂ ಕನ್ನಡವೇ ಶಿಕ್ಷಣ ಮಾಧ್ಯಮವಾಗಬೇಕು ಎಂಬುವುದರ ತನಕ ಚಾಚಿ ಅದು ಸಫಲತೆಯನ್ನು ಕಂಡಾಗ ಅದಕ್ಕೆ ಕನ್ನಡವು ಸಿಂಹಾಸನವನ್ನೇ ಏರಿದಷ್ಟು ಸಂತೋಷ ತಂದಿದೆ. ಎ.ಆರ್.ಕೃಷ್ಣಶಾಸ್ತ್ರಿಗಳು ಹೇಳುವ ಹಾಗೆ "ಮಕ್ಕಳು ಮರಿಯಿಲ್ಲ ಹೆಸರು ತಾಯಮ್ಮ ಎಂಬಂತೆ ಕನ್ನಡ ಓದುವವರಿಲ್ಲ ಬರೆಯುವವಿಲ್ಲ ಹೆಸರು ಮಾತ್ರ

ಕನ್ನಡ ದೇಶ"[೧] ಎಂಬಂತಾಗಿದ್ದ ನಾಡಿನಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ದೊರಕಿದಾಗ ಅದು ಸಂಭ್ರಮಪಟ್ಟಿದೆ. ಕನ್ನಡದ ಪರಿಸ್ಥಿತಿಯು ಅವರೇ ಗುರುತಿಸಿದಂತೆ "ಪಂಚಪಾಂಡವರು ಮಂಚದ ಕಾಲಿನ ಹಾಗೆ ಮೂರು ಜನ ಎಂದು ಹೇಳಿ ಎರಡು ತೋರಿಸಿ ಒಂದನ್ನು – ಅದು ಒಂದೂ ಅಲ್ಲ ಸೊನ್ನೆಯೂ ಅಲ್ಲ ಹಾಗೆ ಬರೆಯುವಂತೆ ಆಗಿದೆಯಲ್ಲ" ಎಂದು ವ್ಯಥೆಪಡುವ ಪರಿಸ್ಥಿತಿಯನ್ನು ದಾಟಿ ಉನ್ನತ ಸ್ಥಾನಕ್ಕೆ ತಲುಪಿದಕ್ಕೆ ತೃಪ್ತಿಯೂ ಇದೆ. ಹೀಗೆ ಶಿಕ್ಷಣ ಕ್ಷೇತ್ರದಲ್ಲಿ ಕನ್ನಡಕ್ಕೆ ಪೂರ್ಣ ಆದ್ಯತೆ ದೊರೆಯುವತನಕ ಪ್ರಬುದ್ಧ ಕರ್ಣಾಟಕವು ತೋರಿಸಿದ ಆಸಕ್ತಿ ಅನನ್ಯವಾದದ್ದು.

**ಆಧುನಿಕವಾಗಿ ಕನ್ನಡದ ಬೆಳವಣಿಗೆ**

ಕನ್ನಡ ಭಾಷೆಯ ಪ್ರಾಚೀನತೆ, ಕವಿ ಪರಂಪರೆ, ಇವುಗಳ ಬಗ್ಗೆ ಕನ್ನಡಿಗರ ಗಮನ ಸೆಳೆದು ಅವರಲ್ಲಿ ಅಭಿಮಾನವನ್ನು ಬೆಳೆಸಿದ ಸಂದರ್ಭದಲ್ಲಿಯೇ, ಕನ್ನಡ ಭಾಷೆಯು ಆಧುನೀಕತೆಯನ್ನು ಪಡೆಯದೇ ಹೋದರೆ ಅದು ನವಪೀಳಿಗೆಯ ಅಭಿಮಾನ ಗಳಿಸುವುದು ಕಷ್ಟ ಎಂಬ ಅರಿವು ಪ್ರಬುದ್ಧ ಕರ್ಣಾಟಕಕ್ಕಿದೆ. ಕನ್ನಡ ಆಧುನಿಕವಾಗಿ ಸತ್ವಯುತವಾಗಿ ಬೆಳೆಯಬೇಕು ಎಂಬ ಆಶಯವನ್ನು ಅದು ಕಾಲದಿಂದ ಕಾಲಕ್ಕೆ ವ್ಯಕ್ತಪಡಿಸಿದೆ.

ಕನ್ನಡ ಭಾಷೆ ಆಧುನಿಕವಾಗಿ ನವನವೀನ ವಿಚಾರಗಳನ್ನು ಹೊತ್ತು ತರಬೇಕು. ಜನತೆಯನ್ನು ಮುನ್ನಡೆಸುವ ಚೈತನ್ಯವನ್ನು ಪಡೆದು ಸರ್ವತೋಮುಖವಾದ ಏಳಿಗೆಯನ್ನು ಹೊಂದಬೇಕು. ಪ್ರಾಚೀನ ವಿಚಾರಗಳನ್ನು ಜ್ಞಾಪಿಸಿಕೊಳ್ಳುತ್ತಾ ವಾಸ್ತವ ಬದುಕಿನೊಡನೆ ಕನ್ನಡ ಸ್ಪಂದಿಸದೇ ಹೋದರೆ, ವರ್ತಮಾನದ ವಿಚಾರಗಳಿಗೆ ಆದ್ಯತೇ ನೀಡದೆ ಹೋದರೆ ಕನ್ನಡ ಸೊರಗಿ ಹೋಗುತ್ತದೆ. ಸಮಾಜದ ಆಸೆ–ಆಕಾಂಕ್ಷೆಗಳಿಗೆ ಅನುಗುಣವಾಗಿ ಕನ್ನಡ ಭಾಷೆಗೆ ಬಲವನ್ನು ತುಂಬದೆ ಹೋದರೆ ಅದು ಕನ್ನಡಿಗರ ತಾತ್ಸಾರಕ್ಕೆ ಒಳಗಾಗಬೇಕಾಗುತ್ತದೆ.

ಕನ್ನಡ ಭಾಷೆ ಆಧುನಿಕಗೊಳ್ಳದ ಹೊರತು, ಕನ್ನಡದ ಕಡೆಗೆ ಕನ್ನಡಿಗರ ಮನಸ್ಸನ್ನು ಕಡೆ ತಿರುಗಿಸುವುದು ಕಷ್ಟವಾಗುತ್ತದೆ. ಸಂಪಾದಕರಾದ ವಿ.ಸೀತಾ–ರಾಮಯ್ಯನವರು ಈ ವಿಚಾರ ಕುರಿತಂತೆ "ಪ್ರಬಲ ಭಾಷೆಗಳು ತಮ್ಮ ತಮ್ಮ ಕಾರ್ಯಗಳಲ್ಲಿ ಹೇಗೆ ಭಾಗವಹಿಸಿವೆಯೋ ಇಂದು ಪ್ರಪಂಚದ ದೊಡ್ಡ ದೊಡ್ಡ ಭಾಷೆಗಳು ಯಾವ ಯಾವ ಕಾರ್ಯಗಳನ್ನು ಸಾಧಿಸಿ ಬದುಕನ್ನು ಕಟ್ಟುತ್ತಿವೆಯೋ ತಮ್ಮ ಜನರ ವಾಣಿಯಾಗಿ ಬದುಕಿನ ಪ್ರತಿಬಿಂಬವಾಗಿ ಅವರ ಎಲ್ಲ ಆದರ್ಶಗಳ ರೂಪಣ ಶಕ್ತಿಯಾಗಿ ಹೇಗೆ ಒದಗುತ್ತಿದೆಯೋ ಆ ಎಲ್ಲ ಪ್ರಕಾರಗಳಲ್ಲಿಯೂ

---

೧. ವಸ್ತುಕೋಶ, ಪ್ರಕ. ಸಂಪುಟ ೭, ಸಂಚಿಕೆ ೭, ಪು. ೨.

ಕನ್ನಡನುಡಿ ಕನ್ನಡಿಗರ ಪಾಲಿಗೆ ನಿಲ್ಲುವುದು ಅಗತ್ಯ"[೧] ಎಂದು ಹೇಳಿ ಕನ್ನಡದಲ್ಲಿ ವಿಶ್ವದ ನೂತನ ವಿಚಾರಗಳೆಲ್ಲವೂ ದೊರಕಬೇಕಾಗಿದೆ ಎಂದು ಆಶಿಸಿದ್ದಾರೆ.

ಕನ್ನಡದಲ್ಲಿ ಏನಿದೆ? ಬರಿ ಕನ್ನಡವನ್ನು ಅಭ್ಯಾಸಮಾಡುವುದರಿಂದ ಏನು ಪ್ರಯೋಜನ? ಕನ್ನಡ ಕನ್ನಡ ಎಂದು ಬೊಬ್ಬಿಡುವುದಷ್ಟೇ ಕನ್ನಡಿಗರು ಮಾಡುವ ಕಾರ್ಯ ಎಂದು ಅಪಹಾಸ್ಯ ಮಾಡುವವರಿಗೆ ಕನ್ನಡದಲ್ಲಿ ಎಲ್ಲವೂ ಇದೆ ಎಂದು ತೋರಿಸುವ ಪ್ರಯತ್ನವನ್ನು ಮಾಡಿರುವ ಪ್ರಬುದ್ಧ ಕರ್ಣಾಟಕವು ಜವಾಬ್ದಾರಿಯುತ-ವಾಗಿ ವರ್ತಿಸಿ, ಅದನ್ನು ಕನ್ನಡಿಗರಿಗೆ ದೊರಕಿಸಿಕೊಡುವ ಪ್ರಯತ್ನ ಮಾಡಿದೆ. ಕನ್ನಡದಲ್ಲಿ ಇಲ್ಲದೇ ಇದ್ದ ಶೀಘ್ರಲಿಪಿಯಂತಹ ವಿಚಾರಗಳನ್ನು ಅದರಿಂದಾಗುವ ಪ್ರಯೋಜನಗಳನ್ನು ತಿಳಿಸಿಕೊಟ್ಟಿದೆ. ಕನ್ನಡ ಆಧುನಿಕಗೊಳ್ಳುತ್ತಾ ಬಂದ ಹಾಗೆ ಅದರ ಮೂಲ ಸ್ವರೂಪಕ್ಕೆ ಧಕ್ಕೆ ಬರದ ಹಾಗೆ ಭಾಷಾ ಶುದ್ಧತೆಯನ್ನು ಉಳಿಸಿಕೊಳ್ಳುವ ಬಗೆ ಹೇಗೆ ಎಂಬುದನ್ನು ಚರ್ಚಿಸಿದೆ. ಬೇರೆ ಬೇರೆ ಭಾಷೆ-ಗಳಲ್ಲಿರುವ ವಿಚಾರಗಳನ್ನು ಗಮನಿಸಿ ಅದಕ್ಕೆ ಕನ್ನಡ ಭಾಷೆಯನ್ನು ಹೇಗೆ ಸಿದ್ಧಗೊಳಿಸಬೇಕು ಎಂಬುದರ ಕಡೆ ಯೋಚಿಸಿದೆ. ಪ್ರಬುದ್ಧ ಕರ್ಣಾಟಕದ ಇಂತಹ ಕಾರ್ಯಗಳು ಕನ್ನಡ ಭಾಷೆಯ ಬೆಳವಣಿಗೆಯನ್ನು ಸಾಧಿಸಲು ಹಾಗೂ ಕನ್ನಡಿಗರ ಮನದಲ್ಲಿ ಸ್ಥಾನವನ್ನು ಗಳಿಸಲು ಸಹಕಾರಿಯಾಗಿದೆ.

'ಕನ್ನಡ ಸಂಕ್ಷಿಪ್ತ ಲಿಪಿ' ಎಂಬ ಲೇಖನ ಹದಿನಾಲ್ಕನೇ ಸಂಪುಟದ ಮೂರನೇ ಸಂಚಿಕೆಯಲ್ಲಿ ಪ್ರಕಟಗೊಂಡಿದೆ. ಮ.ನರಸಿಂಹಮೂರ್ತಿಯವರ ಈ ಲೇಖನದ ಆಶಯವನ್ನು ಗಮನಿಸಿದರೆ ಕನ್ನಡದಲ್ಲಿ ಬಳಸಲ್ಪಡುತ್ತಿದ್ದ ಸಂಕ್ಷಿಪ್ತ ಲಿಪಿಯ ಪರಿಚಯ ಮಾಡಿಕೊಡುವುದರ ಮೂಲಕ ಕನ್ನಡವನ್ನು ಬೆಳೆಸಬೇಕೆಂಬ ಅಭಿಪ್ರಾಯ ಹೊಂದಿರುವಂತೆ ಕಂಡುಬರುತ್ತದೆ. "ಕನ್ನಡ ನುಡಿವೆಣ್ಣು ತನ್ನ ಸರಿಗೆಳದಿಯರ ನಡುವೆ ತಲೆಯೆತ್ತಿ ನಡೆವಂತೆ ಮಾಡುವುದು ಕನ್ನಡಿಗರಾದ ನಮ್ಮ ಕೆಲಸ. ಅವಳು ಕುರೂಪಿಯಾಗಿರಲಿ, ತನ್ನ ಅಂಗಹೀನತೆಗಾಗಿ ನಾಚದಿರಲಿ ಯಾವುದು ಸಾಲದೆಂದು ತೋರುವುದೋ ಅದನ್ನು ತಂದು ತುಂಬೋಣ. ಅದು ಎಲ್ಲಾದರೂ ಇರಲಿ ಹೇಗಾದರೂ ಇರಲಿ ನಮ್ಮ ದಾರಿಗೆ ನಮ್ಮ ಬಣ್ಣವನ್ನು ಕಟ್ಟಿ ಕನ್ನಡ ದೇವಿಗೆ ಅಲಂಕರಿಸೋಣ ಅವಳ ಸೊಬಗನ್ನು ನೋಡಿ ನಾವು ನಲಿಯೋಣ"[೨] ಎಂದಿರುವ ನರಸಿಂಹಮೂರ್ತಿಯವರು ಅದಕ್ಕಾಗಿಯೇ ಈ ಲೇಖನದಲ್ಲಿ ಸಂಕ್ಷಿಪ್ತ ಲಿಪಿಯನ್ನು ಕನ್ನಡದಲ್ಲಿ ಬಳಸುವುದು ಹೇಗೆ? ಅದರಿಂದ ಕನ್ನಡಿಗರಿಗೆ ಆಗುವ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೨೬, ಸಂಚಿಕೆ ೪, ಪು. ೯೬.
೨. ಎಂ.ನರಸಿಂಹಮೂರ್ತಿ, ಪ್ರ.ಕ. ಸಂಪುಟ ೧೪, ಸಂಚಿಕೆ ೩, ಪು. ೯.

ಪ್ರಯೋಜನವೇನು? ಸಂಕ್ಷಿಪ್ತ ಲಿಪಿಯನ್ನು ಕಲಿಯುವ ಬಗೆ ಹೇಗೆ ಅದಕ್ಕೆ ಕನ್ನಡದಲ್ಲಿ ಇರುವ ಸೌಕರ್ಯವೇನು ಎಂಬ ವಿಚಾರಗಳ ಕಡೆ ಗಮನಸೆಳೆದಿದ್ದಾರೆ.

ಕಳೆದ ಶತಮಾನದ ಆರಂಭದಲ್ಲಿ ಕನ್ನಡ ಸಂಕ್ಷಿಪ್ತ ಲಿಪಿಯ ತಿಳುವಳಿಕೆ ಕನ್ನಡಿಗರಿಗೆ ಅವಶ್ಯಕವಾಗಿ ಬೇಕಾಗಿತ್ತು. ನಾಟಕ ಕಥೆ, ಕಾದಂಬರಿ ಇಂತಹ ಸಾಹಿತ್ಯ ಪ್ರಕಾರಗಳಿಂದಷ್ಟೇ ಅಲ್ಲದೆ ಭಾಷಣ, ಉಪನ್ಯಾಸ ಇಂತಹುದರ ಮೂಲಕವೂ ಕನ್ನಡ ಭಾಷೆಯ ಸೇವೆ ಸಾಗುತ್ತಿತ್ತು. ಶ್ರೇಷ್ಠ ವ್ಯಕ್ತಿಗಳ, ಬರಹಗಾರರ ಅಭಿಪ್ರಾಯಗಳನ್ನು ಕನ್ನಡಿಗರಿಗೆ ದೊರಕಿಸಿಕೊಡಬೇಕಾಗಿತ್ತು. ಇಂದು ವಿಜ್ಞಾನವು ಮುಂದುವರೆದಿದೆ. ಟೇಪ್‌ರೆಕಾರ್ಡರ್, ಧ್ವನಿಮುದ್ರಣ, ವೀಡಿಯೋ ಚಿತ್ರೀಕರಣ ಇಂತಹುಗಳ ಮೂಲಕ ಯಾರದೇ ಅಭಿಪ್ರಾಯಗಳನ್ನು ಅವರು ಇರುವ ಕಡೆಗೇ ಹೋಗಿ ಮುದ್ರಿಸಿ ತರಬಹುದು. ನಂತರ ಬರಹದ ರೂಪಕ್ಕೆ ಇಳಿಸಬಹುದು. ಆದರೆ ಕಳೆದ ಶತಮಾನದ ಆರಂಭದಲ್ಲಿ ಇಂತಹ ಸೌಕರ್ಯಗಳು ತೀರಾ ಅಪರೂಪವಾಗಿದ್ದು ನಮ್ಮ ಬರಹಗಾರರಿಗೆ ಅದು ದಕ್ಕುವ ಸ್ಥಿತಿಯಲ್ಲೇ ಇರಲಿಲ್ಲ. ಇಂತಹ ಸಂದರ್ಭಗಳಲ್ಲಿ ಕನ್ನಡಿಗರ ನೆರವಿಗೆ ಬಂದದ್ದು ಕನ್ನಡ ಶೀಘ್ರಲಿಪಿ. ಶೀಘ್ರಲಿಪಿಯ ವಿಷಯಗಳು ಕನ್ನಡಿಗರನ್ನು ಮುಟ್ಟಿಸುವುದು ಅಗತ್ಯವಾಗಿತ್ತು. ಇದನ್ನು ಕುರಿತಂತೆ ಪ್ರಬುದ್ಧ ಕರ್ಣಾಟಕದ ವರದಿಯೊಂದು ಗಮನಸೆಳೆಯುತ್ತದೆ. ಶಿವಮೊಗ್ಗೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಅಧ್ಯಾಪಕರ ಸಂಘವು ಭಾಷಣಗಳನ್ನು ಏರ್ಪಡಿಸಿದ್ದ ಸಂದರ್ಭದಲ್ಲಿ ನಡೆದ ಸಂವಾದ ಕಾರ್ಯಕ್ರಮದಲ್ಲಿ ಶಿವಮೊಗ್ಗೆಯ ಕೆಲವು ಮಹನೀಯರು ನೀಡಿದ ಪ್ರಮುಖ ಸಲಹೆ ಯಾವುದೆಂದರೆ ಬಹುತೇಕ ಭಾಷಣಕಾರರು ಉಪನ್ಯಾಸಗಳನ್ನು ಸಮಗ್ರವಾಗಿ ಬರೆದುಕೊಂಡು ಬರುವುದಿಲ್ಲ. ಕೆಲವು ಸೂಚನೆಗಳನ್ನಷ್ಟೇ ಬಳಸಿಕೊಂಡು ಉತ್ತಮವಾಗಿ ಮಾತನಾಡಿಬಿಡುತ್ತಾರೆ. ನಿರೂಪಣಕ್ರಮ ನೂತನವಾಗಿ, ಹೊಸ ವಿಚಾರಗಳು ಅಲ್ಲಿ ಪ್ರಸ್ತಾಪವಾದರೂ ಅವುಗಳಿಗೆ ಬರಹದ ರೂಪ ಸಿಗದೇ ಇರುವುದರಿಂದ ಕನ್ನಡಿಗರಿಗೆ ನಷ್ಟವಾಗುತ್ತಿದೆ. ಆದುದರಿಂದ ಅಧ್ಯಾಪಕ ಸಂಘದವರು ಸಂಕ್ಷಿಪ್ತ ಲಿಪಿಕಾರರನ್ನು ಕರೆಸಿಕೊಂಡು ಭಾಷಣಗಳ ಪೂರ್ವ ವರದಿಯನ್ನು ಸಂಪಾದಿಸಬೇಕು ಎಂಬುದು. ಇದು ಅಂದು ಇದ್ದ ಸಂಕ್ಷಿಪ್ತ ಲಿಪಿಯ ಮಹತ್ವವನ್ನೂ ಅಗತ್ಯತೆಯನ್ನೂ ಪ್ರತಿಬಿಂಬಿಸಿದೆ. ಇಂಗ್ಲಿಷ್ ಭಾಷೆ ಬಲ್ಲವರಿಗೆ ಮಾತ್ರ ಲಭ್ಯವಿದ್ದ ಈ ಅನುಕೂಲ ಕನ್ನಡಿಗರಿಗೆ ದೊರೆಯಬೇಕು. ಇದಕ್ಕೆ ಪೂರಕವಾಗಿ ಅದನ್ನು ಹೊಸದಾಗಿ ರಚಿಸಿಕೊಡುವ ಕಾರ್ಯ ಕನ್ನಡಿಗರಿಂದ ಆಗಬೇಕಾಗಿತ್ತು. ಅದರ ಮೂಲಕ ಕನ್ನಡಕ್ಕೆ ಬಲತುಂಬಬೇಕಾಗಿತ್ತು. ಕನ್ನಡದಲ್ಲಿ ಇಂತಹ ಪ್ರಯತ್ನಗಳು ನಡೆದಾಗ ಅದನ್ನು ಗುರುತಿಸಿ ಪ್ರೋತ್ಸಾಹಿಸಿ ಪ್ರಚಾರ ನೀಡಬೇಕಾಗಿತ್ತು. ಪ್ರಬುದ್ಧ ಕರ್ಣಾಟಕ ಈ ಕಾರ್ಯವನ್ನು ಕೈಗೆತ್ತಿಕೊಂಡಿದೆ.

'ದೇವರಾಯ' ಎಂಬುವರು 'ಸಂಕ್ಷಿಪ್ತ ಲಿಪಿ'ಯನ್ನು ಕುರಿತು ಗ್ರಂಥವೊಂದನ್ನು ರಚಿಸಿದಾಗ ಅದನ್ನು ವಿಮರ್ಶಿಸುತ್ತಾ "ಒಂದು ಭಾಷೆಗೆ ಹೊಸದಾಗಿ ಸಂಕ್ಷಿಪ್ತ ಲಿಪಿಯನ್ನು ನಿಯೋಜಿಸುವುದೆಂದರೆ ಸಾಮಾನ್ಯದ ವಿಷಯವಲ್ಲ"[೧] ಎಂದು ಹೇಳಿರುವ ವಿಮರ್ಶಕರು ಆ ಗ್ರಂಥದ ಪ್ರಾಮುಖ್ಯತೆಯನ್ನು ಗುರುತಿಸಿದ್ದಾರೆ. ಅಷ್ಟೇ ಅಲ್ಲದೆ ನಮ್ಮ ಭಾಷೆಯ ಪ್ರತ್ಯಯ ಸಾಮಾಗ್ರಿಗಳನ್ನು ಶಾಸ್ತ್ರೀಯವಾಗಿ ವಿಭಜಿಸಿಕೊಂಡು ಅವಕ್ಕೆಲ್ಲ ಲಘು ರೇಖೆಗಳನ್ನು ರಚಿಸಿಕೊಂಡಲ್ಲಿ ಕನ್ನಡ ಸಂಕ್ಷಿಪ್ತಲಿಪಿಯ ಬರವಣಿಗೆಯ ವೇಗ ಹೆಚ್ಚಿಸಲು ಸಾಧ್ಯವಾಗುತ್ತದೆ ಎಂಬಂತಹ ಉಪಯುಕ್ತ ಸಲಹೆಗಳನ್ನೂ ನೀಡಿದ್ದಾರೆ. ಕನ್ನಡದಲ್ಲಿ ಲಭ್ಯವಿಲ್ಲದೇ ಇಲ್ಲದ ಸಂಕ್ಷಿಪ್ತ ಲಿಪಿಯ ಬಳಕೆಯ ಮೂಲಕ ಸಾಧಿಸುವುದಕ್ಕೆ ಅನುಕೂಲ ಮಾಡಿಕೊಟ್ಟ ದೇವರಾಯರ ಈ ಕಾರ್ಯವನ್ನು ಕುರಿತು ಕನ್ನಡಿಗರಿಗೆ ತಮ್ಮ ಭಾಷೆಯ ಮೇಲೆ ಮಮತೆ ಹೆಚ್ಚಾಗಿ ಕನ್ನಡ ಭಾಷೆಯಲ್ಲೇ ಒಂದು ನೂತನ ಚೈತನ್ಯ ಹುಟ್ಟಿ ಈಚೆಗೆ ಕನ್ನಡ ಭಾಷಣಗಳಲ್ಲಿ ಎಷ್ಟೋ ಉದ್ದಾಮ ವಿಚಾರಗಳು ಹೊರಬೀಳುತ್ತಿವೆ. ಈ ವಿಷಯಗಳನ್ನು ಲೇಖನಿಯಲ್ಲಿ ಹಿಡಿದು ಜನತೆಯ ಮುಂದೆ ಇಡಲು ಸಾಧನವನ್ನು ಕಲ್ಪಿಸಿಕೊಟ್ಟಿರುವ ಶ್ರೀಮಾನ್ ದೇವರಾಯರ ಕಾರ್ಯವು ಸಫಲಗೊಂಡು ನಮ್ಮ ಭಾಷೆ ಮುಂದುವರೆಯಲೆಂದು ನಾವು ಕೋರುತ್ತೇವೆ ಎಂದು ಕೃತಜ್ಞತೆಯಿಂದ ಸ್ಮರಿಸಿ ಇಂತಹ ಪ್ರಯತ್ನಗಳು ಕನ್ನಡದ ಬೆಳವಣಿಗೆಗೆ ಹೇಗೆ ಸಹಕಾರ ನೀಡಿದವು ಎಂಬುದರ ಕಡೆ ಗಮನ ಸೆಳೆದಿದ್ದಾರೆ. ಈ ರೀತಿ ಹೊಸವಿಚಾರಗಳು ಬರುವಾಗ ಅಲ್ಲಿಂದ ಹೊಸ ಪದಗಳು, ಶಬ್ದಗಳು ಸೇರುವುದು ಸಹಜ. ಆದರೆ ಇದರಿಂದ ಕನ್ನಡ ಭಾಷೆ ಅಶುದ್ಧವಾಗುತ್ತದೆ ಎಂಬಂತಹ ಅಭಿಪ್ರಾಯಗಳನ್ನು ಕೆಲವರು ವ್ಯಕ್ತಪಡಿಸಿದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕವು ಇದಕ್ಕೆ ತನ್ನ ವಿರೋಧವನ್ನು ವ್ಯಕ್ತಪಡಿಸಿ ಕ.ವೆಂ.ರಾಘವಾಚಾರ್ ಅವರ ಭಾಷಾಶುದ್ಧಿ ಎಂಬ ಲೇಖನವನ್ನು ಪ್ರಕಟಿಸಿದೆ.

ಭಾಷಾಶುದ್ಧಿ ಎಂದರೇನು? ಒಂದು ಭಾಷೆಯಲ್ಲಿ ಬೇರೆ ಭಾಷೆಯ ಪದಗಳು ಅನಿವಾರ್ಯವೇ? ನಮ್ಮ ಭಾಷೆಯಲ್ಲಿ ಬಳಕೆಯಲ್ಲಿರುವ ಪದಗಳೆಲ್ಲವೂ ಶುದ್ಧವಾದದ್ದೇ? ಎಂಬಂತಹ ವಿಚಾರಗಳ ಕಡೆ ಈ ಲೇಖನ ಗಮನಹರಿಸಿದೆ. ಭಾಷಾಶುದ್ಧತೆಯ ಬಗ್ಗೆ ಬರೆಯುತ್ತಾ ಯಾವುದನ್ನು ಇಂದು ನಾವು ಅಶುದ್ಧಿ ಎನ್ನುತ್ತಿದ್ದೇವೆಯೋ ಅದೂ ಒಂದು ಕಾಲದಲ್ಲಿ ಶುದ್ಧವಾಗಿಯೇ ಇದ್ದು ಭಿನ್ನ ಭಿನ್ನ ಕಾರಣಗಳಿಂದ ತಲೆಮಾರಿನಿಂದ ತಲೆಮಾರಿಗೆ ದಾಟುತ್ತಾ ಬಂದ ಹಾಗೆ ಅದರ ಸ್ವರೂಪದಲ್ಲಿ ಬದಲಾವಣೆಯಾಗಿರಬಹುದು. ಹಾಗಾಗಿ ಅದನ್ನು ಅಶುದ್ಧಿ ಎನ್ನಲು ಸಾಧ್ಯವಿಲ್ಲ. ಇನ್ನೂ ಕನ್ನಡವು ಸಂಸ್ಕೃತ, ಪ್ರಾಕೃತ, ಪಾರಸಿ, ಉರ್ದು, ಇಂಗ್ಲಿಷ್ ಇವೇ

---

೧. ಕಾವ್ಯಾವಲೋಕನ, ಪ್ರ.ಕ. ಸಂಪುಟ ೧೫, ಸಂಚಿಕೆ ೩, ಪು. ೧೧೦.

ಮೊದಲಾದ ಭಾಷೆಗಳಿಂದ ಹಲವಾರು ಪದಗಳನ್ನು ಎರವಲಾಗಿ ಪಡೆದಿರಬಹುದು. ಇವುಗಳ ಬಳಕೆಯಿಂದಾಗಿ ಕನ್ನಡ ಭಾಷೆ ಅಶುದ್ಧಿಯಾಗಿಬಿಡುತ್ತದೆ ಎಂದು ಭಾವಿಸುವುದು ತಪ್ಪು ಬೇರೆಯವರ ಪದಗಳು ಅದು ಯಾವುದೇ ಆಗಿರಬಹುದು ಅದು "ನಮ್ಮ ನುಡಿ ಬಳಗಕ್ಕೆ ಸೇರುವವರೆಗೂ ಹೊರಗಿನದು. ನಮ್ಮಲ್ಲಿ ಸೇರಿಕೊಂಡ ಒಡನೆಯೇ ಅದಕ್ಕೆ ವೇಷ ಹಾಕಿ ನಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸಿಕೊಳ್ಳುವ ಅಧಿಕಾರ ನಮ್ಮದು"[೧] ಎಂಬ ರಾಘವಾಚಾರ್ ಅವರ ಅಭಿಪ್ರಾಯ ಗಮನಾರ್ಹ. ಆದರೆ ಈ ಸಂದರ್ಭದಲ್ಲಿ ಅರ್ಥವ್ಯತ್ಯಾಸ ಆಗದಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಬರಹಗಾರ ಹೊರಬೇಕು. ಭಾಷಾಶುದ್ಧಿಯ ಹೆಸರಿನಲ್ಲಿ ಬೇರೆ ಭಾಷೆಯ ಪದಗಳನ್ನು ತೆಗೆದುಕೊಳ್ಳದೇ ಹೋದರೆ ಅದು ಭಾಷೆಯ ಬೆಳವಣಿಗೆಗೆ ಮಾರಕವಾಗುತ್ತದೆ. ಪ್ರಬುದ್ಧ ಕರ್ಣಾಟಕದ ಈ ಅಭಿಪ್ರಾಯ ಕೆಲವರಿಗೆ ಅಪಥ್ಯವಾಗಿ ತೋರಿತು. ಮೈಸೂರಿನ ಕಡೆಯವರು ಬಳಸುತ್ತಿರುವ ಕನ್ನಡದಲ್ಲಿ ಹೆಚ್ಚಿನ ಆಂಗ್ಲಭಾಷಾ ಪದಗಳು ಸೇರಿ ಭಾಷೆ ಅಶುದ್ಧಿಯಾಗುತ್ತಿದೆ ಎಂಬ ಅಭಿಪ್ರಾಯಗಳೂ ವ್ಯಕ್ತವಾದವು.

ಸುಬೋಧ ಪತ್ರಿಕೆಯಲ್ಲಿ 'ಕಾನಾಡಾ ಧುರೀಣ' ಎಂಬುವರು ಲೇಖನ-ವೊಂದನ್ನು ಬರೆದು ಮೈಸೂರು ಕನ್ನಡದಲ್ಲಿ ಅತಿಯಾಗಿ ಆಂಗ್ಲಭಾಷೆಯನ್ನು ಸೇರಿಸುತ್ತಿರುವುದರಿಂದ ಕನ್ನಡ ಹೀನಾಯ ಸ್ಥಿತಿಯನ್ನು ತಲುಪುತ್ತಿದೆ. ಆದುದರಿಂದ ಮೈಸೂರಿನವರು ಈ ದುಷ್ಟಪದ್ಧತಿಯನ್ನು ಹೊರದೂಡಿ ಸಾಹಿತ್ಯ ಸೇವೆ ಮಾಡಬೇಕು ಎಂಬ ಅಪೇಕ್ಷೆಯನ್ನು ಪಟ್ಟಾಗ ಪ್ರಬುದ್ಧ ಕರ್ಣಾಟಕದ ಸಂಪಾದಕರು ಇದಕ್ಕೆ ತೀವ್ರವಾಗಿ ಪ್ರತಿಕ್ರಿಯೆ ನೀಡಿದರು. ಪ್ರಬುದ್ಧ ಕರ್ಣಾಟಕ ಪ್ರಕಟವಾಗತೊಡಗಿ ಎಂಟು ವರ್ಷಗಳಾಗುತ್ತಿವೆ. ಆದರೂ 'ಕಾನಾಡಾ ಧುರೀಣರು' ವ್ಯಕ್ತಪಡಿಸಿದ ದೋಷಗಳು ನಮ್ಮ ಕಣ್ಣಿಗೆ ಬಿದ್ದಿಲ್ಲ. ನಮ್ಮ ದೋಷಗಳು ನಮಗೆ ಗೋಚರಿಸುವುದಿಲ್ಲ. ಆದುದರಿಂದ ನಮ್ಮಲ್ಲಿರುವ ಲೋಪದೋಷಗಳನ್ನು ತೋರಿಸಿಕೊಡಿ ಹಾಗೂ ಇದರಿಂದ ಕನ್ನಡಕ್ಕೆ ಉಂಟಾಗಬಹುದಾದ ಹೀನಾಯಸ್ಥಿತಿಯನ್ನು ತಪ್ಪಿಸಿ ಎಂದಿದ್ದಾರೆ. ಇಲ್ಲಿ ವ್ಯಕ್ತವಾಗಿರುವ ಭಾವ ತಪ್ಪನ್ನು ತೋರಿಸಿಕೊಡಿ ಎಂಬ ವಿನೀತ ಭಾವವಲ್ಲ. ಇಲ್ಲದೇ ಇರುವ ತಪ್ಪುಗಳನ್ನು ಹುಡುಕಲು ಯತ್ನಿಸುತ್ತಿರುವವರ ವಿರುದ್ಧದ ಬೇಸರ, ಸಿಟ್ಟು ಇದೇ ಸಂದರ್ಭದಲ್ಲಿ ಭಾಷಾಶಾಸ್ತ್ರದಲ್ಲಿಯ ವಿಷಯಗಳನ್ನು ಪ್ರಸ್ತಾಪಿಸಿದ್ದಾರೆ. "ಇತರ ಭಾಷೆಗಳಿಂದ ಶಬ್ದಗಳನ್ನು ತೆಗೆದುಕೊಳ್ಳಬಹುದೇ? ತೆಗೆದುಕೊಳ್ಳಬೇಕಾದರೆ ಎಂಥವುಗಳು ಮತ್ತು ಯಾವಾಗ ತೆಗೆದುಕೊಳ್ಳಬೇಕು. ಇವುಗಳ ಸಾಧಕ-ಬಾಧಕಗಳೇನು ಇಂತಹ ವಿಷಯಗಳು ನಿಷ್ಪಕ್ಷಪಾತವಾಗಿಯೂ ಶಾಸ್ತ್ರಸಮ್ಮತವಾಗಿಯೂ

---

೧. ಕ.ವೆಂ.ರಾಘವಾಚಾರ್, ಪ್ರ.ಕ. ಸಂಪುಟ ೭, ಸಂಚಿಕೆ ೭, ಪು. ೧೦-೧೧.

ಯುಕ್ತಾಯುಕ್ತವಾಗಿಯೂ ವಿಚಾರಕ್ಕೆ ಬಂದರೆ ಭಾಷಾಭಿವೃದ್ಧಿಗೆ ಸಹಾಯಕ-ವಾಗುವುದು"[೧] ಎಂಬ ಸಂಪಾದಕರ ಮಾತುಗಳು ಗಮನಾರ್ಹವಾಗಿದೆ.

**ಕನ್ನಡ ಸಾಹಿತ್ಯದ ಅಭಿವೃದ್ಧಿ**

'ಕನ್ನಡನಾಡಿಗೆ ಕನ್ನಡವೇ ಗತಿ ಅನ್ಯಥಾ ಶರಣಂ ನಾಸ್ತಿ' ಎಂಬುದು ಬಿ.ಎಂ.ಶ್ರೀಕಂಠಯ್ಯನವರ ಉದ್ಘೋಷ. ತನ್ನ ಆರಂಭದ ದಿನಗಳಿಂದಲೂ ಬಿ.ಎಂ.ಶ್ರೀ ಅವರ ಸಲಹೆ ಸೂಚನೆಗಳನ್ನು ಹಾಗೂ ಆದರ್ಶಗಳನ್ನು ಸ್ವೀಕರಿಸುತ್ತಾ ಬೆಳೆದುಬಂದ ಪ್ರಬುದ್ಧ ಕರ್ಣಾಟಕ ಅವರ ವಾಣಿಯನ್ನೇ ತನ್ನ ಆದರ್ಶವನ್ನಾಗಿಸಿಕೊಂಡು ಕನ್ನಡನುಡಿಯ ಏಳಿಗೆಗಾಗಿ ತನ್ನ ಶಕ್ತಿಯನ್ನು ವಿನಿಯೋಗಿಸಿದೆ. ಕನ್ನಡ ನುಡಿಯ ಏಳಿಗೆ ಎಂದಾಗ ಅದು ಭಾಷೆಯಾಗಿ ಕನ್ನಡದ ಅಭಿವೃದ್ಧಿ ಎಂಬ ಅರ್ಥಕ್ಕೆ ಸೀಮಿತಗೊಳ್ಳುವುದಿಲ್ಲ. ಏಕೆಂದರೆ "ಭಾಷೆಯೆನ್ನುವುದು ನಿತ್ಯಗಟ್ಟಳೆಯ ವ್ಯಾಪಾರಕ್ಕೆ ಇರುವುದು ಮಾತ್ರವಲ್ಲ ಅದರ ಮುಖ್ಯ ಕಾರ್ಯ ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಮುಂದು ತೆಗೆದುಕೊಂಡು ಹೋಗಲು ಸಾಧಕವಾಗುವುದು. ಆನಂದ ರಸವನ್ನು ಕಲೆಯ ಮೂಲಕ ಹೃದಯಕ್ಕೆ ತುಂಬುವುದು ಆತ್ಮೋದ್ಧಾರಕ್ಕೆ ಸೋಪಾನವಾಗುವುದು[೨] ಎಂಬ ಬಿ.ಎಂ.ಶ್ರೀ ಅವರ ಮಾತು ಸತ್ಯವಾದದ್ದು. ಈ ವಿಚಾರವನ್ನು ತನ್ನಲ್ಲಿ ರೂಢಿಸಿಕೊಂಡಿರುವ ಪ್ರಬುದ್ಧ ಕರ್ಣಾಟಕ, ಕನ್ನಡದ ಉದ್ಧಾರಕ್ಕೆ ಪೂರಕವಾಗಿ ಕಲೆಯ ಪ್ರಮುಖ ಸಾಧನವಾದ ಕನ್ನಡ ಸಾಹಿತ್ಯದ ಅಭಿವೃದ್ಧಿಯ ಕಡೆ ಹಾಗೂ ಅದಕ್ಕೆ ವಿಶ್ವಮಟ್ಟದಲ್ಲಿ ಸ್ಥಾನವನ್ನು ದೊರಕಿಸಿಕೊಡುವ ಕಡೆ ಪ್ರಯತ್ನವನ್ನು ಮಾಡಿದೆ.

ಪ್ರಬುದ್ಧ ಕರ್ಣಾಟಕವು ಸಾಹಿತ್ಯ ಪತ್ರಿಕೆಯಾಗಬೇಕು ಎಂಬ ಆಶಯದೊಡನೆ ಜನ್ಮತಾಳಿದ ಪತ್ರಿಕೆಯಾದುದರಿಂದ ಸಾಹಿತ್ಯದ ವಿಷಯಗಳಿಗೆ ಹೆಚ್ಚಿನ ಆದ್ಯತೆ ನೀಡಿದೆ. ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಅಪಾರ ಅವಕಾಶ ಕಲ್ಪಿಸಿಕೊಡುವುದರ ಜೊತೆಯಲ್ಲೇ ಸಾಹಿತ್ಯದ ಲಕ್ಷಣ, ಸಾಹಿತ್ಯದ ಕಾರ್ಯ, ಸಾಹಿತ್ಯದ ಉದ್ದೇಶ, ಸಾಹಿತ್ಯ ಮತ್ತು ಜೀವನ, ಸಾಹಿತ್ಯದ ಮಾರ್ಗಗಳು ಇವೇ ಮೊದಲಾದ ವಿಚಾರಗಳ ಕಡೆ ಗಮನಹರಿಸಿದೆ. ವೈಜ್ಞಾನಿಕ ಬರಹಗಳಿಗೆ ವೇದಿಕೆ ಕಲ್ಪಿಸಿಕೊಡುವುದರ ಮೂಲಕ ಅವುಗಳ ರಚನೆಗೆ ಬೇಕಾದ ಆರಂಭಕಾಲದ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ನೀಡಿದೆ. ವಿವಿಧ ಕ್ಷೇತ್ರಗಳಲ್ಲಿರುವ ವಿದ್ವಾಂಸರುಗಳನ್ನು ಗುರುತಿಸಿ ಒತ್ತಾಯಪೂರ್ವಕವಾಗಿ ಅವರಿಂದ ಲೇಖನಗಳನ್ನು ಬರೆಯಿಸಿದೆ. ನೂರಾರು ಸಂಖ್ಯೆಯ ಬರಹಗಾರರಿಗೆ ವೇದಿಕೆಯಾಗಿ ನಿಂತು ಸಾಹಿತ್ಯದ ವಿಚಾರದಲ್ಲಿ ಗಂಭೀರ ಚರ್ಚೆಗೆ ಅವಕಾಶವನ್ನು ಮಾಡಿಕೊಟ್ಟಿದೆ.

---

೧. ವಸ್ತುಕೋಶ, ಪ್ರಕ. ಸಂಪುಟ ೭೮ ಸಂಚಿಕೆ ೭, ಪು. ೧೪.
೨. ಶ್ರೀಕಂಠಯ್ಯ ಬಿ.ಎಂ., ಶ್ರೀ ಸಾಹಿತ್ಯ, ೧೯೮೩, ಪು. ೨೯೦.

ಅನಿಶ್ಚಿತವಾದ ಹಾಗೂ ಗೊಂದಲಗಳಿಂದ ಕೂಡಿದ ಸಾಹಿತ್ಯದ ವಿಚಾರಗಳಿಗೆ ದೃಢತೆಯನ್ನು ಒದಗಿಸುವ ಪ್ರಯತ್ನ ಮಾಡಿದೆ.

ಕನ್ನಡ ಸಾಹಿತ್ಯದ ದಿಕ್ಕು ಯಾವುದಿರಬೇಕು? ಅದರ ಮುಂದೆ ಯಾವ ಗುರಿಗಳಿರಬೇಕು? ಸಾಹಿತ್ಯ ಜೀವನದ ಪ್ರತಿಬಿಂಬವೋ? ಗತಿಬಿಂಬವೋ? ಸಾಹಿತ್ಯದಿಂದ ವಾಚಕನಿಗೆ ದೊರಕಬೇಕಾದ ಲಾಭ ಯಾವುದು? ನೀತಿಯೇ? ಆನಂದವೇ? ಎಂಬಂತಹ ಪ್ರಶ್ನೆಗಳಿಗೆ ಉತ್ತರಿಸಲು ಪ್ರಯತ್ನಿಸಿದೆ. ಕಾವ್ಯದಲ್ಲಿ ಬರುವ ಶೀಲ ಅಶ್ಲೀಲಗಳ ಯಾವ ಸ್ವರೂಪದಲ್ಲಿ ಯಾವ ಪ್ರಮಾಣದಲ್ಲಿದ್ದರೆ ಉಚಿತವಾಗುತ್ತದೆ ಎಂಬ ವಿಚಾರಗಳನ್ನು ಕುರಿತು ಚರ್ಚಿಸಿದೆ.

ಸಾಹಿತ್ಯದ ವಿಚಾರಗಳ ಬಗ್ಗೆ ತಮಗೆ ಏಕಿಷ್ಟು ಆಸಕ್ತಿ ಎಂಬುದನ್ನು ಕುರಿತು ಸಂಪಾದಕರು "ತನಗೆ ಸಮಾನರಿಲ್ಲವೆಂದು ಮೆರೆಯುವ ಚಕ್ರಾಧೀಶ್ವರರು ಹೋಗುವರು. ಅವರ ವಿಸ್ತಾರವಾದ ಚಕ್ರಾಧಿಪತ್ಯಗಳು ಉರುಳಿಹೋಗುವುವು. ಐಶ್ವರ್ಯವೂ ಭೋಗವೂ ಮಾಯವಾಗುವುವು. ಆದರೆ ಕಾಲನು ಇವೆಲ್ಲವುಗಳನ್ನೂ ಒಂದೊಂದಾಗಿ ತುಳಿದು ನುಚ್ಚುನೂರು ಮಾಡುತ್ತಾ ಹೋಗುವಾಗ ಉತ್ತಮವಾದ ಸಾಹಿತ್ಯ ರತ್ನಗಳಿಗೆ ಮಾತ್ರ ಮನಸೋತು ಅವುಗಳನ್ನು ಕಂಠದಲ್ಲಿ ಧರಿಸಿಕೊಂಡು ಹೋಗುವನು"[೧] ಎಂದು ಹೇಳಿ ಉತ್ತಮವಾದ ಸಾಹಿತ್ಯ ಶಾಶ್ವತವಾದದ್ದು ಅದಕ್ಕೆ ಅಂತ್ಯ ಎಂಬುದೇ ಇಲ್ಲ. ಹಾಗಾಗಿ ಅಂತಹ ಉತ್ತಮವಾದ ವಿಚಾರಕ್ಕೆ ಆದ್ಯತೆ ನೀಡಲು ಬಯಸಿರುವುದಾಗಿ ಹೇಳಿಕೊಂಡಿದ್ದಾರೆ. ಇಂತಹ ಸಾಹಿತ್ಯದಿಂದ ಸಮಾಜವನ್ನು ತಿದ್ದಬಹುದು. ಬರಹಗಾರರು ಸಾಹಿತ್ಯವೆಂಬ ಈ ಆಯುಧವನ್ನು ಸರಿಯಾಗಿ ಪ್ರಯೋಗಿಸಿದರೆ ಯುದ್ಧಮಾಡಿ ಸಾಧಿಸಬಹುದಾದ ಪರಿಣಾಮಕ್ಕಿಂತಲೂ ಹೆಚ್ಚಿನ ಪ್ರಭಾವವನ್ನು ಸಮಾಜದ ಮೇಲೆ ಬೀರಲು ಸಾಧ್ಯವಾಗುತ್ತದೆ. ಸಮಾಜದ ಗಮನವನ್ನು ತನ್ನೆಡೆಗೆ ಸೆಳೆಯಲು ಶಕ್ತವಾಗಿರುವ ಇಂತಹ ಸಾಹಿತ್ಯದ ಬಗ್ಗೆ ಒತ್ತುಕೊಡಲು ಅವರು ಯೋಚಿಸಿದ್ದಾರೆ.

ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯವನ್ನು ದೊರಕಿಸಿಕೊಡುವುದರ ಮೂಲಕ ಉತ್ತಮವಾದ ಸಮಾಜವನ್ನೂ ನಿರ್ಮಿಸಿಕೊಡಬಹುದು. ಒಂದು ದೇಶದ ಅಭಿವೃದ್ಧಿಹೊಂದಲು ಅವಶ್ಯಕವಾಗಿ ಬೇಕಾಗಿರುವ ಮುಖ್ಯ ಸಾಧನಗಳಲ್ಲಿ ಸಾಹಿತ್ಯವೂ ಒಂದಾಗಿರುತ್ತದೆ. "ಒಳ್ಳೆಯ ಸಾಹಿತ್ಯವನ್ನು ಪಡೆದ ಜನಾಂಗದ ಹೃದಯದಲ್ಲಿ ಜ್ಞಾನವೂ ನಿಷ್ಕಲ್ಮಷವಾದ ಆನಂದವೂ ಸತ್ಪ್ರೇರಣೆಯ ಸಾಮಾಜಿಕ ಪುನರ್ನಿರ್ಮಾಣ ಕಾರ್ಯದಲ್ಲಿ ಐಕ್ಯಮತ್ಯವೂ ಬಲವಾಗಿ ಬೇರೂರುತ್ತದೆ"[೨] ಎಂದಿರುವ ಬಿ.ಎಂ.ಶ್ರೀ. ಅವರ

---

೧. ಎ.ಆರ್.ಕೃಷ್ಣಶಾಸ್ತ್ರಿ, ಪ್ರ.ಕ. ಸಂಪುಟ ೧, ಸಂಚಿಕೆ ೧, ಪು. ೪.

೨. ಶ್ರೀಕಂಠಯ್ಯ,ಬಿ.ಎಂ., ಶ್ರೀ ಸಾಹಿತ್ಯ, ೧೯೮೩, ಪು. ೨೬೭.

ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಹಾಗಾದರೆ ಒಳ್ಳೆಯ ಸಾಹಿತ್ಯ ಎಂದರೇನು ಎಂಬ ಪ್ರಶ್ನೆ ಉದ್ಭವಿಸಿದ ಸಂದರ್ಭದಲ್ಲಿಯೇ ಪ್ರಬುದ್ಧ ಕರ್ಣಾಟಕ 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಬಿ.ಎಂ.ಶ್ರೀಕಂಠಯ್ಯನವರ ಲೇಖನವನ್ನು ಪ್ರಕಟಿಸಿದೆ. ಕನ್ನಡ ಸಾಹಿತ್ಯವು ಪ್ರಾಚೀನ ಕಾಲದಿಂದಲೂ ಹಳಗನ್ನಡ ನಡುಗನ್ನಡ, ಹೊಸಗನ್ನಡ ಎಂಬ ಹಲವು ಘಟ್ಟಗಳನ್ನು ದಾಟಿಕೊಂಡು ಬಂದಿದೆ. ಈ ಘಟ್ಟಗಳಲ್ಲಿ ಪ್ರಕಟಗೊಂಡಿರುವ ವಿವಿಧ ಬಗೆಯ ಸಾಹಿತ್ಯ ಕೃತಿಗಳ ಮೌಲ್ಯಮಾಪನ ಆಗಬೇಕಾಗಿದೆ. ಅದರಲ್ಲೂ ಹಳಗನ್ನಡದ ಹಲವಾರು ಕೃತಿಗಳು ವರ್ತಮಾನಕ್ಕೆ ಪ್ರಸ್ತುತವಾಗಿಲ್ಲ. ಆಧುನಿಕ ವಿಚಾರಗಳನ್ನು ಅಪೇಕ್ಷಿಸುವವರಿಗೆ ಇದರಿಂದ ಯಾವ ಪ್ರಯೋಜನವೂ ಆಗುತ್ತಿಲ್ಲ. ನಿಸ್ಸಾರವಾದ ಇಂತಹ ಸಾಹಿತ್ಯವನ್ನು ಕುರಿತಂತೆ "ಕನ್ನಡಕ್ಕೆ ಒಂದು ಪುಷ್ಟಿಯಾಗಲೀ ಶಕ್ತಿಯಾಗಲೀ ಸೌಂದರ್ಯವನ್ನಾಗಲೀ ಕೊಡದ ನಿಸ್ಸಾರವಾದ ಪುಸ್ತಕ ಸಂಸ್ಕೃತ ಶಬ್ದಗಳಿಂದ ಹೆಣೆದುಕೊಂಡಿರುವ ಸೀಗೆಮೆಳೆ"[೧] ಎಂದಿರುವ ಬಿ.ಎಂ.ಶ್ರೀ ಅವರ ಮಾತುಗಳು ಗಮನಾರ್ಹ. ಆದರೆ ಈ ಮಾತುಗಳು ಸಾರ್ವತ್ರಿಕವಾಗಿ ಎಲ್ಲ ಕವಿಗಳ ಕೃತಿಗಳಿಗೆ ಅನ್ವಯವಾಗುವುದಿಲ್ಲ. ಅವರ ಉದ್ದೇಶ, ಕನ್ನಡದಲ್ಲಿ ಎಲ್ಲವೂ ಸೊಗಸಾಗಿದೆ, ಕನ್ನಡ ಭಾಷೆಯಲ್ಲಿ ಇರುವುದೆಲ್ಲವೂ ಉತ್ತಮವಾಗಿದೆ ಎಂಬ ದುರಭಿಮಾನವನ್ನು ಬೆಳೆಸಿಕೊಳ್ಳದೆ ನಿಜವಾದ ಅರ್ಹತೆಯನ್ನು ಗುರುತಿಸಿದಾಗ ಉತ್ತಮವಾದ ಸಾಹಿತ್ಯವನ್ನು ಕನ್ನಡಿಗರಿಗೆ ಒದಗಿಸಿಕೊಡಲು ಸಾಧ್ಯವಾಗುತ್ತದೆ ಎಂಬುದಾಗಿದೆ. ಇದರ ಮೂಲಕ ವಿದ್ಯಾವಂತರಾಗಿರುವವರು ಪಂಪ ರನ್ನ ಸರ್ವಜ್ಞ ನಾಗವರ್ಮ, ಕುಮಾರವ್ಯಾಸ ಮೊದಲಾದವರ ಪ್ರಸಿದ್ಧ ಕಾವ್ಯಗಳನ್ನು ತಾವು ಓದುವುದಷ್ಟೇ ಅಲ್ಲದೆ ಅವರ ಕಾವ್ಯಗಳಲ್ಲಿರುವ ಉತ್ತಮವಾದ ಭಾಗಗಳನ್ನು ಸಂಗ್ರಹಿಸಿಕೊಡುವುದು ಸಾಧ್ಯವಾಗುತ್ತದೆ. ಅವುಗಳಲ್ಲಿ ಬಳಕೆಯಾಗಿರುವ ಭಾಷೆ, ಶೈಲಿ, ಸೌಂದರ್ಯ ಭಾವನೆಗಳು ಅದಕ್ಕೆ ಪೂರಕವಾಗಿ ಬಳಕೆಯಾಗಿರುವ ರಸ ಅವುಗಳ ವಿಶಿಷ್ಟತೆ ಇವುಗಳೆಲ್ಲವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಟ್ಟು ಕಾವ್ಯದ ಉತ್ತಮವಾದ ಭಾಗಗಳನ್ನು ಗುರುತಿಸಿ ವಿಮರ್ಶೆಯ ಮೂಲಕ ಜನರಿಗೆ ಒದಗಿಸಿಕೊಡಲು ಸಾಧ್ಯವಾಗುತ್ತದೆ.

ಹೊಸಬಗೆಯ ಸಾಹಿತ್ಯ ಹಳೆಯ ಸಾಹಿತ್ಯದ ಸಾರವನ್ನು ಹೀರಿ ಪುಷ್ಟಿಗೊಂಡು ನವೀನತೆಯಿಂದ ಹೊರಬರಬೇಕು. ಹೀಗೆ ಹೊಸ ಬಗೆಯ ಸಾಹಿತ್ಯ ಸೃಷ್ಟಿಯಾಗಲು ಆರಂಭವಾದಾಗ ಅದು ಹಿರಿಯರಿಗೆ ಒಪ್ಪಿಗೆ ಆಗದೆ ಹೋಗಬಹುದು. ತಾವು ಮೊದಲಿನಿಂದಲೂ ತುಳಿದುಕೊಂಡು ಬಂದಿರುವ ಹಾದಿಯನ್ನು ಬಿಟ್ಟು ಬೇರೆ ಹಾದಿ ಹಿಡಿದುದಕ್ಕೆ ಅವರಿಗೆ ಬೇಸರ ಮೂಡಬಹುದು. ಹೊಸ ಬರವಣಿಗೆಯಲ್ಲಿ ಸತ್ವವೇ

---

೧. ಬಿ.ಎಂ.ಶ್ರೀಕಂಠಯ್ಯ, ಪ್ರ.ಕ. ಸಂಪುಟ ೧೦, ಸಂಚಿಕೆ ೧, ಪು.

ಇಲ್ಲವೆಂದು ಅದನ್ನು ನಿರ್ಲಕ್ಷಿಸಬಹುದು. ಆದರೆ ಹೊಸ ಬರಹಗಾರರಲ್ಲಿರುವ ಸತ್ವವನ್ನು ಗುರುತಿಸದೆ ಪರೀಕ್ಷಿಸದೆ ಹೀಗೆ ತಿರಸ್ಕರಿಸುವುದು ಸರಿಯಲ್ಲ. ಏಕೆಂದರೆ ಇಂದಿನ ಯುವ ಕವಿಗಳೇ ಮುಂದಿನ ಸಾಹಿತ್ಯ ಲೋಕದ ಅಡಿಪಾಯಗಳು ಇದನ್ನು ಪಂಡಿತರೂ ಹಿರಿಯರೂ ಅರಿಯಬೇಕು ಅವರ ಬರಹಗಳಲ್ಲಿ ತಪ್ಪು ಗೋಚರಿಸಿದರೆ ತಿದ್ದಿ ಮಾರ್ಗದರ್ಶನ ನೀಡಬೇಕು. ಇದಕ್ಕೆ ಸಂಬಂಧಿಸಿದಂತೆ ಕುವೆಂಪು ಅವರು ಹೇಳಿರುವ ಮಾತುಗಳು ಗಮನಾರ್ಹ. "ಹಣ್ಣೆಲೆಗಳು ಎಷ್ಟೇ ಗೌರವಾರ್ಹವಾಗಿದ್ದರೂ ಸಾಕಾರವೊದಗಿದಾಗ ಹೊಸ ತಳಿರಿಗೆ ಎಡೆಮಾಡಿಕೊಟ್ಟು ಮಾತಿಲ್ಲದೆ ಕೆಳಗುದುರಬೇಕು. ಅದು ಪ್ರಕೃತಿಯ ನಿಯಮ ಎಲೆಗಳಿಗಾಗಿ ಮರವಿರುವುದಿಲ್ಲ. ಮರಕ್ಕಾಗಿ ಎಲೆಗಳಿರುವುದು".[೧] ಆದುದರಿಂದಲೇ "ಹೊಸ ಸಾಹಿತ್ಯವನ್ನು ಓದಿನೋಡಿ: ಪರೀಕ್ಷಿಸಿ ನಿಮ್ಮ ಸ್ವಂತ ಒರೆಗಲ್ಲಿನಲ್ಲಿಯೇ ಅದನ್ನು ತಿಕ್ಕಿನೋಡಿ ಅದರಿಂದ ನಮಗೂ ಶ್ರೇಯಸ್ಸು ನಿಮಗೂ ಕಿರಿಯರನ್ನು ತಿದ್ದಿದೆ ಎಂಬ ತೃಪ್ತಿ"[೨] ಎಂದು ಕೇಳಿಕೊಳ್ಳುತ್ತಾರೆ.

ಹೊಸ ಬಗೆಯ ಸಾಹಿತ್ಯದ ರಚನೆಯಾಗಬೇಕಾದರೆ ಅದಕ್ಕೆ ಪೂರಕವಾದ ಹಿನ್ನೆಲೆಯಿಲ್ಲದೆ ಅದು ಸೃಷ್ಟಿಯಾಗಲು ಸಾಧ್ಯವಿಲ್ಲ. ಹಳೆಯದನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದರೆ ಸಾಹಿತ್ಯ ಬೆಳೆಯಲು ಸಾಧ್ಯವಿಲ್ಲ. ಹಳೆಯ ಸಾಹಿತ್ಯದ ಹಿನ್ನೆಲೆ ಕವಿಗೆ ಎಷ್ಟು ಅನಿವಾರ್ಯವೆಂದರೆ ಹೊಸಬಗೆಯ ಸಾಹಿತ್ಯವನ್ನು ತಿರಸ್ಕರಿಸಿ ಬೇಕಾದರೂ ಪಂಡಿತವರ್ಗ ಉಳಿದುಕೊಳ್ಳಬಹುದು. ಆದರೆ ಹಳೆಯದನ್ನು ಮರೆತು ಹೊಸ ಸಾಹಿತಿ ಉಳಿದುಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ ವರ್ತಮಾನ ಕಾಲ ಭೂತಕಾಲದ ನೆಲೆಗಟ್ಟಿನ ಮೇಲೆ ನಿಂತಿದೆ. ಇಂದು ನೆನ್ನೆಗೆ ಋಣಿ ನಾಳೆ ಇಂದಿಗೆ ಋಣಿಯಾಗಿದೆ. "ಹಳೆಯದೆಂದರೆ ಹೊಸದರ ಬೆನ್ನುಮೂಳೆ ಅದು ನಮ್ಮ ತಳಹದಿ ಅದನ್ನು ಬಿಟ್ಟು ನಿಂತರೆ ನಮಗೆ ನೂರು ಎದೆಗಳಿದ್ದರೂ ಸಾಲದು"[೩] ಅಷ್ಟೇ ಅಲ್ಲದೆ ಎಂದು ಎಚ್ಚರಿಸುತ್ತಾರೆ.

ಇದನ್ನು ಅರ್ಥಮಾಡಿಕೊಂಡು ಸಾಹಿತ್ಯ ಸೃಷ್ಟಿಗೆ ತೊಡಗಬೇಕು. ಸನಾತನಾದ ಸಾರವನ್ನು ಹೀರಿಕೊಂಡೇ ಮುಂದಕ್ಕೆ ನೂತವಾಗಿ ಬೆಳೆಯಬೇಕು. ಈ ಸಂದರ್ಭದಲ್ಲಿ ಕವಿಯಾದವನು ಜವಾಬ್ದಾರಿಯಿಂದ ವರ್ತಿಸಿ ಶುಷ್ಕವಾದ ಕಲ್ಪನೆಗಳ ಪ್ರಪಂಚದಲ್ಲಿ ವಿಹರಿಸುವುದನ್ನು ಬಿಟ್ಟು ವಾಸ್ತವಾಂಶಗಳಿಂದ ಕೂಡಿದ ಜನಪರ ಸಾಹಿತ್ಯವನ್ನು ನೀಡಬೇಕು. ಇದನ್ನು ಸಮರ್ಪಕವಾಗಿ ಜನರಿಗೆ ತಲುಪಿಸಲು ಆತ ಜನಪ್ರಿಯ ಮಾಧ್ಯಮಗಳನ್ನು ಆರಿಸಿಕೊಳ್ಳಬಹುದು. ಯಾವುದೇ ಭಾಷೆಯ ಬಗ್ಗೆಯೂ ಅವಜ್ಞತೆಯನ್ನು ತೋರದೆ ತನ್ನ ತಾಯ್ನುಡಿಯ ಮೂಲಕವೇ ಜನರಿಗೆ

---

೧. ಕುವೆಂಪು, ಪ್ರ.ಕ. ಸಂಪುಟ ೧೨, ಸಂಚಿಕೆ ೩, ಪು. ೧೦.
೨. ಕುವೆಂಪು, ಪ್ರ.ಕ. ಸಂಪುಟ ೧೨, ಸಂಚಿಕೆ ೩, ಪು. ೨೮.
೩. ಕುವೆಂಪು, ಪ್ರ.ಕ. ಸಂಪುಟ ೧೨, ಸಂಚಿಕೆ ೩, ಪು. ೩೦.

ಸಾಹಿತ್ಯವನ್ನು ಕೊಡಬೇಕು. ಚಲನಶೀಲತೆಯನ್ನು ಕಳೆದುಕೊಂಡಿದ್ದ ಕನ್ನಡ ಭಾಷಾ ಸಾಹಿತ್ಯಕ್ಕೆ ಚಲನೆಯನ್ನು ಒದಗಿಸಬೇಕು. ಇದನ್ನೆಲ್ಲ ಮಾಡುವುದು ಸುಲಭವಾದ ವಿಷಯವಲ್ಲ. ಸಾಹಿತ್ಯ ನಿರ್ಮಾಣ ಮಾಡುವವರು ಅದಕ್ಕಾಗಿ ಇಂತಹ ಹಲವಾರು ವಿಷಯಗಳ ಕಡೆ ಗಮನಹರಿಸಬೇಕಾಗುತ್ತದೆ. ವಿವಿಧ ಬಗೆಯ ವಿಷಯಗಳಲ್ಲಿ ಪಾಂಡಿತ್ಯವನ್ನು ಪಡೆಯಬೇಕಾಗುತ್ತದೆ.

ಡಿ.ವಿ.ಗುಂಡಪ್ಪ ಅವರು ಗುರುತಿಸಿರುವ ಹಾಗೆ ಸಾಹಿತ್ಯ ನಿರ್ಮಾಣಕ್ಕೆ ಪೂರಕವಾಗಿ ಗಳಿಸಿಕೊಳ್ಳಬೇಕಾಗಿರುವ ಜ್ಞಾನವೆಂದರೆ (೧) ಭಾಷಾಜ್ಞಾನ (೨) ಶಾಸ್ತ್ರ ಶಿಕ್ಷಣ (೩) ಲೋಕ ಸಂಪರ್ಕ (೪) ಜೀವನೋದಾತ್ತತೆ. ಇಂಥ ವಿಷಯಗಳ ಬಗ್ಗೆ ಗಮನಹರಿಸುವುದರ ಮೂಲಕ ಸಾಹಿತ್ಯ ನಿರ್ಮಾಣದ ಸಾಮರ್ಥ್ಯ ಹೆಚ್ಚಿಸಿ-ಕೊಳ್ಳಬಹುದು. ಅವರು ಗುರುತಿಸುವ "ಶಾಸ್ತ್ರದ ಅನ್ವೇಷಣ ರೀತಿ, ಅದರ ಪರೀಕ್ಷಾಕ್ರಮ, ಅದರ ವಿಷಯದ ಅಂಶಾಶ ಶೋಧನೆ ಮತ್ತು ಅಂಶ ಪ್ರತ್ಯಾಂಶ ತೋರಿಸುವ ಈ ನಿಷ್ಕರ್ಷೆಯ ಗುಣ ಕನ್ನಡದ ಬರವಣಿಗೆಯಲ್ಲಿ ಈಗೀಗಿಂತ ಹೆಚ್ಚಾಗಿ ಬೇಕಾಗಿದ್ದು ಈ ಗುಣವಿಲ್ಲದ ಬರವಣಿಗೆ ಬರಿಯ ಜೋಂಡು"[೧] ಎಂಬ ವಿಷಯ ಸತ್ಯವೆನಿಸುತ್ತದೆ. ಆಗ ಮಾತ್ರ ಸಾಹಿತ್ಯ ಹೊಸತನದಿಂದ ಕೂಡಿ ನವೀನವಾಗಿ ಬರಲು ಸಾಧ್ಯವಾಗುತ್ತದೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೀನ ಮಾರ್ಗಗಳು ಕಾಣಿಸಿಕೊಂಡರೂ ಅವುಗಳಲ್ಲಿ ವಸ್ತು ಧಾಟಿ, ಶೈಲಿ ಇವುಗಳಲ್ಲಿ ವೈವಿಧ್ಯವಿಲ್ಲದೆ ಒಂದೇ ಬಗೆಯಾಗಿ ಪ್ರಕಟಗೊಳ್ಳತೊಡಗಿದಾಗ ಅಲ್ಲಲ್ಲಿ ಅದಕ್ಕೆ ಅಸಮಾಧಾನಗಳು ವ್ಯಕ್ತವಾಯಿತು. ನವೀನತೆಯ ಹೆಸರಿನಲ್ಲಿ ಬಂದ ಒಂದೇ ಬಗೆಯ ಬರವಣಿಗೆ ಬೇಸರವೆನಿಸಿದಾಗ ಆರ್.ವಿ.ಜಾಗೀರ್‌ದಾರ್ ಅಂತಹವರು 'ನಮ್ಮ ಸಾಹಿತ್ಯ' (ಒಂದು ಭಗೀರಥ ಪ್ರಯತ್ನ)ದಂತಹ ಲೇಖನ ಬರದು ತಮ್ಮ ಅಸಮಾಧಾನವನ್ನು ಹೊರಗೆಡವಿದರು. "ನಮ್ಮ ಸಾಹಿತ್ಯ ಗಂಗೆಯನ್ನು ಅಧೋಪಥಕ್ಕಿಳಿಸಿದ ಭಗೀರಥನ ಕಥೆಯಿದು. ತತ್ವವನ್ನು ಸತ್ಯವನ್ನು ಹುಡುಕಲು ಸಾಹಿತ್ಯ ಹೊರಟಿದೆ ಎಂದರೆ ನೀರಿನಂತೆ ಸಮ ನೆಲವನ್ನು ಹುಡುಕುತ್ತ ಕೊನೆಗೆ ಪಾತಾಳಕ್ಕಿಳಿಯಲಿದೆ ಎಂದು ನನ್ನ ಹೆದರಿಕೆ"[೨] ಎಂದು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಕನ್ನಡದಲ್ಲಿ ನವೀನವಾದ ಬಗೆಯ ಗ್ರಂಥಗಳು ಪ್ರಕಟವಾದಾಗ ಅವು ಕನ್ನಡ ಭಾಷೆಯಲ್ಲಿ ಪ್ರಕಟಗೊಂಡವು ಎಂಬ ಕಾರಣಕ್ಕಾಗಿ ಅವು ಹೊಸದಾಗಿ ಕಂಡಿತೇ ವಿನಃ ಬೇರೆ ಭಾಷೆಯಲ್ಲಿ ಇದೇ ವೇಳೆಗೆ ಬೆಳೆದಿದ್ದ ಸಾಹಿತ್ಯದ ವೈವಿಧ್ಯವನ್ನು ಗಮನಿಸಿದಾಗ ಅದರಲ್ಲಿಯ ವಿಚಾರಗಳು ತೀರಾ ಹೊಸದಾಗೇನೂ

---

೧. ಗುಂಡಪ್ಪ.ಡಿ.ವಿ., ಸಂಪುಟ ೨೫, ಸಂಚಿಕೆ ೧, ಪು. ೧೧೭.
೨. ಆರ್.ವಿ.ಜಾಗೀರ್‌ದಾರ್, ಸಂ. ೨೫, ಸಂಚಿಕೆ ೪, ಪು. ೧೬.

ಇರಲಿಲ್ಲ. ವಿಮರ್ಶಕರಿಗೆ ಅದು 'ಕನ್ನಡ ಭಾಷೆಯದ್ದು' ಎಂಬ ಕಾರಣದಿಂದಾಗಿ ವಿಶೇಷವಾಗಿ ತೋರಿತು. ವಿಶ್ವದ ಸಮಗ್ರ ಸಾಹಿತ್ಯದ ದೃಷ್ಟಿಯಿಂದ ಅದರ ಸ್ಥಾನವನ್ನು ಗುರುತಿಸುವ ಕಾರ್ಯ ಮಾಡಲಿಲ್ಲ. ಇದರಿಂದಾಗಿ ಪ್ರಶಂಸೀನ ವಿಮರ್ಶೆಗಳನ್ನಷ್ಟೇ ಪಡೆದ ಸಾಹಿತಿಗೆ ತಾನೇ ಶ್ರೇಷ್ಠ ಎಂಬ ಭಾವನೆ ಬೆಳೆಯಲು ಪ್ರಾರಂಭವಾಗಿ ಆತ ಸಮಾಜದ ಮೇಲೆ ನಿಂತುಕೊಂಡು ತನ್ನ ಆಲೋಚನೆಗಳೇ ಶ್ರೇಷ್ಠವೆಂದೂ, ಜನರು ತಮಗೆ ಏನು ಬೇಕೆಂದು ಅಪೇಕ್ಷಿಸುತ್ತಿರುವರೋ ಅದು ಮುಖ್ಯವಲ್ಲವೆಂಬ ಭ್ರಮೆಗೆ ಒಳಗಾದನು. ಹೀಗಾಗಿ ಸಾಹಿತಿ ಹಾಗೂ ಸಮಾಜದ ನಡುವೆ ಇರಬೇಕಾದ ಸಂಪರ್ಕ ಕಡಿದುಹೋಯಿತು. ಈ ರೀತಿಯ ಭ್ರಮಾಲೋಕದಿಂದ ಸಾಹಿತಿಯಾದವನು ಕೆಳಗಿಳಿದು ಸಾಹಿತ್ಯವನ್ನು ರಚಿಸಲು ಪ್ರಾರಂಭಿಸಿದರೆ ಅದು ನವೀನತೆಯಿಂದ ಕೂಡಿ ಸಮಾಜಮುಖಿಯಾಗುತ್ತದೆ. ಹೊಸ ಬಗೆಯ ಛಂದಸ್ಸು ಶಬ್ದಭಂಡಾರದ ಬಳಕೆ ಇದರಿಂದ ಸಾಹಿತ್ಯ ಹೊಸದಾಗುವುದಿಲ್ಲ. ಹೊಸತನ ಎನ್ನುವುದು ಆಲೋಚನೆಗಳಲ್ಲಿ ಇರಬೇಕೇ ಹೊರತು ಬಳಸುವ ಪದ ಅಥವಾ ವಾಕ್ಯಗಳಲ್ಲಿ ಇರುವುದಿಲ್ಲ. ಈ ಅಂಶಗಳೆಲ್ಲವನ್ನೂ ಅರಿತುಕೊಂಡು ಸಾಹಿತ್ಯ ಸೃಷ್ಟಿಗೆ ತೊಡಗಿದಾಗ ಅದು ಜನಪರ ಸಾಹಿತ್ಯವಾಗುತ್ತದೆ. ಇಲ್ಲದೇ ಹೋದರೆ ಆರ್.ವಿ.ಜಾಗೀರ್‌ದಾರ್ ಗುರುತಿಸುವ ಹಾಗೆ "ಆಯರ್ಲಂಡದ ಒಬ್ಬ ರಾಜಕಾರಣ ಪಟುವಿನ ಕಡುಮಾತಿನಲ್ಲಿ ಹೇಳುವುದಾದರೆ ಹೆಣಕ್ಕೆ ಹೊಸಬಟ್ಟೆಯನ್ನು ಸುತ್ತಿದರೆ ಹೊಸತನ ಬಂದಿತೇ? ಹೊಸತನ ಬೇಕಾದುದು ಹೃದಯದಲ್ಲಿ ಹೇಳಿಕೆಯಲಲ್ಲ"[೧] ಎಂಬ ವಿಚಾರ ಸರಿಯೆನಿಸುತ್ತದೆ.

ನಂತರದ ದಿನಗಳಲ್ಲಿ ಸಾಹಿತ್ಯದ ಆಲೋಚನೆಯಲ್ಲಿ ಹೊಸತನಗಳು ಗೋಚರಿಸತೊಡಗಿದಾಗ, ಸಾಹಿತ್ಯ ಸಾಗುತ್ತಿರುವ ಹಾದಿಯ ಬಗೆಗೆ ಸಾಹಿತ್ಯ-ವಲಯದಲ್ಲಿ ತೃಪ್ತಿಯೂ ವ್ಯಕ್ತವಾಯಿತು. ನವೀನ ವಿಚಾರಧಾರೆಗಳು ಜನರನ್ನು ಮುಟ್ಟುತ್ತಿದೆ ಎನಿಸಿದಾಗ ಅದಕ್ಕೆ ಪ್ರೋತ್ಸಾಹವೂ ದೊರೆಯಿತು. ಎಂ.ಆರ್.ಶ್ರೀನಿವಾಸ ಮೂರ್ತಿಗಳು, ಕಡಂಗೋಡ್ಲು ಶಂಕರಭಟ್ಟರ 'ಕಾಣಿಕೆ'ಯನ್ನು ವಿಮರ್ಶಿಸುತ್ತಾ "ಸುಮಾರು ಹದಿನೈದು ವರ್ಷಗಳ ಹಿಂದೆ ಕನ್ನಡ ಸಾಹಿತ್ಯದ ಮುಂದಿನ ಬೆಳವಣಿಗೆ ಹೋಗುವುದೆಂದು ಯಾರಾದರೂ ಕೇಳಿದ್ದರೆ ಧೈರ್ಯದಿಂದ ಉತ್ತರ ಕೊಡುವುದು ಕಷ್ಟವಾಗಿತ್ತು... ಕೇವಲ ಭಾಷಾಂತರ ಕರ್ತರೆಂಬ ಬಿರುದನ್ನು ಕನ್ನಡ ಗ್ರಂಥ ಕರ್ತೃಗಳು ಪಡೆಯುವುದೇ ಅವರ ಹಣೇ ಬರಹವೆಂದು ಒಂದೊಂದು ವೇಳೆ ಅನ್ನಿಸುತ್ತಿತ್ತು. ಈಗ ನೋಡಿದರೆ ಎಷ್ಟು ಬೇಗ ಎಷ್ಟು ರೂಪಗಳು ಸಾಹಿತ್ಯದಲ್ಲಿ ಸ್ಥಾನ ಪಡೆದು ನಿಂತಿದೆ ಎಂಬ ಆಶ್ಚರ್ಯವೂ ಸಂತೋಷವು ಉಂಟಾಗುವುವು"[೨] ಎಂದಿರುವ

---

೧. ಜಾಗೀರ್‌ದಾರ್ ಆರ್.ವಿ., ಪ್ರಕ. ಸಂಪುಟ ೨೫, ಸಂಚಿಕೆ ೪, ಪು. ೧೮.

೨. ಕಾವ್ಯಾವಲೋಕನ, ಪ್ರಕ. ಸಂಪುಟ ೧೦, ಸಂಚಿಕೆ ೧, ಪು. ೨೧.

ಮಾತುಗಳು ಕನ್ನಡ ಸಾಹಿತ್ಯ ವೈವಿಧ್ಯತೆಯನ್ನು ಪಡೆದು ಬೆಳವಣಿಗೆ ಸಾಧಿಸುತ್ತಾ ಬಂದಿದ್ದನ್ನು ತಿಳಿಸುತ್ತದೆ. ಕನ್ನಡ ಬರಹಗಾರರಲ್ಲಿ ಈ ರೀತಿಯ ಸ್ವಂತಿಕೆ ಹೆಚ್ಚು ಹೆಚ್ಚಾಗಿ ಕಂಡುಬರುವ ಪೂರ್ವದಲ್ಲಿ ಭಾಷಾಂತರದ ಮೂಲಕವೂ ಕನ್ನಡ ಸಾಹಿತ್ಯದ ಸೇವೆ ಸಲ್ಲುತ್ತಿದ್ದು ಅದಕ್ಕೆ ಸಾಹಿತ್ಯ ವಲಯದಲ್ಲಿ ಮಾನ್ಯತೆಯೂ ದೊರಕಿತ್ತು. ನಮ್ಮಲ್ಲಿ ಉತ್ತಮವಾಗಿ ಸಾಹಿತ್ಯ ಸೃಷ್ಟಿಯಾಗದಿದ್ದ ಮೇಲೆ ಬೇರೆ ಕಡೆಯಿಂದ ಸಾಹಿತ್ಯವನ್ನು ತರುವುದು ತಪ್ಪಲ್ಲ. ಒಂದು ಹಂತಕ್ಕೆ ಬೇರೆ ಭಾಷೆಯಿಂದ ಬರುವ ಸಾಹಿತ್ಯವೂ ಕಾಲಕ್ರಮೇಣ ನಮ್ಮ ಭಾಷೆಯ ಸಾಹಿತ್ಯವೇ ಆಗಿಬಿಡುತ್ತದೆ ಎಂಬ ಭಾವನೆಯಿದ್ದು ಇದನ್ನು ಎ.ಆರ್.ಕೃಷ್ಣಶಾಸ್ತ್ರಿಗಳು ೧೯೧೯ರಲ್ಲೇ ಹೇಳಿದ "ತಮಗೆ ಸಂಗೀತವು ಬರದಿದ್ದರೆ ಬಾಯಿಗೆ ಬಂದ ಹಾಗೆ ಅರಿಸಿಕೊಳ್ಳುವುದಕ್ಕಿಂತ ಗ್ರಾಮಾಫೋನುಗಳನ್ನು ತಂದುಕೊಳ್ಳುವುದು ವಿವೇಕಿಗಳ ಮಾರ್ಗ"[೧] ಎಂಬ ಮಾತುಗಳು ಇದನ್ನೇ ಪುಷ್ಟೀಕರಿಸುತ್ತದೆ. ಅದೇನೇ ಇದ್ದರೂ ನವೀನ ಬಗೆಯ ಆಲೋಚನೆಯಿಂದ ಹೊಸ ರೀತಿಯ ಸಾಹಿತ್ಯ ಸೃಷ್ಟಿಯಾಗತೊಡಗಿದಾಗ ಅದಕ್ಕೆ ಕಾರಣಗಳನ್ನೂ ಗುರುತಿಸುವ ಕೆಲಸವು ನಡೆಯಿತು.

ಕನ್ನಡ ಸಾಹಿತ್ಯವು ಭಿನ್ನಭಿನ್ನವಾದ ಸ್ವರೂಪವನ್ನು ಪಡೆದು ವಿಸ್ತಾರಗೊಳ್ಳಲು ಜನಪದ ಸಾಹಿತ್ಯಕ್ಕೆ ವಿದ್ಯಾವಂತರ ವಲಯದಲ್ಲಿ ಸ್ಥಾನಮಾನ ದೊರೆತದ್ದೂ ಕಾರಣಗಳಲ್ಲಿ ಒಂದಾಯಿತು. ಆಂಗ್ಲಭಾಷೆಯ ಅಥವಾ ಪಾಶ್ಚಾತ್ಯ ಸಾಹಿತ್ಯಗಳ ಪ್ರಭಾವ ಹಾಗೂ ಪ್ರಾಚೀನ ಸಾಹಿತ್ಯದ ತುಲನಾತ್ಮಕ ಅಭ್ಯಾಸವೆಂಬ ಹೊಸ ಕ್ರಮವು ಕನ್ನಡಿಗರ ಮೇಲೆ ಪ್ರಭಾವ ಬೀರಿದ್ದ ಸಮಯದಲ್ಲೇ ಅವೆರಡಕ್ಕಿಂತಲೂ ಭಿನ್ನವಾಗಿ ತಮ್ಮ ನಡುವೆಯೇ ಬೆಳೆದು ಬಂದಿದ್ದ ಆದರೆ ಅವಜ್ಞತೆಗೆ ಒಳಗಾಗಿದ್ದ ಜನಪದ ಸಾಹಿತ್ಯದ ಕಡೆ ನಮ್ಮ ಸಾಹಿತಿಗಳ ಗಮನಹರಿಯತೊಡಗಿತು. ಆಂಗ್ಲಭಾಷೆಯ ಅಥವಾ ಸಂಸ್ಕೃತದ ಸಹಕಾರವಿಲ್ಲದೆಯೇ ಸ್ವತಂತ್ರವಾಗಿ ಬೆಳೆದು ಬಂದಿದ್ದ ಜನಪದ ಸಾಹಿತ್ಯದ ಕಡೆ ಆಸಕ್ತಿ ಹಾಗೂ ಆದರವು ಉತ್ಪತ್ತಿಯಾಯಿತು. "ಅದುವರೆವಿಗೂ ಕೇಳಿ ಸವಿಯದಿದ್ದ ಹೊಸ ಇಂಚರವು ಹಳ್ಳಿಯವರ ಹಾಡುಗಳಲ್ಲಿರುವುದೆಂದು ಮೇಧಾವಿಗಳು ಒಪ್ಪಲಾರಂಭಿಸಿದರು. ಈ ಮೂರು ಪ್ರಭಾವಗಳು (ಆಂಗ್ಲ, ಸಂಸ್ಕೃತ, ಜಾನಪದ) ತ್ರಿವೇಣಿ ಸಂಗಮದಿಂದ ಹೊಸದಾಗಿ ಕಾವ್ಯಸೃಷ್ಟಿಯು ಪ್ರಾರಂಭವಾಗಿ ಪಾತ್ರ ವಿಸ್ತಾರವನ್ನು ಪಡೆಯಿತೆನ್ನಬಹುದು"[೨] ಎಂದಿದ್ದಾರೆ. ಕನ್ನಡ ಸಾಹಿತ್ಯವು ಹೀಗೆ ವಿಸ್ತಾರತೆಯನ್ನು ಪಡೆಯುತ್ತಾ ಬೆಳೆದು ಬರುತ್ತಿದ್ದ ಸಮಯದಲ್ಲೇ ಪ್ರಬುದ್ಧ ಕರ್ಣಾಟಕವು ಸಾಹಿತ್ಯ ರಚನೆಗೆ ಅಗತ್ಯವಾಗಿ ಬೇಕಾಗಿರುವ ವಸ್ತುಗಳನ್ನು ಸೂಚಿಸು-ವುದರ ಮೂಲಕ ಅದಕ್ಕೆ ಮತ್ತಷ್ಟು ಬಲವನ್ನು ವಿಸ್ತರತೆಯನ್ನು ಒದಗಿಸಿಕೊಟ್ಟಿದೆ.

---

೧. ಎ.ಆರ್.ಕೃಷ್ಣಶಾಸ್ತ್ರೀ, ಪ್ರ.ಕ. ಸಂಪುಟ ೧, ಸಂಚಿಕೆ ೧, ಪು. ೪
೨. ಎ.ಆರ್.ಕೃಷ್ಣಶಾಸ್ತ್ರೀ, ಪ್ರ.ಕ. ಸಂಪುಟ ೧, ಸಂಚಿಕೆ ೧, ಪು. ೫

**ಸಾಹಿತ್ಯಕ್ಕೆ ಸಾಮಗ್ರಿ ಸೂಚನೆ**

ಸಾಹಿತ್ಯ ರಚನೆಯ ವಿವಿಧ ಅಂಶಗಳ ಕಡೆ ಗಮನಹರಿಸಿದ ಪ್ರಬುದ್ಧ ಕರ್ಣಾಟಕವು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ದೊರಕಿಸಿಕೊಡುವ ಪ್ರಯತ್ನವನ್ನು ಮಾಡಿದೆ. ತನ್ನ ಪ್ರಥಮ ಸಂಚಿಕೆಯಲ್ಲೇ ಈ ವಿಷಯದ ಕಡೆ ಗಮನಹರಿಸಿರುವ ಸಂಪಾದಕರು "ಈಗ ಇನ್ನೂ ನಮಗೆ ವ್ಯವಸಾಯದ ಕಾಲವೇ ಹೊರತು ಫಲಬಿಡುವ ಕಾಲವಲ್ಲ.... ಆದ್ದರಿಂದ ಮುಂದಕ್ಕೆ ಉತ್ತಮ ಕಾವ್ಯಗಳು ಸಾಧ್ಯವಾಗುವಂತೆ ಈಗಿನಿಂದ ಉಳುಮೆ ಮಾಡಬೇಕು. ಅಂತು ನಮ್ಮಲ್ಲೇನೊ ಸದ್ಯಕ್ಕೆ ಸ್ವತಂತ್ರವಾಗಿ ಉತ್ತಮ ಕಾವ್ಯಗಳನ್ನು ಬರೆಯುವ ಸಾಮರ್ಥವಿಲ್ಲವೆಂದು ಬಲ್ಲೆವು. ಆದ್ದರಿಂದ ನಮ್ಮ ಮುಖ್ಯ ಕೆಲಸವೆಂದರೆ ಕಾವ್ಯಸೃಷ್ಟಿಗೆ ಸಾಮಗ್ರಿಗಳನ್ನು ಒದಗಿಸಿಕೊಡುವುದು[೧] ಎಂದು ಹೇಳುವುದರ ಮೂಲಕ ತಾವು ಯಾವ ಕೆಲಸವನ್ನು ಮಾಡಬೇಕೆಂದಿದ್ದಾರೆ ಎಂಬುದರ ಸೂಚನೆಯನ್ನು ನೀಡಿದ್ದಾರೆ. ತಮ್ಮ ಉದ್ದೇಶವನ್ನು ಕಾರ್ಯರೂಪಕ್ಕೆ ತರುವ ಮೊದಲ ಪ್ರಯತ್ನವಾಗಿಯೇ "ಮೈಸೂರು ಚರಿತ್ರೆ ಮೇಲೆ ಕಾದಂಬರಿಗಳನ್ನು ಬರೆಯುವುದಕ್ಕೆ ಇರತಕ್ಕ ಸಾಮಗ್ರಿಗಳು" ಎಂಬ ಲೇಖನ ಪ್ರಕಟಿಸಿದ್ದಾರೆ. ಎ.ಆರ್.ಕೃಷ್ಣಶಾಸ್ತ್ರಗಳು ರಚಿಸಿರುವ ಈ ಲೇಖನ ಇಂದಿಗೂ ಅಮೂಲ್ಯವಾಗಿದ್ದು ಅಂದಿನ ಹಲವಾರು ಸಾಹಿತಿಗಳಿಗೆ ಉತ್ತಮವಾದ ಸಾಮಗ್ರಿಯನ್ನು ಒದಗಿಸಿಕೊಟ್ಟಿದೆ.

ಈ ಲೇಖನದ ಆರಂಭದಲ್ಲಿಯೇ ಕೃಷ್ಣಶಾಸ್ತ್ರಿಗಳು ಕನ್ನಡಿಗರು ಕನ್ನಡನಾಡಿನಲ್ಲೇ ಇರುವ ಶೃಂಗೇರಿ, ಚಿತ್ರದುರ್ಗ, ನಂದಿದುರ್ಗ ಬಾಬಾಬುಡನ್‌ಗಿರಿ ಶಿವಗಂಗೆ ಬೆಟ್ಟದಂತಹ ಸೊಬಗಿನ ತಾಣಗಳನ್ನು ನೋಡಿಕೊಂಡು ಬರಬೇಕೆಂದೂ ಅಂಥದನ್ನು ನೋಡಿ ಆನಂದಪಡದ ಮೇಲೆ ಏನೂ ಪ್ರಯೋಜನವಿಲ್ಲವೆಂದೂ ಹೇಳಿ ತಾವು ನೋಡಿಕೊಂಡು ಬಂದ ಗೋಪಾಲಸ್ವಾಮಿ ಬೆಟ್ಟದ ವಿವರಣೆ ನೀಡುತ್ತಾರೆ. ಇಲ್ಲಿ ಲೇಖಕರ ಉದ್ದೇಶ ತಾವು ನೋಡಿದ ಸ್ಥಳದ ಬಗ್ಗೆ ವಿವರಣೆ ನೀಡುವುದಷ್ಟೇ ಆಗಿರದೇ ಅಂತಹ ಸ್ಥಳಗಳ ಕಡೆ ಕನ್ನಡಿಗರ ಗಮನಸೆಳೆಯಬೇಕು ಎಂಬುದಾಗಿದೆ. ಏಕೆಂದರೆ ಅಂತಹ ಐತಿಹಾಸಿಕ, ಸುಂದರ ಸ್ಥಳಗಳು ಒಂದೊಂದೂ ಕೂಡ ಒಂದೊಂದು ಲೇಖನಕ್ಕೆ ಸಾಮಗ್ರಿಯನ್ನು ಒದಗಿಸಬಲ್ಲವು. ಅವುಗಳ ರಮಣೀಯತೆ ಸೌಂದರ್ಯ ಹಿನ್ನೆಲೆ ಸಾಹಿತ್ಯ ರಚನೆಗೆ ಪ್ರೇರೇಪಣೆ ನೀಡಬಹುದು. ಆದ್ದರಿಂದಲೇ ಅವರು "ಇದರ ಹಾಗೆ ಮೈಸೂರು ದೇಶದ ಮೇಲೆ ಕಾದಂಬರಿಗಳನ್ನು ಬರೆಯುವಂತೆ ಪ್ರೇರೇಪಿಸುವ ಕತ್ತು ಹಿಡಿದು ದಬ್ಬಿ ನಿರ್ಬಂಧಪಡಿಸುವ ಎಷ್ಟೋ ಸ್ಥಳಗಳೂ ಘಟನಾವಳಿಗಳೂ ಇವೆ..... ನಮ್ಮ ಮೈಸೂರು ದೇಶದಲ್ಲಿ ಇಂಥ ಸ್ಥಳಗಳಿರಬೇಕಾದರೆ

---

೧. ಎ.ಆರ್.ಕೃಷ್ಣಶಾಸ್ತ್ರೀ, ಪ್ರಕ. ಸಂಪುಟ ೧, ಸಂಚಿಕೆ ೧, ಪು. ೫

ಅವನ್ನು ನೋಡಿ ಆನಂದ ಪಡೆದಿದ್ದ ಮೇಲೆ ಏನು ಪ್ರಯೋಜನ? ಅವುಗಳ ಮೇಲೆ ಬರೆಯದಿದ್ದರೆ ಏನು ಪ್ರಯೋಜನ?[೧] ಎಂದು ಪ್ರಶ್ನಿಸುವುದರ ಮೂಲಕ ಮೈಸೂರಿನಲ್ಲಿರುವ ಕೆಲವಾದರೂ ಸ್ಥಳಗಳು ಗ್ರಂಥ ನಿರ್ಮಾಣಕ್ಕೆ ಸಾಮಾಗ್ರಿ-ಯಾಗಬಲ್ಲದು ಎಂಬುದರ ಕಡೆ ಗಮನಸೆಳೆದಿದ್ದಾರೆ. ಕನ್ನಡ ಸಾಹಿತ್ಯ ಹೊಸ ಹೊಸ ಹಾದಿಗಳನ್ನು ಹುಡುಕುತ್ತಿದ್ದ ಸಂದರ್ಭದಲ್ಲಿಯೇ ಬಂದಂತಹ ಇಂತಹ ಲೇಖನ ಅಮೂಲ್ಯವಾದದ್ದು. ಅವರು ಅಂದು ನೀಡಿದ್ದ ಸೂಚನೆಗಳು ಇಂದಿನ ಹೊಸಬರಹಗಾರರಿಗೂ ಮಾರ್ಗದರ್ಶಿಯಾಗಿದೆ. ಇದೇ ರೀತಿಯಲ್ಲಿ ಮೈಸೂರು ಅರಸರುಗಳ ವಿಚಾರಗಳು ಹಾಗೂ ಅಲ್ಲಿ ನಡೆದ ಪ್ರಮುಖ ಘಟನೆಗಳು ಸಾಹಿತ್ಯದ ವಸ್ತುವಾಗಬಲ್ಲವು. ಮೈಸೂರು ರಾಜ್ಯವಾಳಿದ ರಾಜವೊಡೆಯರು, ಕಂಠೀರವ ನರಸರಾಜವೊಡೆಯರು, ಚಿಕ್ಕದೇವರಾಜವೊಡೆಯರು, ಇವರುಗಳ ಬದುಕಿನ ಹಲವಾರು ಘಟನೆಗಳು ನಾಟಕವನ್ನಾಗಿ, ಕಾದಂಬರಿಯನ್ನಾಗಿ ರಚಿಸಬಹುದು. ದಳವಾಯಿ ವಿಕ್ರಮನ ಸಂಬಂಧವಾಗಿ ಘಟಿಸಿದ ಕೆಲವು ಘಟನೆಗಳ ಎಳೆಯನ್ನು ಹಿಡಿದು ಕಥೆಯನ್ನು ಕಾದಂಬರಿಯನ್ನು ಬರೆಯಲು ಸಾಧ್ಯವಾಗುತ್ತದೆ. ಇದೇ ಬಗೆಯಲ್ಲಿ ಚಿಕ್ಕದೇವ ರಾಜವೊಡೆಯರ ಆಳ್ವಿಕೆಯ ಮೇಲೆ ಬರೆಯಲು ಅವಕಾಶವಿದೆ. ಹೈದರ್‌ಖಾನನು ಆಳ್ವಿಕೆಯನ್ನು ಪ್ರಾರಂಭಿಸಿದ ನಂತರವಂತೂ ಕಾದಂಬರಿಕಾರರು ತಮಗೆ ಪ್ರತಿಭೆ ಇರುವಷ್ಟು ಸಾಮಗ್ರಿ ಹುಡುಕಿಕೊಳ್ಳಬಹುದು ಎಂಬುದರ ಕಡೆ ಗಮನಸೆಳೆಯುತ್ತಾರೆ. "ಬಿದನೂರಿನ ಬಸಪ್ಪನಾಯಕನ ಮರಣದ ನಂತರ ಅಲ್ಲಿ ರಾಣಿ ನಿಂಬಯ್ಯನೆಂಬಾತನನ್ನು ಕೂಡಿಕೊಂಡು ದುರಾಚಾರ ಮಾಡತೊಡಗಿದಾಗ ಹೈದರ್ ಆಲಿ ಅಲ್ಲಿಗೆ ಹೋಗಿ ಕೋಟೆಯನ್ನು ವಶಪಡಿಸಿಕೊಂಡ ಈ ವೃತ್ತಾಂತವನ್ನು ಬೇಕಾದರೆ ಹ್ಯಾಂಲೆಟ್‌ನಂಥ ಕಥೆಯಾಗಿ ಮಾಡಬಹುದು"[೨] ಎಂದಿದ್ದಾರೆ. ನಂತರದ ದಿನಗಳಲ್ಲಿ ಕುವೆಂಪು ಅವರ ರಕ್ತಾಕ್ಷಿ ನಾಟಕ ಇದೇ ಘಟನೆಯನ್ನು ಆಧರಿಸಿ ಹ್ಯಾಂಲೆಟ್‌ನ ಮಾದರಿಯಲ್ಲೇ ಮೂಡಿಬಂದಿರುವುದು ಗಮನಿಸಬೇಕಾದ ಅಂಶ. ಹೀಗೆ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದ ಲೇಖನವೊಂದು ನಂತರದ ಹಲವಾರು ಬರಹಗಳಿಗೆ ವಸ್ತುವನ್ನು ಒದಗಿಸಿಕೊಟ್ಟು ಸಹಕರಿಸಿದ ರೀತಿ, ತಮ್ಮ ವಿಚಾರಗಳನ್ನು ಬೇರೆಯವರೂ ಬಳಸಿಕೊಂಡಾದರೂ ಕನ್ನಡದ ಸಾಹಿತ್ಯವನ್ನು ಬೆಳಸಬೇಕೆಂಬ ಸಂಪಾದಕರು ತೋರಿದ ಆಶಯ, ಕನ್ನಡ ಸಾಹಿತ್ಯ ನವನವೀನವಾಗಿ ಮೂಡಿಬರಲಿ ಎಂಬ ಉದ್ದೇಶದಿಂದ ತೋರಿದ ನಿಸ್ಪೃಹವಾದ ಮನೋಭಾವ ಇವೆಲ್ಲವೂ ಈ ಲೇಖನದ ಮೂಲಕ ಗುರುತಿಸಬಹುದಾದ ಅಂಶ. ಹೀಗೆ ಕನ್ನಡ ಸಾಹಿತ್ಯದ

---

೧. ಎ.ಆರ್.ಕೃಷ್ಣಶಾಸ್ತ್ರೀ, ಪ್ರ.ಕ. ಸಂಪುಟ ೧, ಸಂಚಿಕೆ ೧, ಪು. ೬
೨. ಎ.ಆರ್.ಕೃಷ್ಣಶಾಸ್ತ್ರೀ, ಪ್ರ.ಕ. ಸಂಪುಟ ೩, ಸಂಚಿಕೆ ೧, ಪು. ೬

ನಿರ್ಮಾಣಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಟ್ಟ ಸಂಪಾದಕರ ಪರಿಶ್ರಮ ನಂತರ ಅದನ್ನು ಸಮರ್ಪಕವಾಗಿ ಸದುಪಯೋಗಪಡಿಸಿಕೊಂಡ ಕಾರ್ಯದಿಂದ ಸಫಲತೆಯನ್ನು ಪಡೆದಿವೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ನಿರ್ಮಾಣವಾಗಬೇಕಾದ ಅಗತ್ಯವಿದೆ. ಅದರಲ್ಲೂ ವಿವಿಧ ವಸ್ತು ವೈವಿಧ್ಯಗಳು ಮೂಡಿಬರಬೇಕು ಎಂಬ ಆಶಯ ಪ್ರಬುದ್ಧ ಕರ್ಣಾಟಕದ್ದು. "ಕನ್ನಡದಲ್ಲಿಯೂ ಮಕ್ಕಳ ಸಾಹಿತ್ಯವೆಂಬುದೊಂದಿದೆಯೇ? ಎನ್ನುವಷ್ಟು ವಿರಳವಾಗಿರುವ ಆ ಸಾಹಿತ್ಯ ಪ್ರಕಾರದಲ್ಲಿ ಕೆಲವು ಅಜ್ಜಿ ಕಥೆಗಳು ಶಿಶುಗೀತ ಸಂಗ್ರಹಗಳನ್ನು ಹೊರತುಪಡಿಸಿದರೆ ಎಳೆಯ ಮಕ್ಕಳಿಗಾಗಿ ಬರೆಯಲ್ಪಟ್ಟು ಆಟದ ವಸ್ತುಗಳಂತಿರುವ ಸಾಹಿತ್ಯವಾಗಲೀ ವರ್ಣಚಿತ್ರಗಳಾಗಲೀ ಹೊಂದಿರುವ ಪುಸ್ತಕಗಳಾಗಲೀ ಇರಲೇ ಇಲ್ಲ"[೧] ಎಂಬ ಪರಿಸ್ಥಿತಿಯಲ್ಲಿ ಮಕ್ಕಳ ವಿವಿಧ ಹಂತಗಳಾದ ಶೈಶವ ಬಾಲ್ಯ ಕಾಮರ್ಯ ಯೌವನ ಎಂಬ ನಾಲ್ಕು ಹಂತಗಳಲ್ಲಿ ಅವರವರ ಮನೋಧರ್ಮಕ್ಕೆ ಅನುಗುಣವಾದ ಸಾಹಿತ್ಯ ರಚನೆಯಾಗಬೇಕು. ಚಿತ್ರ ಪುಸ್ತಕಗಳು, ನಾಟಕಗಳು, ಕಥೆ ಪುಸ್ತಕಗಳು, ಶಿಶುಗೀತೆಗಳು, ಜೀವನ ಚರಿತ್ರೆಗಳು, ಕಥಾಪದ್ಯಗಳು ವರ್ಣನಾ ಭಾವಗೀತೆಗಳು, ಪ್ರಬಂಧ, ಜ್ಞಾನಕೋಶ, ಇವೇ ಮೊದಲಾದ ಪ್ರಕಾರಗಳನ್ನು ಅವರವರ ವಯಸ್ಸಿಗೆ ಅನುಗುಣವಾಗಿ ಇರುವ ವಿಷಯಗಳನ್ನು ಆರಿಸಿಕೊಂಡು ರಚಿಸಿದಾಗ ಅದು ಮಕ್ಕಳಿಗೆ ಪ್ರಿಯವಾಗುತ್ತದೆ. ಹೀಗೆ ಮಕ್ಕಳಿಗೆ ಬೇಕಾದ ಸಾಹಿತ್ಯಕ ವಸ್ತುಗಳನ್ನು ಗುರುತಿಸಿರುವ ಪ್ರಬುದ್ಧ ಕರ್ಣಾಟಕ ಅದನ್ನು ದೊರಕಿಸಿಕೊಡುವ ಕಡೆಗೆ ಬರಹಗಾರರ ಗಮನ ಸೆಳೆದಿದೆ. ಹೀಗೆ ಪ್ರಬುದ್ಧ ಕರ್ಣಾಟಕವು ನೇರವಾಗಿ ಬರಹಗಳಿಗೆ ವಸ್ತುಗಳನ್ನು ಒದಗಿಸಿಕೊಟ್ಟಿರುವಂತೆಯೇ ಇದರಲ್ಲಿ ಪ್ರಕಟಗೊಂಡಿರುವ ಹಲವಾರು ಬರಹಗಳಲ್ಲಿ ಲೇಖನಗಳನ್ನು ಸೃಷ್ಟಿಸಲು ಬಳಸಿಕೊಳ್ಳಬಹುದಾದ ವಸ್ತುಗಳ ಸೂಚನೆಗಳೂ ದೊರೆಯುತ್ತದೆ. ದೇಸಾಯಿ ಪಾಂಡುರಂಗರಾಯರ 'ದವನ ಹುಣ್ಣಿಮೆ' ಎಂಬ ಲೇಖನದಲ್ಲಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಆಚರಣೆಯಲ್ಲಿ ಇರುವ ಹುಣ್ಣಿಮೆ ಹಾಗೂ ಅಮವಾಸ್ಯೆಗಳ ಆಚರಣೆಯನ್ನು ಹಾಗೂ ಅವುಗಳ ವೈಶಿಷ್ಟ್ಯವನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ತಮ್ಮ ಲೇಖನದಲ್ಲಿ ಇರುವ ಕೊರತೆಯನ್ನೂ ಹಾಗೂ ಅದನ್ನು ಇನ್ನಷ್ಟು ಪ್ರಯೋಜನಕಾರಿಯಾಗಿ ಹೊಸ ವಿಷಯಗಳನ್ನು ಸೇರಿಸಿ ಬರೆಯಬಹುದು ಎಂಬ ಅಂಶವನ್ನು ಕುರಿತಂತೆ ಅವರು ತಮ್ಮ ಲೇಖನದ ಕೊನೆಯಲ್ಲಿ ಈ ವಿಚಾರ ಕುರಿತಂತೆ ಪ್ರಸ್ತಾಪಿಸಿದ್ದಾರೆ. "ಈ ಚರ್ಚೆ ಸಾಹಿತ್ಯ ಮತ್ತು ಶಾಸನ ಸಾಹಿತ್ಯಗಳ ಕೂಲಂಕಷ ಅಧ್ಯಯನ ಫಲಗಳಿಂದ ಕೂಡಿದಾದುದಲ್ಲ. ನಮ್ಮ ನಾಡಿನ ಬೇರೆ ಬೇರೆ ಭಾಗಗಳ

---

೧. ವಿಟ್ಠಲಶೆಣೈ, ಸಂಪುಟ ೨೪, ಸಂಚಿಕೆ ೩, ಪು. ೨೨

ವಿವರಗಳು ಇದರಲ್ಲಿ ಬಂದಿಲ್ಲ. ನಮ್ಮ ನೆರೆಯ ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡಿನೊಡನೆ ಹೋಲಿಸಿ ಈ ಸಾಂಸ್ಕೃತಿಕ ಅವಶೇಷಗಳ ಅಸ್ತಿತ್ವ ಅಭಾವ ಸಾಮ್ಯ ವೈಶಿಷ್ಟ್ಯ ಮುಮತಾದ ವಿವರಗಳನ್ನು ಸೂಕ್ಷ್ಮವಾಗಿ ಕಂಡುಹಿಡಿಯುವ ಮನೋರಂಜಕವೂ ಉದ್ಬೋಧಕವೂ ಆಗಬಹುದಾದ ವಿಷಯ ಇಲ್ಲಿ ಒಂದು ಸ್ವತಂತ್ರ ಗ್ರಂಥದ ವಸ್ತುವಾದೀತು"[೧].

ಕುವೆಂಪು ಅವರು ಕ್ರಾಂತಿಕಾಳಿ ಎಂಬ ಕವನವು ಪುರಾತನಕಾಲದಿಂದಲೂ ಜನಪ್ರಿಯವಾಗಿರುವ ವಸ್ತುಗಳನ್ನು ಬಿಟ್ಟು ಜನಸಾಮಾನ್ಯರ ಮತ್ತು ಬದುಕಿಗೆ ಸಮೀಪವಾಗಿರುವ ವಸ್ತುಗಳನ್ನು ಆಯ್ದುಕೊಳ್ಳಬೇಕೆಂಬ ಸೂಚನೆಯನ್ನು ನೀಡುತ್ತದೆ. 'ಕ್ರಾಂತಿಕಾಳಿ' ಕವಿಯನ್ನು ಕುರಿತು ಗದರಿಸುತ್ತಾಳೆ. ಆತನಿಗೆ ತನ್ನ ಆಣತಿಯನ್ನು ಮರೆತು ಸೋಬಾನೆಗಳನ್ನು ಹಾಡಿದ ಕವಿಯನ್ನು ದ್ರೋಹಿಯೆನ್ನುತ್ತಾಳೆ. ಆತ ಮಾಡಬೇಕಾಗಿರುವ ಕೆಲಸವನ್ನು ನೆನಪಿಸುತ್ತಾಳೆ.

**"ಶುಕ, ಪಿಕ, ವಸಂತ, ಲತೆ**
**ಮುಂಗುರುಳು ತಂಗಾಳಿ ದೊರೆಗಿರಿಗೆಳಜ್ಜ ಕಥೆ**
**ಬೆಳ್ದಿಂಗಳೆಂಬುವಂ ನೂಕಾಚೆ ಹೆಂಬೇಡಿ!**
**ಒಡತನಂ ಗೊಬ್ಬರಂ ಕತ್ತಿ ಗುದ್ದಲಿ ಹಾರೆ**
**ಬೆವರುನೆತ್ತರ್ಗಳಂ ಗಾನಗೈವುದು ನಿನ್ನ**
**ಕರ್ತವ್ಯವಿಂದು"**[೨] ಎಂದು ಎಚ್ಚರಿಸುತ್ತಾಳೆ. ಹೊಟ್ಟೆ ಅನ್ನವಿಲ್ಲದೆ ಜನರು ಮರಣವನ್ನು ಅಪ್ಪುತ್ತಿರಬೇಕಾದರೆ ರಸಗಂಧವನ್ನು ತೂರಿ ಹಸಿವಿನ ನೋವನ್ನು ಮರೆಸಲು ಸಾಧ್ಯವೇ? ಕವಿಯ ಕರ್ತವ್ಯ ಭ್ರಮಾಲೋಕಕ್ಕೆ ಎಳೆದುಕೊಂಡು ಹೋಗುವುದಲ್ಲ. ವಾಸ್ತವಿಕತೆಯನ್ನು ಅರಿತು ರಚಿಸುವುದು ಸೂಕ್ತ. ಹಾಗಾಗಿಯೇ ಕಾವ್ಯದ ವಸ್ತು ವಾಸ್ತವಿಕ ನೆಲೆಗಟ್ಟಿನ ಮೇಲಿರಬೇಕು ಎಂಬುದನ್ನು ಸೂಚಿಸಿದೆ.

ಕನ್ನಡದಲ್ಲಿ ಸಣ್ಣ ಕಥೆಗಳು ಇನ್ನೂ ಸ್ಪಷ್ಟವಾದ ಸ್ವರೂಪವನ್ನು ಪಡೆಯದಿದ್ದ ಕಾಲದಲ್ಲಿಯೇ ಅವುಗಳ ಸ್ವರೂಪವನ್ನು ಹಾಗೂ ಆಯ್ದುಕೊಳ್ಳುವ ವಸ್ತು ಯಾವುದಿರಬೇಕೆಂಬುದರ ಬಗ್ಗೆ ಸಂಪಾದಕರಾದ ಕೃಷ್ಣಶಾಸ್ತ್ರಿಗಳು ಗಮನಸೆಳೆದಿದ್ದಾರೆ. ಕರ್ಣಾಟಕ ಸಂಘದವರು ಏರ್ಪಡಿಸುತ್ತಿದ್ದ ಸಣ್ಣ ಕಥೆಗಳ ಸ್ಪರ್ಧೆಯಲ್ಲಿ ಭಾಗವಹಿಸುತ್ತಿದ್ದ ವಿದ್ಯಾರ್ಥಿಗಳು ಆಯ್ದುಕೊಳ್ಳುತ್ತಿದ್ದ ವಿಷಯಗಳನ್ನು ಕುರಿತು ನಿರಾಸೆ ವ್ಯಕ್ತಪಡಿಸಿದ್ದಾರೆ. ವಿದ್ಯಾರ್ಥಿಗಳು ಬರೆಯುತ್ತಿರುವ ಕಥೆಗಳಲ್ಲಿ ಬಹುತೇಕ ಕಥೆಗಳು ವಸ್ತುಗಳು ಮದುವೆ ಹಾಗೂ ಪರೀಕ್ಷೆ ಕುರಿತಾಗಿ ಇರುವುದನ್ನು ಸಂಪಾದಕರು

---

೧. ಪಾಂಡುರಂಗದೇಸಾಯಿ, ಪ್ರ.ಕ. ಸಂಪುಟ ೩೨, ಸಂಚಿಕೆ ೪, ಪು. ೮೭

೨. ಕುವೆಂಪು, ಪ್ರ.ಕ. ಸಂಪುಟ ೧೭, ಸಂಚಿಕೆ ೧, ಪು. ೧-೨.

ಗಮನಿಸಿದ್ದಾರೆ. ಇದನ್ನು ವಿರೋಧಿಸುವ ಅವರು "ಇಂದು ವಿದ್ಯಾರ್ಥಿಗಳಾಗಿದ್ದು ನಾಳೆ ಕುಟುಂಬಗಳೂ ಪ್ರಜೆಗಳೂ ಅಧಿಕಾರಿಗಳೂ ಆಗತಕ್ಕವರು ಇಂಥವರಿಗೆ ಮತ್ತಾವ ಅನುಭವವೂ ಇಲ್ಲವೇ? ಕಣ್ಣೀರು ಬರುವ ಹೃದಯ ಉಬ್ಬುವ ಆವೇಶ ಹುಟ್ಟಿಸುವ ಮತ್ತಾವ ಸಂಗತಿಗಳೂ ಕಣ್ಣಿಗೆ ಬೀಳುವುದಿಲ್ಲವೇ? ಯಾವುದನ್ನೂ ಯೋಚಿಸಲಾದರೂ ಬೇಡವೇ[೧] ಎಂದು ಪ್ರಶ್ನಿಸುತ್ತಾರೆ. ಇದರ ಮೂಲಕ ಯುವಕರು ಯಾವ ವಸ್ತುಗಳ ಕಡೆ ಗಮನಹರಿಸಬೇಕು ಎಂಬುದನ್ನು ಸೂಚಿಸಿ ಇಲ್ಲಿ ದೊರೆತಿದೆ.

ಉತ್ತಂಗಿ ಚನ್ನಪ್ಪನವರು ಬರೆದಿರುವ 'ನನ್ನ ಹಾಡು' ಎಂಬ ಲೇಖನದಲ್ಲಿ ಸರ್ವಜ್ಞನನ್ನು ಕುರಿತು ಸಾಹಿತ್ಯ ಗ್ರಂಥವನ್ನು ರಚಿಸುವ ಸಂದರ್ಭದಲ್ಲಿ ತಾವು ಎದುರಿಸಿದ ಸಮಸ್ಯೆಗಳನ್ನು ತಿಳಿಸಿ ತಾವು ಇನ್ನೂ ಮಾಡಬೇಕೆಂದಿದ್ದ ಸಾಹಿತ್ಯ ಸೇವೆಯನ್ನೂ ಆದರೆ ತಮ್ಮ ಇಳಿವಯಸ್ಸಿನ ಕಾರಣದಿಂದಾಗಿ ಅದನ್ನು ಪೂರೈಸಲಾಗದೇ ಇದ್ದುದಕ್ಕೆ ನಿರಾಸೆ ವ್ಯಕ್ತಪಡಿಸಿದ್ದಾರೆ. ಅಷ್ಟೇ ಅಲ್ಲದೇ ತಾವು ಮಾಡದೇ ಇರುವ ಆದರೆ ಕನ್ನಡಿಗರು ಮಾಡಬಹುದಾದ ಕಾರ್ಯಗಳೇನೆಂದು ಸೂಚಿಸಿದ್ದಾರೆ. "ಭಾರತೀಯರಿಗಾಗಿ ಯೇಸುವಿನ ಜೀವ ಚರಿತೆಯೊಂದನ್ನು ಬರೆಯಬೇಕೆಂಬ ಆಶೆ ಅನೇಕ ವರ್ಷಗಳಿಂದ ನನ್ನಲ್ಲಿ ಮನೆ ಮಾಡಿಕೊಂಡಿದೆ. ಕನ್ನಡಕ್ಕೂ ಒಂದು ಸ್ವತಂತ್ರವಾದ ಸಂಸ್ಕೃತಿ ಇದೆ ಎಂಬ ವಿಷಯವಾಗಿಯೂ ಉಪನಿಷತ್ತು, ವಚನ ಶಾಸ್ತ್ರಗಳ ತುಲನಾತ್ಮಕ ವಿಷಯವಾಗಿಯೂ ಸ್ವತಂತ್ರವಾದ ಲೇಖನಗಳನ್ನು ಬರೆಯಬೇಕೆಂಬುದು ನನ್ನ ಹೆಬ್ಬಯಕೆ. ಕನ್ನಡ ಗಾದೆಗಳು ಕನ್ನಡ ನುಡಿಗಟ್ಟುಗಳು ಕನ್ನಡ ಶಬ್ದಗಳು ಇವುಗಳಲ್ಲಿರುವ ಕನ್ನಡನವನ್ನು ಬಯಲಿಗೆಳೆದು ಅದನ್ನು ಕನ್ನಡಿಗರ ಮುಂದೆ ಇಡಬೇಕೆಂಬುದೊಂದು ಮಹತ್ವಾಕಾಂಕ್ಷೆ.......... ಇವುಗಳಲ್ಲಿ ಹೆಚ್ಚಿನವುಗಳನ್ನು ಭಾವೀ ಕನ್ನಡ ಸಾಹಿತಿಗಳು ಪೂರೈಸುವರೆಂದು ತುಂಬಾ ನಂಬಿದ್ದೇನೆ. ಕನ್ನಡ ನಾಡು ಇಂತಹ ಅನೇಕ ಸಾಹಿತ್ಯ ಸಿದ್ಧರನ್ನು ಕಾಣಲೆಂದು ನನ್ನ ಹಾರೈಕೆ"[೨]. ಇದು ಕನ್ನಡಿಗರು ಇನ್ನೂ ಮಾಡಬಹುದಾದ ಸಾಹಿತ್ಯದ ಸೇವೆ ಹೀಗೆ ಸಾಹಿತ್ಯ ಸೃಷ್ಟಿಗೆ ಹತ್ತು ಹಲವು ಬಗೆಯ ಸಾಮಾಗ್ರಿಗಳನ್ನು ಸೂಚಿಸಿರುವ ಪ್ರಬುದ್ಧ ಕರ್ಣಾಟಕವು ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ವಹಿಸಿರುವ ಪಾತ್ರ ಗಮನಾರ್ಹವಾದದ್ದು.

**ಆಧುನಿಕ ಸಾಹಿತ್ಯಕ್ಕೆ ಆದ್ಯತೆ – ಬೆಂಬಲ**

ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡಿದ್ದು ಹೊಸ ಬಗೆಯ ಸಾಹಿತ್ಯ ಬೆಳವಣಿಗೆಯನ್ನು ಸಾಧಿಸುತ್ತಿದ್ದ ಕಾಲದಲ್ಲಿ. ರಂ.ಶ್ರೀ.ಮುಗಳಿಯವರು ೧೯೨೧ರಿಂದ

೧. ಎ.ಆರ್.ಕೃಷ್ಣಶಾಸ್ತ್ರೀ, ಪ್ರಕ. ಸಂಪುಟ ೧೦, ಸಂಚಿಕೆ ೧, ಪು. ೪
೨. ಚನ್ನಪ್ಪ ಉತ್ತಂಗಿ, ಪ್ರಕ. ಸಂಪುಟ ೨೮, ಸಂಚಿಕೆ ೩, ಪು. ೬೬

೧೯೫೦ರ ಕಾಲವನ್ನು ಹೊಸಬಗೆಯ ಎರಡನೇ ಹಂತವೆಂದು ಗುರುತಿಸಿದ್ದಾರೆ. ಈ ಹಂತದಲ್ಲಿ ಸಾಹಿತ್ಯ ವಿಫುಲವಾಗಿ ವೈವಿಧ್ಯತೆಯಿಂದೊಡಗೂಡಿ ಹೊರಬಂದಿತು. ಪಾಶ್ಚಾತ್ಯದ ನಿಕಟಸಂಪರ್ಕ, ವಿದ್ಯಾಭ್ಯಾಸದ ರೀತಿ ವಿಚಾರ ರೀತಿ ಇವುಗಳಿಂದಾಗಿ ಹೊಸ ಪ್ರಯೋಗಗಳು, ಪ್ರಯತ್ನಗಳು ಸಾಗುತ್ತಿದ್ದವು. ಕನ್ನಡ ಎಲ್ಲಾ ಪ್ರಕಾರಗಳ ಸಾಹಿತ್ಯದಲ್ಲಿಯೂ ಹೊಸತನ ಕಾಣತೊಡಗಿತ್ತು. ನಾಡಿನ ವಿವಿಧ ಭಾಗಗಳಿಂದ ಹರಿದುಬರುತ್ತಿದ್ದ ಸಾಹಿತ್ಯಕ ಚಿಂತನೆಗಳೇ ಇಲ್ಲಿ ಸ್ಥಾನ ಪಡೆಯಲು ಆರಂಭಿಸಿತ್ತು. ಭಾವಗೀತೆ, ಸಣ್ಣಕಥೆ ವಿಮರ್ಶೆಗಳಲ್ಲದೆ ಪ್ರಗಾಥ, ಸುನಿತ, ಅಣಕವಾಡು, ಕಥನಕವನ, ಪ್ರಬಂಧ, ಗೀತನಾಟಕದಂತಹ ಹೊಸರೂಪಗಳು ಸೃಷ್ಟಿಯಾಗತೊಡಗಿತ್ತು. ಕುರ್ತುಕೋಟಿಯವರು ಹೇಳುವ ಹಾಗೆ "ಜೀವನದಲ್ಲಿಯ ಒಂದು ರಸನಿಮಿಷ, ಪ್ರಕೃತಿಯ ಒಂದು ರಮ್ಯ ವಿವರ, ದುರ್ದಮ್ಯವಾಗಿ ಉಕ್ಕಿ ಬರುವ ಒಂದು ಭಾವನೆ, ಅಪೂರ್ವವಾಗಿ ಮೂಡಿಬಂದ ಒಂದು ವಿಚಾರ, ಮನುಷ್ಯ ಜೀವನದಲ್ಲಿಯ ಒಂದು ಸಣ್ಣ ಘಟನೆ, ಇವೇ ಕೇಂದ್ರ ಬಿಂದುವಾಗ ತಮಗನುಕೂಲವಾದ ಛಂದಸ್ಸು ಭಾಷೆ ಅಲಂಕಾರಗಳಲ್ಲಿ ಉಚಿತವಾಗಿ ಅಭಿವ್ಯಕ್ತಿಯನ್ನು ಪಡೆದು ಗೀತವಾಗಿ ಬರಬಹುದೆಂಬ ಮಾತು ಸಂಪೂರ್ಣವಾಗಿ ಹೊಸದಾಗಿತ್ತು".[೧] ಇಂತಹ ಭಾವನೆಗಳಿಂದ ಪ್ರೇರಿತವಾದ ಕಾವ್ಯದ ಮಹತ್ವದ ಪ್ರಕಾರವಾದ ಭಾವಗೀತೆಗಳು ಪ್ರಕಟವಾಗತೊಡಗಿದ್ದವು. ಪ್ರಬುದ್ಧ ಕರ್ಣಾಟಕದ ಮಾತೃ ಸಂಸ್ಥೆಯಾದ ಕರ್ಣಾಟಕ ಸಂಘವು ಬಿ.ಎಂ.ಶ್ರೀ ಅವರ ಇಂಗ್ಲಿಷ್ ಗೀತೆಗಳನ್ನು ೧೯೨೬ರಲ್ಲಿ ಪ್ರಕಟಿಸಿತು. ಈ ಮೊದಲು ಇಂಗ್ಲಿಷ್ ಗೀತೆಗಳು ಪ್ರಕಟವಾಗಿದ್ದರೂ ಅದು ಹೆಚ್ಚಿನ ಜನಗಳನ್ನು ತಲುಪಿದ್ದು ಈ ಪ್ರಕಟಣೆಯ ನಂತರವೇ. ಇಂಗ್ಲಿಷ್ ಗೀತೆಗಳು ಬಂದ ನಂತರ ಕವನಗಳಲ್ಲಿ ಅಭಿವ್ಯಕ್ತಿಸುವ ವಿಧಾನದಲ್ಲಿ ಆಲೋಚಿಸುವ ಕ್ರಮದಲ್ಲಿ ನಾವಿನ್ಯ ಕಾಣಿಸಿಕೊಳ್ಳತೊಡಗಿದವು. ಯೆಂಡ್ಕುಡುಕ ರತ್ನನ ಪದ್ಯಗಳಂತಹ ಪ್ರಯೋಗಗಳು ಯಶಸ್ವಿಯಾದವು. ಕನ್ನಡದಲ್ಲಿ ಅದುವರೆವಿಗೆ ಕಾಣದಿದ್ದ ವಸ್ತು ವೈವಿಧ್ಯಗಳು ಪ್ರಾರಂಭವಾದವು. ಕೆ.ಎಸ್.ನರಸಿಂಹ ಸ್ವಾಮಿಯವರ ಸರಳವಾದ ಪ್ರಣಯ ಕವಿತೆಗಳು ನಾಡಿನ ರಸಿಕರನ್ನು ಬಹುಬೇಗ ಆಕರ್ಷಿಸಿದವು. ಅಭಿವ್ಯಕ್ತಿಯ ವಿಧಾನದಲ್ಲಿ ಆಲೋಚಿಸುವ ಕ್ರಮದಲ್ಲಿ ಹೊಸತನ ಕಾಣಿಸಿಕೊಳ್ಳತೊಡಗಿದವು. ಹಳೆಯ ಮಾತ್ರಾಗಣಗಳನ್ನೇ ಆಧಾರವಾಗಿಟ್ಟುಕೊಂಡು ಹೊಸ ಹೊಸ ರೂಪ ವೈವಿಧ್ಯಗಳನ್ನು ತರಲು ಪ್ರಯತ್ನಗಳು ನಡೆದವು. ಈ ಎಲ್ಲಾ ಪ್ರಯೋಗಗಳಿಗೆ ವೇದಿಕೆಯನ್ನು ಕಲ್ಪಿಸಿಕೊಡುವ ಅದರ ಮೂಲಕ ಹೊಸತನಕ್ಕೆ ಬೆಂಬಲ ಸೂಚಿಸುವ ವೇದಿಕೆಯೊಂದನ್ನು ಪ್ರಬುದ್ಧ ಕರ್ಣಾಟಕವು ನೀಡಿತು. ಸಾಮಾನ್ಯ ಮನುಷ್ಯನ ಭಾವನೆಗಳಿಗೆ ಸುಖದುಃಖಗಳಿಗೆ ನೋವು ನಲಿವುಗಳಿಗೆ

---

೧. ಕುರ್ತುಕೋಟಿ.ಕೆ.ಡಿ, ಯುಗಧರ್ಮ ಹಾಗೂ ಸಾಹಿತ್ಯದರ್ಶನ, ೧೯೬೨, ಪು. ೪೧.

ಕಾವ್ಯದಲ್ಲಿ ಸ್ಥಾನ ದೊರೆಯಿತು. ಭಾವಗೀತೆಯಲ್ಲಿ ಹಲವು ಪ್ರಕಾರಗಳಿದ್ದು ಪ್ರಗಾಥ, ಶೋಕಗೀತೆ, ವಿಡಂಬನೆ, ಅಷ್ಟಷಟ್ಪದಿ, ಕಥನಕವನ ಇವೇ ಮೊದಲಾದ ಬಗೆಗಳಿದ್ದು ಪ್ರಬುದ್ಧ ಕರ್ಣಾಟಕವು ಅವುಗಳನ್ನು ಪ್ರಕಟಿಸಿ, ಪ್ರಯೋಗಕ್ಕೆ ಅವಕಾಶವನ್ನು ನೀಡಿ ಬೆಂಬಲ ಸೂಚಿಸಿದೆ.

ಇಂಗ್ಲಿಷಿನ ಮುಖಾಂತರ ಕನ್ನಡ ಕಾವ್ಯಕ್ಷೇತ್ರದಲ್ಲಿ ಸುಳಿದುಬಂದ ಪ್ರಕಾರಗಳಲ್ಲಿ ಪ್ರಗಾಥವೂ ಒಂದು ಪ್ರಗಾಥವು ಭಾವಗೀತೆಯ ಒಂದು ಪ್ರಕಾರ ಗಂಭೀರ ಶೈಲಿಯಲ್ಲಿ ರಚಿತವಾದ ಪ್ರಶಂಸನಾ ಪರವಾದ ಭಾವಗೀತೆ[೧] ಕನ್ನಡದಲ್ಲಿ ಬಿ.ಎಂ.ಶ್ರೀ ಅವರು ಮೊದಲಿಗೆ ಪ್ರಗಾಥ ಎಂಬ ಹೆಸರನ್ನು ಬಳಸಿದರು. ಕನ್ನಡ ಸಾಹಿತ್ಯದಲ್ಲಿ ಆಗತಾನೆ ಕಾಣಿಸಿಕೊಳ್ಳುತ್ತಿದ್ದ ಈ ಪ್ರಕಾರದ ಕವಿತೆಗಳನ್ನು ಪ್ರಬುದ್ಧ ಕರ್ಣಾಟಕವು ಪ್ರಕಟಿಸಿ ಪ್ರೋತ್ಸಾಹಿಸಿದೆ. ಕೆ.ಎಸ್.ನರಸಿಂಹಸ್ವಾಮಿಯವರ ಡೊಮಿನಿಯನ್ ಜನನ, ಬಿ.ಎಂ.ಶ್ರೀಕಂಠಯ್ಯನವರ ಶ್ರೀ ಕೃಷ್ಣರಾಜ ಮಹೋತ್ಸವ ಪ್ರಗಾಥ, ಕನ್ನಡ ತಾಯನೋಟದಂತಹ ಪ್ರಮುಖ ಪ್ರಗಾಥಗಳು ಪ್ರಕಟಗೊಂಡದ್ದು ಪ್ರಬುದ್ಧ ಕರ್ಣಾಟಕದಲ್ಲೇ ಎಂಬುದನ್ನು ನೆನಪಿಸಿಕೊಳ್ಳಬಹುದು.

ಆಂಗ್ಲಭಾಷೆಯ Sonnetಗೆ ಸಂವಾದಿಯಾಗಿ ಬಳಸುತ್ತಿರುವ ಶಬ್ದ ಅಷ್ಟಷಟ್ಪದಿ ಇದಕ್ಕೆ ಸುನೀತ ಅಥವಾ ಚತುರ್ದಶಪಾದಿ ಎಂಬ ಹೆಸರುಗಳೂ ಉಂಟು. ಸಂಗ್ರಹಗುಣ ಇದರ ವೈಶಿಷ್ಟ್ಯ ತೀವ್ರವಾದ ಭಾವನಾತ್ಮಕ ವಿಚಾರಗಳನ್ನು ಆಲೋಚನೆಗಳನ್ನು ಹದಿನಾಲ್ಕು ಸಾಲುಗಳಲ್ಲಿ ಅಡಕಗೊಳಿಸುವ ಪ್ರಯತ್ನ ಇಲ್ಲಿರುತ್ತದೆ. ಆರಂಭ ಘಟ್ಟದಲ್ಲಿ ಬಂದ ಅಷ್ಟ ಷಟ್ಪದಿಗಳಲ್ಲಿ ಪ್ರಖ್ಯಾತವಾದ 'ಪಂಜೆಯವರಿಗೆ' ಪ್ರಕಟಗೊಂಡಿದ್ದು ಪ್ರಬುದ್ಧ ಕರ್ಣಾಟಕದಲ್ಲಿ. ಪ್ರಬುದ್ಧ ಕರ್ಣಾಟಕವು ಇಂತಹ ಭಾವಗೀತೆಗಳನ್ನು ಪ್ರಕಟಿಸಿತು ಎಂಬ ದೃಷ್ಟಿಯಿಂದ ಮಾತ್ರ ಅದರ ಮಹತ್ವವನ್ನು ಗುರುತಿಸಿದಂತಾಗುವುದಿಲ್ಲ. ಭಾವಗೀತೆಯಲ್ಲಿ ವಿಧವಿಧವಾದ ಪ್ರಯೋಗಗಳು ನಡೆಯುತ್ತಿದ್ದ ಕಾಲದಲ್ಲಿಯೇ ಅವುಗಳನ್ನು ಪ್ರಕಟಿಸಿ ಪ್ರಚಾರ ಮಾಡುವುದರ ಮೂಲಕ ಹೇಗೆ ಬೆಂಬಲ ಸೂಚಿಸಿತು ಎಂಬುದು ಮಹತ್ತರವಾದ ಅಂಶವಾಗುತ್ತದೆ.

ಶೋಕ ಗೀತೆ ಇಂಗ್ಲೀಷಿನ Ellegyಗೆ ಸಂವಾದಿಯಾದದ್ದು. ಯಾವುದೇ ನೋವು ಶೋಕಗೀತೆಯ ವಸ್ತುವಾಗಬಹುದು. ಗಂಭೀರ ಚಿಂತನೆಯನ್ನೊಳಗೊಂಡ ಈ ಬಗೆಯ ಗೀತೆಗಳು ಪ್ರಬುದ್ಧ ಕರ್ಣಾಟಕದಲ್ಲಿ ಭಿನ್ನಭಿನ್ನವಾದ ಸನ್ನಿವೇಶಗಳಲ್ಲಿ ಪ್ರಕಟಗೊಂಡಿದೆ. ಪಂಜೆ ಮಂಗೇಶರಾಯರ, ಬಿ.ಎಂ.ಶ್ರೀ.ಯವರ, ವೆಂಕಣಯ್ಯನವರ ಮರಣದ ಸಂದರ್ಭಗಳಲ್ಲಿ ಗಾಂಧೀಜಿಯವರ ಹುತಾತ್ಮರಾದ ಸನ್ನಿವೇಶಗಳಲ್ಲಿ

---

೧. ಕರ್ಕಿ.ಡಿ.ಎಸ್, ಕನ್ನಡ ಛಂದೋ ವಿಕಾಸ, ೨೦೦೨, ಪು. ೨೮೮.

ಪ್ರಕಟಗೊಂಡಿರುವ ಶೋಕಗೀತೆಗಳು ಗಮನಸೆಳೆಯುತ್ತವೆ. ಹೀಗೆ ಭಾವಗೀತೆಯ ವಿವಿಧ ಪ್ರಕಾರಗಳಿಗೆ ಪ್ರೋತ್ಸಾಹ ನೀಡಿದ ಪ್ರಬುದ್ಧ ಕರ್ಣಾಟಕದ ಕೊಡುಗೆ ಮಹತ್ತರವಾದದ್ದು.

೧೯೧೮ರಲ್ಲಿ ಕೈಲಾಸಂ ಅವರ ಟೊಳ್ಳುಗಟ್ಟಿ ನಾಟಕದ ಪ್ರದರ್ಶನವಾದ ನಂತರ ಅದರ ಪ್ರಭಾವ ನಾಟಕ ರಂಗದ ದಿಕ್ಕನ್ನೇ ಬದಲಾಯಿಸಿತು. ಕೈಲಾಸಂ 'ಟೊಳ್ಳುಗಟ್ಟಿ'ಯನ್ನು ರಂಗದ ಮೇಲೆ ತರುವವರೆಗೆ ಕರ್ಣಾಟಕದಲ್ಲಿ ಯಾರೂ ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸಿರಲಿಲ್ಲ. ಅರಮನೆಯ ಕಂಪನಿಗಳ ಹಿಡಿತದಿಂದ ಬಿಡಿಸಿಕೊಂಡ ರಂಗಭೂಮಿ ಹುಡುಕತೊಡಗಿದ್ದು ಹೊಸದಾರಿಯನ್ನು ಕನ್ನಡಿಗರು ತಮ್ಮ ಸಮಾಜದ ನೆರೆಹೊರೆಯ ವ್ಯಕ್ತಿಗಳನ್ನು ತಮ್ಮ ಸುತ್ತಮುತ್ತಲಿನ ಜನರನ್ನು ರಂಗದ ಮೇಲೆ ಕಾಣತೊಡಗಿದರು. ಪ್ರಬುದ್ಧ ಕರ್ಣಾಟಕದ ಸಂಪಾದಕರು ಕೈಲಾಸಂ ಅವರ ನಾಟಕದ ಬಗ್ಗೆ ಬರೆದ ನಿರ್ಣಯಾತ್ಮಕವಾದ ವಿಮರ್ಶೆ ಅಂತಹ ಸಾಮಾಜಿಕ ನಾಟಕಗಳಿಗೆ ನೆಲೆಯನ್ನು ಒದಗಿಸಲು ಸಹಕರಿಸಿದವು. ಹೊಸಬಗೆಯ ಟೊಳ್ಳುಗಟ್ಟಿಯಂಥ ನಾಟಕಗಳಿಗೆ ಆಧುನಿಕ ಕರ್ಣಾಟಕ ಸಾಹಿತ್ಯದಲ್ಲಿ ಸ್ಥಾನ ಸಿಗುವುದೋ ಇಲ್ಲವೋ ಎಂಬಂತಹ ಅನುಮಾನವಿದ್ದ ಕಾಲದಲ್ಲಿಯೇ ಸಂಪಾದಕರು ಹೇಳುವ "ಟೊಳ್ಳುಗಟ್ಟಿಯು ಆಧುನಿಕ ಕರ್ಣಾಟಕ ಸಾಹಿತ್ಯದಲ್ಲಿ ಸಕಲ ರೀತಿಯಲ್ಲೂ ನೂತನವಾಗಿದೆ. ಇದನ್ನು ಓದುವುದಕ್ಕೆಂದು ಕೈಯಲ್ಲಿ ತೆಗೆದುಕೊಂಡರೆ ನಾನಾ ವಿಧವಾದ ಸಾಹಿತ್ಯ ತತ್ವಗಳು ವಿಚಾರಕ್ಕೆ ಬರುತ್ತವೆ. ಇವುಗಳಿಗೆ ಕೊಡುವ ಗಮನವೂ ಇವುಗಳ ಮೇಲೆ ವೆಚ್ಚಮಾಡುವ ಬುದ್ಧಿಶಕ್ತಿಯೂ ಸಾಹಿತ್ಯದಲ್ಲಿ ಆಸಕ್ತಿ ಇರುವವರಿಗೆ ಫಲದಾಯಕಗಳಾಗುವುದರಲ್ಲಿ ಸಂದೇಹವಿಲ್ಲ"[೧] ಮಾತುಗಳು, ಅವರ ಹಾದಿಯನ್ನು ತುಳಿದ ನಂತರದ ಬರಹಗಾರರಿಗೆ ನೈತಿಕ ಬೆಂಬಲವನ್ನೊದಗಿಸಿದವು. ಹೊಸ ಬಗೆಯದಾದ ಸಾಮಾಜಿಕ ನಾಟಕಗಳಂತೆಯೇ ನಮ್ಮಲ್ಲಿಯೇ ಇದ್ದ ಪೌರಾಣಿಕ ವಸ್ತುಗಳೂ ಹೊಸ ರೂಪವನ್ನು ಪಡೆದು ಹೊಸ ದೃಷ್ಟಿಕೋನದಿಂದ ಸೃಷ್ಟಿಯಾಗತೊಡಗಿದವು.

'ಗದಾಯುದ್ಧ' 'ಅಶ್ವತ್ಥಾಮನ್' 'ಯಮನಸೋಲು' 'ಶೂದ್ರತಪಸ್ವಿ'ಯಂತಹ ನಾಟಕಗಳು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡವು. ಪರಂಪರಾಗತವಾಗಿ ಬಂದಿದ್ದ ನಂಬಿಕೆಗಳನ್ನು ಚಿಕಿತ್ಸಕ ದೃಷ್ಟಿಯಿಂದ ನೋಡಿ ಹೊಸ ಸ್ವರೂಪವನ್ನು ಪಡೆದ ಈ ನಾಟಕಗಳು ಸಾಕಷ್ಟು ವಾಗ್ವಿವಾದಗಳಿಗೆ ಕಾರಣವಾದುವು. ಈ ಸಂದರ್ಭಗಳಲ್ಲಿ ಸಂಪ್ರದಾಯವಾದಿಗಳಿಂದ ನಾಟಕದ ವಸ್ತುಗಳಲ್ಲಿ ಆದ ಬದಲಾವಣೆಗೆ ಪ್ರಬಲವಾದ

---

೧. ವಸ್ತುಕೋಶ, ಪ್ರ.ಕ. ಸಂಪುಟ ೫, ಸಂಚಿಕೆ ೭, ಪು. ೭.

ಪ್ರತಿರೋಧ ವ್ಯಕ್ತವಾದಾಗ ಪ್ರಬುದ್ಧ ಕರ್ಣಾಟಕವು ಅದನ್ನು ಖಂಡಿಸಿ ಪ್ರಗತಿಪರವಾದ ಮನೋಧರ್ಮವನ್ನು ಪ್ರದರ್ಶಿಸಿತು. ಸಾಹಿತ್ಯದ ದೃಷ್ಟಿಯಿಂದ ಕನ್ನಡ ಸಾಹಿತ್ಯ ಪಡೆದ ಪ್ರಯೋಜನಗಳನ್ನು ಪರಿಗಣಿಸದೆ ಟೀಕಿಸುವವರನ್ನು ಬಲವಾಗಿ ವಿರೋಧಿಸಿದೆ. ಅಶ್ವತ್ಥಾಮನ್ ನಾಟಕ ಕುರಿತಂತೆ ಟೀಕಿಸುವವರನ್ನು ಕುರಿತು ಸಂಪಾದಕೀಯದಲ್ಲಿ "ಇದು ಸಾಹಿತ್ಯ ದೃಷ್ಟಿಯಿಂದ ಲಾಭವೇ ನಷ್ಟವೇ ಎಂಬುದನ್ನು ವಿಚಾರ ಮಾಡದೆ ವೆಂಕ–ಶೀನ, ನಾಣಿ ಮಹಾಶಯರು ಇಲ್ಲದ ಸಲ್ಲದ ಉದ್ದೇಶಗಳನ್ನು ಆರೋಪಿಸಿ ಮನಬಂದಂತೆ ಮಾತನಾಡುವುದು ಸೂಕ್ತವಾಗಿ ತೋರುವುದಿಲ್ಲ"[೧] ಎಂದಿರುವ ಮಾತುಗಳು ಮೊನಚಾಗಿದೆ. ಹೀಗೆ ಆಧುನಿಕ ದೃಷ್ಟಿಕೋನದ ಬರಹಗಳಿಗೆ ಪ್ರಬುದ್ಧ ಕರ್ಣಾಟಕದಿಂದ ಸಿಗುತ್ತಿದ್ದ ಸ್ವಾಗತ ಗಮನಾರ್ಹ. ಬಿ.ಎಂ.ಶ್ರೀ ಅವರು ಪ್ರಬುದ್ಧ ಕರ್ಣಾಟಕದಲ್ಲಿ ಬರೆದ ಅಶ್ವತ್ಥಾಮನ್[೨] ಗದಾಯುದ್ಧಂ ಪಾರಸಿಕರು ಈ ಮೂರು ನಾಟಕಗಳು ದುರಂತ ನಾಟಕಗಳಾಗಿದ್ದು ಕನ್ನಡದಲ್ಲಿ ಅದುವರೆವಿಗೆ ಪ್ರಕಟಗೊಳ್ಳದಿದ್ದ ಹೊಸ ಬಗೆಯ ಆಲೋಚನೆ ಹಾಗೂ ಗುಣಗಳನ್ನು ಹೊಂದಿದ್ದು ನಂತರ ಬಂದ ದುರಂತ ನಾಟಕಗಳಿಗೆ ಮಾದರಿಯಾಗಿರುವುದನ್ನು ಗುರುತಿಸಬಹುದು. ಪು.ತಿ.ನ. ಅವರದು ಗೀತರೂಪಕ ಪ್ರಪಂಚದಲ್ಲಿ ಅತ್ಯುನ್ನತವಾದ ಹೆಸರು. ಕಾವ್ಯದ ಮೂಲಕ ಸಾಧಿಸಲಾಗದ ಪರಿಣಾಮಗಳನ್ನು ಸಂಗೀತದಿಂದ ಸಾಧಿಸಲು ಸಾಧ್ಯವೆಂದು ಮನಗಂಡ ಇವರು ಗೀತನಾಟಕದಂತಹ ಮಾಧ್ಯಮದ ಕಡೆ ಗಮನಹರಿಸಿದರು. ಅವರ 'ಪ್ರಖ್ಯಾತ' ಗೀತರೂಪಕ 'ಅಹಲ್ಯೆ'ಗೆ ವೇದಿಕೆ ಒದಗಿಸಿ ಪ್ರಚಾರ ನೀಡಿದ್ದೂ ಪ್ರಬುದ್ಧ ಕರ್ಣಾಟಕವೇ. ೧೯೩೦ರ ಸುಮಾರಿಗೆ ಸರಳರಗಳೆಯಲ್ಲಿ ಕನ್ನಡ ನಾಟಕಗಳಿಗೆ ಮನ್ನಣೆ ದೊರೆಯಲು ಆರಂಭಿಸಿತು. ಎಂ.ಆರ್.ಶ್ರೀನಿವಾಸಮೂರ್ತಿ ಅವರ ನಾಗರಿಕ, ಕೆ.ವಿ.ಪುಟ್ಟಪ್ಪನವರ ಯಮನಸೋಲು ಇವೇ ಮೊದಲಾದ ಸರಳ ರಗಳೆಯ ರೂಪಕಗಳು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡವು. ಕಾವ್ಯರಚನೆಗಾಗಿ ಸರಳ ರಗಳೆ ಮಂಗಳೂರಿನ ಕೆಲವು ಕವಿಗಳು ವಿನಿಯೋಗಿಸುತ್ತ ಬಂದಿದ್ದರೂ ರೂಪಕಕ್ಕಾಗಿ ಮೊದಲು ಬಳಸಿದವರು ಕೆ.ವಿ.ಪುಟ್ಟಪ್ಪನವರು ಅವರ ಯಮನಸೋಲು ೧೯೨೮ರಲ್ಲೇ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡಿರುವುದನ್ನು ಇದರಿಂದ ಗಮನಿಸಬಹುದು.

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿಯೇ ಸಣ್ಣ ಕಥೆಗಳ ಸ್ವರೂಪ ಕಾಣಸಿಗುವುದಾದರೂ ಅದು ಜನಪ್ರಿಯ ಸಾಹಿತ್ಯ ಮಾಧ್ಯಮವಾಗಿ ಆಧುನಿಕರ

---

೧. ಭಾಷಣಗಳು ಮತ್ತು ಲೇಖನಗಳು, ೧೯೬೦, ಪು. ೪೩೯.

೨. ಇದರ ಮೂಲಕ ಹೊಸ ಕವಿಗಳ ದೃಷ್ಟಿ ಗೀತರೂಪಕದ ಕಡೆ ಹರಿಯಿತು ಎಂಬ ಅಭಿಪ್ರಾಯವನ್ನು ಡಿ.ಎಸ್.ಕರ್ಕಿಯವರು ವ್ಯಕ್ತಪಡಿಸಿದ್ದಾರೆ. ಹೆಚ್ಚಿನ ವಿವರ ಕನ್ನಡ ಛಂದೋವಿಕಾಸ (೨೦೦೨) ಪು. ೨೯೩ರಲ್ಲಿದೆ.

ಮನಸೆಳೆಯಲು ವಿಫಲವಾಗಿದ್ದ ಸಂದರ್ಭದಲ್ಲಿಯೇ ಆಂಗ್ಲಭಾಷೆಯ ಪ್ರಭಾವದಿಂದ ಹೊಸ ರೀತಿಯ ಸಣ್ಣ ಕಥೆಗಳು ರಚನೆಯಾದುವು. ಬಡತನ ಗ್ರಾಮೀಣ ಚಿತ್ರಣ ಗಾಂಧೀಜಿಯವರ ವಿಚಾರಧಾರೆ, ಅಸ್ಪೃಶ್ಯತಾ ನಿವಾರಣೆಯ ಪ್ರಯತ್ನಗಳು, ಜಾತೀಯತೆಯ ಖಂಡನೆ, ಸುಧಾರಣವಾದೀ ಕ್ರಿಯೆಗಳು ಕಥೆಯೊಳಗೆ ಸ್ಥಾನ ಪಡೆಯತೊಡಗಿದವು. ಒಂದು ಬಗೆಯ ಚಿಕಿತ್ಸಕ ಗುಣ ವಿಶ್ಲೇಷಣೆಯ ಮನೋಧರ್ಮ ಸಣ್ಣ ಕಥೆಗಳಲ್ಲಿ ಕಾಣತೊಡಗಿದವು. ಭೂಮಿಯ ಒಡೆತನ, ಋಣಮುಕ್ತತೆ, ಕುಟುಂಬದ ಸಾಮರಸ್ಯ, ಸ್ತ್ರೀ ವಿದ್ಯಾಭ್ಯಾಸ, ಪ್ರಚಲಿತ ಸಂಗತಿಗಳು, ಸಮಾಜಕ್ಕಿದ್ದ ಸಂಕೋಚಗಳು, ಕಟ್ಟುಪಾಡುಗಳು ಇವುಗಳನ್ನು ಪ್ರಶ್ನಿಸುವ ಮನೋಭಾವಗಳೂ ಕಾಣತೊಡಗಿದವು. ಸಣ್ಣ ಕಥೆಗಳಿಗೆ ಹೊಸ ದಿಕ್ಕನ್ನು ತೋರಿಸಿದ ಮಾಸ್ತಿಯವರ ಸಣ್ಣಕಥೆಗಳು ಪ್ರಕಟಗೊಂಡ ಕಾಲವದು. ಮಾಸ್ತಿಯವರು ಸಣ್ಣಕಥೆ–ಗಳನ್ನು ಬರೆಯಲು ಪ್ರಾರಂಭಿಸಿದಾಗ ಇದು ಸಾಹಿತ್ಯವೇ ಎಂಬ ಅನುಮಾನ ಕೆಲವರಿಗೆ. ಈ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದ ಎ.ಆರ್.ಕೃಷ್ಣ ಶಾಸ್ತ್ರಿಗಳ ವಿಮರ್ಶೆ ಆ ಅನುಮಾನವನ್ನು ತೊಡೆದುಹಾಕಿತು. ಸಣ್ಣ ಕಥೆಯ ಬರಹಗಾರರಿಗೆ ಅಂದು ಅವಶ್ಯಕವಾಗಿ ಬೇಕಾಗಿದ್ದ ಧೈರ್ಯವನ್ನು ತುಂಬಿತು. ರವೀಂದ್ರನಾಥ ಠಾಕೂರರ ಸಣ್ಣಕಥೆಗಳನ್ನು ಓದಿದ ನಂತರ ಬೇರೆ ಲೇಖಕರು ಬರೆದ ಕಥೆಗಳು ರುಚಿಸಲಾರದು ಎಂಬಂತಹ ಸನ್ನಿವೇಶದಲ್ಲಿ ಮಾಸ್ತಿಯವರು ಕೃತಜ್ಞತೆಯಿಂದ ಸ್ಮರಿಸಿದ್ದಾರೆ. "ಹೆತ್ತವರಿಗೆ ಹೆಗ್ಗಣ ಮುದ್ದು ಮರೆದವರಿಗೆ ತನ್ನ ಕಥೆ ಮುದ್ದು. ಈ ಮಗು ಈ ಕತೆ ಬೇರೆ ಯಾರಿಗಾದರೂ ಮುದ್ದಾಗಿ ಕಾಣುತ್ತದೆಯೋ? ಅದು ಹಾಗೆ ಕಾಣುವವರೆಗೆ ಹೆತ್ತವರು ಬರೆದವರು ಅವುಗಳ ಯೋಗ್ಯತೆಯನ್ನು ಕುರಿತು ಧೈರ್ಯಪಡುವಂತಿಲ್ಲ. ಪ್ರಬುದ್ಧ ಕರ್ಣಾಟಕ ಕೃಷ್ಣಮೂರ್ತಿಗಳ ವಿಮರ್ಶೆಯ ಮೂಲಕ ನನಗೆ ಆಗ ಅವಶ್ಯಕವಾಗಿದ್ದ ಧೈರ್ಯವನ್ನು ಕೊಟ್ಟಿತು".[೧] ಒಂದು ಪತ್ರಿಕೆಯ ವಿಮರ್ಶೆ ಒಬ್ಬ ಶ್ರೇಷ್ಠಕವಿಯ ಬರವಣಿಗೆಗೆ, ಒಂದು ಬಗೆಯ ಸಾಹಿತ್ಯ ಪ್ರಕಾರದ ಅಭಿವೃದ್ಧಿಗೆ ಇಷ್ಟರಮಟ್ಟಿಗೆ ಪ್ರಭಾವ ಬೀರುತ್ತದೆ ಎಂಬುದೇ ವಿಶಿಷ್ಟ ಸಂಗತಿಯಾಗಿದೆ. ಹೀಗೆ ಪ್ರೋತ್ಸಾಹ ನೀಡುವುದಷ್ಟೇ ಅಲ್ಲದೆ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶ್ರೀಪತಿ, ಆನಂದ ಕುವೆಂಪು ಅವರಂತಹ ಹಲವಾರು ಪ್ರಮುಖ ಕಥೆಗಾರರಿಗೆ ಆಶ್ರಯ ನೀಡಿದೆ. ಸಣ್ಣ ಕಥೆಗಳಿಗಾಗಿಯೇ ಸ್ಪರ್ಧೆ ಏರ್ಪಡಿಸಿ ಪ್ರೋತ್ಸಾಹಿಸಿದೆ. ಸಣ್ಣ ಕಥೆಗಳ ಸ್ವರೂಪ, ಗುಣಲಕ್ಷಣ ಇವುಗಳ ಬಗ್ಗೆ ವಿಮರ್ಶೆಯನ್ನು ಪ್ರಕಟಿಸಿ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಅದಕ್ಕೆ ಭದ್ರವಾದ ಬುನಾದಿಯನ್ನು ಒದಗಿಸಿದೆ.

---

೧. ಕುವೆಂಪು (ಪ್ರಧಾನ ಸಂ.), 'ಸವಿನೆನಮು', ೧೯೭೦, ಪು. ೩೪.

ಕನ್ನಡದಲ್ಲಿ ವಿಡಂಬನ ಸಾಹಿತ್ಯಕ್ಕೆ ಪ್ರೇರಣೆ ನೀಡಿದ್ದು ಇಂಗ್ಲಿಷಿನ ಸಟೈರ್ ಈ ಪ್ರಕಾರದ ಎಂದರೆ ಪೂರ್ಣಪ್ರಮಾಣದ ವಿಡಂಬನ ಕಾವ್ಯಗಳು ಕನ್ನಡದಲ್ಲಿ ಕಡಿಮೆಯಿದ್ದ ಕಾಲದಲ್ಲಿಯೇ ಪ್ರಬುದ್ಧ ಕರ್ಣಾಟಕ ಅದಕ್ಕೆ ವೇದಿಕೆಯನ್ನು ಒದಗಿಸಿಕೊಟ್ಟಿದೆ. ಜಿ.ಪಿ.ರಾಜರತ್ನಂ ಅವರ 'ಮಹಾಕವಿ ಪುರುಷ ಸರಸ್ವತಿ' ಈ ಬಗೆಯ ಸಾಹಿತ್ಯದಲ್ಲಿ ಮಹತ್ವದ ಕೃತಿ ಪ್ರಬುದ್ಧ ಕರ್ಣಾಟಕ ಯಾವುದೇ ರೀತಿಯ ಹೊಸ ಪ್ರಯೋಗಗಳಿಗೆ ಬೆಂಬಲ ಸೂಚಿಸಿ ಅದನ್ನು ಬೆಳೆಸುವ ಪ್ರಯತ್ನ ಮಾಡಿದೆ. ಜಿ.ಪಿ.ರಾಜರತ್ನಂ ಅವರ ಈ ಲೇಖನ 'ಕರ್ನಾಟಕ' ಸರಿಯೋ 'ಕರ್ಣಾಟಕ' ಎಂಬುದು ಸರಿಯೋ ಎಂಬ ವಾದ ನಾಡಿನಾದ್ಯಂತ ಹರಡಿದ್ದ ಸಂದರ್ಭದಲ್ಲಿಯೇ ಪ್ರಕಟಗೊಂಡಿದ್ದು ಕನ್ನಡ ಕವಿಗಳಲ್ಲಿ ಪರಂಪರೆಯಾಗಿ ಬಂದ ಕುಕವಿ ನಿಂದೆ, ಸ್ವಪ್ರತಿಷ್ಠೆ ಮನೋಭಾವ, ಅಲಂಕಾರ ಪ್ರಿಯತೆ, ಪ್ರಾಸಕ್ಕೆ ನೀಡುತ್ತಿದ್ದ ಪ್ರಾಶಸ್ತ್ಯ ಇವೇ ಮೊದಲಾದವುಗಳ ಬಳಕೆ ಹಾಗೂ ಅದರ ಬಗ್ಗೆ ಇದ್ದು ಸಂಪ್ರದಾಯಪ್ರಿಯರಿಗೆ ಇದ್ದ ವ್ಯಾಮೋಹ ಇವುಗಳೆಲ್ಲವನ್ನೂ ವಿಡಂಬಿಸಿದೆ. ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಗೊಂಡಿರುವ ಗೊರೂರು ರಾಮಸ್ವಾಮಿ ಅಯ್ಯಂಗಾರರ ಬರವಣಿಗೆಗಳಲ್ಲಿ ವಿಡಂಬನೆಗೆ ಒಳಗಾಗಿರುವವರು ಬೆಸ್ತರ ಕರಿಯ, ಪುಟ್ಟಮಲ್ಲಿ, ಗಂಡುಬೀರಿ ಹೊಸಬಿ ಇಂತಹವರೆಲ್ಲರೂ ಸಮಾಜದಲ್ಲಿ ಕಾಣಸಿಗುವ ವಿವಿಧ ಮಾದರಿಯ ವ್ಯಕ್ತಿಗಳು. ಹೀಗೆ ವಿಡಂಬನ ಸಾಹಿತ್ಯಕ್ಕೆ ಬೆಂಬಲವಾಗಿ ನಿಂತಿದ್ದು ಪ್ರಬುದ್ಧ ಕರ್ಣಾಟಕ.

ಸಾಹಿತ್ಯದ ಗುಣ ಪ್ರತಿಫಲಿಸುವ ಹಾಗೆ ವಿಶಿಷ್ಟವಾದ ಪದಬಂಧಗಳಿಂದ ನಿರ್ಮಾಣವಾಗುವ ಬರಹಗಳನ್ನು ಪ್ರಬಂಧ ಎನ್ನಬಹುದು. ರಚನೆಯ ದೃಷ್ಟಿಯಿಂದ ಇದು ಆಂಗ್ಲಭಾಷೆಯಿಂದ ಪ್ರಭಾವಿತವಾಗಿದೆ. ಜೆ.ಅಬ್ದುಲ್ ಬಷೀರ್ ಅವರು ಗುರುತಿಸುವ ಹಾಗೆ "ಆತ್ಮೀಯತೆ ಚಿಂತನಪರತೆ, ಅಧಿಕಾರವಾಣಿ, ಪಾಂಡಿತ್ಯ, ಮನವೊಲಿಕೆ ವ್ಯಕ್ತಿನಿಷ್ಠತೆ ಸಂಕ್ಷಿಪ್ತತೆ, ತಾರ್ಕಿಕತೆ, ವಿಶ್ಲೇಷಣೆ, ಆಕರ್ಷಕ ಶೈಲಿ ಇವು ಪ್ರಬಂಧದಲ್ಲಿರಬೇಕಾದ ಅಂಶಗಳು"[೧]. ಸಾಹಿತ್ಯ, ತತ್ವಜ್ಞಾನ, ವಿಜ್ಞಾನ ಇವೇ ಮುಂತಾದ ವಿಷಯಗಳನ್ನು ರಂಜಕವಾಗಿ ಬರೆದ ಲೇಖನಗಳನ್ನು ವಿಚಾರ ಪ್ರಬಂಧ ಎಂದು ಗುರುತಿಸಬಹುದು. ಇವುಗಳ ಗುರಿ ತಿಳುವಳಿಕೆ ನೀಡುವುದೇ ಹೊರತು ಮನಸ್ಸಿಗೆ ಆನಂದ ನೀಡುವುದಿಲ್ಲ. ಹಾಗೆಂದ ಮಾತ್ರಕ್ಕೆ ಇವುಗಳಿಂದ ಆನಂದ ದೊರೆಯುವುದೇ ಇಲ್ಲ ಎಂಬ ಅರ್ಥವಲ್ಲ. ಪ್ರಬುದ್ಧ ಕರ್ಣಾಟಕ ನಾಡಿನ ಸಮಸ್ತ ಜನರನ್ನು ದೃಷ್ಟಿಯಲ್ಲಿರಿಸಿಕೊಂಡು ಇಂತಹ ವೈಚಾರಿಕ ಪ್ರಬಂಧಗಳ ಕಡೆಗೆ ಅಷ್ಟೇ ಅಲ್ಲದೇ ಮನಸ್ಸಿಗೆ ಮುದ ನೀಡುತ್ತಾ ಜ್ಞಾನದ ಬೆಳಕನ್ನು ಹೆಚ್ಚಿಸುವ ಲಲಿತ ಪ್ರಬಂಧಗಳ ಕಡೆಗೂ ಗಮನಹರಿಸಿದೆ. ಕೆ.ವಿ.ಪುಟ್ಟಪ್ಪ, ಗೊರೂರು ರಾಮಸ್ವಾಮಿ

---

೧. ಜೆ.ಅಬ್ದುಲ್ ಬಷಿರ್, ಕಾವ್ಯಮೀಮಾಂಸೆ ಮತ್ತು ಸಾಹಿತ್ಯ ವಿಮರ್ಶೆ, ೧೯೯೮, ಪು. ೧೫೪.

ಅಯ್ಯಂಗಾರ್, ಡಿ.ಎಲ್.ನರಸಿಂಹಾಚಾರ್, ಎ.ಎನ್.ಮೂರ್ತಿರಾವ್, ಎನ್.ಪ್ರಹ್ಲಾದ್ ರಾವ್‌ರಂತಹ ಪ್ರಬಂಧಕಾರರಿಗೆ ವೇದಿಕೆಯನ್ನೊದಗಿಸಿದೆ. ಪ್ರಬಂಧ ಸಾಹಿತ್ಯ ಇನ್ನೂ ಬೆಳವಣಿಗೆಯ ಹಂತದಲ್ಲಿದ್ದ ಸಮಯದಲ್ಲಿಯೇ ಅದರ ಮಹತ್ವವನ್ನು ಅರಿತು ಪ್ರಬುದ್ಧ ಕರ್ಣಾಟಕ ತನ್ನ ಓದುಗರಿಗಾಗಿ ದೊರಕಿಸಿಕೊಟ್ಟಿದೆ.

ಆಂಗ್ಲಭಾಷೆಯಿಂದ ಪ್ರೇರಣೆ ಪಡೆದ ಇಂತಹ ಸಾಹಿತ್ಯ ಪ್ರಕಾರಗಳ ಮಧ್ಯದಲ್ಲಿಯೇ ನಮ್ಮ ನಾಡಿನದೇ ಆದ 'ವಚನಗಳು' ಕೂಡ ಆಧುನಿಕ ಕಾಲದಲ್ಲಿಯೂ ಪ್ರಭಾವ ಬೀರಿದೆ. ಈಗ ಜ.ಚ.ನಿ.ದಿವಾಕರ, ಚಂದ್ರಶೇಖರ ಐತಾಳ, ಎಸ್.ವಿ.ರಂಗಣ್ಣ ಇವರೇ ಮೊದಲಾದ ಪ್ರಖ್ಯಾತರಾದ ಹಾಗೂ ಇಂದಿನ ವಾಚಕರಿಗೆ ಪರಿಚಯವೇ ಇಲ್ಲದ ಹಲವಾರು ಲೇಖಕರು ವಚನಗಳಿಗೆ ಮನಸೋತಿದ್ದಾರೆ. ಈ ಸಂದರ್ಭದಲ್ಲಿ ಜ.ಚ.ನಿ. ಅವರನ್ನು ಹೊರತುಪಡಿಸಿದರೆ ಅತಿಹೆಚ್ಚಿನ ಸಂಖ್ಯೆಯಲ್ಲಿ ವಚನಗಳನ್ನು ಬರೆದ ರಂಗಣ್ಣನವರಿಗೆ ವೇದಿಕೆಯನ್ನು ಒದಗಿಸಿಕೊಟ್ಟಿದ್ದು ಪ್ರಬುದ್ಧ ಕರ್ಣಾಟಕ. ೧೯೩೪ರಲ್ಲಿಯೇ ರಂಗಯ್ಯನ ವಚನಗಳು ಎಂಬ ಶೀರ್ಷಿಕೆಯಲ್ಲಿ ರಂಗಣ್ಣನವರ ವಚನಗಳು ಪ್ರಕಟಗೊಂಡಿವೆ. "ಆಧುನಿಕರಲ್ಲಿ ಇದಕ್ಕಿಂತ ಮೊದಲು ಬೇರೊಬ್ಬರು ವಚನಗಳನ್ನು ಪ್ರಕಟಿಸಿರುವುದು ಗಮನಕ್ಕೆ ಬಂದಿಲ್ಲ. ಐತಿಹಾಸಿಕವಾಗಿ ಆಧುನಿಕ ವಚನಕಾರರಲ್ಲಿ ರಂಗಣ್ಣನವರು ಮೊದಲಿಗರಾಗಿರುವುದು ಮಾತ್ರವಲ್ಲದೆ ಈ ಸಾಹಿತ್ಯ ಪ್ರಕಾರಕ್ಕೆ ರಾಷ್ಟ್ರದ ಅತ್ಯುಚ್ಚ ಪ್ರಶಸ್ತಿಯನ್ನು ಗಳಿಸಿ ಸಫಲತೆಯನ್ನು ಪಡೆದಿದ್ದಾರೆ."[೧] ಈ ರೀತಿಯಾಗಿ ಆಧುನಿಕ ಕನ್ನಡದಲ್ಲಿ ಹೊಸತು ಎಂಬಂತಹ ಎಲ್ಲ ಪ್ರಕಾರಗಳಿಗೆ ಬೆಂಬಲವಾಗಿ ನಿಂತು ಅದರ ಬೆಳವಣಿಗೆಗೆ ಕಾರಣವಾದ ಪತ್ರಿಕೆ ಪ್ರಬುದ್ಧ ಕರ್ಣಾಟಕ.

ಇದೇ ಸಂದರ್ಭದಲ್ಲಿ ವಿವಿಧ ಸಾಹಿತ್ಯ ಪ್ರಕಾರಗಳು ತುಳಿದ ವಿಭಿನ್ನವಾದ ಹಾದಿಯನ್ನು ಕುರಿತು ಗಂಭೀರವಾದ ಚಿಂತನೆಗಳು ಪ್ರಾರಂಭವಾಗಿದ್ದವು. ಸಾಹಿತ್ಯದ ಸ್ವರೂಪ, ಸಾಹಿತ್ಯದಿಂದಾಗುವ ಪ್ರಯೋಜನ ಇವುಗಳನ್ನು ಕುರಿತ ಉತ್ತರದ ಹುಡುಕಾಟ ಪ್ರಾರಂಭವಾಗಿತ್ತು. ಪ್ರಕಟಗೊಂಡಿದ್ದ ಸಾಹಿತ್ಯವನ್ನು ವಿಶ್ಲೇಷಿಸುವ ಅವುಗಳ ಗುಣಾವಗುಣಗಳನ್ನು ಗುರುತಿಸುವ ದೃಷ್ಟಿಯಿಂದ ವಿಮರ್ಶೆಗಳು ಪ್ರಕಟವಾಗತೊಡಗಿದ್ದವು. ವಿಮರ್ಶೆಗಳ ಸ್ವರೂಪ ಅವುಗಳ ಆಶಯ ಹಾಗೂ ಗುರಿ ಇವುಗಳ ಬಗ್ಗೆ ಆಲೋಚನೆಗಳು ನಡೆದಿದ್ದವು. ಅಂದಿನ ಬಹುತೇಕ ವಿಮರ್ಶಕರು ಆಂಗ್ಲಭಾಷೆ ಹಾಗೂ ಸಂಸ್ಕೃತ ಭಾಷೆಗಳೆರಡರಲ್ಲೂ ಪಾಂಡಿತ್ಯವನ್ನು ಪಡೆದಿದ್ದವರು ಅವರಿಗೆ ಪರಂಪರಾಗತ ರೀತಿಯಲ್ಲಿ ಕಾವ್ಯಮೀಮಾಂಸೆ ಹಾಗೂ ಆಂಗ್ಲಭಾಷೆಯ

---

೧. ಕರ್ನಾಟಕ ವಿಷಯ ವಿಶ್ವಕೋಶ, ೨೦೦೫, ಪು. ೩೨೬.

ವಿಮರ್ಶೆಗಳೆರಡರ ಪರಿಚಯವಿತ್ತು. ಹೀಗಾಗಿ ಹಳೆಗನ್ನಡ ಹಾಗೂ ಹೊಸಗನ್ನಡ ಕಾವ್ಯಗಳೆರಡ ಬಗ್ಗೆಯೂ ಉತ್ತಮವಾದ ವಿಮರ್ಶೆಗಳು ಪ್ರಕಟಗೊಂಡುವು. ಈ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಳ್ಳುತ್ತಿದ್ದ ಕಾವ್ಯಾವಲೋಕನ, ವಸ್ತುಕೋಶ ಇವುಗಳಲ್ಲಿ ನಾಡಿನ ನೂರಾರು ಗ್ರಂಥಗಳು ವಿಮರ್ಶೆಗೆ ಒಳಗಾದುವು. ಎ.ಆರ್.ಕೃಷ್ಣಶಾಸ್ತ್ರಿಗಳು, ಟಿ.ಎಸ್.ವೆಂಕಣಯ್ಯ, ಕುವೆಂಪು ಇಂತಹ ಮಹನೀಯರ ನೆರವು ಇದಕ್ಕೆ ಒದಗಿತು. ಪ್ರಬುದ್ಧ ಕರ್ಣಾಟಕದಲ್ಲಿ ನಡೆದ ಈ ಸೇವೆಯನ್ನು ಕುರಿತು ಮಾಸ್ತಿವೆಂಕಟೇಶ ಅಯ್ಯಂಗಾರ್ ಅವರು ಗುರುತಿಸುವ ಹಾಗೆ ಹೊಸ ಸಾಹಿತ್ಯವನ್ನು ಕಲಿತಂತೆ ಹೊಸವಿಮರ್ಶೆಯನ್ನು ನಾವು ಇಂಗ್ಲಿಷಿನಿಂದ ಕಲಿಯಬೇಕಾದದ್ದಿತ್ತು. ಅದು ಪ್ರಬುದ್ಧ ಕರ್ಣಾಟಕದ ಮೂಲಕ ನಡೆಯಿತು".[೧]

ಹೀಗೆ ಹೊಸ ಬಗೆಯ ಸಾಹಿತ್ಯ ಪ್ರಕಾರಗಳ ಬೆಳವಣಿಗೆಯ ಕಡೆ ಗಮನಹರಿಸಿದ ಪ್ರಬುದ್ಧ ಕರ್ಣಾಟಕದಲ್ಲಿ ವ್ಯಾಕರಣ, ಛಂದಸ್ಸು, ನಾಡಿನ ಚರಿತ್ರೆ ಇತಿಹಾಸ ಶಾಸನಗಳ ಅಧ್ಯಯನ ಪದಗಳ ನಿಷ್ಪತ್ತಿ, ಜಾನಪದ ಸಾಹಿತ್ಯ, ವಚನ ಸಾಹಿತ್ಯ, ದಾಸ ಸಾಹಿತ್ಯ, ಸಂಪ್ರದಾಯ ಧಾರ್ಮಿಕ ಆಚರಣೆಗಳಂತೆ ಹೊಸ ಹೊಸ ವಸ್ತುಗಳನ್ನು ಒಳಗೊಂಡ ಬರಹಗಳು ಪ್ರಕಟವಾದುವು. ಹೊಸ ಪ್ರಕಾರಗಳಿಗೆ ಆದ್ಯತೆ ಸಿಕ್ಕಂತೆಯೇ ಹೊಸ ವಸ್ತುಗಳಿಗೂ ಇಲ್ಲಿ ಆದ್ಯತೆ ದೊರೆತು ಸಾಹಿತ್ಯದ ವಸ್ತು ವಿಸ್ತರತೆಯನ್ನು ಪಡೆಯಿತು. ಸಾಹಿತ್ಯ ಸಂಶೋಧಕರ ಆಸಕ್ತಿಯ ಫಲವಾಗಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸ್ಪಷ್ಟವಾಗಿ ರಚಿಸಿಕೊಡುವ ಕವಿಗಳ ಕಾಲ ಮತ ಕೃತಿ ಇವುಗಳನ್ನು ಖಚಿತಪಡಿಸುವ ಪ್ರಯತ್ನಗಳು ನಡೆದುವು. ಸಾಹಿತ್ಯ ಚರಿತ್ರೆಯ ನಿರ್ಮಾಣದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದ ನೀಡಿದ ಕೊಡುಗೆ ಮಹತ್ತರವಾದದ್ದು.

**ಸಾಹಿತ್ಯ ಚರಿತ್ರೆಯ ನಿರ್ಮಾಣ ಕವಿ – ಕಾವ್ಯ ವಿಚಾರ**

ಸಹಸ್ರಾರು ವರ್ಷಗಳಿಂದ ಬೆಳೆದುಬಂದಿರುವ ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಚರಿತ್ರೆಯಿದೆ. ಇದರ ಇತಿಹಾಸವನ್ನು ಗುರುತಿಸುವ ಕಾರ್ಯ ಕಳೆದ ಶತಮಾನದ ಆರಂಭದಿಂದಲೇ ಪ್ರಾರಂಭವಾಯಿತು. ಕ್ರೈಸ್ತ ಮಿಶನರಿಗಳು ತಮಗೆ ಲಭ್ಯವಿದ್ದ ಮಾಹಿತಿಗಳನ್ನು ಆಧರಿಸಿ ಸಾಹಿತ್ಯ ಚರಿತ್ರೆಯ ಪರಿಚಯವನ್ನು ಮಾಡಿಕೊಟ್ಟರು. ಅವು ಸಾಹಿತ್ಯ ಚರಿತ್ರೆಯ ಅತಿ ಸೂಕ್ಷ್ಮವಾದ ಪರಿಚಯನವನ್ನು ನಿಡುವುದಾದರೂ ಅದನ್ನು ಸಾಹಿತ್ಯ ಚರಿತ್ರೆಯೆಂದೇ ಕರೆಯಲಾಗದು. ಆರ್.ನರಸಿಂಹಾಚಾರ್ಯರು ೧೯೦೭ರಲ್ಲಿ ಕರ್ನಾಟಕ ಕವಿ ಚರಿತೆಯ ನಿರ್ಮಾಣಕ್ಕೆ ಚಾಲನೆ ದೊರೆಯಿತು. ಇವರ

---

೧. ಕುವೆಂಪು (ಪ್ರಧಾನ ಸಂ.), ಸವಿನೆನಪು, ೧೯೭೦, ಪು. ೩೨.

ಪ್ರಯತ್ನದ ನಂತರ ಕನ್ನಡ ಸಾಹಿತ್ಯ ಚರಿತ್ರೆಯನ್ನು ವಿವಿಧ ದೃಷ್ಟಿಕೋನದಿಂದ ನೋಡುವ ಹಲವಾರು ಸಾಹಿತ್ಯ ಚರಿತ್ರೆಗಳು ಪ್ರಕಟಗೊಂಡಿವೆಯಾದರೂ ಕವಿಗಳ ಬಗ್ಗೆ ಯಾವೊಂದೂ ಮಾಹಿತಿಗಳೇ ಅಲಭ್ಯವಾಗಿದ್ದ ಕಾಲದಲ್ಲಿಯೇ ನರಸಿಂಹಾಚಾರ್ಯರು ಪಟ್ಟ ಶ್ರಮ ಹಾಗೂ ಪ್ರಯತ್ನ ಅಮೂಲ್ಯವಾದದ್ದು.

ಇದೇ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖವಾದ ಕನ್ನಡ ಸಾಹಿತ್ಯ ಚರಿತೆಯೆಂದರೆ "ಕೆಲವು ಕವಿಗಳ ಜೀವನ ಕಾಲಕೃತಿ ವಿಚಾರ'. ಈ ಎರಡೂ ಕೃತಿಗಳನ್ನು ಕುರಿತು ಜಿ.ವರದರಾಜರವರು "ಈ ವಿಚಾರ ಮಂಥನದಲ್ಲಿ ಉದಿಸಿದ ಅನರ್ಘ್ಯ ಕೃತಿಗಳೇ ರಾ.ನರಸಿಂಹಾಚಾರ್ಯರ ಕರ್ನಾಟಕ ಕವಿ ಚರಿತೆಯ ಮೂರು ಸಂಪುಟಗಳು ಮತ್ತು ಡಾ. ಅ.ವೆಂಕಟಸುಬ್ಬಯ್ಯನವರ "ಕೆಲವು ಕನ್ನಡ ಕವಿಗಳ ಜೀವನ ಕಾಲ ಕೃತಿ ವಿಚಾರ"[೧] ಎಂದು ಶ್ಲಾಘಿಸಿದ್ದಾರೆ.

ಈ ಹೇಳಿಕೆಯಲ್ಲಿ ಉಲ್ಲೇಖಿಸಲ್ಪಟ್ಟಿರುವ ಎ.ವೆಂಕಟಸುಬ್ಬಯ್ಯನವರ ಕೃತಿ ಮೊದಲಿಗೆ ಪ್ರಕಟಗೊಂಡಿದ್ದು ಪ್ರಬುದ್ಧ ಕರ್ಣಾಟಕದಲ್ಲಿ. ಈ ಕೃತಿಯ ಬರಹಗಳನ್ನು ಹಲವಾರು ಸಂಚಿಕೆಗಳಲ್ಲಿ ಬಿಡಿಬಿಡಿಯಾಗಿ ಪ್ರಕಟಿಸುವುದರ ಜೊತೆಯಲ್ಲೇ ಅದಕ್ಕೆ ವ್ಯಾಪಕವಾದ ಪ್ರಚಾರವನ್ನೂ ನೀಡಿತು. ಈ ಗ್ರಂಥದಲ್ಲಿನ ವಿಚಾರಗಳಿಗೆ ಸಂಬಂಧಿಸಿದಂತೆ ವಾದ–ವಿವಾದಗಳಿಗೆ ಅವಕಾಶವನ್ನು ಕಲ್ಪಿಸಿಕೊಟ್ಟು ತಲಸ್ಪರ್ಶಿ–ಯಾದ ಅಭಿಪ್ರಾಯಹೊರಬರುವುದಕ್ಕೆ ಕಾರಣವಾಯಿತು. ಹೀಗೆ ಬಿಡಿಬಿಡಿಯಾಗಿ ಪ್ರಕಟಗೊಂಡ ಲೇಖನಗಳನ್ನು ಒಟ್ಟುಗೂಡಿಸಿ, ಅದನ್ನು ಗ್ರಂಥರೂಪವಾಗಿ ಪ್ರಬುದ್ಧ ಕರ್ಣಾಟಕ ಪ್ರಕಟಿಸಿದಷ್ಟೇ ಅಲ್ಲದೆ ತನ್ನ ಚಂದದಾರರಿಗೆ ಉಚಿತವಾಗಿ ಕೊಟ್ಟಿದೆ.

ಇದಕ್ಕೆ ಸಂಬಂಧಿಸಿದಂತೆ ಪ್ರಕಟಗೊಂಡಿರುವ ಡಿ.ಎಲ್.ನರಸಿಂಹಾಚಾರ್ಯರ "ಸಾಹಿತ್ಯ ಚರಿತ್ರೆಯ ಸ್ವರೂಪ" ಎಂಬ ಲೇಖನ ಗಮನಾರ್ಹವಾದದ್ದು. ಸಾಹಿತ್ಯ ಚರಿತ್ರೆಯ ನಿರ್ಮಾಣದ ಕಾಲದಲ್ಲಿ ಗಮನಿಸಬೇಕಾದ ಅಂಶಗಳ ಕಡೆ ಈ ಲೇಖನ ಬೆಳಕು ಚೆಲ್ಲುತ್ತದೆ. ಸಾಹಿತ್ಯ ಚರಿತ್ರೆಯ ನಿರ್ಮಾಣದ ಸಂದರ್ಭದಲ್ಲಿ ಅದನ್ನು ರಚಿಸುವವನಿಗೆ ಕಾಲದಿಂದ ಕಾಲಕ್ಕೆ ಸಾಹಿತ್ಯವು ಬೆಳೆದು ಬಂದ ಬಗೆ, ಅದರಲ್ಲಿ ಆಗಿರುವ ವ್ಯತ್ಯಾಸಗಳು, ಅದಕ್ಕೆ ಕಾರಣ, ಅದರಿಂದ ಆಗಿರುವ ಪ್ರಯೋಜನ, ಇವೇ ಮೊದಲಾದ ಅಂಶಗಳ ಬಗ್ಗೆ ಪರಿಜ್ಞಾನವಿರಬೇಕು. ಹಾಗಾಗಿಯೇ ಡಿ.ಎಲ್.ಎನ್. ಅವರು ಸಾಹಿತ್ಯವನ್ನು ಸೃಷ್ಟಿಸಿರುವ "ಕವಿಗಳ ಕಾಲ ಮತ್ತು ಅವು ರಚಿತವಾದ ಸಂದರ್ಭ ಸನ್ನಿವೇಶಗಳು ಇವುಗಳ ಪರಿಜ್ಞಾನ ಸಾಹಿತ್ಯ ಚರಿತ್ರೆಗೆ ಮೂಲಾಧಾರ. ಇವು ಎಷ್ಟೆಷ್ಟು ಖಚಿತವಾಗಿ ತಿಳಿದುಬರುತ್ತದೋ ಅಷ್ಟಷ್ಟು ಸಮರ್ಪಕ ಸಾಹಿತ್ಯ ಚರಿತ್ರೆ

---

೧. ವರದರಾಜ.ಜಿ, ಸವಿನೆನಪು, ೧೯೭೦, ಪು. ೮೧೪.

ಬರೆಯಲು ಸಾಧ್ಯವಾಗುತ್ತದೆ."[೧] ಎಂದಿದ್ದಾರೆ. ಇದನ್ನು ಅರಿತಿರುವ ಪ್ರಬುದ್ಧ ಕರ್ಣಾಟಕ ಈ ನಿಟ್ಟಿನಲ್ಲಿ ನೀಡಿರುವ ಕೊಡುಗೆ ಅಪಾರ. ಕವಿಗಳ ಕಾಲ ದೇಶ ಕೃತಿ ಇವುಗಳನ್ನು ಕುರಿತಾಗಿ ಹಲವಾರು ಸಂಶೋಧನಾತ್ಮಕ ವಿಮರ್ಶೆಗಳನ್ನು ಪ್ರಕಟಿಸು-ವುದರೊಂದಿಗೆ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಸಹಕರಿಸುವ ಕಾರ್ಯವನ್ನು ಒಂದೆಡೆ ಮಾಡಿದರೆ ಇನ್ನೊಂದೆಡೆ ಸಂಶೋಧನೆಗೆ ಅಗತ್ಯವಾದ ಚರ್ಚೆಗೆ ಅವಕಾಶ ಕಲ್ಪಿಸಿಕೊಟ್ಟಿದೆ. ಕನ್ನಡ ಸಾಹಿತ್ಯದ ನಿರ್ಮಾಣದ ಕಾರ್ಯ ಯಾರಿಂದ ಪ್ರಾರಂಭವಾಯಿತು ಎನ್ನುವುದರಿಂದ ಹಿಡಿದು ಅದು ಹಂತಹಂತವಾಗಿ ಹೇಗೆ ಬೆಳೆಯಿತು? ಈ ಸಂದರ್ಭದ ಕವಿಗಳು ನೀಡಿದ ಕೊಡುಗೆಯೇನು? ಅವರ ಮತ ಕೃತಿ ಕಾಲ ಇವುಗಳ ಬಗ್ಗೆ ಇರುವ ಮಾಹಿತಿಗಳೇನು? ಎದುರಾದ ಗೊಂದಲಗಳೇನು? ನಾಡಿನ ವಿವಿಧ ಭಾಗಗಳಲ್ಲಿ ಈ ವಿಚಾರಕ್ಕೆ ಸಂಬಂಧಿಸಿದಂತೆ ಬಂದಿರುವ ಪ್ರತಿಕ್ರಿಯೆಗಳೇನು? ನಡೆದಿರುವ ಚರ್ಚೆಗಳೇನು ಎಂಬುದನ್ನು ಗಮನಿಸಿ ಆ ಚರ್ಚೆಗಳ ಸಾರವನ್ನು ಸಂಗ್ರಹಿಸಿ ವಿಚಾರಗಳನ್ನು ಪ್ರಕಟಿಸಿದೆ. ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಸಂಬಂಧಿಸಿದಂತೆ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡಿರುವ ಲೇಖನಗಳ ಕೊಡುಗೆ ಮಹತ್ತರವಾದದ್ದು.

ಕನ್ನಡ ಸಾಹಿತ್ಯ ಚರಿತ್ರೆಯ ಆರಂಭದ ಹೆಜ್ಜೆಗಳನ್ನು ಕುರಿತು ವೆಂಕಣಯ್ಯ ಅವರು ರಚಿಸಿರುವ "ಕನ್ನಡದಲ್ಲಿ ಬೌದ್ಧರೂ ಗ್ರಂಥಗಳನ್ನು ಬರೆದಿದ್ದಾರೆಯೇ"[೨] ಎನ್ನುವ ಸಂಶೋಧನಾ ವಿಮರ್ಶೆ ಇಂದಿಗೂ ಪ್ರಸ್ತುತವಾಗಿದ್ದು ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ನಿರ್ಧಾರ ಮಾಡಲು ಪ್ರಯತ್ನಿಸುವವರು. ಅದನ್ನು ನಿರ್ಲಕ್ಷಿಸಿ ಮುಂದುವರೆಯಲು ಸಾಧ್ಯವೇ ಇಲ್ಲ. ಕನ್ನಡ ಸಾಹಿತ್ಯದ ಪ್ರಾಚೀನತೆಯ ಮೇಲೆ ಬೆಳಕು ಚೆಲ್ಲುವಂತಹ ಅಮೂಲ್ಯವಾದ ವಿಚಾರಗಳು ಅದರಲ್ಲಿ ವ್ಯಕ್ತವಾಗಿದೆ. ಕವಿರಾಜಮಾರ್ಗ ಕನ್ನಡದಲ್ಲಿ ಈಗ ಉಪಲಬ್ಧವಿರುವ ಮೊದಲ ಕೃತಿಯಾದರೂ ಅದಕ್ಕೂ ಮೊದಲು ನಾಲ್ಕೈದು ಶತಮಾನಗಳ ಹಿಂದಾದರೂ ಕನ್ನಡದ ಕೃತಿಗಳು ರಚನೆಯಾಗುತ್ತಿರಬಹುದೆಂದು ಅವರ ಊಹೆ. ಕವಿರಾಜ ಮಾರ್ಗದಲ್ಲಿ ಬಂದಿರುವ ಹಲವಾರು ಕವಿಗಳ ಹೆಸರುಗಳನ್ನು ಗಮನಿಸಿ ಹಾಗೂ ನಂತರ ಬಂದ ಜೈನ ಕವಿಗಳಾರೂ ಈ ಹೆಸರುಗಳನ್ನು ಪ್ರಸ್ತಾಪಿಸದೇ ಇರುವುದನ್ನು ಪರಿಗಣಿಸಿ ಅವರುಗಳು ಬೌದ್ಧ ಧರ್ಮೀಯರಾಗಿರಬೇಕೆಂದೂ ಬೌದ್ಧ ಧರ್ಮದ ಪ್ರಚಾರಕ್ಕೆ ಅವರು ಗದ್ಯ ಪ್ರಕಾರ ಬಳಸಿ ಕಾವ್ಯಗಳನ್ನು ರಚಿಸಿರಬಹುದೆಂದು ಊಹಿಸುತ್ತಾರೆ. ಪ್ರಾಚೀನ ಕಾಲದಲ್ಲಿ ಬೌದ್ಧಧರ್ಮವು ಪ್ರಾಬಲ್ಯ ಪಡೆದಿತ್ತೆಂದೂ ಆ ಸಂದರ್ಭದಲ್ಲಿ ದೇಶೀ

---

೧. ನರಸಿಂಹಾಚಾರ್.ಡಿ.ಎಲ್, ಪ್ರ.ಕ. ಸಂಪುಟ ೩೦, ಸಂಚಿಕೆ ೭, ಪು. ೧೬.
೨. ವೆಂಕಣಯ್ಯ.ಟಿ.ಎಸ್., ಪ್ರ.ಕ. ಸಂಪುಟ ೭, ಸಂಚಿಕೆ ೩, ಪು. ೧–೮.

ಭಾಷೆಯಲ್ಲಿ ಸಾಹಿತ್ಯ ಹುಟ್ಟಿರಬಹುದೆಂದೂ ಅನಂತರ ಬೌದ್ಧರ ಅವನತಿಯೊಂದಿಗೆ ಅವರ ಸಾಹಿತ್ಯವೂ ನಾಶವಾಗಿರಬಹುದೆಂದು ಭಾವಿಸುತ್ತಾರೆ. ಅವರ ಊಹೆಗೆ ಯಾವುದೇ ಸಮರ್ಥನೆಗಳಿಲ್ಲದಿದ್ದರೂ ಅದನ್ನು ನಿರ್ಲಕ್ಷಿಸುವಂತೆಯೂ ಇಲ್ಲ. ತಕ್ಕ ಪುರಾವೆಗಳು ಒದಗುವವರೆಗೆ ಇಂತಹ ಸುಸಂಬದ್ಧ ಊಹೆಗಳೇ ಸಂಶೋಧನೆಗೆ ದಾರಿ ಮಾಡಿಕೊಡುತ್ತದೆ.

ಕವಿರಾಜ ಮಾರ್ಗ ಗ್ರಂಥದ ಕರ್ತ ಯಾರು? ಎಂಬ ಬರಹವು ಈ ಕೃತಿಯ ಕರ್ತೃ ನೃಪತುಂಗನೇ ಅಥವಾ ಶ್ರೀ ವಿಜಯನೇ ಎಂಬ ವಾದ ವಿವಾದಗಳು ಎದ್ದಿದ್ದ ಕಾಲದಲ್ಲಿ ಬಂದದ್ದು ಈ ಕೃತಿಯಾ ಕರ್ತೃ ಯಾರು ಎಂಬುದೇ ಇನ್ನೂ ನಿರ್ಧಾರವಾಗದಿದ್ದ ಕಾಲದಲ್ಲಿಯೇ ವೆಂಕಣಯ್ಯನವರು ಎರಡೂ ಕಡೆಯವರ ವಾದಗಳನ್ನು ಸೂಕ್ಷ್ಮವಾಗಿ ಗಮನಿಸಿ ಅವುರಗಳ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಕೊನೆಗೆ ಈ ಕೃತಿಯ ಕರ್ತೃ ಶ್ರೀ ವಿಜಯನೊ ಎಂಬ ತೀರ್ಮಾನಕ್ಕೆ ಬರುತ್ತಾರೆ. ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣದ ಹಂತದಲ್ಲಿ ಬಂದ ಇಂತಹ ಲೇಖನಗಳು ಅದಕ್ಕೆ ಖಚಿತತೆಯನ್ನು ಒದಗಿಸುತ್ತದೆ. ಬಿಜ್ಜಳನು ಜೈನನೇ (೧೦-೪) ಎಂಬುದೂ ಕೂಡ ಇಂತಹ ಲೇಖನವೇ. ಬಿಜ್ಜಳನು ಜೈನನಾಗಿರದೆ ಶೈವ ಮತಾವಲಂಬಿ-ಯಾಗಿರಬೇಕು ಎಂಬುದು ಲೇಖಕರ ಅಭಿಪ್ರಾಯ. ವೆಂಕಣಯ್ಯನವರು ತಮ್ಮ ಅಭಿಪ್ರಾಯಗಳನ್ನು ಹಲವಾರು ಶಾಸನಗಳ ಆಧಾರದ ಮೇಲೆ ಪುಷ್ಟೀಕರಿಸಿದ್ದಾರೆ. ಇಂದು ಇಂತಹ ವಿಷಯಗಳನ್ನು ಸಾಮಾನ್ಯವಾದ ವಿಚಾರಗಳು ಎಂದು ನಿರ್ಲಕ್ಷಿಸುವ ಸಾಧ್ಯತೆ ಇರುವುದಾದರೂ ಆ ಕಾಲದಲ್ಲಿ ಇವುಗಳು ಸಂಶೋಧನೆಯ ದೃಷ್ಟಿಯಿಂದ ಮುಖ್ಯವಾದ ವಿಚಾರಗಳಾಗಿದ್ದವು. ವಿಚಾರ ಪ್ರಚೋದಕ ಹಾಗೂ ಸಂಶೋಧನಾತ್ಮಕವಾಗಿದ್ದ ಇಂತಹ ಲೇಖನಗಳು ಸಂಶೋಧನೆಗೆ ಸಹಕಾರಿಯಾಗಿದೆ.

ಬಸವಣ್ಣನವರ ಧರ್ಮ ಕುರಿತಂತೆ ಕಪಟರಾಳ ಕೃಷ್ಣ ಅವರು ಬರೆದ ಬಸವೇಶ್ವರನು ನಾಥ ಪಂಥದ ಅನುಯಾಯಿಯೇ (೨೬-೧)) ಎಂಬ ಲೇಖನದಲ್ಲಿ ಬಸವಣ್ಣನವರು ನಾಥ ಪಂಥದ ಅನುಯಾಯಿಯಾಗಿರಬಹುದು ಎಂಬ ಊಹೆಯನ್ನು ವ್ಯಕ್ತಪಡಿಸಿದಾಗ ಸಾಹಿತ್ಯ ಸಮಿತಿ ಪತ್ರಿಕೆ ಹಾಗೂ ನವ ಸಂದೇಶಗಳೆಂಬ ಪತ್ರಿಕೆಗಳಲ್ಲಿ ಇದಕ್ಕೆ ಉಗ್ರವಾದ ವಿರೋಧ ವ್ಯಕ್ತವಾಯಿತು. ಇಂತಹ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಪ್ರಬುದ್ಧ ಕರ್ಣಾಟಕ ಯಾವುದೋ ದುರುದ್ದೇಶ ಹಾಗೂ ಆಲೋಚನೆಗಳನ್ನು ಪ್ರದರ್ಶಿಸಿದೆಯೆಂದು ಕಟುವಾಗಿ ಬರೆಯಿತು. ಅದಕ್ಕೆ ಪ್ರತಿಯಾಗಿ ಪ್ರಬುದ್ಧ ಕರ್ಣಾಟಕದ ಸಂಸ್ಥಾಪಕರು ಇದು ಕನ್ನಡ ನಾಡು ನುಡಿಗಳ ಸೇವೆಗೆ ಮೀಸಲಾದ ಪತ್ರಿಕೆ ಕನ್ನಡ ಜನತೆಯಲ್ಲಿ ವೀರಶೈವರ ಭಾಗ ದೊಡ್ಡದು ಮುಖ್ಯವಾದದ್ದು. ಅವರ ಮತ ವಿಚಾರ ಮಹಾನ್ವಯ ತತ್ವಗಳಿಗೆ ಯಾರೂ

ಕಡಿಮೆಯಿಲ್ಲದ ಗೌರವವನ್ನು ನಾವು ಸಲ್ಲಿಸಿದ್ದೇವೆ. ನಮ್ಮ ಸಾಹಿತ್ಯದಲ್ಲಿ ಹೆಚ್ಚು ಭಾಗ ಮತಕ್ಕೂ ಸಂಬಂಧಪಟ್ಟಿರುವುದರಿಂದ ಇದಕ್ಕೆ ಸಂಬಂಧಿಸಿದ ಕೆಲವು ಜನಗಳಿಗೆ ವಿರೋಧ ಬರಬಹುದು. ಹಾಗೆಂದ ಮಾತ್ರಕ್ಕೆ ಮತದ ವಿಚಾರವನ್ನು ನಿಲ್ಲಿಸಿಬಿಡುವುದು ಅಪಚಾರ ಎಂದಾಗುತ್ತದೆ[1] ಎಂದು ಹೇಳಿದ್ದಾರೆ. ಪರಿಶೀಲನಾ ಬುದ್ಧಿಯಿಂದ ಸತ್ಯಾಸತ್ಯತೆಯನ್ನು ಹುಡುಕಬೇಕು. ಯಾರಿಗೋ ಬೇಸರವಾಗುತ್ತದೆ ಎಂಬ ಕಾರಣದಿಂದ ಹೇಳಬೇಕಾದ ವಿಷಯವನ್ನು ಮುಚ್ಚಿಡುವುದರಿಂದ ಸತ್ಯವನ್ನು ಬಚ್ಚಿಟ್ಟಂತಾಗುತ್ತದೆ. ನಿಷ್ಪಕ್ಷಪಾತವಾದ ಬುದ್ಧಿ ಹಾಗೂ ವಿಮರ್ಶೆಯಾಗಿದ್ದಲ್ಲಿ ಅದಕ್ಕೆ ಸಿಗಬೇಕಾದ ಗೌರವ ದೊರಕಲೇ ಬೇಕು ಎಂಬುದು ಪತ್ರಿಕೆಯ ಸಂಪಾದಕರ ನಿಲುವು ಇಂತಹ ವಿಚಾರ ಮಂಥನಗಳಿಂದ ಸಾಹಿತ್ಯ ಚರಿತ್ರೆಯ ನಿರ್ಮಾಣದಲ್ಲಿ ನಿಖರತೆ ಉಂಟಾಗುತ್ತದೆ. ಇದೇ ಬಗೆಯಲ್ಲಿ ಪ್ರಕಟವಾದ ಚಾವುಂಡರಾಯ ಪುರಾಣವನ್ನು ರನ್ನನು ಬರೆದಿರಬಹುದೇ (೩೫-೨) ಸುಮಂತಭದ್ರನೇ ಶ್ರೀ ವಿಜಯನಿರಬಹುದೇ (೧೯-೩) ಎಂಬಂತಹ ಲೇಖನಗಳೂ ಹೊಸ ವಿಷಯಗಳ ಕಡೆ ಬೆಳಕು ಚೆಲ್ಲುತ್ತವೆ. ಹೀಗೆ ಯಾವುದೇ ವಿಚಾರ ಕುರಿತಂತೆ ಖಚಿತ ನಿಲುವು ತಳೆಯಲು ಇಂತಹ ಲೇಖನಗಳು ಸಹಕಾರಿಯಾಗಿವೆ.

ಪ್ರಾಚೀನ ಕವಿಗಳ ವಿಚಾರಗಳಂತೆಯೇ ಆಧುನಿಕ ಕನ್ನಡ ಸಾಹಿತ್ಯದ ಮುಂಬೆಳಕಿನ ಕವಿಯಾದ ಮುದ್ದಣ್ಣನ ಕೃತಿಗಳ ಬಗ್ಗೆ, ಆತ ಯಾರಿರಬಹುದೆಂಬ ಅನುಮಾನಗಳು ಕಾಡುತ್ತಿದ್ದ ಸಮಯದಲ್ಲಿಯೇ ಪ್ರಬುದ್ಧ ಕರ್ಣಾಟಕ ಆತನ ಬಗ್ಗೆ ವಿವರಗಳನ್ನು ಪ್ರಕಟಿಸಿದೆ. ಆದರೆ ಇದಕ್ಕೆ ಪೂರ್ವದಲ್ಲಿಯೇ ಶ್ರೀ ರಾಮಾನುಜಯ್ಯಂಗಾರರು, ಮುದ್ದಣನು, ರಾಮಾಶ್ವಮೇಧ, ಅದ್ಭುತ ರಾಮಾಯಣಗಳನ್ನು ರಚಿಸಿರಬಹುದಾದರೂ ಶ್ರೀ ರಾಮಪಟ್ಟಾಭಿಷೇಕ ಅವನಿಂದ ರಚನೆಗೊಳ್ಳಲು ಸಾಧ್ಯವೇ ಇಲ್ಲ. ಅದರಲ್ಲಿ ಬಳಕೆಯಾಗಿರುವ ಭಾಷೆ ಹಾಗೂ ಶೈಲಿ ಆತನ ರೀತಿಯದ್ದಲ್ಲ ಎಂಬಂತಹ ಸಂದೇಹವನ್ನು ವ್ಯಕ್ತಪಡಿಸಿದ್ದ ಲೇಖನವೂ ಪ್ರಬುದ್ಧ ಕರ್ಣಾಟಕದಲ್ಲಿಯೇ ಪ್ರಕಟವಾಗಿತ್ತು, 'ಕಾಮಶಾಸ್ತ್ರ' ಎಂಬ ಗ್ರಂಥ ಮುದ್ದಣ್ಣನವರಿಂದ ರಚಿತವಾದ ಗ್ರಂಥವೇ ಎಂಬ ವಿಚಾರ ಕುರಿತಂತೆ ಡಾ. ನರಸಿಂಹಾಚಾರ್ಯ ಹಾಗೂ ಗೋವಿಂದ ಪೈಗಳ ನಡುವೆ ನಡೆದ ವಾದ-ವಿವಾದವನ್ನು ಇದು ಪ್ರಕಟಿಸಿದೆ. ಇಂತಹ ಲೇಖನಗಳು ಮುದ್ದಣನಿಂದ ರಚಿತವಾದ ಸಾಹಿತ್ಯದ ಬಗ್ಗೆ ಸ್ಪಷ್ಟವಾದ ನಿಲುವು ತಳೆಯಲು ಸಹಕಾರಿಯಾಗಿದೆ. ಮಲ್ಲಿಕಾರ್ಜುನನ ಮತಗಳ ಕಾಲವಿಚಾರ (೧೫-೪) ಕವಿಕಾಮನು ಯಾರಿರಬಹುದು? (೩೮-೩) ಎಂಬಂತಹ ಬರಹಗಳೂ ಸಾಹಿತ್ಯ ಚರಿತ್ರೆ ಬರೆಯಲು ಹೊರಟವರಿಗೆ ಉಪಯುಕ್ತ ಸಾಮಾಗ್ರಿ ಒದಗಿಸುತ್ತದೆ.

---

೧. ಸಂಪಾದಕೀಯ, ಪ್ರ.ಕ. ಸಂಪುಟ ೨೬, ಸಂಚಿಕೆ ೧, ಪು. ೧೧೮.

ಸೋಮರಾಜನ ಕಾಲಕ್ಕೆ ಸಂಬಂಧಿಸಿದಂತೆ ಗೋವಿಂದ ಪೈಗಳು ಹಾಗೂ ವೆಂಕಟಸುಬ್ಬಯ್ಯನವರ ಅಭಿಪ್ರಾಯಗಳಿಗೆ ಡಾ. ನರಸಿಂಹಾಚಾರ್ಯರು ತೋರಿಸಿದ ವಿರೋಧ, ಇದಕ್ಕೆ ಪ್ರತಿಯಾಗಿ ವೆಂಕಟಸುಬ್ಬಯ್ಯನವರು ಕೊಟ್ಟ ಉತ್ತರ ಆರೋಗ್ಯಕರವಾದ ಚರ್ಚೆಗೆ ಅವಕಾಶವನ್ನು ಹಾಗೂ ಅದು ಎಲ್ಲೆಯನ್ನು ಮೀರಬಹುದೆಂಬ ಶಂಕೆಯುಂಟಾದ ಸ್ವಯಂ ನಿಯಂತ್ರಣವನ್ನು ತೋರಿ ಸತ್ಯಾಸತ್ಯತೆಯನ್ನು ಅರಿಯಲು ಜನರಿಗೆ ಅವಕಾಶವನ್ನು ದೊರಕಿಸಿಕೊಟ್ಟ ಪ್ರಬುದ್ಧ ಕರ್ಣಾಟಕ ತನ್ನ ಇಂತಹ ಕಾರ್ಯಗಳಿಂದ ಸಾಹಿತ್ಯ ಚರಿತ್ರೆಯ ಸೃಷ್ಟಿಗೆ ಖಚಿತತೆಯನ್ನು ಒದಗಿಸಿಕೊಟ್ಟಿದೆ.

ಸಾಹಿತ್ಯ ಚರಿತ್ರೆಯನ್ನು ನಿರ್ಮಾಣ ಮಾಡುವಾಗ ಬರಹಗಾರರಿಗೆ ತಾವು ಹೇಳುವ ವಿಚಾರದಲ್ಲಿ ಖಚಿತತೆ ಇರಬೇಕು. ಬಳಸುವ ಪದಗಳಲ್ಲಾಗಲೀ ಅಥವಾ ತಮ್ಮ ವಾದವನ್ನು ಸ್ಪಷ್ಟೀಕರಿಸಲು ತೆಗೆದುಕೊಳ್ಳುವ ಉದಾಹರಣೆಗಳಲ್ಲಾಗಲೀ ನಿಖರತೆ ಇರಬೇಕು. ಕೇಶೀರಾಜ ಮಲ್ಲಿಕಾರ್ಜುನನ ಮಗನೇ ಅಲ್ಲವೇ ಎಂಬುದನ್ನು ನಿರ್ಧರಿಸಲು ಡಾ. ನರಸಿಂಹಾಚಾರ್ಯರು ಕವಿ ಸುಮನೋ ಬಾಣನ ಜಾಮಾತೃ ಎಂದು ಹೇಳಿಕೊಂಡಿರುವುದನ್ನು ಆಧಾರವಾಗಿ ತೆಗೆದುಕೊಂಡಾಗ ವೆಂಕಟಸುಬ್ಬಯ್ಯ ಅವರಿಂದ ಅದಕ್ಕೆ ವಿರೋಧ ವ್ಯಕ್ತವಾಗುತ್ತದೆ. 'ಜಾಮಾತೃ' ಎಂಬ ಪದ ಆತ ಸುಮನೋಬಾಣನ ಇನ್ನೊಬ್ಬ ಅಳಿಯನ ಮಗ ಎಂಬ ಅರ್ಥವನ್ನು ನೀಡುವ ಸಾಧ್ಯತೆ ಇರುವುದರಿಂದ ಇದಕ್ಕೆ ಬದಲಾಗಿ ಕೇಶೀರಾಜನೇ ಹೇಳಿಕೊಂಡಿರುವ ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನ ಸುತನೆಂ' ಎಂಬ ವಾಕ್ಯವನ್ನು ಪರಿಗಣಿಸಬೇಕು ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಸಾಹಿತ್ಯ ಚರಿತ್ರೆಯ ನಿರ್ಮಾಣದ ಹಂತದಲ್ಲಿ ಪ್ರತಿಯೊಂದು ಅಂಶಗಳು ಸೂಕ್ಷ್ಮವಾಗಿ ಪರೀಕ್ಷೆಗೆ ಒಳಗಾಗುತ್ತಿದ್ದು, ಇಂತಹ ಪರೀಕ್ಷೆಗಳಿಗೆ ಅವಕಾಶವನ್ನು ಕಲ್ಪಿಸಿಕೊಡುವುದರ ಮೂಲಕ ಪ್ರಬುದ್ಧ ಕರ್ಣಾಟಕ ನಿಖರತೆಗೆ ಪ್ರಾಮುಖ್ಯ ನೀಡಿದೆ.

ಹೀಗೆ ಕವಿಗಳ ಕಾಲ ದೇಶ ಕೃತಿಗಳ ಬಗ್ಗೆ ಹಲವಾರು ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸುವುದರ ಮೂಲಕ ಸಾಹಿತ್ಯ ಚರಿತ್ರೆಯ ನಿರ್ಮಾಣಕ್ಕೆ ಸಹಕರಿಸಿದ ಪ್ರಬುದ್ಧ ಕರ್ಣಾಟಕ ಕಾವ್ಯಗಳಲ್ಲಿರುವ ಸ್ವಾರಸ್ಯದ ಭಾಗ, ಕಾವ್ಯಗಳ ವೈಶಿಷ್ಟ್ಯ ಇವುಗಳ ಕಡೆಗೂ ವಾಚಕರ ಗಮನ ಸೆಳೆದಿದೆ. ನಿರ್ದಿಷ್ಟ ಕವಿಯೊಬ್ಬನ ಬದುಕು ಹಾಗೂ ಬರಹಗಳಿಗಾಗಿಯೇ ವಿಶೇಷ ಸಂಚಿಕೆಗಳನ್ನು ಹೊರತಂದಿದೆ. ಮುದ್ದಣನನ್ನು ಕುರಿತಾಗಿ ಪ್ರಬುದ್ಧ ಕರ್ಣಾಟಕ ವಿಶೇಷ ಸಂಚಿಕೆಯೊಂದನ್ನು ಹೊರತಂದಾಗ ಅದು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಹೊಸ ಬಗೆಯ ಹಾದಿಯನ್ನು ತೋರಿಸಿತು. ಕನ್ನಡದಲ್ಲಿ ಈ ಬಗೆಯ ಗ್ರಂಥ ನಿರ್ಮಾಣ ಹೊಸದಾಗಿದ್ದು

ಕವಿಯನ್ನು ಚೆನ್ನಾಗಿ ಬಲ್ಲ ಅವನ ಬಂಧುಮಿತ್ರರು ಆತನ ನಡೆ-ನುಡಿಗಳಲ್ಲಿ ಆದರ್ಶವಾಗಿರುವ ವಿಚಾರಗಳನ್ನು ಇತರರಿಗೆ ತಿಳಿಸಿಕೊಡಲು ಹಾಗೂ ಆತನ ಕಾವ್ಯಗಳನ್ನು ಓದಿದ ವಿದ್ವಾಂಸರು ಅದರಲ್ಲಿರುವ ಗುಣ ಅವಗುಣಗಳನ್ನು ವಿಮರ್ಶಿಸಲು ಗ್ರಂಥಗಳನ್ನು ಪ್ರಕಟಿಸುವುದು ಉಂಟು. ಬೇರೆ ಬೇರೆ ಭಾಷೆಗಳಲ್ಲಿ ಇಂತಹ ಪ್ರಯತ್ನಗಳು ಇದ್ದಿತ್ತಾದರೂ ಕನ್ನಡದಲ್ಲಿ ಈ ಕಾರ್ಯ ಪ್ರಾರಂಭವಾಗಿರಲಿಲ್ಲ. ಪ್ರಬುದ್ಧ ಕರ್ಣಾಟಕ ಈ ಬಗೆಯ ಪ್ರಯತ್ನವನ್ನು ಮಾಡಿತು. ಮುದ್ದಣನ ಬಗ್ಗೆ ವಿಶೇಷ ಸಂಚಿಕೆ ಬಂದ ನಂತರ ಆತನ ಜೀವನ ರಹಸ್ಯ, ಕೃತಿ ಇವುಗಳ ಪರಿಚಯ ಕನ್ನಡಿಗರಿಗಾಯಿತು. ಅಲ್ಪ ಆಯಸ್ಸನ್ನು ಪಡೆದ ಆದರೆ ಉತ್ತಮ ಕಾವ್ಯಗಳನ್ನು ಬರೆದ ಕವಿಯೊಬ್ಬನ ಬಗ್ಗೆ ಜನಗಳು ಚಿಂತಿಸುವಂತಾಯಿತು. ಇಂತಹ ಕಾರ್ಯಗಳು ಅಂದಿನ ಸಾಹಿತ್ಯಲೋಕಕ್ಕೆ ಅಗತ್ಯವಾಗಿದ್ದ ವಿಚಾರವಾಗಿತ್ತು. ಸಾಮಾನ್ಯ ಜನರಿಗೆ ಕವಿಯ ಪರಿಚಯ ಮಾಡಿಕೊಡುವುದರ ಮೂಲಕ ಆತನ ಕಾವ್ಯಗಳಲ್ಲಿ ಅಭಿರುಚಿಹುಟ್ಟುವಂತೆ ಮಾಡುವುದು, ಕವಿಯ ಕಾವ್ಯಗಳನ್ನು ಅಮೂಲಾಗ್ರವಾಗಿ ಓದಲು ವ್ಯವಧಾನವಿಲ್ಲದವರಿಗೆ ಅದರ ಸಂಕ್ಷಿಪ್ತ ಪರಿಚಯ ಮಾಡಿಕೊಡುವುದು, ಅತಿಯಾಗಿ ಪುಸ್ತಕಗಳು ಪ್ರಕಟವಾಗಿ ಜನಗಳ ಕೈ ಸೇರುವಂತಾದಾಗ ಆ ಕೃತಿಗಳ ರಾಶಿಯಲ್ಲಿ ಉತ್ತಮವಾದ ಕೃತಿಗಳ ಸ್ವಾರಸ್ಯಾಂಶಗಳನ್ನು ಸಂಗ್ರಹಿಸಿ ಜನಗಳಿಗೆ ನೀಡುವುದು ಇನ್ನೂ ಕೆಲವು ಬಾರಿ ಓದುಗನ ಪಾಂಡಿತ್ಯವನ್ನು ಮೀರಿದ ಪ್ರೌಢಗ್ರಂಥಗಳನ್ನು ಅರ್ಥಮಾಡಿಸುವ ಸಲುವಾಗಿಯಾದರೂ ಇಂತಹ ಕಾರ್ಯಗಳು ಆಗಬೇಕಾಗುತ್ತದೆ. ಪ್ರಬುದ್ಧ ಕರ್ಣಾಟಕ ಈ ಎಲ್ಲಾ ಅಂಶಗಳನ್ನು ತನ್ನ ಗಮನದಲ್ಲಿರಿಸಿಕೊಂಡು ಮಾಡಿದ ಸಾಹಿತ್ಯಸೇವೆ ಗಮನಾರ್ಹವಾದದ್ದು. ಹಾಗಾಗಿಯೇ ಅದು ಹಲವಾರು ಕಾವ್ಯಗಳಲ್ಲಿರುವ ಉತ್ತಮಾಂಶಗಳನ್ನು ತನ್ನ ವಾಚಕರಿಗೆ ತಲುಪಿಸುವ ಪ್ರಯತ್ನ ಮಾಡಿದೆ. ಅದರ ವ್ಯಾಪ್ತಿಯ ಒಳಗೆ ಬರದೇ ಇರುವ ಪ್ರಾಚೀನ ಕವಿಗಳೇ ವಿರಳ. ಪಂಪ ರನ್ನ ಕುಮಾರವ್ಯಾಸ ಪೊನ್ನರಂತಹ ಪ್ರಮುಖ ಕವಿಗಳು, ಜೇಡರ ದಾಸಿಮಯ್ಯ, ಬಸವಣ್ಣ, ಅಕ್ಕಮಹಾದೇವಿಯಂತಹ ವಚನಕಾರರು, ಸಂಚಿಯ ಹೊನ್ನಮ್ಮ, ಷಡಕ್ಷರಿ, ಸರ್ವಜ್ಞ, ಕನಕದಾಸ, ಪುರಂದರದಾಸರಂತಹ ಜನಪ್ರಿಯ ಕವಿಗಳು ಹೀಗೆ ಹಲವಾರು ಮಂದಿ. ಇವರುಗಳ ಬದುಕಿನ ವಿವರಗಳ ಕಡೆಗೂ ಅಲ್ಲಲ್ಲಿ ಗಮನಹರಿಸಿರುವ ಪ್ರಬುದ್ಧ ಕರ್ಣಾಟಕ ಅವರ ಕಾವ್ಯಗಳಲ್ಲಿರುವ ಉತ್ತಮಾಂಶಗಳನ್ನು ಪರಿಚಯಿಸಿಕೊಟ್ಟಿದೆ. 'ದ್ರೌಪದಿಯ ಶ್ರೀಮುಡಿ', 'ಪಂಪನ ಕರ್ಣ' (೨೩-೪) ಪಂಪನಲ್ಲಿ ಭವ್ಯತೆ (೨೩-೪) ಕವಿ ಹರಿಹರದೇವನ ಪರವೆನಾಚಿ (೩೪-೧) ಕರ್ಣನ ವಿನಯಶ್ರೀ(೩೦-೨)ದಂತಹ ಬರಹಗಳ ತಲೆಬರಹಗಳೇ ಆಕರ್ಷಣೀಯವಾಗಿದ್ದು ಸಾಮಾನ್ಯರ ಗಮನಸೆಳೆಯಲು ಶಕ್ತವಾಗಿವೆ.

ಈ ರೀತಿಯಾಗಿ ಹಲವಾರು ಕವಿಗಳ ಕಾವ್ಯಗಳಲ್ಲಿರುವ ವೈಶಿಷ್ಟ್ಯವನ್ನು ತಿಳಿಸಿಕೊಡುವ ಪ್ರಯತ್ನ ಮಾಡಿರುವಂತೆಯೇ ಹಲವಾರು ಕವಿಗಳ ವೈಶಿಷ್ಟ್ಯಗಳ ಕಡೆ ಅವರ ಶೈಲಿಯ ಕಡೆ ಓದುಗರ ಗಮನಸೆಳೆಯಲು ಪ್ರಯತ್ನಿಸಿದೆ. ಅಷ್ಟೇ ಅಲ್ಲದೆ ಕನ್ನಡ ಸಾಹಿತ್ಯಕ ಚರಿತ್ರೆಯಲ್ಲಿ ಅವರುಗಳ ಸ್ಥಾನ ಎಲ್ಲಿದೆ ಎಂಬಂತಹ ಅಂಶಗಳ ಬಗ್ಗೆಯೂ ಚರ್ಚೆ ನಡೆಸಿದೆ. ತನ್ನ ಆರಂಭದ ಸಂಚಿಕೆಗಳಿಂದಲೇ ಇಂತಹ ವಿಷಯಗಳಿಗೆ ಆದ್ಯತೆ ನೀಡಿದ ಪ್ರಬುದ್ಧ ಕರ್ಣಾಟಕದಲ್ಲಿ ಷಡಕ್ಷರಿಯ ಶೈಲಿ, ಹರಿಹರನ ಶೈಲಿ ಇಂತಹ ಅನೇಕ ವಿಷಯಗಳು ಪ್ರಕಟವಾಗಿವೆ. ಷಡಕ್ಷರಿಯ ಶೈಲಿ ಕುರಿತಂತೆ ಎಂ.ಆರ್.ಶ್ರೀನಿವಾಸಮೂರ್ತಿಗಳು ಆಡಿರುವ ಮಾತುಗಳು ನೇರವಾಗಿದ್ದು ಆತನ ನಿಜವಾದ ಅರ್ಹತೆ ಏನು ಎಂಬುದನ್ನು ತಿಳಿಸಿಕೊಡುವುದರಲ್ಲಿ ಯಶಸ್ವಿಯಾಗಿವೆ. ಷಡಕ್ಷರಿಯನ್ನು ಕುರಿತಂತೆ "ಷಡಕ್ಷರಿಗೆ ಸಹಜವಾಗಿರುವ ಶೈಲಿಯ ಅಂಶಗಳು ಯಾವುದೆಂದರೆ - ಚಿತ್ರ ಬರೆಯತಕ್ಕವನು ಯಾವುದಾದರೊಂದು ವಸ್ತುವಿನ ಸ್ವರೂಪವನ್ನು ಕೆಲವು ಸೀಮಾರೇಖೆಗಳಿಂದ ಹೇಗೆ ಸ್ಪಷ್ಟಗೊಳಿಸುವನೋ ಹಾಗೆಯೇ ಕೆಲವು ಪದಗಳಿಂದ ಪ್ರಕೃತಿಯ ಸಂಪೂರ್ಣ ಚಿತ್ರವನ್ನು ನಮ್ಮ ಮುಂದಿಡುವುದು - ಇಲ್ಲಿ ಉಪಯೋಗಿಸುವ ಪದಗಳು ದೀರ್ಘ ಸಮಾಸಗಳಿಂದ ಕೂಡಿರುವುದಿಲ್ಲ. ಆಡಂಬರದಿಂದ ಮೆರೆಯುವುದಲ್ಲ"[೧] ಎಂಬ ಅಭಿಪ್ರಾಯ ಕವಿಯೊಬ್ಬನ ಶೈಲಿ ಕುರಿತಂತೆ ಯಾವ ಯಾವ ಅಂಶಗಳನ್ನು ಗಮನಿಸಬಹುದು ಎಂಬುದರ ಬಗ್ಗೆ ಮಾರ್ಗದರ್ಶನ ನೀಡಿದೆ. ಕನ್ನಡ ಕಾವ್ಯಗಳನ್ನು ಓದುವುದೇ ದುರ್ಲಭವಾಗಿದ್ದ ಆ ಕಾಲದಲ್ಲಿ ಬಂದಂತಹ ಇಂತಹ ಲೇಖನಗಳು ನಮ್ಮ ಕವಿಯ ಬಗ್ಗೆ ಹೆಮ್ಮೆ ತಳೆಯಲು ಅವಕಾಶ ಮಾಡಿಕೊಟ್ಟಿದೆ. ಇದೇ ರೀತಿಯಲ್ಲಿ ಎಂ.ಆರ್.ಶ್ರೀ ಅವರೇ ಹರಿಹರ ಶೈಲಿ ಕುರಿತಂತೆ ಬರೆದ ಲೇಖನವೂ ಜನರ ಗಮನಸೆಳೆಯಲು ಯಶಸ್ವಿಯಾದರೂ ಈ ಲೇಖನದಲ್ಲಿ ಪ್ರಕಟವಾಗಿರುವ ಕೆಲವು ಅಂಶಗಳ ಬಗ್ಗೆ ಕೆಲವು ಆಕ್ಷೇಪಣೆಗಳು ಉಂಟಾಗಬಹುದು ಎಂಬ ಅನುಮಾನ ಬಂದಾಗ ಪ್ರಬುದ್ಧ ಕರ್ಣಾಟಕ ಅದನ್ನು ನಿವಾರಿಸಲು ಯತ್ನಿಸಿದೆ. ಕರ್ನಾಟಕ ಸಾಹಿತ್ಯದಲ್ಲಿ ಷಡಕ್ಷರಿಯ ಸ್ಥಾನ ನಿರ್ದೇಶನ(೪/೧) ಹರಿಹರನ ಸ್ಥಾನನಿರ್ದೇಶನ (೩/೧) ಎಂಬಂತಹ ಹತ್ತಾರು ಲೇಖನಗಳನ್ನು ಪ್ರಕಟಿಸಿದೆ. ಅದರ ಮೂಲಕ ಕವಿಗಳು ಸಾಹಿತ್ಯ ಚರಿತ್ರೆಯಲ್ಲಿ ಪಡೆಯುವ ಸ್ಥಾನವೇನು ಎಂಬುದನ್ನು ಗುರುತಿಸುವ ಕಾರ್ಯವನ್ನು ಮಾಡಿದೆ. ಷಡಕ್ಷರಿಯ ಸ್ಥಾನದ ನಿರ್ದೇಶನವನ್ನು ಮಾಡುತ್ತಾ ಎಂ.ಆರ್.ಶ್ರೀ.ಅವರು "ಷಡಕ್ಷರಿಯಲ್ಲಿ ಕವಿತಾ ಶಕ್ತಿಗಿಂತಲೂ ಕವಿತಾ ಚಾತುರ್ಯ ಹೆಚ್ಚಾಗಿರುತ್ತದೆ. ಈತ ಲೀಲಾವತಿಯ ಕರ್ತೃ ನೇಮಿಚಂದ್ರನನ್ನು ಮೀರಿಸಬಲ್ಲವನು. ಆತನಿಗಿಂತ ಎತ್ತರದ

೧. ಎಂ.ಆರ್.ಶ್ರೀನಿವಾಸಮೂರ್ತಿ, ಪ್ರ.ಕ. ಸಂಪುಟ ೨, ಸಂಚಿಕೆ ೨, ಪು. ೫೫.

ಸ್ಥಾನ ಪಡೆಯಲು ಅರ್ಹನು ಏಕೆಂದರೆ ನೇಮಿಚಂದ್ರನಲ್ಲಿ ರಸಸೂತ್ರ ಗ್ರಹಣ ಶಕ್ತಿ ಷಡಕ್ಷರಿಯಲ್ಲಿರುವುದಕ್ಕಿಂತ ಕಡಿಮೆಯಾಗಿರುವುದರಿಂದ ಅವನು ಷಡಕ್ಷರಿಗೆ ಸ್ಥಾನಬಿಟ್ಟುಕೊಟ್ಟಿದ್ದಾನೆ[೧] ಎಂಬ ಈ ವಿಮರ್ಶೆಯನ್ನು ಗಮನಿಸಿದಾಗ ಕವಿಯ ಸ್ಥಾನ ನಿರ್ದೇಶಿಸುವಾಗ ಆತನಿಗೆ ಇರುವ ಅರ್ಹತೆಯೇನು ಇನ್ನೊಬ್ಬ ಕವಿಯ ಸ್ಥಾನಕ್ಕಿಂತ ಮೇಲೇರಿಸಲು ನಿರ್ಧರಿಸುತ್ತಿದ್ದ ಮಾನದಂಡ ಯಾವುದಾಗಿತ್ತು ಎಂಬ ವಿಷಯಗಳು ಗಮನಸೆಳೆಯುತ್ತದೆ. ನಂತರದ ದಿನಗಳಲ್ಲಿ ಕವಿಗಳ ಸ್ಥಾನವನ್ನು ನಿರ್ದೇಶಿಸಲು ಆರಂಭದಲ್ಲಿ ಬಂದ ಇಂತಹ ಲೇಖನಗಳು ತುಂಬಾ ಸಹಕಾರಿಯಾಗಿವೆ.

ಹೀಗೆ ಪ್ರಬುದ್ಧ ಕರ್ಣಾಟಕವು ಸಾಹಿತ್ಯ ಚರಿತ್ರೆಯ ನಿರ್ಮಾಣದಲ್ಲಿ ಹಳೆಗನ್ನಡ ಕವಿಗಳ ಕಾಲ, ಕೃತಿ, ಧರ್ಮ, ದೇಶ ಇವುಗಳನ್ನು ಖಚಿತಪಡಿಸುವ ಸಂದರ್ಭದಲ್ಲಿ ತೋರಿದ ಮಾರ್ಗದರ್ಶನ ಗಮನಾರ್ಹವಾದದ್ದು. ಇದೇ ಸಂದರ್ಭದಲ್ಲಿಯೇ ಹೊಸಗನ್ನಡ ಸಾಹಿತ್ಯದ ಪ್ರಖ್ಯಾತರಾದ, ಪ್ರಖ್ಯಾತರಲ್ಲದ ಹಲವಾರು ಕವಿಗಳ ಮರಣದ ಸಂದರ್ಭದಲ್ಲಿ, ವಿಶೇಷವಾದ ಕಾರ್ಯಗಳು ಘಟಿಸಿದ ಸಂದರ್ಭಗಳಲ್ಲಿ ಪ್ರಬುದ್ಧ ಕರ್ಣಾಟಕ ತನ್ನ ವಸ್ತುಕೋಶಗಳಲ್ಲಿ ಸಂಪಾದಕೀಯಗಳಲ್ಲಿ ಅವರ ಬಗ್ಗೆ ಮಾಹಿತಿಗಳನ್ನು ಪ್ರಕಟಿಸಿದೆ. ಅವರಲ್ಲಿದ್ದ ವಿಶೇಷವನ್ನು ಗುರುತಿಸಿ ತನ್ನ ವಾಚಕರಿಗೆ ನೀಡಿದೆ. ಹೊಸಗನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣದ ಸಂದರ್ಭದಲ್ಲಿ ಇಲ್ಲಿ ಪ್ರಕಟಗೊಂಡಿರುವ ಬರಹಗಳು ಉತ್ತಮವಾದ ಮಾಹಿತಿಯನ್ನು ಒದಗಿಸಲು ಸಮರ್ಥವಾಗಿದೆ.

**ಸಾಹಿತಿಗಳಿಗೆ ಪ್ರೋತ್ಸಾಹ**

ಕವಿಯು ಸಾಹಿತ್ಯವನ್ನು ರಚಿಸುವವನಾದರೂ ಅದಕ್ಕೆ ಸಹೃದಯರ ಪ್ರೋತ್ಸಾಹ ಅಗತ್ಯ. ಅದು ಕವಿಗೆ ಸ್ಫೂರ್ತಿಯನ್ನು ಒದಗಿಸುತ್ತದೆ. ಆದರೆ ಇಂತಹ ಸ್ಫೂರ್ತಿಯಿಂದಷ್ಟೇ ಕವಿಯ ವೈಯಕ್ತಿಕ ಬದುಕಿನ ಬೇಕು-ಬೇಡಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಿಲ್ಲ. ಆತನ ಬರವಣಿಗೆಯನ್ನು ಪ್ರೋತ್ಸಾಹಿಸಲು ಆರ್ಥಿಕ ರೂಪದ ಸಹಾಯ ಆತನಿಗೆ ಹೊಸಚೇತನವನ್ನು ಒದಗಿಸುತ್ತದೆ. ಸಾಹಿತ್ಯವನ್ನೇ ನಂಬಿ ಜೀವನ ನಡೆಸುವವರಿಗಂತೂ ಇದು ಅತ್ಯವಶ್ಯಕ. ಪ್ರಬುದ್ಧ ಕರ್ಣಾಟಕ ಈ ನಿಟ್ಟಿನಲ್ಲಿ ಹಲವಾರು ರೀತಿಯ ಬಹುಮಾನಗಳನ್ನು ಪ್ರಕಟಿಸಿ ಸಾಹಿತಿಗಳ ಗಮನಸೆಳೆದು ಸಾಹಿತ್ಯ ರಚನೆಗೆ ಪ್ರೋತ್ಸಾಹವನ್ನು ನೀಡಿದೆ. ನಾಡಿನ ಉಳಿದೆಡೆಯಲ್ಲಿ ಇಂತಹ ಕಾರ್ಯಗಳು ನಡೆದಲ್ಲಿ ಅದನ್ನು ಗುರುತಿಸಿ ಪ್ರಚಾರ ನೀಡಿದೆ.

---

೧. ಎಂ.ಆರ್.ಶ್ರೀನಿವಾಸಮೂರ್ತಿ, ಪ್ರ.ಕ. ಸಂಪುಟ ೪, ಸಂಚಿಕೆ ೧, ಪು.

ಅನಂತಪುರದ ಸರಸ್ವತೀ ಕೇತನದವರು ಉತ್ತಮ ಕನ್ನಡ ಕಾದಂಬರಿಗೆ ಮತ್ತು ಕವಿತೆಯ ಪುಸ್ತಕಕ್ಕೆ ೨೫೦ ರೂ.ಗಳ ಎರಡು ಬಹುಮಾನಗಳನ್ನು ಘೋಷಿಸಿದಾಗ ಸಂಪಾದಕರು ಅದನ್ನು ಶ್ಲಾಘಿಸಿದ್ದಾರೆ. ಅದರಲ್ಲೂ ಅವರು ಬಹುಮಾನ ಕೊಡಲು ನಿಗದಿಪಡಿಸಿರುವ ಮಾನದಂಡ ಕನ್ನಡ ಪರವಾಗಿರುವುದನ್ನು ಗುರುತಿಸಿದ್ದಾರೆ. ಉತ್ತಮ ಕಾದಂಬರಿ ಸ್ಪರ್ಧೆಗೆ ಕಳುಹಿಸುವ ಕಾದಂಬರಿ "ಕನ್ನಡ ಇತಿಹಾಸಕ್ಕೆ ಸಂಬಂಧಿಸಿರಬೇಕು ಕನ್ನಡದ ಊರು ದುರ್ಗ ನದಿಗಳಿಂದ ತುಂಬಿರಬೇಕು. ಕಾದಂಬರಿಯು ಮುಖ್ಯವಾಗಿ ಕರ್ನಾಟಕದವರದೇ ಆಗಿರಬೇಕು.[1] ಎಂದು ಹೇಳಿರುವುದನ್ನು ಸಂಪಾದಕರು ಪ್ರಶಂಶಿಸಿ ಅದು ನಾಡಿನ ಉಳಿದ ಕಡೆಯಲ್ಲೂ ನಡೆಯಬೇಕು ಎಂದು ಆಶಿಸಿದ್ದಾರೆ.

ಪ್ರಬುದ್ಧ ಕರ್ಣಾಟಕದ ಮಾತೃಸಂಸ್ಥೆಯಾದ ಕರ್ಣಾಟಕ ಸಂಘವು ಸಣ್ಣಕಥೆಗಳ ಸ್ಪರ್ಧೆಯನ್ನು ಏರ್ಪಡಿಸಿ ಇದರಲ್ಲಿ ವಿಜೇತರಾದವರಿಗೆ ಸ್ವರ್ಣಪದಕವನ್ನು ನೀಡುತ್ತಿತ್ತು. ಈ ಸ್ವರ್ಣಪದಕವನ್ನು ಆರಂಭದ ದಿನಗಳಲ್ಲಿ ಎ.ಕೃಷ್ಣಸ್ವಾಮಯ್ಯಂಗಾರರು ಮಾಡಿಸಿ ಕೊಡುತ್ತಿದ್ದರು. ಪ್ರಭವ ಸಂವತ್ಸರದ ಸಂಪಾದಕೀಯದಲ್ಲಿ ಇದನ್ನು ಪ್ರಸ್ತಾಪಿಸಿರುವ ಸಂಪಾದಕರು ಅವರು ತಾವಾಗಿಯೇ ಸ್ವರ್ಣಪದಕ ನೀಡುವುದಕ್ಕೆ ಮುಂದೆ ಬಂದಿರುವುದನ್ನು ಕುರಿತು "ಕೊಟ್ಟವರು ಕೊಂಡವರು ಇಬ್ಬರೂ ಇದರಿಂದ ಧನ್ಯರು. ಕನ್ನಡ ಸಾಹಿತ್ಯಾಭಿಮಾನಿಗಳ ಪರವಾಗಿ ಮಾ ಕೃಷ್ಣಸ್ವಾಮಯ್ಯಂಗಾರರನ್ನು ಕೃತಜ್ಞತೆಯಿಂದ ವಂದಿಸುತ್ತದೆ"[2] ಎಂದಿದ್ದಾರೆ. ಸಣ್ಣಕಥೆಗಳ ಮೂಲಕ ಕನ್ನಡ ಸಾಹಿತ್ಯ ಕಣಜವನ್ನು ತುಂಬಿದ ಸಾಹಿತಿಗಳು, ಉತ್ತೇಜನ ನೀಡಿದ ಪ್ರಬುದ್ಧ ಕರ್ನಾಟಕದ ಕಾರ್ಯ ಗಮನಾರ್ಹವಾದದ್ದು. ಹೀಗೆ ಪರಸ್ಪರ ಪೂರಕವಾಗಿ ಸಹಕರಿಸಿ ಬೆಳೆದ ಬಗೆ ಅನನ್ಯವಾದದ್ದು. ಇದೇ ಮಾತುಗಳು ಬಿ.ಎಂ.ಶ್ರೀ. ಅವರು ನೀಡಿದ ಶ್ರೀ ರಜತೋತ್ಸವ ಸ್ವರ್ಣ ಪದಕಕ್ಕೂ ಅನ್ವಯವಾಗುತ್ತದೆ.

ಬಿ.ಎಂ.ಶ್ರೀ ಅವರು ಕಾವ್ಯವನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಅವರು ವಿಶ್ವವಿದ್ಯಾನಿಲಯಕ್ಕೆ ಒಂದು ಸಾವಿರ ರೂ.ಗಳ ದತ್ತಿಯನ್ನು ನೀಡಿದರು. ದತ್ತಿ ಹಣದ ಬಡ್ಡಿಯನ್ನು ಬಳಸಿ ಅಂದಿನ ಮಹಾರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಅಧಿಕಾರ ವಹಿಸಿಕೊಂಡು ಇಪ್ಪತ್ತೈದು ವರ್ಷಗಳು ತುಂಬಿದ ನೆನಪಾಗಿ ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಂದ ರಚಿತವಾದ ಕನ್ನಡದ ಅತ್ಯುತ್ತಮ ನೀಳ್ಗವಿತೆಗೆ ಪ್ರತಿವರ್ಷ ಒಂದು ಬಂಗಾರದ ಪದಕವನ್ನು ನೀಡಲು ವ್ಯವಸ್ಥೆ ಮಾಡಿದರು. ಪ್ರಬುದ್ಧ ಕರ್ಣಾಟಕ ಅದಕ್ಕೆ ಶ್ರೀ ರಜತೋತ್ಸವ ಸ್ವರ್ಣ ಪದಕವೆಂದು

---

೧. ವಸ್ತುಕೋಶ, ಪ್ರ.ಕ. ಸಂಪುಟ ೫, ಸಂಚಿಕೆ ೧, ಪು. ೭
೨. ವಸ್ತುಕೋಶ, ಪ್ರ.ಕ. ಸಂಪುಟ , ಸಂಚಿಕೆ , ಪು.

ಹೆಸರಿಟ್ಟಿತು.[೧] ಈ ಸ್ಪರ್ಧೆಯಲ್ಲಿ ಭಾಗವಹಿಸುವ ಕವಿಗಳಿಗೆ ಕೆಲವು ನಿಬಂಧನೆಗಳನ್ನು ಹಾಕಲಾಗಿತ್ತು. ಆ ನಿಬಂಧನೆಗಳನ್ನು ಗಮನಿಸಿದರೆ ಅದು ಕನ್ನಡ ಸಾಹಿತ್ಯದ ಬೆಳವಣಿಗೆಗೆ ಹೇಗೆ ಪ್ರೋತ್ಸಾಹದಾಯಕವಾಗಿದೆ ಎಂಬುದು ಮನವರಿಕೆಯಾಗುತ್ತದೆ. ಸ್ಪರ್ಧಿಗಳು ಪದವಿ ಅಥವಾ ಸ್ನಾತಕೋತ್ತರ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರಬೇಕು ಪದ್ಯ ರಚನೆ ಶುದ್ಧ ಕನ್ನಡ ಛಂದಸ್ಸಿನಲ್ಲಿರಬೇಕು. ರಚನೆಯನ್ನು ಗ್ರಹಿಸಲು ಸುಲಭವಾದ ಆಧುನಿಕ ಕನ್ನಡ ಶೈಲಿಯಲ್ಲಿರಬೇಕು. ಪದ್ಯ ಸ್ವಂತ ರಚನೆಯಾಗಿರ-ಬೇಕು. ಇಂಗ್ಲಿಷ್ ಅಥವಾ ಗ್ರೀಕ್ ಕಾವ್ಯ ಪುರಾಣಗಳ ಭಾಷಾಂತರವಾಗಿರಬಹುದು. ಒಂದು ಬಾರಿ ಪ್ರಶಸ್ತಿ ಪಡೆದವರು ಇನ್ನೊಮ್ಮೆ ಸ್ಪರ್ಧಿಸುವಂತಿಲ್ಲ ಎಂಬ ನಿಬಂಧನೆಗಳನ್ನು ಹಾಕಲಾಗಿದ್ದು ಈ ನಿಬಂಧನೆಗಳು ಕನ್ನಡ ಸಾಹಿತ್ಯದ ಏಳಿಗೆಯನ್ನು ಗುರಿಯಾಗಿರಿಸಿಕೊಂಡಿರುವುದನ್ನು ಗಮನಿಸಬಹುದು. ಶ್ರೀ ರಜತೋತ್ಸವ ಸ್ವರ್ಣಪದಕವನ್ನು ಮೊದಲು ಪಡೆದವರು ಕೆ.ವಿ.ಪುಟ್ಟಪ್ಪ. ಈ ಸ್ವರ್ಣಪದಕವನ್ನು ಕುರಿತಂತೆ ಹಾ.ಮಾ.ನಾಯಕ್ ಅವರು ಗುರುತಿಸುವ ಹಾಗೆ "ಒಂದು ಕಾಲದಲ್ಲಿ ಶ್ರೀ ರಜತೋತ್ಸವ ಸ್ವರ್ಣಪದಕ ಪಡೆಯುವುದು ಮೈಸೂರು ವಿಶ್ವವಿದ್ಯಾನಿಲಯದ ಬಹುಪಾಲು ಸಾಹಿತ್ಯಾಸಕ್ತಿಯ ವಿದ್ಯಾರ್ಥಿಗಳ ಒಂದು ಕನಸಾಗಿತ್ತು.[೨] ಇದೇ ರೀತಿಯಲ್ಲಿ ತೀ.ನಂ.ಶ್ರೀಕಂಠಯ್ಯನವರೂ ಕೂಡ ತಮ್ಮ ಪ್ರೀತಿಯ ಮಗಳ ಜ್ಞಾಪಕಾರ್ಥವಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿನಿಯರ ಕನ್ನಡ ರಚನಾ ಶಕ್ತಿಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ೨೫೦ ರೂ.ಗಳ ಬಹುಮಾನವನ್ನು ಘೋಷಿಸಿರುವುದನ್ನು ಪ್ರಬುದ್ಧ ಕರ್ಣಾಟಕ ಪ್ರಶಂಸಿದೆ. ಪ್ರೌಢ ವ್ಯಾಸಂಗ ಮಾಡುತ್ತಿರುವ ಹೆಣ್ಣುಮಕ್ಕಳ ರಚನಾಶಕ್ತಿಯನ್ನು ಬೆಳೆಸುವುದಕ್ಕೆ ಪ್ರೋತ್ಸಾಹ ನೀಡಿದ ಇಂತಹ ಕಾರ್ಯಗಳು, ಸಾಮರ್ಥ್ಯವಿರುವ ಕನ್ನಡಿಗರಿಂದ ನಡೆಯಬೇಕು ಎಂಬ ಪ್ರಚೋದನೆಯನ್ನು ನೀಡಿದೆ.

**ಬರಹಗಾರರಿಗೆ ಪ್ರೋತ್ಸಾಹ**

ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡಿದ್ದೇ ಅರ್ಹತೆ ಇರುವ ತರುಣರನ್ನು ಪ್ರೋತ್ಸಾಹಿಸಿ ಅವರಿಂದ ಕನ್ನಡ ಸೇವೆಯನ್ನು ಮಾಡಿಸಬೇಕು ಎಂಬ ಉದ್ದೇಶದಿಂದ. ಪ್ರತಿಭಾವಂತ ವಿದ್ಯಾರ್ಥಿಗಳಲ್ಲಿದ್ದ ಸಾಹಿತ್ಯ ಶಕ್ತಿ ಹಾಳಾಗಬಾರದೆಂಬ ದೃಷ್ಟಿಯಿಂದ ಪ್ರಾರಂಭಗೊಂಡ ಈ ಪತ್ರಿಕೆಯ ಮೂಲಕ ಸಾಹಿತ್ಯಲೋಕಕ್ಕೆ ಪರಿಚಯಗೊಂಡವರು ನೂರಾರು ಮಂದಿ – ಕೆಲವರು ಪ್ರಬುದ್ಧ ಕರ್ಣಾಟಕ ಒದಗಿಸಿಕೊಟ್ಟ ವೇದಿಕೆಯನ್ನು

---

೧. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ಇವರು ಈ ಸ್ಪರ್ಧೆಯಲ್ಲಿ ಗೆದ್ದ ಕವನಗಳನ್ನು ಸೇರಿಸಿ ಶ್ರೀಕಂಠಿಕೆ ಎಂಬ ಗ್ರಂಥವನ್ನು ಹೊರತಂದಿದ್ದಾರೆ.

೨. ಹಾ.ಮಾ.ನಾಯಕ, ಶ್ರೀಕಂಠಿಕೆ, ೧೯೮೪, ಪು. ೬

ಸಮರ್ಪಕವಾಗಿ ಉಪಯೋಗಿಸಿಕೊಂಡು ಬೆಳಕಿಗೆ ಬಂದರಾದರೂ ತಮ್ಮಲ್ಲಿದ್ದ ಪ್ರತಿಭೆಯನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ನೇಪಥ್ಯಕ್ಕೆ ಸರಿದವರೂ ಹಲವಾರು ಮಂದಿ. ಪ್ರಬುದ್ಧ ಕರ್ಣಾಟಕದ ಸಂಪಾದಕರು ಪರಿಶ್ರಮಪಟ್ಟು ಹೊಸ ಬರಹಗಾರರನ್ನು ತಿದ್ದಿ ತೀಡಿ ಅವರ ಬರಹಗಳಿಗೆ ಮಾರ್ಗದರ್ಶನ ನೀಡಿದರು. ಬಿ.ಪಿ.ರಾಧಾಕೃಷ್ಣ ಅವರು ತಾವು 'ಕನ್ನಡ ನಾಡಿನ ಚಿನ್ನದ ಗಣಿಗಳು' ಎಂಬ ಲೇಖನವನ್ನು ಪ್ರಕಟಣೆಗೆಂದು ಪ್ರಬುದ್ಧ ಕರ್ಣಾಟಕಕ್ಕೆ ಕಳುಹಿಸಿ ಕೊಟ್ಟ ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ. ಸಂಪಾದಕರಾಗಿದ್ದ ವಿ.ಸಿ ಅವರಿಂದ ದೊರೆತ ಪ್ರೋತ್ಸಾಹದಿಂದ ಪ್ರಬುದ್ಧ ಕರ್ಣಾಟಕದ ಬರಹಗಾರರ ಪಂಕ್ತಿಯಲ್ಲಿ ತಾವು ಸೇರಿದ ಬಗ್ಗೆ ಹೆಮ್ಮೆಪಟ್ಟುಕೊಂಡಿದ್ದಾರೆ.

ಹೊಸದಾಗಿ ಸಾಹಿತ್ಯ ಲೋಕಕ್ಕೆ ಪ್ರವೇಶಿಸುವವರಷ್ಟೇ ಅಲ್ಲದೆ ಈಗಾಗಲೇ ಸಾಹಿತ್ಯ ಲೋಕದಲ್ಲಿ ಗುರುತಿಸಿಕೊಂಡಿರುವವರಲ್ಲಿ ಲೋಪದೋಷಗಳು ಗೋಚರಿಸಿದರೆ ಅದನ್ನು ತಿದ್ದಿ ಬೆನ್ನುತಟ್ಟಿ ಪ್ರೋತ್ಸಾಹಿಸುತ್ತಿದ್ದುದೂ ಉಂಟು. ನಂಜನಗೂಡು ತಿರುಮಲಾಂಬಾ ಅವರು ಹಲವಾರು ಕೃತಿಗಳನ್ನು ರಚಿಸಿದ್ದರಾದರೂ ಅವರ ಶಕ್ತಿ ಸರಿಯಾಗಿ ವಿನಿಯೋಗವಾಗದೆ ವ್ಯರ್ಥವಾಗುವುದನ್ನು ಕಂಡು ಅದನ್ನು ತಿದ್ದಿ ಅವರನ್ನು ಹುರಿದುಂಬಿಸುವ ಯತ್ನ ಎಂ.ಆರ್.ಶ್ರೀನಿವಾಸಮೂರ್ತಿಗಳ ವಿಮರ್ಶೆಯಲ್ಲಿದೆ. ನಂಜನಗೂಡು ತಿರುಮಲಾಂಬಾ ಅವರ "ನಿಶಾಕಾಂತ" ಕಾದಂಬರಿಯ ಬಗ್ಗೆ ವಿಮರ್ಶಿಸುತ್ತಾ "ಆ ಉತ್ಸಾಹವನ್ನು ಆ ಶಕ್ತಿಯನ್ನು ಬಂದಂತೆಲ್ಲಾ ಉಪಯೋಗಿಸದೆ ಸಮಯಾನುಸಾರ ತಗ್ಗಿಸಿಕೊಂಡು ಹೆಚ್ಚಿಸಿಕೊಂಡು ಸರಸ್ವತಿಯು ಓಡಿಸುವ ಲೇಖಕನಿಗೆ ವಿವೇಚನಾ ಬುದ್ದಿ ಬಲವನ್ನು ಹೇರಿದುದೇ ಆದರೆ ಆಧುನಿಕ ಕರ್ನಾಟಕ ಸಾರ್ಥಕವಾಗುವುದು. ನಾವು ನೋಡಿರುವುದರಲ್ಲಿ ಗ್ರಂಥ ಕರ್ತ್ರಿಯವರಿಗೆ ಈ ಕಾರ್ಯ ಅಸಾಧ್ಯವಾದುದೇನೂ ಅಲ್ಲ"[೧] ಎಂಬುದು ಎಂ.ಆರ್. ಶ್ರೀನಿವಾಸಮೂರ್ತಿಗಳು ಪ್ರೋತ್ಸಾಹ ನೀಡಿರುವ ರೀತಿ. ಮಹಿಳಾ ಬರಹಗಾರ್ತಿಯರಿಗೆ ಹೆಚ್ಚಿನ ಸ್ಥಾನಮಾನ ದೊರಕುತ್ತಿಲ್ಲ. ಅವರು ಬರೆದ ಸಾಹಿತ್ಯಕ್ಕೆ ವಿಮರ್ಶಕರಿಂದ ಮಾನ್ಯತೆ ದೊರೆಯುವುದಿಲ್ಲ ಎಂಬಂತಹ ಭಾವನೆ ಇದ್ದ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದಂತಹ ಸಾಹಿತ್ಯ ಪತ್ರಿಕೆ ಅವರನ್ನು ಗುರುತಿಸಿದೆ ಮತ್ತು ಪ್ರೋತ್ಸಾಹ ನೀಡಿದೆ. ಇಂತಹ ಪ್ರೋತ್ಸಾಹಗಳೇ ನಂತರದ ದಿನಗಳಲ್ಲಿ ಅವರ ಏಳಿಗೆಗೆ ಸಹಕಾರಿಯಾಗುತ್ತದೆ.

---

೧. ಕಾವ್ಯಾವಲೋಕನ. ಪ್ರಕ. ಸಂಪುಟ ೪. ಸಂಚಿಕೆ ೨. ಪು. ೧೦.

ಮಹಾರಾಜಾ ಕಾಲೇಜಿನಲ್ಲಿ ಕುಮಾರವ್ಯಾಸ ಜಯಂತಿಯನ್ನು ಆಚರಿಸಿದ ಸಂದರ್ಭದಲ್ಲಿ ಆತನ ಕೃತಿಗಳ ಬಗ್ಗೆ ಎಸ್.ವಿ.ರಂಗಣ್ಣನವರಿಂದ ಭಾಷಣ ಮಾಡಿಸಿದ ಪ್ರಬುದ್ಧ ಕರ್ಣಾಟಕದ ಸಂಪಾದಕರಾದ ವೆಂಕಣಯ್ಯನವರು ನಂತರ ಆ ಭಾಷಣವನ್ನು ವಿಸ್ತಾರಗೊಳಿಸಲು ಸೂಚಿಸಿ, ಆ ರೀತಿ ವಿಸ್ತಾರಗೊಂಡು ತಯಾರಿಸಿದ ಪ್ರಬಂಧವನ್ನು ಪ್ರಬುದ್ಧ ಕರ್ಣಾಟಕದಲ್ಲಿ ಅಚ್ಚುಹಾಕಿಸಿ ಪ್ರಚಾರಗೊಳಿಸಿದ ವಿಚಾರವನ್ನು ರಂಗಣ್ಣನವರು ಕೃತಜ್ಞತೆಯಿಂದ ನೆನೆಪಿಸಿಕೊಂಡಿದ್ದಾರೆ. ಹೀಗೆ ಅರ್ಹತೆ ಇರುವ ಬರಹಗಾರರನ್ನು ಗುರುತಿಸಿ ಅವರ ಬರವಣಿಗೆಗಳಲ್ಲಿ ಇರುವ ಸತ್ವವನ್ನು ಗುರುತಿಸಿ ಪ್ರೋತ್ಸಾಹಿಸುವುದರ ಮುಖಾಂತರ ಕನ್ನಡ ಸಾಹಿತ್ಯಲೋಕಕ್ಕೆ ಸಿಗಬಹುದಾದ ಸಹಾಯವನ್ನು ದೊರೆಯುವಂತೆ ಮಾಡಿದ ಕೀರ್ತಿ ಪ್ರಬುದ್ಧ ಕರ್ಣಾಟಕದ್ದು. ಪ್ರಬುದ್ಧ ಕರ್ಣಾಟಕದಿಂದ, ಬರಹಗಾರರಿಗೆ ಸಿಗುತ್ತಿದ್ದ ಪ್ರೋತ್ಸಾಹ ಕುರಿತಂತೆ ಕೆ.ಎಂ.ಕೃಷ್ಣರಾವ್ ಒಂದು ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ.

ಒಂದು ಬಾರಿ ಧಾರವಾಡ ಕಾಲೇಜಿನ ಪತ್ರಿಕೆಯಲ್ಲಿ ಬಂದ ಕಿರು ಕವನವನ್ನು ಎ.ಆರ್.ಕೃಷ್ಣಶಾಸ್ತ್ರಿಗಳು ಓದಿ ಮೆಚ್ಚಿಕೊಂಡು ಆ ಹುಡುಗನಲ್ಲಿದ್ದ ಸಾಹಿತ್ಯಶಕ್ತಿಯು ಜನರಿಗೆ ಮುಟ್ಟಿಸಬೇಕೆಂಬ ಆಶಯದಿಂದ ಆ ಕಾಲೇಜಿನ ಪ್ರಾಂಶುಪಾಲರಾಗಿದ್ದ ಪ್ರೊ.ಫ್ಯಾರೆನ್ ಅವರಿಗೆ ಪತ್ರ ಬರೆದು ಆ ಕವನವನ್ನು ತರಿಸಿಕೊಂಡು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಿದರು. "ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗುವುದೆಂದರೆ ಒಂದು ಹೆಮ್ಮೆ ಎಂದು ತಿಳಿದಿದ್ದ ಆ ಕಾಲದಲ್ಲಿ ಆ ವಿದ್ಯಾರ್ಥಿಗೆ ಸಿಕ್ಕ ಪ್ರೋತ್ಸಾಹ ಸಣ್ಣದೇನಲ್ಲ"[೧] ಎಂಬ ಕೃಷ್ಣರಾವ್ ಅವರ ಮಾತುಗಳು ಪ್ರಬುದ್ಧ ಕರ್ಣಾಟಕದ ಅರ್ಹತೆ ಇದ್ದವರನ್ನು ಹೇಗೆ ಗುರುತಿಸುವ ಕಾರ್ಯವನ್ನು ಸಮರ್ಥಕವಾಗಿ ನೆರವೇರಿಸಿತು ಎಂಬ ವಿಚಾರವನ್ನು ಗಮನಕ್ಕೆ ತರುತ್ತದೆ. ಆತ ಕನ್ನಡನಾಡಿನ ಯಾವುದೇ ಮೂಲೆಯ ಯಾವುದೇ ಸ್ಥಿತಿಯಲ್ಲಿರುವ ವ್ಯಕ್ತಿಯಾಗಿರಬಹುದು. ಆದರೆ ಅರ್ಹತೆ ಇದ್ದವರಿಗೆ ಅವಕಾಶ ದೊರಕಬೇಕು ಎಂಬುದು ಪ್ರಬುದ್ಧ ಕರ್ಣಾಟಕದ ಆಶಯ.

ಹೀಗೆ ಪ್ರಬುದ್ಧ ಕರ್ಣಾಟಕವು ಹೊಸ ಬರಹಗಾರರನ್ನು ಪ್ರೋತ್ಸಾಹಿಸಿ ಅವರನ್ನು ತಿದ್ದಿ, ಬಹುಮಾನಗಳನ್ನು ನೀಡಿ ವೇದಿಕೆಯನ್ನು ಕಲ್ಪಿಸಿಕೊಟ್ಟು ಬೆಳೆಸಿದ ರೀತಿ ಅನನ್ಯವಾದದ್ದು. ಸಾಹಿತಿಗಳಿಗೆ ಇದು ಎಂದೋ ಒಂದು ಸಂದರ್ಭದಲ್ಲಿ ಮಾತ್ರ ದೊರೆತ ಪ್ರೋತ್ಸಾಹವಲ್ಲ. ನಿರಂತರವಾಗಿ ದೊರಕುತ್ತಿದ್ದ ಇಂತಹ ಪ್ರೋತ್ಸಾಹ ಇಂಥವುಗಳಿಂದಲೇ ಕನ್ನಡ ಸಾಹಿತ್ಯದ ಖಣಜ ಭರ್ತಿಯಾಯಿತು.

---

೧. ಕೃಷ್ಣರಾವ್, ಎ.ಆರ್.ಕೃಷ್ಣಶಾಸ್ತ್ರೀ ಜೀವನ-ಸಾಹಿತ್ಯ, ೧೯೭೧, ಪು. ೯೧.

**ಸಾಹಿತ್ಯದಲ್ಲಿ ಏನಿರಬೇಕು**

ಸಾಹಿತ್ಯ ಸೃಷ್ಟಿಗೆ ವಿವಿಧ ರೀತಿಯಲ್ಲಿ ಸಹಕರಿಸಿದ ಪ್ರಬುದ್ಧ ಕರ್ನಾಟಕ ಸಾಹಿತ್ಯದ ಧ್ಯೇಯವೇನು? ನೀತಿಯನ್ನು ಬೋಧಿಸುವುದೇ ಅಥವಾ ಆನಂದವನ್ನು ಕೊಡುವುದೇ ಎಂಬಂತಹ ವಿಚಾರಗಳ ಕಡೆ ಮುಕ್ತವಾಗಿ ಚರ್ಚೆ ನಡೆಯಲು ಬೇಕಾದ ಚಾಲನೆಯನ್ನು ಒದಗಿಸಿದೆ. ವಿವೇಕಿಗಳಾಗಿರುವವರು ಕಾವ್ಯಗಳಲ್ಲಿ ನೀತಿಯ ನೆಲೆಯೇ ಇರಕೂಡದು ಎಂದು ಹೇಳುವುದಿಲ್ಲ. ಉದಾತ್ತವಾದ ಭಾವನೆಗಳನ್ನು ಹೊಂದದ ಬರಹ ಸಾಹಿತ್ಯ ಎನಿಸಿಕೊಳ್ಳುವುದಿಲ್ಲ. ಇಂತಹ ಸಾಹಿತ್ಯದಲ್ಲಿ ಆನಂದದ ಸ್ಥಾನವೇನು ಎಂದು ಯೋಚಿಸಿದರೆ ಸಾಹಿತ್ಯದ ಗುರಿಯು ಆನಂದವೇ ಆಗಿರುತ್ತದೆ. ಇದು ಸಾಹಿತ್ಯದ ಧ್ಯೇಯ ಕುರಿತಾದ ಒಂದು ಅಭಿಪ್ರಾಯವಾದರೆ, ನೀತಿ ಬೋಧೆಯೂ ಕಾವ್ಯದ ಉದ್ದೇಶವೆಂಬುದು ಇನ್ನೊಂದು ಅಭಿಪ್ರಾಯ. ತೀನಂಶ್ರೀ ಅವರು "ಧರ್ಮಮಾರ್ಗವನ್ನು ಬೋಧಿಸಲಿ ಅಥವಾ ಯಾವುದೇ ಕಾರ್ಯ ಮಾಡಲಿ ಆನಂದವನ್ನು ಕೊಡದಿದ್ದರೆ ಅದು ಸಾಹಿತ್ಯವಾಗುವುದಿಲ್ಲ. ರಸಿಕರು ಆನಂದದಿಂದ ಮೈಮರೆತಾಗ ಉಪದೇಶದ ಸುಳಿವು ಸಿಕ್ಕದಂತೆ ಅದು ಅವರ ಹೃದಯ ಪ್ರವೇಶಿಸಬೇಕು. ಅಷ್ಟೇ ಹೊರತು ಆನಂದದ ಸ್ಥಾನವನ್ನು ನೀತಿಯೇ ತಾನೇ ಆಕ್ರಮಿಸಕೂಡದು" ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಕಾವ್ಯದಲ್ಲಿ ನೀತಿಯು ಹಿತಮಿತವಾಗಿ ಬೆರೆತು ಬರಬೇಕೇ ಹೊರತು ಅದನ್ನು ಕಾವ್ಯದ ಮುಖ್ಯವಾದ ಉದ್ದೇಶವೆಂದು ಪ್ರತಿಪಾದಿಸಲು ಹೊರಟಾಗ ಸಾಹಿತ್ಯಕವಾಗಿ ಸೋಲುವ ಸಂಭವವೇ ಹೆಚ್ಚು. ನೀತಿ ಬೋಧೆಗಾಗಿಯೇ ಹೊರಟ ಕಾವ್ಯದಿಂದ ಕಾವ್ಯದ ಮುಖ್ಯ ಲಕ್ಷಣವಾದ ಆನಂದ ಹುಟ್ಟದೇ ಹೋಗಬಹುದು. ಇನ್ನು ಕೆಲವು ಬಾರಿ ಈ ಕಾವ್ಯಗಳನ್ನು ಪ್ರತಿಪಾದಿಸುವ ನೀತಿ ಸರ್ವರಿಗೂ ಒಪ್ಪಿಗೆಯಾಗುವ ರೀತಿಯಲ್ಲಿ ಇರದೆ ಕೆಲವರಿಗಷ್ಟೇ ಪ್ರಿಯವಾಗುವಂತಿದ್ದರೆ ಅಂತಹ ಕಾವ್ಯಗಳಂತೂ ವಿಫಲತೆಯ ಹಾದಿ ಹಿಡಿಯುತ್ತವೆ. ಕೆ.ಎನ್.ಕೃಷ್ಣಮೂರ್ತಿಗಳು ಅಭಿಪ್ರಾಯಪಡುವಂತೆ "ನೀತಿ ಪ್ರತಿಪಾದನೆಗೆಂದೇ ಹೊರಟ ಕಥೆಗಳು ಕಾದಂಬರಿಗಳು ಸಾಹಿತ್ಯದ ಮಟ್ಟಕ್ಕೆ ಏರುವುದು ಕಡಿಮೆ"[೧] ಹಾಗೆಂದ ಮಾತ್ರಕ್ಕೆ ನೀತಿ ಪ್ರಧಾನವಾದ ಕೃತಿಗಳಲ್ಲಿ ಸಾಹಿತ್ಯಾಂಶಗಳೇ ಇರುವುದಿಲ್ಲ ಎಂಬ ಅಭಿಪ್ರಾಯವಲ್ಲ. ನೀತಿ–ಬೋಧನೆಯನ್ನು ಒಳಗೊಂಡಂತೆಯೂ ಉತ್ತಮ ಕಾವ್ಯಗಳು ಸೃಷ್ಟಿಯಾಗಬಲ್ಲವು. ಈ ಹಂತದಲ್ಲಿ ಆನಂದ ಎಂದರೆ ಸಾಮಾನ್ಯ ಓದುಗನ ದೃಷ್ಟಿಯಲ್ಲಿರುವ ಆನಂದದ ಪರಿಕಲ್ಪನೆಗೂ ಜ್ಞಾನಿಗಳ ದೃಷ್ಟಿಯಲ್ಲಿ ಆನಂದದ ಪರಿಕಲ್ಪನೆಗೂ ವ್ಯತ್ಯಾಸವಿರುತ್ತದೆ. ಎಚ್ಚೆತ್ತ ಚೇತನಕ್ಕೆ

---

೧. ಕಾವ್ಯಾವಲೋಕನ, ಪ್ರಕ. ಸಂಪುಟ ೩೪, ಸಂಚಿಕೆ ೩, ಪು. ೮೫.

ನೀತಿಬೋಧಕವಾದ ತತ್ವಗಳು ಆನಂದವನ್ನು ಉಂಟುಮಾಡಬಲ್ಲವು. ಉತ್ತಮವಾದ ಕಾವ್ಯಗಳಲ್ಲಿ ನೀತಿಬೋಧೆ ಅಂತರ್ಗಾಮಿಯಾಗಿ ಹರಿಯುತ್ತಿರುತ್ತದೆ.

ಕಲೆಯು ಇರುವುದು ಕಲೆಗಾಗಿ ಮಾತ್ರ ಅದರಲ್ಲಿ ನೀತಿಯನ್ನು ಹುಡುಕಬೇಕಾಗಿಲ್ಲ ಎಂದು ಪರಿಭಾವಿಸಿ ಪ್ರತಿಪಾದಿಸುವವರೂ ಇದ್ದಾರೆ. ಆದರೆ ಅದೇ ಸತ್ಯವಾದ ಸಂಗತಿಯಲ್ಲ. ಉತ್ತಮ ಕಾವ್ಯಗಳಲ್ಲಿ ನೀತಿಬೋಧೆ ಸಾಮಾನ್ಯನ ಗೋಚರಕ್ಕೆ ಬರದ ಹಾಗೆ ಅದರಲ್ಲೇ ಲೀನವಾಗಿರುತ್ತದೆ. ಯುಕೆ ಸುಬ್ಬರಾಯಾಚಾರ್ ಅವರು ಹೇಳುವ ಹಾಗೆ "ಕಲೆಯ ದೃಷ್ಟಿ ಭೂಮವಾಗಿ ಜನತೆಗೆ ಅಮೃತಾಹಾರವನ್ನು ಒದಗಿಸಬೇಕು. ಜೀವನದಲ್ಲಿ ತತ್ವಕ್ಕೆ ಒಂದು ಮಹತ್ವವಿರುವಂತೆ ಜೀವನಕ್ಕೆ ಸದೃಶವಾದ ಕಾವ್ಯದಲ್ಲಿಯೂ ತತ್ವಕ್ಕೆ ಪ್ರಮುಖ್ಯತೆ ಇದೆ. ಆದುದರಿಂದ ನೀತಿಬೋಧೆಯೂ ಕಾವ್ಯದ ಅನಿವಾರ್ಯವಾದ ಒಂದು ಅಂಗ. ಆದರೆ ನೀತಿ ಬೋಧೆಯೇ ಕಾವ್ಯವಲ್ಲ".[೧] ಹೀಗೆ ಕಾವ್ಯದಲ್ಲಿ ಯಾವ ಅಂಶಕ್ಕೆ ಪ್ರಾಧಾನ್ಯತೆಯನ್ನು ನೀಡಬೇಕು ಎಂಬ ವಿಚಾರಗಳನ್ನು ಚರ್ಚಿಸಿರುವಂತೆಯೇ ಸಾಹಿತ್ಯದಲ್ಲಿ ಶೀಲ–ಆಶ್ಲೀಲದ ವಿಚಾರಗಳನ್ನು ಕುರಿತಂತೆಯೂ ಗಮನಹರಿಸಿದೆ.

ಬದುಕಿನಲ್ಲಿ ಗಂಡು – ಹೆಣ್ಣಿನ ಸಮಸ್ಯೆ ಅನಾದಿಕಾಲದಿಂದಲೂ ಬಂದದ್ದು. ಜೀವನದ ಬಹುತೇಕ ಭಾಗ ಇದರಲ್ಲಿಯೇ ವ್ಯಯವಾಗುತ್ತದೆ. ಸುಖದುಃಖಗಳಿಗೆ ಒಳಗಾಗುತ್ತದೆ. ಆದುದರಿಂದಲೇ ಬಹುತೇಕ ಎಲ್ಲಾ ಭಾಷೆಯ ಜನಗಳ ಸಾಹಿತ್ಯದಲ್ಲಿ ಗಂಡು ಹೆಣ್ಣಿನ ಸಂಬಂಧಿ ಕುರಿತಾದ ವಿಚಾರ ಪ್ರಧಾನವಾಗಿಯೇ ಕಾಣಿಸಿಕೊಂಡಿದೆ. ಗಂಡು ಹೆಣ್ಣಿನ ಸಂಬಂಧದ ವಿವಿಧ ಮುಖಗಳಾದ ಶೃಂಗಾರ, ಒಲುಮೆ, ಪ್ರೀತಿ, ಸ್ನೇಹ, ಹೀಗೆ ಹತ್ತು ಹಲವು ಬಗೆಯ ವಿಚಾರಗಳಿಗೆ ಸಾಹಿತ್ಯದಲ್ಲಿ ಯಾವ ಸ್ಥಾನವಿದೆ? ಸಾಹಿತ್ಯದಲ್ಲಿ ಅದನ್ನು ತರಬೇಕೇ? ಬೇಡವೇ? ತಂದರೆ ಹೇಗೆ ತರಬೇಕು? ಸಾಹಿತ್ಯದಲ್ಲಿ ಶೃಂಗಾರದ ಸ್ಥಾನವೇನು? ಶೀಲ ಹಾಗೂ ಅಶ್ಲೀಲ ವಿಚಾರಗಳ ನಡುವೆ ಇರುವ ಅಂತರವೇನು? ಕಾವ್ಯದಲ್ಲಿ ಅದು ಹೇಗೆ ಪ್ರಕಟಗೊಳ್ಳಬೇಕು? ಅದರ ಸ್ವರೂಪ ಹೇಗಿರಬೇಕು ಎಂಬಂತಹ ವಿಚಾರಗಳನ್ನು ಪ್ರಬುದ್ಧ ಕರ್ಣಾಟಕ ಪ್ರಸ್ತಾಪಿಸಿದೆ. ಸತ್ಯಕ್ಕೆ ಕನ್ನಡಿ ಹಿಡಿಯುತ್ತೇನೆ ಎಂಬ ಭ್ರಮೆಯಲ್ಲಿ ಶೃಂಗಾರದ ಬದುಕನ್ನು ಗುರಿಯಾಗಿರಿಸಿಕೊಂಡ ವೇಶ್ಯೆಯರ ಜೀವನವನ್ನು ಕುರಿತ, ಅವರ ಆಕರ್ಷಣೆಗೆ ಒಳಗಾಗುವ ಸಂಸಾರಿಗಳ, ಕೆಲಮಟ್ಟಿಗೆ ಯುವಕರ ವರ್ತನೆಯನ್ನು ಪ್ರತಿಬಿಂಬಿಸುವ ವಿಚಾರಗಳನ್ನೊಳಗೊಂಡ ಸಾಹಿತ್ಯ ಕನ್ನಡಿಗರ ಏಳಿಗೆಗೆ ಸಹಕಾರಿಯಾಗಿವೆಯೇ? ಅಥವಾ ಇವುಗಳು ಕೇವಲ ಕಾಮವನ್ನು ಪ್ರಚೋದಿಸಿ ಕೆಡುಕಿನ ಪರಿಣಾಮವನ್ನು

---

೧. ಸುಬ್ಬರಾಯಾಚಾರ್.ಯು.ಕೆ, ಪ್ರ.ಕ. ಸಂಪುಟ ೩೫, ಸಂಚಿಕೆ ೧, ಪು. ೧೭.

ಬೀರುತ್ತದೆಯೇ? ಎಂಬಂತಹ ವಿಚಾರಗಳ ಕಡೆ ಗಮನಸೆಳೆಯುತ್ತದೆ. ಎ.ಆರ್.ಕೃಷ್ಣಶಾಸ್ತ್ರಿಗಳು "ವಿಮರ್ಶಾ ಪದ್ಧತಿಯೂ ಪ್ರಣಯಾವರ್ತವೂ" ಎಂಬ ವಿಮರ್ಶೆಯಲ್ಲಿ ಸಾಹಿತ್ಯದಲ್ಲಿ ಶೃಂಗಾರಕ್ಕೆ ನೀಡಬೇಕಾದ ಸ್ಥಾನ ಹಾಗೂ ಶೃಂಗಾರದ ವಿಚಾರಗಳನ್ನು ನಿರೂಪಿಸುವ ಕ್ರಮ ಇವುಗಳ ಬಗ್ಗೆ ಪ್ರಸ್ತಾಪಿಸಿದ್ದಾರೆ. ಶೃಂಗಾರ ರಸವಿಲ್ಲದಿದ್ದರೆ ಕಥೆಗೆ ರಸಿಕತೆಯಿರದು. ಮಹಾಕಾವ್ಯದಲ್ಲಿ ಇರಬೇಕಾದ ಹತ್ತು ಲಕ್ಷಣಗಳಲ್ಲಿ ಶೃಂಗಾರದ ವರ್ಣನೆಯೂ ಒಂದು ಎಂದು ಭಾವಿಸಿ ಕಾವ್ಯದಲ್ಲಿ ಶೃಂಗಾರಕ್ಕೆ ಸ್ಥಾನ ಕೊಡಲೇಬೇಕು ಎಂಬುವವರನ್ನು ಟೀಕಿಸುತ್ತಾರೆ. ಶೃಂಗಾರರಸವನ್ನು ಬಿಟ್ಟರೆ ಬೇರೆ ರಸವೇ ಇಲ್ಲವೇ?...... ವೀರ, ಕರುಣ, ಹಾಸ್ಯ ಇವುಗಳೆಲ್ಲವೂ ಪ್ರಮುಖ ರಸವಲ್ಲವೇ? ಶೃಂಗಾರದ ವರ್ಣನೆಯಂತೆ ಯುದ್ಧದ ವರ್ಣನೆಯೂ ಮಹಾಕಾವ್ಯದಲ್ಲಿ ಬರಬೇಕೆಂದು ಹೇಳಿರುವಾಗ ಶೃಂಗಾರ ರಸವೊಂದಕ್ಕೇಕೆ ಇಷ್ಟೊಂದು ಪ್ರಾಮುಖ್ಯತೆ ಎಂದು ಪ್ರಶ್ನಿಸುತ್ತಾರೆ. ಶೃಂಗಾರ ರಸದ ಸ್ಥಾನದ ಬಗ್ಗೆ ಚರ್ಚೆ ಏನೇ ಇರಲಿ ಆದರೆ ಪ್ರಸ್ತುತ ಕಾಲದಲ್ಲಿ ಅದಕ್ಕೆ ಅಷ್ಟೊಂದು ಪ್ರಾಮುಖ್ಯತೆ ನೀಡುವುದು ಬೇಡ ಎಂದು ಅಭಿಪ್ರಾಯಪಡುತ್ತಾರೆ. "ವ್ಯಕ್ತಿತ್ವಕ್ಕೆ ನಮ್ಮ ದೇಶದಲ್ಲಿ ಶೃಂಗಾರ ಪ್ರವಣತೆಯು ಬೇಕಾಗಿಲ್ಲ........... ಈಗ ಜಲಕ್ರೀಡೆಯಲ್ಲಿ ಗೋಪಿಕಾಸ್ತ್ರೀಯರನ್ನು ಕಿರುಕುಳಗುಟ್ಟಿಸಿದ ಭಾಗವತ ಕೃಷ್ಣನ ಉಪಾಸನೆಯನ್ನು ಬಿಟ್ಟು ಅರ್ಜುನನಲ್ಲಿ ಪೌರುಷವನ್ನು ತುಂಬಿ ಯುದ್ಧಕ್ಕೆ ಹುರಿಗೊಳಿಸಿದ ಗೀತಾಕೃಷ್ಣನ ಉಪಾಸನೆಯನ್ನು ಕೈಗೊಳ್ಳೋಣ?"[೧] ಎಂದು ಶೃಂಗಾರದ ವಿಚಾರಕ್ಕಿಂತಲೂ ಹಿರಿದಾದ ವಿಚಾರಗಳು ಕಣ್ಣಮುಂದಿವೆ. ಅದಕ್ಕೆ ಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಕೊಡೋಣವೆಂದು ಸೂಚಿಸುತ್ತಾರೆ. ಶೃಂಗಾರ ರಸವನ್ನು ಕಾವ್ಯದಲ್ಲಿ ತರುವುದೇ ಆದರೆ ಔಚಿತ್ಯಪೂರ್ಣವಾಗಿ ತರಬೇಕು. ಹೆಚ್ಚಿನ ಜವಾಬ್ದಾರಿ ಬೇಕು. ದಾಂಪತ್ಯ ಜೀವನದ ವಿಚಾರ ಬ್ರಹ್ಮಚರ್ಯೆಯ ವಿಚಾರ ಮಿತಸಂತಾನದ ವಿಚಾರ ಇಂಥ ವಿಷಯಗಳ ಬಗ್ಗೆ ಅವಶ್ಯಕವಾದ ವಿಚಾರಗಳನ್ನು ತಿಳಿದುಕೊಳ್ಳುವುದು ಓದುಗನಿಗೆ ಲಾಭದಾಯಕವೆನಿಸಿದರೂ, ಬರೆಯುವವರು ಹಾಗೂ ಓದುಗರಾಗಿರುವವರು ಇದರಲ್ಲೇ ಚಾಪಲ್ಯದಿಂದ ಪ್ರವರ್ತಿಸಿದರೆ ಅದರಿಂದ "ಒಂದು ಬಗೆಯ ಕೊಳಕು ರಸಿಕತೆ ಹುಟ್ಟಿ ದೌರ್ಬಲ್ಯಕ್ಕೆ ಅದು ಕಾರಣವಾಗುವುದು. ಹೇಗೆಂದರೆ ಅಸಮರ್ಥ ಅಥವಾ ಚಪಲನ ಕೈಗೆ ಸಿಕ್ಕಿದರೆ ಶೃಂಗಾರವು ವಿಟಚರ್ಯೆಯಾಗಿ ಪರಿಣಮಿಸುವುದು".[೨] ಕಾವ್ಯದಲ್ಲಿ ಕಾಮದ ಬಾಹ್ಯಾಡಂಬರಗಳನ್ನು ವಿಲಾಸಗಳನ್ನು ಹೆಚ್ಚು ಮಾಡಿ ತೋರಿಸುವುದರಿಂದ ಓದುಗರ ಕಾಮಪ್ರವೃತ್ತಿ ಕೆರಳಿ ಕೆಟ್ಟದಾರಿಗೆ

---

೧. ವಸ್ತುಕೋಶ, ಪ್ರ.ಕ. ಸಂಪುಟ ೫, ಸಂಚಿಕೆ ೩, ಪು. ೮-೯.
೨. ವಸ್ತುಕೋಶ, ಪ್ರ.ಕ. ಸಂಪುಟ ೫, ಸಂಚಿಕೆ ೩, ಪು. ೭.

ಅವರನ್ನು ನೂಕಲು ಅವಕಾಶವಾಗುತ್ತದೆ. ಸಾಹಿತ್ಯದಲ್ಲಿ ಬರುವ ಶೃಂಗಾರದ ವಿಚಾರಗಳು ಕಾಮಪ್ರಚೋದನೆಯನ್ನು ಬಿಟ್ಟು ಪ್ರೇಮದ ಪ್ರಶಾಂತತೆಯನ್ನು ಪ್ರಸನ್ನತೆಯನ್ನು ತಂದುಕೊಡಬೇಕು. ಅಷ್ಟೇ ಅಲ್ಲದೆ ಕಾಮವನ್ನು ಶುದ್ಧಗೊಳಿಸಿ ಉತ್ತಮ ಪರ್ಯವಸಾನದ ಮೂಲಕ ಓದುಗರ ಮಟ್ಟವನ್ನು ಎತ್ತುವುದು ಸಾಹಿತ್ಯದ ಉದ್ದೇಶವಾಗಬೇಕು. ಕಾಮವಿಲ್ಲದೆ ಬಾಳಿಲ್ಲವಾದರೂ ಅದರ ಮೂಲಕ ಹಾದುಹೋದರೂ ಪವಿತ್ರ ಪ್ರೇಮದ ಅಮೃತಪಾನಕ್ಕೆ ದಾರಿಯಾಗಬೇಕು.

ಹೀಗೆ ಸಾಹಿತ್ಯದಲ್ಲಿ ಶೀಲ, ಅಶ್ಲೀಲ, ನೀತಿ, ಆನಂದ ಈ ವಿಚಾರಗಳ ಬಗ್ಗೆ ಚರ್ಚಿಸಿರುವಂತೆಯೇ ಸಾಹಿತ್ಯ ರಚನೆಯ ಸಂದರ್ಭದಲ್ಲಿ ಕಲೆಗಾಗಿ ಕಲೆಯೋ ಅಥವಾ ಧರ್ಮಕ್ಕಾಗಿ ಕಲೆಯೋ ಎಂಬ ವಿಚಾರದ ಬಗ್ಗೆಯೂ ಚಿಂತಿಸಿದೆ. ಕುವೆಂಪು ಅವರು ತಮ್ಮ 'ಕನ್ನಡ ಸಾಹಿತ್ಯ' ಎಂಬ ಲೇಖನದಲ್ಲಿ ಈ ವಿಚಾರವನ್ನು ಕುರಿತಂತೆ ಪ್ರಸ್ತಾಪಿಸಿದ್ದಾರೆ. ಕಲೆಗಾಗಿ ಕಲೆ ಅಥವಾ ಧರ್ಮಕ್ಕಾಗಿ ಕಲೆ ಎಂದು ಭಾವಿಸಿ ಸಾಹಿತ್ಯ ರಚಿಸುವ ಸಂದರ್ಭದಲ್ಲಿ ಗಮನಿಸಬೇಕಾದ ಅಂಶವೇನು ಎಂಬುದರ ಕಡೆ ಗಮನಸೆಳೆಯುತ್ತಾರೆ. ಕಲೆಗಾಗಿಯೇ ಕಲೆ ಎಂಬುದನ್ನು ಒಪ್ಪಿಕೊಂಡು ಧರ್ಮ ಮೋಕ್ಷಗಳನ್ನು ವಿಚಾರವನ್ನು ಬಿಟ್ಟು ಇಂದ್ರಿಯ ಚಪಲ ತೆಗೋ ತಮ್ಮ ಮನೋದೌರ್ಬಲ್ಯವನ್ನು ಮುಚ್ಚಿಕೊಳ್ಳುವ ಸಲುವಾಗಿಯೇ ಕಾವ್ಯ ರಚಿಸುವುದು ಕಲೋಪಾಸನೆಯಾಗುವುದಿಲ್ಲ. "ಕಲೆಗಾಗಿ ಕಲೆ ಎಂಬ ಸ್ಥೈರಮಂತ್ರವನ್ನು ಹಾಡಿಕೊಂಡು ಕೊಚ್ಚೆಯುಸಿಬಿನಲ್ಲಿ ಕಂತಿ ಹಾಳಾಗುವುದಕ್ಕಿಂತಲೂ ಧರ್ಮ ಮೋಕ್ಷಗಳ ತೋಳ್ಸೆರೆಯಲ್ಲಿ ಬೆಳೆದು ಬಾಳುವುದೇ ಸಾಹಿತ್ಯಕ್ಕೆ ಕ್ಷೇಮ"[೧] ಎಂಬುದು ಗಮನಿಸಬೇಕಾದ ವಿಚಾರ. ಹಾಗಾದರೆ ಧರ್ಮಕ್ಕಾಗಿ ಕಲೆ ಎಂಬ ಮಾತೇ ಸೂಕ್ತವೇ ಎಂದು ಯೋಚಿಸಿದಾಗ ಇದು ಮತ್ತಷ್ಟು ಅಪಾಯಕಾರಿಯಾಗಿ ತೋರುತ್ತದೆ. ಧರ್ಮದ ಹೆಸರಿನಲ್ಲಿ ಕಲೆ ಮೂಲೆಗುಂಪಾಗಬಾರದು ಕಲೆಯ ಸಂದರ್ಭದಲ್ಲಿ ಧರ್ಮ ಬರಬಹುದಾದರೂ ಅದು ಮತವಾಗಿ ಸಂಕುಚಿತಗೊಂಡು ಬರಬಾರದು. ಅದು ಮತ ತತ್ವಗಳನ್ನು ಮೀರಿ ವಿಶ್ವಧರ್ಮವಾಗಿ ಬರಬೇಕು. ಹಾಗಲ್ಲದೇ ಹೋದರೆ ಅದು ವಿನಾಶಕಾರಿಯಾಗುತ್ತದೆ. ಕುವೆಂಪು ಅವರು ಇದೇ ಲೇಖನದಲ್ಲಿ ಗುರುತಿಸುವ ಹಾಗೆ "ಕಲೆಗಾಗಿ ಕಲೆಯು ಸಾಹಿತ್ಯವನ್ನು ಹೇಗೆ ಅಶ್ಲೀಲತೆಯ ರೊಚ್ಚಿಗೆಳೆಯಬಹುದೋ ಹಾಗೆಯೇ ಧರ್ಮಕ್ಕಾಗಿ ಕಲೆ ಎಂಬ ಸೂತ್ರವೂ ಅದನ್ನು ನೀರಸಾಚಾರಗಳ ಶುಷ್ಕ ಸಂಪ್ರದಾಯದ ಮತಭ್ರಾಂತಿಯ ಮರುಭೂಮಿಗೆ ಎಳೆದೊಯ್ದು ಬಾಯಿಗೆ ನೀರನ್ನೂ ಬಿಡದೆ ಕೊಂದುಹಾಕುವ ಸಂಭವವುಂಟು".[೨] ಹಾಗಾಗಿಯೇ ವಿಶ್ವಧರ್ಮವನ್ನು

---

೧. ಕುವೆಂಪು, ಪ್ರಕ. ಸಂಪುಟ ೧೯, ಸಂಚಿಕೆ ೨, ಪು. ೭.

೨. ರಾಜರತ್ನಂ, ಪ್ರಕ. ಸಂಪುಟ ೨೯, ಸಂಚಿಕೆ ೧, ಪು. ೨೯.

ಒಳಗೊಂಡ ಕಲಾತ್ಮಕವಾದ ಸಾಹಿತ್ಯ ಸೃಷ್ಟಿಯಾಗಬೇಕು. ಈ ಎಲ್ಲ ಅಂಶಗಳನ್ನು ಒಳಗೊಂಡಂತೆ ಸೃಷ್ಟಿಯಾಗುವ ಸಾಹಿತ್ಯ ಜೀವನದ ಪ್ರತಿಬಿಂಬವಾಗಿ ಅಥವಾ ಗತಿಬಿಂಬವಾಗಿ ಮೂಡಿಬರಬೇಕೇ ಎಂಬ ವಿಚಾರವೂ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಸಾಹಿತ್ಯ ವಲಯದಲ್ಲಿ ಅಲ್ಲಲ್ಲಿ ಚರ್ಚಿತವಾಗಿರುವ ಈ ವಿಚಾರದ ಕಡೆಗೂ ಪ್ರಬುದ್ಧ ಕರ್ಣಾಟಕ ಗಮನಹರಿಸಿದೆ.

೧೯೪೫ನೇ ಇಸವಿಯ ಡಿಸೆಂಬರ್ ಕೊನೆಯಲ್ಲಿ ದಿ ಆಲ್ ಇಂಡಿಯಾ ರೇಡಿಯೋ, ಮದರಾಸ್ ಇಲ್ಲಿ ಪ್ರಸಾರಗೊಂಡ ಭಾಷಣ ಮಾಲೆ 'ಜನಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯವೇ ಉತ್ತಮ ಸಾಹಿತ್ಯ'. ಈ ಭಾಷಣ ಮಾಲೆಯಲ್ಲಿ ದ.ರಾ.ಬೇಂದ್ರೆ, ಸಿ.ಕೆ.ವೆಂಕಟರಾಮಯ್ಯ, ರಾ.ಶಿ. ಕೈಲಾಸಂ, ರಾಜರತ್ನಂ, ಚಕ್ರವರ್ತಿ ರಂಗಾಚಾರ್, ನಾ.ಕಸ್ತೂರಿ, ವಿ.ಸೀತಾರಾಮಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಇವರುಗಳು ತಮ್ಮ ಭಾಷಣಗಳ ಮೂಲಕ ಸಾಹಿತ್ಯ ಜೀವನ ಪ್ರತಿಬಿಂಬವೇ ಎಂಬ ವಿಚಾರ ಕುರಿತಂತೆ ತಮ್ಮ ಅಭಿಪ್ರಾಯಗಳನ್ನು ಹೊರಗೆಡವಿದ್ದಾರೆ. ಪ್ರಬುದ್ಧ ಕರ್ಣಾಟಕ ಆ ಭಾಷಣಗಳನ್ನೆಲ್ಲವನ್ನು ಪ್ರಕಟಿಸಿದೆ. ತನ್ಮೂಲಕ ಈ ವಿಷಯಕ್ಕೆ ಸಂಬಂಧಿಸಿದಂತೆ ವ್ಯಕ್ತವಾಗುತ್ತಿದ್ದ ಅಭಿಪ್ರಾಯಗಳನ್ನು ಕ್ರೋಢೀಕರಿಸಿಕೊಟ್ಟಿದೆ. ಸಾಹಿತ್ಯ ಜೀವನದ ಪ್ರತಿಬಿಂಬವಾಗಿರಲು ಸಾಧ್ಯವಿಲ್ಲ. ಸಾಹಿತ್ಯ ಜನಜೀವನವನ್ನು ಮುಖ್ಯವಾಗಿ ಅವಲಂಬಿಸಿಕೊಂಡಿರಬಹುದಾದರೂ ಲೋಕದ ಚರಿತೆಯನ್ನೇ ಚಿತ್ರಿಸುತ್ತಿರಬಹುದಾದರೂ ಅದು ಜೀವನದ ಪ್ರತಿಬಿಂಬವಾಗಲು ಸಾಧ್ಯವಾಗುವುದಿಲ್ಲ. ದ.ರಾ.ಬೇಂದ್ರೆಯವರು ತಮ್ಮ ಭಾಷಣದಲ್ಲಿ ಗುರುತಿಸುವ ಹಾಗೆ ಅದು ಜೀವನದ ಪ್ರತಿಬಿಂಬದಲ್ಲಿ ಬೇರೆ ಬೇರೆ ಸ್ವರೂಪಗಳಿದ್ದು ಸಾಹಿತ್ಯದ ಕೆಲಸವೆಂದರೆ ನಿರ್ಜೀವ ವಸ್ತುಗಳು ಪ್ರತಿಫಲಿಸುವುದು ಅಲ್ಲ. ಇಲ್ಲಿ ಬಳಸಿರುವ ಪ್ರತಿಬಿಂಬ ಎನ್ನುವ ಪದವೇ ಸರಿಯಾದುದಲ್ಲ. ಅದನ್ನು ಬೇರೆಯದೇ ಆಗಿ ಗುರುತಿಸಬೇಕು. ಆದುದರಿಂದಲೇ ರಾಜರತ್ನಂ ಅವರು "ಇದಕ್ಕಿಂತ ಸಾಹಿತ್ಯವನ್ನು ಜನಜೀವನದ 'ವಿಕೃತಬಿಂಬ' ಎಂದಾಗಲೇ 'ಅತಿಕೃತ ಬಿಂಬ' ಎಂದಾಗಲೀ ಕರೆಯುವುದು ಹೆಚ್ಚು ಸಮಂಜಸ" ಎಂದು ಹೇಳಿರುವ ಮಾತುಗಳಾಗಲೀ ನಾ.ಕಸ್ತೂರಿ ಅವರು ಗುರುತಿಸುವಂತೆ 'ನೈಜಬಿಂಬ' ಎಂಬ ಮಾತಾಗಲೀ ಸಾಹಿತ್ಯದ ಕಾರ್ಯ ಪ್ರತಿಬಿಂಬಿಸುವುದಷ್ಟೇ ಅಲ್ಲ ಎಂಬುದನ್ನು ತಿಳಿಸುತ್ತದೆ. ತೀನಂಶ್ರೀ ಅವರು ಗುರುತಿಸಿರುವಂತೆ ಕವಿ ರಚನೆ ಮೂಲ ದೃಶ್ಯಕ್ಕಿಂತ ಉತ್ತಮವಾಗಬಹುದು. ಹೆಚ್ಚು ಅರ್ಥವತ್ತಾಗಬಹುದು. ಆದರೆ ಅದರ ಪ್ರತಿಬಿಂಬವಾಗಿ ನಿಲ್ಲುವುದು ಅಸಾಧ್ಯ. ಪ್ರಕೃತಿಯ ಅಥವಾ ಜೀವನದ ಪ್ರತಿಬಿಂಬವೋ ಪಡಿಯಚ್ಚೋ ಅಲ್ಲ ಕಲೆ ಆದರೆ ಆಧಾರ ಸಾಮಗ್ರಿಯಾಗಿ ಬಳಸಿಕೊಂಡು ಹೊಸದೊಂದು ಜಗತ್ತನ್ನೆ ಕಲೆಗಾರ ನಿರ್ಮಾಣಮಾಡುತ್ತಾನೆ ಎಂಬ

ವಿಚಾರಗಳು ಸತ್ಯವೆನಿಸುತ್ತದೆ. ಇಲ್ಲಿ ಉದ್ಭವವಾದ ಪ್ರಶ್ನೆ ನಂತರದ ಹಲವಾರು ವರ್ಷಗಳ ನಂತರವೂ ಮುಂದುವರೆದುಕೊಂಡು ಬಂದಿದೆ. ಹಾಗಾಗಿಯೇ ಈ ಲೇಖನ ಪ್ರಕಟವಾದ ಒಂಭತ್ತು ವರ್ಷಗಳ ನಂತರ ಜಿ.ಎಸ್.ಶಿವರುದ್ರಪ್ಪನವರ 'ಗತಿ ಬಿಂಬ' (೩೭-೪) ಎಂಬ ಲೇಖನ ಪ್ರಕಟಗೊಂಡಿದೆ. ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡ ಈ ಲೇಖನ ಸಾಹಿತ್ಯದ ಸ್ವರೂಪ ಕುರಿತಂತೆ ಹೊಸ ದೃಷ್ಟಿಕೋನವನ್ನು ನೀಡುತ್ತದೆ. ಅವರು ಹೇಳುವ ಗತಿ ಎಂದರೆ ದಿಕ್ಕು ಗುರಿ ಉದ್ದೇಶ ಗತಿ ಎಂದರೆ ಸದ್ಯದ ಸ್ಥಿತಿ ಅವಸ್ಥೆ ಎಂಬ ವಿಚಾರಗಳು ಗಮನಾರ್ಹವಾಗಿವೆ. ಇದನ್ನು ಸಮರ್ಥಿಸಿಕೊಂಡಿರುವ ಅವರ ವಿವರಣೆ ಗಮನಸೆಳೆಯುತ್ತದೆ. ಹೀಗೆ ಪ್ರಬುದ್ಧ ಕರ್ಣಾಟಕವು ಸಾಹಿತ್ಯದಲ್ಲಿ ಏನಿರಬೇಕು ಹಾಗೂ ಹೇಗಿರಬೇಕು ಎಂಬಂತಹ ಅಂಶಗಳನ್ನು ಕುರಿತಂತೆ ಪ್ರಕಟಿಸಿರುವ ಅಭಿಪ್ರಾಯಗಳು ಮೌಲ್ಯಯುಕ್ತವಾಗಿವೆ.

**ಸಾಹಿತ್ಯ ಪ್ರಚಾರ**

ಸಾಹಿತ್ಯದ ಉದ್ದೇಶ, ಪ್ರಕಟಣೆ ಇವೇ ಮೊದಲಾದ ವಿಷಯಗಳು ಎಷ್ಟು ಪ್ರಮುಖವಾದದ್ದೋ ಹೀಗೆ ಪ್ರಕಟಗೊಂಡ ಸಾಹಿತ್ಯಕ್ಕೆ ಪ್ರಚಾರ ಸಿಗಬೇಕಾದುದು ಅಗತ್ಯ. ಅದು ಗ್ರಂಥರೂಪದಲ್ಲಿ ಹೊರಬಂದಾಗ ಅದಕ್ಕೆ ವ್ಯಾಪಕವಾದ ಪ್ರಚಾರಕೊಡುವುದು ಗ್ರಂಥಕರ್ತರ ಹಾಗೂ ವಾಚಕರ ದೃಷ್ಟಿಗಳೆರಡರಿಂದಲೂ ಮಹತ್ವ ಪಡೆದುಕೊಳ್ಳುತ್ತದೆ. ಪ್ರಾಚೀನ ಕಾಲದಲ್ಲಿ ರಾಜಾಶ್ರಯದಂತಹ ಅನುಕೂಲ ಹಲವಾರು ಕವಿಗಳಿಗೆ ಲಭ್ಯವಾಗಿದ್ದು ಅದರಿಂದ ತಮ್ಮ ಲೌಕಿಕ ಜೀವನವನ್ನು ಸಾಗಿಸಲು ಅವರಿಗೆ ಸಾಧ್ಯವಾಗಿತ್ತು. ಆದರೆ ಈಗ ಕಾಲ ಬದಲಾಗಿದ್ದು ಕೇವಲ ಸಾಹಿತ್ಯದ ಸೃಷ್ಟಿಯನ್ನಷ್ಟೇ ನಂಬಿ ಬದುಕನ್ನು ಸಾಗಿಸುತ್ತೇನೆನ್ನುವರ ಸಂಖ್ಯೆ ವಿರಳವಾಗುತ್ತಿದೆ. ತಮ್ಮ ಜೀವನಕ್ಕೆ ಬೇಕಾದ ಆರ್ಥಿಕ ಸಹಾಯ, ಸಾಹಿತ್ಯ ರಚನೆಯಿಂದಷ್ಟೇ ದೊರಕುವುದು ಸಾಧ್ಯವೇ? ಎಂಬ ಅನುಮಾನ ಬಲವಾಗುತ್ತದೆ. ರಚಿಸಿದ ಕೃತಿಗಳು ಮಾರಾಟವಾಗದೇ ಉಳಿದುಬಿಟ್ಟರೆ ಅದರಿಂದ ಆತನ ಸಾಹಿತ್ಯಾಸಕ್ತಿ ಕುಗ್ಗಿ ಹೋಗಬಹುದು. ಕುವೆಂಪು ಅವರು ಹೇಳುವ ಹಾಗೆ "ಅವರ ಜೀವನಕ್ಕೆ ಅತ್ಯವಶ್ಯವಾದ ಮಿತಭೋಗವನ್ನು ಜನರೇ ಕಲ್ಪಿಸಿ ಕೊಡಬೇಕು. ಅವರ ಗ್ರಂಥಗಳು ಮಾರಾಟವಾಗಬೇಕು ಅವರ ಮನಸ್ಸೆಲ್ಲ ಹೊಟ್ಟೆಯಲ್ಲೇ ಸುಳಿದಾಡದೆ ಉತ್ತಮ ಧ್ಯೇಯಗಳ ಗಗನ ಪ್ರಾಂತದಲ್ಲಿ ಹಾರಾಡುವಂತೆ ಮಾಡುವ ಕೆಲಸ ಜನರ ಕೈಯಲ್ಲಿದೆ".[೧] ಇದು ಆಗಬೇಕಾದರೆ ಅವರ ಕೃತಿಗಳಿಗೆ ವ್ಯಾಪಕವಾದ ಪ್ರಚಾರ ಸಿಗಬೇಕು.

---

೧. ಕುವೆಂಪು, ಪ್ರ.ಕ., ಸಂಪುಟ ೧೨, ಸಂಚಿಕೆ ೩, ಪು. ೧೨.

ಸಾಹಿತ್ಯದ ಪ್ರಚಾರದ ವಿಚಾರ ಬಂದಾಗ ಕವಿಯಾದವನು ಇದರಿಂದ ಲಾಭಪಡೆಯುವನಾದರೂ ಉತ್ತಮವಾದ ಸಾಹಿತ್ಯಕ್ಕೆ ಪ್ರಚಾರ ಸಿಗುವುದರಿಂದ ದೇಶಕ್ಕೂ ಲಾಭವುಂಟು. ನವದೃಷ್ಟಿಯ ಸಾಹಿತ್ಯದ ಅಧ್ಯಯನದಿಂದ ಜನತೆಯ ಅರಿವಿನ ಕಣ್ಣುತೆರೆಯಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದಲೂ ಸಾಹಿತ್ಯದ ವಿಚಾರಗಳಿಗೆ ಹೆಚ್ಚಿನ ಪ್ರಚಾರ ಸಿಗಬೇಕಾದದು ಅವಶ್ಯಕ. ಸಾಹಿತ್ಯದ ಪ್ರಚಾರ ಮಾಡುವ ಸಂದರ್ಭದಲ್ಲಿ ಕೆಲವು ಅಂಶಗಳನ್ನು ಗಮನಿಸುವುದರಿಂದ ಅದಕ್ಕೆ ನ್ಯಾಯ ಒದಗಿಸಬಹುದು. ಸಾಹಿತ್ಯ ಪ್ರಚಾರ ಮಾಡುವ ಕಾರ್ಯ ಕೆಲವೇ ಕೆಲವು ಮಂದಿಗಳದ್ದಾಗಿರದೇ ಭಾಷಾಭಿಮಾನಿಗಳೆಲ್ಲರೂ ಈ ಕಾರ್ಯದಲ್ಲಿ ತೊಡಗ-ಬೇಕಾಗುತ್ತದೆ.

ಸಾಹಿತ್ಯ ಜನಜೀವನದ ವಾಣಿಯಾಗಿದ್ದು ಇದನ್ನು ರಚಿಸುವ ಕವಿ ಪ್ರತಿಭಾವಂತನಾಗಿರುತ್ತಾನೆ. ಆದುದರಿಂದಲೇ ಕವಿ ಎಂದರೆ "ಬರೆಯುವವರು ಬರೆಯಲಾರದಿಹ ಸಾವಿರಾರು ಜನರ ಪ್ರತಿನಿಧಿಯಾಗಿರುತ್ತಾನೆ. ಕವಿಗಳೆಂದರೆ ಅವರು ನಾಡಿನ ನಾಡಿಗಳು" ಎಂಬ ಕುವೆಂಪು ಅವರ ಅಭಿಪ್ರಾಯ ಸಮ್ಮತವಾದದ್ದು. ಆದರೆ ಇಂತಹ ಕವಿಯ ಬರವಣಿಗೆ ಬಹುತೇಕ ವಾಚಕರಿಗೆ ಮುಟ್ಟುವುದೇ ಇಲ್ಲ. ಇದು ಸರಿಯಾದ ಕ್ರಮ ಅಲ್ಲ. ಸಾಹಿತ್ಯ ಎಲ್ಲರನ್ನು ಮುಟ್ಟುವಂತೆ ಆಗಬೇಕು. ಸಾಹಿತ್ಯ ಪ್ರಚಾರದ ಕಾರ್ಯ ಸಾಗಬೇಕು. ಇದಕ್ಕಾಗಿ ಸಾಹಿತ್ಯ ಪ್ರಚಾರ ಮಾಡುವವರು ಜನತೆಯ ಆಸಕ್ತಿಯ ಕ್ಷೇತ್ರವನ್ನು ಗುರುತಿಸಿ ಅವರಿಗೆ ಅದು ಎಲ್ಲೆಲ್ಲಿ ಲಭ್ಯವಾಗುತ್ತದೆ ಎಂಬ ವಿವರಣೆ ನೀಡುವುದು ಅವಶ್ಯಕ. ಕುವೆಂಪು ಅವರ ಅಭಿಪ್ರಾಯದಂತೆ ಸಾಹಿತ್ಯ ಪ್ರಚಾರದ ಸಂದರ್ಭದಲ್ಲಿ ಬರೆದುದನ್ನು ರಸವತ್ತಾಗಿ ಓದಲು ಕಲಿತಿರಬೇಕು. ಇದರಿಂದಾಗಿ ಕಾವ್ಯದ ಸ್ವಾರಸ್ಯವನ್ನು ಜನಗಳಿಗೆ ಮುಟ್ಟಿಸಲು ಸಾಧ್ಯವಾಗುತ್ತದೆ ಎಂದರೆ ಇದಕ್ಕಾಗಿ ಕಾವ್ಯವಾಚನ ಕಲೆಯನ್ನು ಅಭ್ಯಾಸ ಮಾಡುವುದು ಒಳ್ಳೆಯದು. ಕರ್ಣಾಟಕ ಸಂಘಗಳನ್ನು ಸ್ಥಾಪಿಸಿ ಜನಗಳಿಗೆ ಸಾಹಿತ್ಯ ಪ್ರಪಂಚದಲ್ಲಿ ನಡೆಯುವ ವಿದ್ಯಾಮಾನಗಳನ್ನು ಪರಿಚಯ ಮಾಡಿಕೊಡಬೇಕು. ಸಾಹಿತ್ಯ ಪ್ರೇಮಿಗಳು ಹಳ್ಳಿಗಳಲ್ಲಿ ಸಂಚರಿಸಿ ಹಳ್ಳಿಗರು ಒಂದೆಡೆ ಸೇರುವಂತೆ ಮಾಡಿ ಕಾವ್ಯವನ್ನು ಓದಿ ಹೇಳಬೇಕು. ಒಂದು ಬಾರಿ ಕಾವ್ಯದ ಸೊಬಗು ಓದುಗರ ಗಮನಸೆಳೆಯಿತೆಂದರೆ ನಂತರ ಅವರೇ ಹುಡುಕಿಕೊಂಡು ಓದುತ್ತಾರೆ. ದೃಶ್ಯಕಾವ್ಯಗಳ ಅಭಿನಯದ ಮೂಲಕ ಹೊಸ ರೀತಿಯಿಂದ ಬರೆದ ನಾಟಕಗಳನ್ನು ಆಡಿ ತೋರಿಸುವುದರಿಂದ ಜನರಲ್ಲಿ ಸಾಹಿತ್ಯದ ಬಗ್ಗೆ ಅಭಿಮಾನ ಹೆಚ್ಚುವುದು. ಇವೆಲ್ಲವೂ ಸಾಹಿತ್ಯ ಪ್ರಚಾರದ ಮೂಲಕ ಆಗಬೇಕಾದ ಕಾರ್ಯ. ವಿದ್ಯಾವಂತರು ತಮ್ಮ ಜವಾಬ್ದಾರಿಯನ್ನು ಅರಿತು ಸಾಹಿತ್ಯ ಪ್ರಚಾರ ಮಾಡಬೇಕಾಗಿದೆ. ಈ ಎಲ್ಲ ವಿಚಾರಗಳನ್ನು ಅನುಮೋದಿಸುವ

ಸಂಪಾದಕರು ಮೈಸೂರು ವಿಶ್ವವಿದ್ಯಾನಿಲಯದವರು ನಾಡಿನ ವಿವಿಧ ಭಾಗಗಳಲ್ಲಿ ಸಂಚರಿಸಿ ಪ್ರಚಾರ ಉಪನ್ಯಾಸ ಮಾಲೆಯನ್ನು ನೀಡಿದ ಸಂದರ್ಭದಲ್ಲಿ ಅದನ್ನು ಮುಕ್ತ ಕಂಠದಿಂದ ಸ್ವಾಗತಿಸಿದ್ದಾರೆ. ಅಲ್ಲಿ ನಡೆಯುತ್ತಿದ್ದ ಕಾರ್ಯಕ್ರಮಗಳು, ಪ್ರಕಟವಾಗುತ್ತಿದ್ದ ವಿಚಾರಗಳಲ್ಲಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿದೆ. ಪ್ರಚಾರ ಉಪನ್ಯಾಸದ ಸಂದರ್ಭದಲ್ಲಿ ವಿಧ ವಿಧವಾದ ವಿಷಯಗಳು ಪ್ರಸ್ತಾಪವಾದಾಗ ಅದಕ್ಕೆ ವ್ಯಾಪಕವಾದ ಪ್ರಚಾರ ಸಿಗುವಂತೆ ನೋಡಿಕೊಂಡ ಪ್ರಬುದ್ಧ ಕರ್ಣಾಟಕ ಸಾಹಿತ್ಯ ಪ್ರಚಾರದಂತ ವಿಚಾರಗಳಿಗೆ ಮಹತ್ವ ನೀಡಿದೆ.

**ಜನಪ್ರಿಯ ವಿಜ್ಞಾನ ಸಾಹಿತ್ಯದ ಬೆಳವಣಿಗೆ**

ಆಧುನಿಕ ಕನ್ನಡ ಸಾಹಿತ್ಯದ ಜನಪ್ರಿಯ ವಿಜ್ಞಾನ ಸಾಹಿತ್ಯ ರಚನೆಯ ಕಾರ್ಯ ಆರಂಭವಾಗಿದ್ದು ೨೦ನೆಯ ಶತಮಾನದ ಆದಿಯಲ್ಲಿ. ಕಳೆದ ಶತಮಾನದ ಆರಂಭದಲ್ಲಿ ಕನ್ನಡದಲ್ಲಿಯ ಕೆಲವು ಪತ್ರಿಕೆಗಳು ಜನಸಾಮಾನ್ಯರಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸುವ ಸಲುವಾಗಿ ವಿವಿಧ ವಿಷಯಗಳನ್ನು ಕುರಿತ ಜನಪ್ರಿಯ ವೈಜ್ಞಾನಿಕ ಲೇಖನಗಳಿಗೆ ವಿಶೇಷ ಒತ್ತು ನೀಡಿದವು. ವಿದ್ವಾಂಸರಿಂದ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಲೇಖನಗಳನ್ನು ಬರೆಯಿಸಿ ಪ್ರಕಟಿಸಿದರು. ಅಲ್ಪ ಪ್ರಮಾಣದಲ್ಲಿ ನಡೆದ ಈ ಕಾರ್ಯಗಳು ನಂತರದ ಪತ್ರಿಕೆಯವರಿಗೆ ಮಾರ್ಗಸೂಚಿಯಾದವು. ಈ ದಿಶೆಯಲ್ಲಿ ಹಿತೋಪದೇಶ, ಅರುಣೋದಯ, ಶೋಧಕ, ಹಿತಭೋಧಿನಿ, ಲೋಕಶಿಕ್ಷಕ ವಿಜ್ಞಾನ ದೀಪ ವಿದ್ಯಾರ್ಥಿಕೋಶ, ವಿದ್ಯಾದಾಯಿನಿ, ಕರ್ನಾಟಕ ಜ್ಞಾನ ಮಂಜರಿ, ಸುವಾಸನಿ ಈ ಮೊದಲಾದ ಪತ್ರಿಕೆಗಳು ಗಮನಾರ್ಹವೆನಿಸಿವೆ.

ಬ್ರಿಟಿಷರ ಆಳ್ವಿಕೆಯಿದ್ದ ಅಂದಿನ ದಿನಗಳಲ್ಲಿ ಪಾಶ್ಚಾತ್ಯ ಮಾದರಿಯ ಶಿಕ್ಷಣವನ್ನು ನೀಡುವ ಆಶಯ ಕಂಡು ಬಂದರೂ ಆಧುನಿಕ ವಿಜ್ಞಾನದ ಅಧ್ಯಯನಕ್ಕೆ ಅಂದು ಪ್ರಾಮುಖ್ಯತೆ ದೊರೆತಿರಲಿಲ್ಲ. ಅವರು ತಮ್ಮ ಆಡಳಿತಕ್ಕೆ ಅನುಕೂಲವಾಗುವಂತಹ ವಿದ್ಯಾಭ್ಯಾಸವನ್ನು ನೀಡುವ ಕಡೆ ಅವರು ಗಮನ ಹರಿಸಿದರೇ ಹೊರತು ವಿಜ್ಞಾನ ಶಿಕ್ಷಣವನ್ನು ಒದಗಿಸುವ ಬಗ್ಗೆ ಆಸಕ್ತಿ ತೋರಲಿಲ್ಲ. ನಂತರದ ದಿನಗಳಲ್ಲಿ ಭಾರತದ ದೇಶದ ನೈಸರ್ಗಿಕ ಸಂಪತ್ತಿನ ಬಳಕೆಯ ಪ್ರಯೋಜನದ ಅನಿವಾರ್ಯತೆ ಅವರಿಗೆ ಉಂಟಾದಾಗ ಇಲ್ಲಿನ ಜನರಿಗೆ ವೈಜ್ಞಾನಿಕ ಶಿಕ್ಷಣವನ್ನು ಅಲ್ಪ ಪ್ರಮಾಣದಲ್ಲಾದರೂ ನೀಡಬೇಕಾಗಿ ಬಂದಿತ್ತು. ಆ ನಂತರ ವೈಜ್ಞಾನಿಕ ಸಾಹಿತ್ಯ ಓದಲು ಪ್ರಾರಂಭಿಸಿದ ಕಾರಣ ಕನ್ನಡ ಜನಗಳಲ್ಲಿ ವೈಜ್ಞಾನಿಕ ಸಾಹಿತ್ಯವನ್ನು ಓದುವ ಮತ್ತು ಬರೆಯುವ ಪ್ರಕ್ರಿಯೆಯೂ ಬಹಳ ತಡವಾಗಿ ಪ್ರಾರಂಭವಾಯಿತು.

ವೈಜ್ಞಾನಿಕ ಸಾಹಿತ್ಯ ಎಂಬುದು ಸಂಪೂರ್ಣವಾಗಿ ವೈಜ್ಞಾನಿಕ ವಿಚಾರಗಳನ್ನು ಸಂಶೋಧನೆಗಳನ್ನು ಅದರ ಫಲಿತಾಂಶಗಳನ್ನು ವೈಜ್ಞಾನಿಕ ಕ್ಷೇತ್ರಗಳಲ್ಲಿ ಇರುವವರಿಗೆ ತಿಳಿಸಿಕೊಡುವುದಾಗಿದ್ದರೆ ಜನಪ್ರಿಯ ವಿಜ್ಞಾನ ಸಾಹಿತ್ಯ ತಜ್ಞರಲ್ಲದೆ ಸಾಮಾನ್ಯ ಓದುಗರನ್ನು ಗಮನದಲ್ಲಿರಿಸಿಕೊಂಡು ರಚನೆಯಾಗುವ ಸಾಹಿತ್ಯ. ವಿಜ್ಞಾನದ ಸಾಧನೆಗಳನ್ನು ಜನರಿಗೆ ತಿಳಿಸುವುದು, ಅದರಿಂದ ಉಂಟಾಗುವ ಪರಿಣಾಮ, ಸಾಧಕ ಬಾಧಕಗಳನ್ನು ಜನರಿಗೆ ತಿಳಿ ಹೇಳುವುದು ವಿಜ್ಞಾನದ ಸದುಪಯೋಗಪಡಿಸಿ-ಕೊಳ್ಳುವುದು ಹಾಗೂ ವೈಜ್ಞಾನಿಕ ಮನೋಧರ್ಮವನ್ನು ಹೇಗೆ ಮತ್ತು ಏಕೆ ಬೆಳೆಸಿಕೊಳ್ಳಬೇಕು ಎಂಬಂತಹ ವಿಚಾರಗಳನ್ನು ಜನರಿಗೆ ತಿಳಿಸುವುದು ಈ ಬಗೆಯ ಸಾಹಿತ್ಯದ ಗುರಿಯಾಗಿರುವಂತೆ ತೋರುತ್ತದೆ. ಈ ಬಗೆಯ ಸಾಹಿತ್ಯ ಜನರ ಅಪೇಕ್ಷೆ, ಆಸೆ, ಆಕಾಂಕ್ಷೆ ಇವುಗಳ ಕಾರಣದಿಂದ ಕ್ವಚಿತ್ತಾಗಿ ರಚನೆಯಾಗುತ್ತದೆ. ಬಹುತೇಕ ಸಂದರ್ಭಗಳಲ್ಲಿ ಜನತೆಗೆ ಏನು ಬೇಕು ಎಂಬುದನ್ನು ಸ್ವತಃ ಅರಿತುಕೊಂಡ ಬರಹಗಾರರಿಂದ ಸೃಷ್ಟಿಯಾಗುತ್ತದೆ. ಹೀಗೆ ಸೃಷ್ಟಿಯಾಗುವ ಸಾಹಿತ್ಯದಲ್ಲಿ ಅತಿಯಾದ ವೈಜ್ಞಾನಿಕ ಪರಿಭಾಷೆಯನ್ನು ಬಳಸದೆ ಜನ ಸಾಮಾನ್ಯರ ಭಾಷೆಯಲ್ಲಿ ವಿಚಾರಗಳನ್ನು ಒದಗಿಸಿದಾಗ ಅದು ಸಾಮಾನ್ಯ ಜನರನ್ನು ಮುಟ್ಟುತ್ತದೆ. ಇದಕ್ಕೆ ಸಂಬಂಧಿಸಿದಂತೆ ಕನ್ನಡ ವಿಷಯ ವಿಶ್ವಕೋಶವು ಜನ ಸಾಮಾನ್ಯರೆಡೆಗೆ ವೈಜ್ಞಾನಿಕ ಮಾಹಿತಿಗಳನ್ನು ಸಾಗಿಸುವುದು ಮತ್ತು ಸಮಾಜದಲ್ಲಿ ವಿಜ್ಞಾನ, ತಂತ್ರಜ್ಞಾನಗಳ ಪ್ರಗತಿಗೆ ತಕ್ಕ ವಾತಾವರಣವನ್ನು ನಿರ್ಮಿಸುವುದು ಇವು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಕನ್ನಡ ವಿಜ್ಞಾನ ಸಾಹಿತ್ಯ ರಚನೆಗೆ ತೊಡಗಿಸಿಕೊಂಡವರ ಮುಖ್ಯ ಉದ್ದೇಶವಾಗಿತ್ತು ಎಂಬುದನ್ನು ಗುರುತಿಸಿದೆ. ಇತ್ತೀಚಿನ ದಿನಗಳಲ್ಲಿ ದಿನ ಪತ್ರಿಕೆ, ವಾರ ಪತ್ರಿಕೆ ಹಾಗೂ ಮಾಸಿಕಗಳಲ್ಲಿ ಸಚಿತ್ರ ಬಿಡಿ ಬರಹಗಳ ಮೂಲಕ ವೈಜ್ಞಾನಿಕ ಲೇಖನಗಳು ಪ್ರಕಟವಾಗುತ್ತಿವೆ. ವರ್ತಮಾನದ ಕಾಲದ ವಿಜ್ಞಾನದ ವಿಷಯಗಳ ಬಗ್ಗೆ ಚರ್ಚಿಸುವುದರ ಮೂಲಕ, ಅಂಕಣಗಳ ಮೂಲಕ, ವಿಜ್ಞಾನಕ್ಕೆ ಸಂಬಂಧಿಸಿದ ಲೇಖನಗಳು ಪ್ರಕಟವಾಗುತ್ತವೆ. ಆದರೆ ಈ ಶತಮಾನದ ಆರಂಭದಲ್ಲಿ ಪರಿಸ್ಥಿತಿ ಹೀಗಿರಲಿಲ್ಲ ಜನ ಸಾಮಾನ್ಯರಿಗೆ ವಿಜ್ಞಾನದ ವಿಚಾರಗಳು ತಲುಪುವಂತಹ ವಾತಾವರಣವಿರಲಿಲ್ಲ. ವೈಜ್ಞಾನಿಕ ಗ್ರಂಥಗಳು ಪ್ರಕಟವಾಗಿದ್ದರೂ ಅವುಗಳ ಸಂಖ್ಯೆ ತೀರಾ ಕಡಿಮೆ ಇದ್ದು ಅವುಗಳು ಜನರನ್ನು ಮುಟ್ಟಿರಲಿಲ್ಲ. ಪೂರ್ಣ ಪ್ರಮಾಣದ ವೈಜ್ಞಾನಿಕ ಬರಹಗಳಿಗೇ ಹೆಚ್ಚಿನ ಆದ್ಯತೆ ಇರದಿದ್ದ ಅಂತಹ ಸಂದರ್ಭದಲ್ಲಿ ಜನಪ್ರಿಯ ವಿಜ್ಞಾನ ಸಾಹಿತ್ಯದ ರಚನೆಯಾಗಬೇಕಾದರೆ ದೂರದೃಷ್ಟಿಯುಳ್ಳ ಹಾಗೂ ಜನಗಳ ಅಗತ್ಯವೇನು ಎಂಬುದನ್ನು ಅರಿತುಕೊಂಡಿದ್ದ ಜವಾಬ್ದಾರಿಯುತವಾದ ವಿದ್ವಾಂಸರುಗಳಿಂದ ಹಾಗೂ ಪತ್ರಿಕೆಗಳಿಂದ ಮಾತ್ರ ಆಗಬೇಕಿದ್ದ ಕಾರ್ಯವಾಗಿತ್ತು. ೧೯೧೭ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರವಿಜ್ಞಾನ

ಪ್ರಾಧ್ಯಾಪಕರಾಗಿದ್ದ ಬೆಳ್ಳಾವಿ ವೆಂಕಟನಾರಾಯಣಪ್ಪನವರು ಹಾಗೂ ಮೈಸೂರು ಸರ್ಕಾರದ ಪವನಶಾಸ್ತ್ರ ವೀಕ್ಷಣಾಲಯದ ಮುಖ್ಯಸ್ಥರಾಗಿದ್ದ ನಂಗಪುರಂ ವೆಂಕಟೇಶ್ ಅಯ್ಯಂಗಾರರು ಕನ್ನಡ ಭಾಷೆಯ ಮೂಲಕ ವಿಜ್ಞಾನದ ವಿಚಾರಗಳನ್ನು ಜನಸಾಮಾನ್ಯರಿಗೂ ಮುಟ್ಟಿಸುವ ಪ್ರಯತ್ನ ಮಾಡಿದರು. 'ಕರ್ನಾಟಕ ವಿಜ್ಞಾನ ಪ್ರಚಾರಿಣಿ ಸಮಿತಿ' ಎಂಬುದನ್ನು ಸ್ಥಾಪಿಸಿ ಅದರ ಮೂಲಕ 'ವಿಜ್ಞಾನ' ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. ಅದರಲ್ಲಿ ಜನಹಿತವಾದ ಲೇಖನಗಳನ್ನು ಪ್ರಕಟಿಸಿ ವೈಜ್ಞಾನಿಕ ಬರಹಗಳ ಕಡೆ ಓದುಗರನ್ನು ಸೆಳೆದರು. ಆದರೆ ಈ ಪ್ರಯತ್ನ ಹೆಚ್ಚು ದಿನ ಸಾಗಲಿಲ್ಲ. ಆದರೆ ಇದೇ ಕಾಲಘಟ್ಟದಲ್ಲಿ ಪ್ರಾರಂಭಗೊಂಡ ಪ್ರಬುದ್ಧ ಕರ್ನಾಟಕ ವೈಜ್ಞಾನಿಕ ಬರಹಗಳ ಪ್ರಕಟಣೆಯನ್ನು ಪ್ರಾರಂಭ ಮಾಡಿತು. ಕನ್ನಡ ವಿಷಯ ವಿಶ್ವಕೋಶವು ಇದನ್ನು ಕುರಿತಂತೆ "ಜನಪ್ರಿಯ ವಿಜ್ಞಾನದ ಸಾಹಿತ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ ಸಂಘ ಸಂಸ್ಥೆಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ ಆಶ್ರಯದಲ್ಲಿ (೧೯೧೯) ಜನ್ಮವೆತ್ತಿ ಈಗ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗುತ್ತಿರುವ ಪ್ರಬುದ್ಧ ಕರ್ನಾಟಕ ಪತ್ರಿಕೆಯನ್ನು ಮೊದಲು ಹೆಸರಿಸಬೇಕು."[೧] ಪ್ರಬುದ್ಧ ಕರ್ನಾಟಕ ವೈಜ್ಞಾನಿಕ ಬರಹಗಳಿಗೆ ಹೆಚ್ಚಿನ ಆದ್ಯತೆ ನೀಡಲು ಆರಂಭಿಸಿದ ನಂತರ ಅವುಗಳಿಗೆ ವಾಚಕರಿಂದ ಒಳ್ಳೆಯ ಪ್ರತಿಕ್ರಿಯೆಯು ದೊರೆಯಿತು. ತನಗೆ ದೊರೆತ ಈ ಬೆಂಬಲದಿಂದಾಗಿ ಅದು ಆರು ತಿಂಗಳಿಗೊಮ್ಮೆ ವಿಜ್ಞಾನ ವಿಶೇಷಾಂಕಗಳನ್ನು ಪ್ರಕಟಿಸಲು ಮುಂದಾಯಿತು.

ನಂತರದ ದಿನಗಳಲ್ಲಿ ವಿಜ್ಞಾನದ ಬರಹಗಳಿಗಾಗಿಯೇ"ವಿಜ್ಞಾನ ಕರ್ನಾಟಕ' ಎಂಬ ಪತ್ರಿಕೆಯು ಆರಂಭವಾಯಿತು. ಮೈಸೂರು ವಿಶ್ವವಿದ್ಯಾಲಯದಿಂದ ಈ ಪತ್ರಿಕೆ ಪ್ರಕಟವಾದ ನಂತರ ಇದರಿಂದ ಸ್ಫೂರ್ತಿ ಪಡೆದ ಹಾಗೆ ವಿಜ್ಞಾನ ಭಾರತಿ (ಕರ್ನಾಟಕ ವಿಶ್ವವಿದ್ಯಾನಿಲಯ) ಜನಪ್ರಿಯ ವಿಜ್ಞಾನ (ಬೆಂಗಳೂರು ವಿಶ್ವವಿದ್ಯಾಲಯ) ಪತ್ರಿಕೆಗಳು ಆರಂಭಗೊಂಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಪ್ರಬುದ್ಧ ಕರ್ನಾಟಕವು ಸಾಹಿತ್ಯ ವಿಚಾರಗಳಿಗೆ ಪ್ರಾಮುಖ್ಯತೆಯನ್ನು ನೀಡಿ ಅವುಗಳನ್ನು ಪ್ರಕಟಿಸಿರುವಂತೆಯೇ ವೈಜ್ಞಾನಿಕ ಬರಹಗಳಿಗೂ ಅದು ಹೆಚ್ಚಿನ ಗಮನ ನೀಡಿದೆ. ಪ್ರಬುದ್ಧ ಕರ್ನಾಟಕವಯ ಪ್ರಾರಂಭವಾದಾಗ ಅದು ಸಾಹಿತ್ಯ ಸೇವೆಗೆ ಮೀಸಲಾಗಿರಬೇಕು ಎಂಬ ಅಭಿಪ್ರಾಯವನ್ನು ಹೊಂದಿತ್ತು. ಆದರೆ ವಿಜ್ಞಾನವು ಸಾಹಿತ್ಯದ ಜೊತೆಯಲ್ಲಿಯೇ ಬೆಳೆಯದೇ ಹೋದರೆ ಭಾಷೆಯ, ನಾಡಿನ ಮತ್ತು ಸಾಹಿತ್ಯದ ಸರ್ವತೋಮುಖ ಪ್ರಗತಿ ಸಾಧ್ಯವಿಲ್ಲವೆಂಬುದನ್ನು ಬೇಗನೇ ಅರಿತುಕೊಂಡು ಪತ್ರಿಕೆಯು ೧೯೨೪ರಿಂದಲೇ ವೈಜ್ಞಾನಿಕ ಬರಹಗಳಿಗೆ ಅವಕಾಶ ಕಲ್ಪಿಸಿಕೊಟ್ಟಿದೆ ಹಾಗೂ ನಂತರದ ದಿನಗಳಲ್ಲೂ

---

೧. ಕನ್ನಡ ವಿಷಯ ವಿಶ್ವಕೋಶ, ೨೦೦೫, ಪು. ೩೩೪.

ಅದಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದೆ. ದಿನದಿನಕ್ಕೂ ವಿಜ್ಞಾನದ ಬೆಳವಣಿಗೆ ಅಧಿಕವಾಗಿದ್ದು ಅದು ಜನರು ಬದುಕೆಲ್ಲವೆನ್ನು ವ್ಯಾಪಿಸಿಕೊಳ್ಳುತ್ತಿದ್ದ ಸಮಯದಲ್ಲೇ ಜನರ ಅಗತ್ಯತೆಯನ್ನು ಅರಿತುಕೊಂಡಿದೆ. ಹೊಸ ವಿಚಾರವನ್ನು ಅರಿಯಬೇಕು ಎನ್ನುವ ಜನರ ಆಸೆ ಆಕಾಂಕ್ಷೆಗಳು ಮಿತಿಮೀರಿದಾಗ ಅವರ ಶ್ರದ್ಧೆ ಆಸಕ್ತಿ ಇವುಗಳಿಗೆ ಅನುಗುಣವಾಗಿ, ಅವರ ಆಸಕ್ತಿ ಕುಗ್ಗದಂತೆ ಹೊಸ ವಿಚಾರಗಳನ್ನು ತಿಳಿಸಿಕೊಡಲು ಬರಹಗಾರರು ನೆರವಾಗಬೇಕು. ವೈಜ್ಞಾನಿಕ ವಿಷಯಗಳಿಗೆ ಜನತ್ತಿನ ಬೇರೆ ಬೇರೆ ಎಡೆಗಳಲ್ಲಿ ಎಂತಹ ಆದ್ಯತೆ ದೊರೆಯುತ್ತದೆಯೋ ಅಂತಹ ಆದ್ಯತೆ ಕನ್ನಡ ನಾಡಿನಲ್ಲೂ ದೊರೆಯಬೇಕು ಕನ್ನಡಿಗರು ಜಗತ್ತಿನ ಯಾವುದೇ ವಿಷಯಗಳನ್ನು ತಿಳಿಯುವಂತಹ ಸಂದರ್ಭದಲ್ಲಿ ಉಳಿದವರಿಗಿಂತ ಹಿಂದೆ ಬೀಳಬಾರದು. ಜನಸಾಮಾನ್ಯರಲ್ಲಿ ವಿಜ್ಞಾನವನ್ನು ಹರಡದ ಹೊರತು ದೇಶ ಅಭಿವೃದ್ಧಿಗೆ ಬರಲಾರದು. ಆದುದರಿಂದ "ಕನ್ನಡನಾಡಿನಲ್ಲಿ ವೈಜ್ಞಾನಿಕ ವಿಷಯಗಳನ್ನು ತಿಳಿದಿರುವ ಜನರು ಅದನ್ನು ಉಳಿದವರಿಗೆ ದೊರಕಿಸಿ ಕೊಡಬೇಕು. ಅವುಗಳ ಶಕ್ತಿ ರಸ ಕಾಂತಿಗಳು ಕನ್ನಡಿಗರ ಜೀವಿತಕ್ಕೂ ಅತ್ಯಗತ್ಯ. ಅವುಗಳ ಸ್ವರೂಪವನ್ನು ನಮಗೆ ಕಾಣಿಸುವವರೂ ಅವುಗಳ ಪ್ರಯೋಜನ ಮಾಡಿಸಿ ಅವನು ದುಡಿಸುವವರೂ ನಮ್ಮ ನಾಡಿನ ಸಾಹಸಿಗರು. ಅಂತಹ ಸಾಹಸ ಕನ್ನಡಿಗರಾದರೆ ಇಂದಿನ ಜ್ಞಾನ ಪ್ರಪಂಚದಲ್ಲಿ ಕನ್ನಡಿಗರೂ ಸ್ಥಾನ ಪಡೆದಂತಾಗುತ್ತದೆ."[೧] ಕನ್ನಡಿಗರಾದ ನಾವು ಮುಂದುವರೆಯಲು ಪ್ರಗತಿಯನ್ನು ಸಾಧಿಸಲು ಆಲೋಚಿಸಬೇಕೇ ಹೊರತು ಹಿಂದು ಹಿಂದಕ್ಕೆ ಚಲಿಸಿದರೆ ಅದು ಪ್ರಗತಿಗೆ ಮಾರಕವಾಗುತ್ತದೆ. ವೈಜ್ಞಾನಿಕ ಜ್ಞಾನ ಕನ್ನಡದ ಮೂಲಕ ಕನ್ನಡಿಗರನ್ನು ಮುಟ್ಟಬೇಕು. ೧೯೬೩ರಲ್ಲಿ ಪ್ರಬುದ್ಧ ಕರ್ನಾಟಕ ತನ್ನ ಚಿನ್ನದ ಹಬ್ಬದ ಆಚರಣೆಯ ಸಂದರ್ಭದಲ್ಲಿ ಹೊರತಂದ ಚಿನ್ನದ ಸಂಚಿಕೆ ಅಪೂರ್ವವಾದ ಕೃತಿ ಇದರಲ್ಲಿ ೫೦ಕ್ಕಿಂತ ಹೆಚ್ಚು ಮಂದಿ ವಿಜ್ಞಾನ ಲೇಖಕರು ಸುಮಾರು ೧೬೦೦ ಪುಟಗಳಿಗಿಂತ ಹೆಚ್ಚು ವಿಜ್ಞಾನದ ಲೇಖನಗಳನ್ನು ಬರೆದಿದ್ದಾರೆ.

ಕನ್ನಡ ನಾಡಿಗೂ ಕನ್ನಡಕ್ಕೂ ಹೊಸ ಕಾಲದ ಕರೆ ಅನಿವಾರ್ಯ. ಆದ್ದರಿಂದ ನಮ್ಮ ಎಲ್ಲ ವಿದ್ವಾಂಸರು ತಾವು ತಾವು ತಿಳಿದಿದ್ದುದ್ದನ್ನು ಇಲ್ಲಿ ಶಾಸ್ತ್ರ ಸಂಪತ್ತು ಬೆಳೆಯುವಂತೆ ಕನ್ನಡದಲ್ಲಿ ಹೇಳಬೇಕು ಬರೆಯಬೇಕು ಬಳಸಬೇಕು ಎಂಬುದನ್ನು ಸ್ಪಷ್ಟಗೊಳಿಸಿದ ಪ್ರಬುದ್ಧ ಕರ್ನಾಟಕ ಅದಕ್ಕಾಗಿ ಎರಡು ರೀತಿಯಲ್ಲಿ ಪ್ರಮುಖವಾಗಿ ಕರ್ತವ್ಯ ನಿರ್ವಹಿಸಿದೆ. ಮೊದಲನೆಯದಾಗಿ ಹೊಸ ಹೊಸ ತತ್ವಗಳು, ಕಲ್ಪನೆಗಳು ಅವಿಷ್ಕಾರಗಳು, ಇದನ್ನು ನಿರೂಪಿಸಿ ಜನಗಳನ್ನು ಮುಟ್ಟುವುದಕ್ಕಾಗಿ ಹಾಗೂ ಮಹತ್ತರ ಸಂವಹನಕ್ಕೆ ಬೇಕಾದ ಭಾಷೆಯನ್ನು ಸಜ್ಜುಗೊಳಿಸಲು ಪ್ರಯತ್ನಿಸಿದ್ದು ಪ್ರಬುದ್ಧ

---

೧. ಸಂಪಾದಕೀಯ, ಪ್ರಕ. ಸಂ. ೨೮, ಸಂ. ೩, ಪು. ೧೪೬.

ಕರ್ನಾಟಕದಲ್ಲಿ ಹೀಗೆ ವೈಜ್ಞಾನಿಕ ಬರಹಗಳು ಪ್ರಕಟಗೊಳ್ಳುತ್ತಿದ್ದ ಕಾಲದಲ್ಲಿಯೇ ವಿಜ್ಞಾನದಿಂದ ಸಮಾಜಕ್ಕಾಗುವ ಅನುಕೂಲತೆಯೇನು? ವಿಜ್ಞಾನ ಪ್ರಗತಿ ಸಾಧಿಸಬೇಕೆಂದರೆ ಅದು ಯಾವ ದಿಕ್ಕಿನಲ್ಲಿ ಸಾಗಬೇಕು ಎಂಬಂತಹ ವಿಚಾರಗಳೂ ಚರ್ಚೆಗೆ ಒಳಗಾಗುತ್ತಿತ್ತು. ಪ್ರಬುದ್ಧ ಕರ್ನಾಟಕ ಪ್ರಕಟಿಸಿದ ಹಲವಾರು ಬರಹಗಳು ಇಂತಹ ಚರ್ಚೆಗೆ ವೇದಿಕೆಯನ್ನು ಕಲ್ಪಿಸಿ ಕೊಟ್ಟಿವೆ.

ಆಧುನಿಕ ನಾಗರಿಕತೆಗೆ ವಿಜ್ಞಾನದ ಕೊಡುಗೆ ಗಮನಾರ್ಹ, ವಿಜ್ಞಾನದ ಕಾರಣದಿಂದಾಗಿ ಹೊಸ ಹೊಸ ಯಂತ್ರಗಳ ಅವಿಷ್ಕಾರಗಳಾಗತೊಡಗಿದವು. ಅವುಗಳಿಂದಾಗಿ ಹೆಚ್ಚಿನ ಸಂಖ್ಯೆಯಲ್ಲಿ ಕೈಗಾರಿಕೆಗಳ ಬೆಳವಣಿಗೆಯಾದವು. ನಗರಗಳ ಸಂಖ್ಯೆ ಬೆಳೆಯ ತೊಡಗಿದವು. ವಿದ್ಯುತ್ ಬಳಕೆಯ ಪ್ರಸರಣವು ಎಲ್ಲ ಕಡೆಯಲ್ಲೂ ವ್ಯಾಪಿಸಿ ನಾಗರಿಕತೆಯ ನಿರ್ಮಾಣಕ್ಕೆ ತನ್ನ ವಿಶೇಷ ಕೊಡುಗೆಯನ್ನು ಕೊಟ್ಟಿತು. ಅಡುಗೆ ಮನೆಯ ಸಾಮಗ್ರಿಗಳಿಂದ ಹಿಡಿದು ರೇಡಿಯೋ, ಟಿ.ವಿ.ಸಿನಿಮಾದಂತಹ ಮನೋರಂಜನಾ ಸಾಮಗ್ರಿಗಳು, ಬೃಹತ್ ಕೈಗಾರಿಕೆಗಳು ಹೀಗೆ ಎಲ್ಲಾ ಕಡೆಯಲ್ಲೂ ವಿಜ್ಞಾನ ತನ್ನ ಛಾಯೆಯನ್ನು ಪಸರಿಸಿತು. ಇದರ ಪ್ರಭಾವದಿಂದಾಗಿ ಸಾಮಾಜಿಕ ಜೀವನದಲ್ಲಿ ಅಘಾದವಾದ ಬದಲಾವಣೆಯಾಯಿತು. ಇಂತಹ ಸಂದರ್ಭದಲ್ಲಿ ಸಮಾಜದ ಒಳಗಿದ್ದು ಅಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ಗಮನಿಸಿದ ಹಲವಾರು ಬರಹಗಾರರು, ವೈಜ್ಞಾನಿಕ ಸಂಶೋಧನೆಗಳು ಯಾವ ದಿಕ್ಕಿನಲ್ಲಿ ಸಾಗಿದರೆ ಸಮಾಜಕ್ಕೆ ಅನುಕೂಲ ಎಂಬ ಮಾರ್ಗದರ್ಶನ ಮಾಡಿದ್ದಾರೆ. ಆರ್.ಎಲ್.ನರಸಿಂಹಯ್ಯನವರು ಈ ವಿಷಯಕ್ಕೆ ಸಂಬಂಧಿಸಿದಂತೆ "ಬ್ರಹ್ಮಾಂಡದಲ್ಲಿ ಅಸಂಖ್ಯಾತ ಕ್ರಿಯೆಗಳು ದಿನವೂ ನಡೆಯುತ್ತಿರುತ್ತವೆ. ಅಂತಹ ಕ್ರಿಯೆಗಳಲ್ಲಿ ಸಾತ್ವಿಕ್ ರಾಜಸ್ ಅಥವಾ ತಾಮಸ್ ಪ್ರವೃತ್ತಿಗಳಲ್ಲೊಂದಕ್ಕೆ ಸೇರಿದ ಕ್ರಿಯೆಗಳಲ್ಲಿ ಒಂದಾಗಿರುತ್ತವೆ. ವೈಜ್ಞಾನಿಕ ಸಂಶೋಧನೆಗಳು ಈ ನಿಯಮಕ್ಕೆ ಹೊರತಾಗಿರುವುದು ಸಾಧ್ಯವಿಲ್ಲ. ಸಂಶೋಧನೆಯ ಫಲಾಫಲದ ಅಪೇಕ್ಷ ಇಲ್ಲದೇ ಇದ್ದರೆ ನಿಷ್ಕಾಮವೆಂತಲೂ, ತಾತ್ವಿಕವೆಂತಲೂ ಜನಪಯೋಗ ದೃಷ್ಟಿಯಿಂದ ನಡೆಸುವ ಸಂಶೋಧನೆ ರಾಜಸ್ ವೈಜ್ಞಾನಿಕ ಸಂಶೋಧನೆ ಎಂತಲೂ ಜನಗಳ ಅಥವಾ ಜನಾಂಗದ ದೃಷ್ಟಿಯಿಂದ ನಡೆಸುವ ಸಂಶೋಧನೆಯನ್ನು ತಾಮಸ್ ಸಂಶೋಧನೆ ಎಂದೂ ಗುರುತಿಸಬಹುದು" ಎಂದಿದ್ದಾರೆ. ನಮ್ಮ ನಾಡಿಗೆ ನಮಗೆ ಇಂದು ಬೇಕಾಗಿರುವುದು ರಾಜಸ್ ಬಗೆಯ ವೈಜ್ಞಾನಿಕ ಸಂಶೋಧನೆಗಳು ಇವುಗಳ ಆಶಯ ನಿಷ್ಕಾಮ ವಿಜ್ಞಾನ ಎಂದರೆ ಯಾವುದೇ ಫಲಾಪೇಕ್ಷೆ ಇಲ್ಲದೆ ನಡೆಯುವ ಕಾರ್ಯವಾಗಿರಬೇಕು. ಆದುದರಿಂದಾಗಿ ನಿಷ್ಕಾಮವಾದ ಸಂಶೋಧನೆಗಳಿಗೆ ಮಾತ್ರ ಹೆಚ್ಚಿನ ಆದ್ಯತೆ ನೀಡಬೇಕು. ಈ ರೀತಿಯಾಗಿ ಸಂಶೋಧನೆಗೊಂಡ ಸಾಮಗ್ರಿಗಳು ಸಮಾಜದ ಬೆಳವಣಿಗೆಗೆ

ಸಹಕಾರಿಯಾಗುತ್ತವೆ ಹಾಗೂ ಇಂತಹ ವೈಜ್ಞಾನಿಕ ಸಂಶೋಧನೆಗಳು ಮಾನವ ವರ್ಗಕ್ಕೆ ಅನೇಕ ಬಗೆಯ ಸಹಾಯವನ್ನು ಒದಗಿಸಿ ಕೊಡುತ್ತವೆ. ಆದರೆ ಯಾವ ಸಾಧನವನ್ನೇ ಸದುಪಯೋಗ ಪಡಿಸಿಕೊಳ್ಳಲೂಬಹುದು ದುರುಪಯೋಗ ಪಡಿಸಿಕೊಳ್ಳಲೂಬಹುದು. ವೈಜ್ಞಾನಿಕ ಸಂಶೋಧನೆಗಳಲ್ಲಿ ಲೋಕನಾಶಮಾಡಬಲ್ಲ ಭೀಕರ ಶಕ್ತಿಯೂ ಅಡಗಿದೆ ನಿಜ. ಆದರೆ ಹಾಗೆಯೇ ಲೋಕೋದ್ಧಾರವಾಗಬಲ್ಲ ಉಜ್ವಲ ಶಕ್ತಿಯೂ ಬೆಳಗುತ್ತಿದೆ. ಇಂತಹ ಉಜ್ವಲ ಶಕ್ತಿಯ ಬಗ್ಗೆ ವಿಚಾರವಂತರಾದ ನಾಡಿನ ಜನತೆ ವಿವೇಕದಿಂದ ವರ್ತಿಸಿ ಲೋಕದ ಒಳಿತಿಗಾಗಿ ಅದನ್ನು ತಿರುಗಿಕೊಳ್ಳಬೇಕಾದ ವಿವೇಚನೆ ಇರಬೇಕು. ಆ ವಿವೇಚನೆ ಇಲ್ಲದೆ ಹೋದರೆ ಅದು ಲೋಕವನ್ನೇ ನಾಶ ಮಾಡಿಬಿಡಬಹುದು, ಆದುದರಿಂದ ಸರಿ ತಪ್ಪುಗಳನ್ನು ನಿರ್ಣಯಿಸುವ ವಿವೇಚನಾ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಗೊಂಡಿರುವ ವೈಜ್ಞಾನಿಕ ಬರಹಗಳು ಕೇವಲ ವೈಜ್ಞಾನಿಕ ಅಂಶಗಳನ್ನು ಜನತೆಗೆ ತಿಳಿಸಿಕೊಡುವ ಉದ್ದೇಶದಿಂದಷ್ಟೇ ಅಲ್ಲದೆ ನಾಡಿನ ಮೇಲೆ ಅದರಿಂದಾಗುವ ಪರಿಣಾಮಗಳ ಬಗ್ಗೆಯೂ ಚಿಂತಿಸಿರುವುದರಿಂದ ಅವು ವಿಶಿಷ್ಟವಾಗಿ ತೋರುತ್ತದೆ. ಕೆ.ಎಸ್.ಲಕ್ಷ್ಮಣ್‌ರಾವ್ ಅವರ ಕಲಾಯ್ಡ್ ವಿಜ್ಞಾನ ಹಾಗೂ ನಮ್ಮ ನಾಗರಿಕತೆ (೩೭–೨) ಎಂಬ ಲೇಖನದಲ್ಲೂ ಈ ಅಭಿಪ್ರಾಯವನ್ನು ಗಮನಿಸಬಹುದು. ಲೇಖಕರು ಕಲಾಯ್ಡ್ ದ್ರಾವಣ ಎಂದರೇನು ಅದರಿಂದ ಕನ್ನಡಿಗರು ಯಾವ ಯಾವ ರೀತಿಯಲ್ಲಿ ಪ್ರಯೋಜನ ಪಡದುಕೊಳ್ಳಬಹುದು ಎಂಬ ವಿವರಣೆಯನ್ನು ನೀಡುವ ಸಂದರ್ಭದಲ್ಲಿ ವಿಜ್ಞಾನದ ಬಳಕೆಗೆ ಬಗ್ಗೆಯೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ವಿಜ್ಞಾನವನ್ನು ನಾವು ಯಾವ ರೀತಿಯಲ್ಲಾದರೂ ಉಪಯೋಗಿಸ–ಬಹುದು. ಇದಕ್ಕೆ ನಮ್ಮ ಅಂತರ್ಯವೇ ಕಾರಣ ಉದಾಹರಣೆಗೆ ಬೆಂಕಿಯಿಂದ ಪ್ರಯೋಜನವನ್ನು ಪಡೆಯಬಹುದು. ಹಾಗೆಯೇ ನಾಶಕ್ಕೂ ಉಪಯೋಗಿಸಬಹುದು ವಿಜ್ಞಾನದ ಪರಿಣಾಮವೂ ಹಾಗೆಯೇ ಆಗಿರುತ್ತದೆ ಎಂಬ ಹೋಲಿಕೆ ನೀಡಿದ್ದಾರೆ.

ಹೀಗೆ ವಿಜ್ಞಾನದಿಂದ ಸಹಾಯ ಹಾಗೂ ಅಪಾಯಗಳೆರಡೂ ಒದಗಿ–ಬರಬಹುದಾಗಿದ್ದು ಈ ಬಗ್ಗೆ ಹಲವಾರು ಲೇಖನಗಳು ವಾಚಕರ ಗಮನಸೆಳೆದಿವೆ. ಈ ಬರಹಗಳ ಆಂತರ್ಯವನ್ನು ಗಮನಿಸಿದಾಗ ಅದರಲ್ಲಿ ವೈಜ್ಞಾನಿಕ ಬರಹಗಳನ್ನು ಕನ್ನಡಿಗರಿಗೆ ಒದಗಿಸಿಕೊಡಬೇಕೆಂಬ ಆಶಯವಿರುವಂತೆಯೇ ಅದು ಹೇಗೆ ಬಳಕೆಯಾಗಬೇಕು ಎಂಬುದೂ ಪ್ರಮುಖ ವಿಚಾರವಾಗಿರುವಂತೆ ತೋರುತ್ತದೆ. ಇಷ್ಟೇ ಅಲ್ಲದೆ ಜೊತೆಯಲ್ಲಿ ಸಾಮಾನ್ಯನ ಬದುಕಿಗೆ ನೆರವಾಗಬಲ್ಲ ವಸ್ತುಗಳ ಮಾಹಿತಿಯನ್ನು ಒದಗಿಸಿಕೊಡುವುದರ ಮೂಲಕ ನಾಡಿನ, ಜನತೆಯ ಬದುಕಿಗೆ ನೆರವಾಗಬೇಕೆಂಬ ಆಸೆಯೂ ಪತ್ರಿಕೆಗೆ ಇದ್ದದ್ದು ಕಂಡುಬರುತ್ತದೆ. ಬಿಸಿಲೊಲೆಯಂತಹ ಜನಪರವಾದ

ಸಾಧನಗಳು ಪರಿಚಯ ಕನ್ನಡಿಗರಿಗೆ ಅಗತ್ಯ ಎಂದೇ ಭಾವಿಸಿರುವ ಪತ್ರಿಕೆ ಅದರ ಪರಚಯವನ್ನು ಹಾಗೂ ಸೌರಶಕ್ತಿಯ ಬಳಕೆಯಿಂದಾಗುವ ಪ್ರಯೋಜನಗಳನ್ನು ದೀರ್ಘವಾಗಿ ಪ್ರಕಟಿಸಿದೆ. ನಿಮ್ನ ದರ್ಪಣಯುತವಾದ ಬಿಸಿಲೊಲೆಗಳು ರೂಪುಗೊಳ್ಳುತ್ತಿದ್ದು ಆ ವಿಷಯಕ್ಕೆ ಸಂಬಂಧಿಸಿದಂತೆ ಲೇಖನದ ಅಂತ್ಯದಲ್ಲಿ ವ್ಯಕ್ತವಾಗಿರುವ 'ಜನ ಬಾಹುಳ್ಯವು ದಿನೇ ದಿನೇ ವೃದ್ಧಿ ಹೊಂದುತ್ತಲೂ ಇರುವ ಈ ಸಮಯದಲ್ಲಿ ಸೌರಶಕ್ತಿಯನ್ನು ಸುಲಭೋಪಾಯದಲ್ಲಿ ನಿತ್ಯಜೀವನಕ್ಕೆ ಅಳವಡಿಸಿಕೊಳ್ಳಬೇಕಾದುದು ಅತ್ಯವಶ್ಯಕ. ಅದರಲ್ಲೂ ಬಿಸಿಲೊಲೆಗಳು ಬಡಬಗ್ಗರ ಅಡುಗೆಗೆ ನೆರವಾದರೆ ಸೌಧೆಗೆ ಅವರು ಈಗ ಪಡುತ್ತಿರುವ ಪರದಾಟ ಸ್ವಲ್ಪ ಮಟ್ಟಿಗಾದರೂ ಕಡಿಮೆಯಾಗುವ ನಿರೀಕ್ಷೆಯಿದೆ"[೧] ಎಂಬ ಆಶಯ ಪ್ರಬುದ್ಧ ಕರ್ನಾಟಕದಲ್ಲಿ ಇಂತಹ ಬರಹಗಳನ್ನು ಪ್ರಕಟಿಸಿರುವ ಹಿಂದಿರುವು ಉದ್ದೇಶವನ್ನು ಸ್ಪಷ್ಟಪಡಿಸಿದೆ. ಬಡ ಜನರ ಬದುಕಿನ ಕ್ರಮದಲ್ಲಿ ವಿಜ್ಞಾನದಿಂದ ಅಲ್ಪವಾದರೂ ಸಹಾಯ ದೊರೆಯಬೇಕು ವೈಜ್ಞಾನಿಕ ಅನ್ವೇಷಣೆಗಳ ಪ್ರಯೋಜನ ಪ್ರಯೋಜನ ಸಮಾಜದ ಕೆಳ ಸ್ತರದವರಿಗೂ ತಲುಪಬೇಕು. ಅದರ ಪ್ರಯೋಜನವನ್ನು ಅವರು ಪಡೆದುಕೊಳ್ಳಬೇಕು ಎಂಬ ಆಶಯವನ್ನು ಹೊಂದಿರುವ ಪತ್ರಿಕೆ ಅತಿಯಾದ ಹಣದ ಅಗತ್ಯವಿಲ್ಲದೇ ಅಲ್ಪವಾದ ಖರ್ಚಿನಿಂದ ಹೆಚ್ಚು ಪ್ರಯೋಜನ ಪಡೆಯುವ ಬಗೆ ಹೇಗೆ? ನಮ್ಮ ಆಹಾರದ ಕ್ರಮ ಹೇಗಿರಬೇಕು? ನಮಗೆ ಯಾವ ಯಾವ ಅನ್ನಾಂಗಗಳು ಬೇಕು? ಅವು ಯಾವ ಯಾವ ಪದಾರ್ಥಗಳಲ್ಲಿ ಇವೆ? ಎಂಬುದನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದೆ. ಕನ್ನಡ ನಾಡಿನ ಜನತೆಯ ಮಾನಸಿಕ ಹಾಗೂ ದೈಹಿಕ ಆರೋಗ್ಯದ ದೃಷ್ಟಿಹರಿಸಿ ಅದನ್ನು ದೊರಕಿಸಿಕೊಡುವ ನಿಟ್ಟಿನಲ್ಲಿ ಪ್ರಯತ್ನಿಸಿದೆ.

ಭಾರತದಲ್ಲಿ ಜನಸಂಖ್ಯೆಯ ಸಮಸ್ಯೆ ಅಧಿಕವಾಗುತ್ತಿದ್ದರೂ ಕೆಲವರು ತಪ್ಪು ತಿಳುವಳಿಕೆಯಿಂದ ಸಂತಾನ ನಿಯಂತ್ರಣಕ್ಕೆ ವಿರೋಧ ವ್ಯಕ್ತಪಡಿಸುತ್ತಿದ್ದುದು ಉಂಟು. ಅಂತಹ ಸಂಧರ್ಭದಲ್ಲಿ ಪ್ರಬುದ್ಧ ಕರ್ನಾಟಕ ಜನ ಸಾಮಾನ್ಯರಿಗೆ ಸಂತಾನ ನಿಯಂತ್ರಣದ ಬಗ್ಗೆ ತಿಳುವಳಿಕೆಯನ್ನು ನೀಡಿದೆ. ದೇಶದ ಅಭಿವೃದ್ಧಿಯ ದೃಷ್ಟಿಯಿಂದ ಇಂತಹ ಕಾರ್ಯಗಳು ಹೆಚ್ಚು ಹೆಚ್ಚಾಗಿ ನಡೆಯಬೇಕು ಸಂತಾನ ನಿರೋಧವು ಪಾಪದ ಕಾರ್ಯವಲ್ಲ. ಅದು ವಿವೇಕದ ಕುರುಹು ಎಂಬುದು ಸಮಾಜ ವಿಜ್ಞಾನಿಗಳ ಅಭಿಪ್ರಾಯ ಆದರೆ ಇದರ ಬಗ್ಗೆ ಯಾರು ಗಮನ ಹರಿಸಬೇಕೋ ಅವರು ಗಮನ ಹರಿಸುತ್ತಿಲ್ಲ. ಇದಕ್ಕೆ ಸಂಬಂಧಿಸಿದ ಉಪಕರಣಗಳನ್ನು ಯಾರು ಉಪಯೋಗಿಸಬೇಕೋ ಅವರು ಉಪಯೋಗಿಸಲು ಮುಂದೆ ಬರುತ್ತಿಲ್ಲ. ಇದನ್ನು ಕುರಿತಂತೆ ಜಿ. ಹನುಮಂತರಾವ್ ಅವರು ಹೇಳುವ ಹಾಗೆ ಬಡವರು ಅಶಕ್ತರು,

---

೧. ಶೀಬಯ್ಯ.ಎಲ್, ಪ್ರಕ., ಸಂ. ೩೪, ಸಂಚಿಕೆ ೪, ಪು. ೬೧.

ಬುದ್ಧಿ ಮಾಂದ್ಯವುಳ್ಳವರು ವಾಸಿಯಾಗದ ರೋಗದಿಂದ ನರಳುತ್ತಿರುವವರು, ಮೈ ಕೆಡಿಸಿಕೊಂಡವರು ಇಂತಹವರು ಇದನ್ನು ಉಪಯೋಗಿಸುವುದು ಅವಶ್ಯಕ. ಅದರಿಂದ ಸಮಾಜಕ್ಕೂ ಕ್ಷೇಮ ಆದರೆ ಇಂಥವರು ಅದನ್ನು (ಸಂತಾನ ನಿಯಂತ್ರಣದ ಉಪಕರಣ) ಉಪಯೋಗಿಸುತ್ತಿಲ್ಲ" ಎಂಬ ಮಾತು ಗಮನಾರ್ಹವಾದದ್ದು ನಾಡಿನ ಒಳಿತಿಗಾಗಿ ಯಾವ ಕಡೆ ಚಿಂತನೆ ಸಾಗಬೇಕು ಎಂಬ ಸಲಹೆ ಇಲ್ಲಿದೆ. ಪ್ರತಿಯೊಬ್ಬ ಪ್ರಜೆಯ ಅಗತ್ಯತೆಯ ಕಡೆ ಗಮನಹರಿಸಿರುವ ಪ್ರಬುದ್ಧ ಕರ್ಣಾಟಕದ ಇಂತಹ ಬರಹಗಳು ಅದರ ಸಾಮಾಜಿಕ ಕಳಕಳಿಯನ್ನು ಪ್ರದರ್ಶಿಸಿವೆ.

ಪ್ರಬುದ್ಧ ಕರ್ನಾಟಕ ತನ್ನ ಕಾಲದ ಕರೆಯನ್ನು ಸ್ವೀಕರಿಸಿದೆ. ವೈಜ್ಞಾನಿಕ ವಿಚಾರಗಳು ನಮ್ಮ ನಾಡಿನಾದ್ಯಂತ ಪ್ರಚಾರಗೊಳ್ಳಬೇಕು. ನಮ್ಮ ಕನ್ನಡಿಗರನ್ನು ಮುಟ್ಟಬೇಕು ಎಂಬ ಆಸೆ ಪ್ರಬುದ್ಧ ಕರ್ನಾಟಕದ್ದು. ಈ ನಿಟ್ಟಿನಲ್ಲಿ ಆಲೋಚಿಸಿ ವೈಜ್ಞಾನಿಕ ಬರಹಗಳು ಅಗತ್ಯವಾಗಿ ಕನ್ನಡದಲ್ಲೇ ಬರೆಯಲ್ಪಟ್ಟು ಅದು ಕನ್ನಡಿಗರ ಕೈ ತಲುಪಬೇಕು ಎಂಬ ಆಶಯವನ್ನು ಹೊಂದಿದ್ದ ಪ್ರಬುದ್ಧ ಕರ್ನಾಟಕ ಅದಕ್ಕೆ ಬೇಕಾದ ವೇದಿಕೆಯನ್ನು ನಿರ್ಮಿಸಿಕೊಡುವ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಜನಪ್ರಿಯ ವೈಜ್ಞಾನಿಕ ಬರಹಗಳ ಸ್ವರೂಪವೇನು? ಅದರ ಆಶಯ ಗುರಿ ಯಾವುದಿರಬೇಕು ಅದನ್ನು ಹೇಗೆ ಬರೆಯಬೇಕು ಎಂಬ ಯಾವುದೇ ಅಂಶಗಳೂ ಸ್ಪಷ್ಟವಾಗಿರದಿದ್ದ ಕಾಲದಲ್ಲಿ ಅದಕ್ಕೆ ಸ್ಪಷ್ಟತೆಯನ್ನು, ನಿರ್ದಿಷ್ಟವಾದ ಸ್ವರೂಪ ಹಾಗೂ ಗುರಿಯನ್ನು ಗುರುತಿಸುವ ಜವಾಬ್ದಾರಿಯನ್ನು ಹೆಗಲ ಮೇಲೆ ಹೊತ್ತುಕೊಂಡಿದೆ. ಆಂಗ್ಲ ಭಾಷೆಯಲ್ಲಿದ್ದ ವಿಷಯಗಳನ್ನು, ಆಂಗ್ಲ ಭಾಷೆಯ ವೈಜ್ಞಾನಿಕ ಪದಗಳನ್ನು ಕನ್ನಡಕ್ಕೆ ತರುವ ಸಂದರ್ಭದಲ್ಲಿ ಯಾವ ಮಾನದಂಡವನ್ನು ಅನುಸರಿಸಬೇಕು ಎಂಬುದರ ಬಗ್ಗೆ ಚಿಂತನೆ ನಡೆಸಿದೆ. ವೈಜ್ಞಾನಿಕ ಬರಹಗಳೇ ಅಪರೂಪವಾಗಿದ್ದ ಆ ಕಾಲದಲ್ಲಿ ಅದನ್ನು ಬೆಳಸುವ, ಅದಕ್ಕೊಂದು ಸರಿಯಾದ ಮಾರ್ಗವನ್ನು ದರ್ಶಿಸುವ ಕಾರ್ಯವನ್ನು ಪತ್ರಿಕೆ ಕೈಗೆತ್ತಿಕೊಂಡಿದೆ.

ಆಂಗ್ಲ ಭಾಷೆಯಲ್ಲಿರುವ ವಿಚಾರಗಳನ್ನು ಕನ್ನಡಕ್ಕೆ ತರಬೇಕಾದ ಸಂದರ್ಭದಲ್ಲಿ ಬಳಸಬೇಕಾದ ವೈಜ್ಞಾನಿಕ ಪರಿಭಾಷೆಯನ್ನು ಸೃಷ್ಟಿಸಿಕೊಡುವ ಸಂದರ್ಭದಲ್ಲಿ ಯಾವ ಮಾನದಂಡವನ್ನು ಅನುಸರಿಸಿದರೆ ಅನುಕೂಲವಾಗುತ್ತದೆ. ಯಾವ ಪದಗಳನ್ನು ನೇರವಾಗಿ ಇಂಗ್ಲೀಷಿನಿಂದ ಪಡೆಯಬಹುದು. ಯಾವ ಬಗೆಯ ಪದಗಳಿಗೆ ಸಮಾನ ಪದಗಳನ್ನು ಸೃಷ್ಟಿಸಬಹುದು ಎಂಬಂತಹ ವಿಚಾರಗಳ ಕಡೆಯೂ ಅಲೋಚಿಸಿದೆ. ಗಣಿತಶಾಸ್ತ್ರ, ಸಸ್ಯಶಾಸ್ತ್ರ, ಭೂಗೋಳಶಾಸ್ತ್ರ, ಖಗೋಳಶಾಸ್ತ್ರ, ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ಲೇಖನಗಳನ್ನು ಪ್ರಕಟಿಸಿದ ಸಂದರ್ಭದಲ್ಲಿ ವೈಜ್ಞಾನಿಕ ಪರಿಭಾಷೆಗಳ ಪಟ್ಟಿಯನ್ನು ನೀಡಿ ಕನ್ನಡ ಭಾಷೆಯಲ್ಲಿ ಅವುಗಳು ಬಳಕೆಯಾಗುವುದಕ್ಕೆ

ಅನುಕೂಲ ಮಾಡಿಕೊಟ್ಟಿದೆ. ಕನ್ನಡದಲ್ಲಿ ವಿಜ್ಞಾನ ಪರಿಭಾಷೆಯ ನಿರ್ಮಾಣ ಎಂಬ ಟಿ.ಎನ್.ಸುಬ್ಬರಾಯರ(೧೮-೪) ಲೇಖನದಲ್ಲಿ ಈ ವಿಚಾರಕ್ಕೆ ಸಂಬಂಧಿಸಿದಂತೆ ಹಲವು ರೀತಿಯ ಸಲಹೆ ಹಾಗೂ ಮಾರ್ಗದರ್ಶನ ಲಭ್ಯವಾಗಿದೆ ಆಧುನಿಕ ವಿಜ್ಞಾನದ ವಿಚಾರಕ್ಕೆ ಬಂದರೆ ಪ್ರಪಂಚದ ಯಾವುದೇ ಭಾಷೆಯಲ್ಲಾದರೂ ಅದಕ್ಕೆ ಬೇಕಾದ ಎಲ್ಲ ಪದಗಳು ಮೊದಲೇ ಸಿದ್ಧವಾಗಿ ಇರುವುದಿಲ್ಲ. ಹೊಸದಾಗಿ ಸೃಷ್ಟಿಸಿಕೊಳ್ಳಬೇಕಾದುದು ಅನಿವಾರ್ಯ. ಹೀಗೆ ಹೊಸದಾಗಿ ಸೃಷ್ಟಿಗೊಂಡ ಪದಗಳು ಕಾಲ ಕ್ರಮೇಣವಾಗಿ ಬಳಕೆಗೆ ಬರುತ್ತದೆ. ಆದುದರಿಂದ ಈಗ ನಾವು ಹೊಸ ಶಬ್ದಗಳನ್ನು ಸೃಷ್ಟಿ ಮಾಡಲು ಹಿಂದೆಗೆಯಬಾರದು ಅಥವಾ ಹೊಸ ಶಬ್ದಗಳು ನೈಜವಾಗಿ ಕಾಣುವುದಿಲ್ಲ ಎಂದು ಹೆದರಲೂಬಾರದು. ಕಾಲ ಕ್ರಮದಲ್ಲಿ ಈ ಹೊಸ ಶಬ್ದಗಳೇ ಹಳೆಯ ರೂಢಿಯಾಗುತ್ತವೆ. ಈ ಸಮಸ್ಯೆ ಕನ್ನಡ ಎದುರಿಸಿದ ಸಮಸ್ಯೆ ಮಾತ್ರವಿಲ್ಲ. ಎಲ್ಲಾ ಭಾಷೆಗಳಲ್ಲೂ ಆರಂಭದಲ್ಲಿ ಇಂತಹ ಸಮಸ್ಯೆಗಳು ಎದುರಾಗಿರುತ್ತವೆ. ಹಾಗಾಗಿ ಕನ್ನಡಿಗರು ಪಾರಿಭಾಷಿಕ ಪದಗಳನ್ನು ಸೃಷ್ಟಿಸಿಕೊಳ್ಳಲು ಅಧೈರ್ಯ ಪಡಬಾರದು. ಯಾವ ದೇಶದವರೇ ಆಗಲಿ ಹೊಸ ವಿಷಯವನ್ನು ಕಂಡು ಹಿಡಿದಾಗ ಉಳಿದ ದೇಶದವರಿಗೆ ಅದನ್ನು ತರ್ಜುಮೆ ಮಾಡಲು ತ್ರಾಸದಾಯಕವಾಗುತ್ತದೆ. ಉದಾಹರಣೆ ಜರ್ಮನ್ ಪಂಡಿತರು ಹೊಸ ವಿಷಯವೊಂದನ್ನು ಕಂಡು ಹಿಡಿದು ಹೊಸ ಶಬ್ದ ಸೃಷ್ಟಿ ಮಾಡಿದರೆ ಆ ಶಬ್ದ ಇಂಗ್ಲಿಷ್ ಭಾಷೆಯಲ್ಲಿ ತರ್ಜುಮೆಗೊಳ್ಳಬೇಕಾದರೆ ಕಷ್ಟಪಡಬೇಕಾಗುತ್ತದೆ. ಹಾಗೆಯೇ ಕನ್ನಡ ಭಾಷೆಯಲ್ಲೂ ಕೂಡ ಅದಕ್ಕಾಗಿ ವೈಜ್ಞಾನಿಕ ಪರಿಭಾಷೆಯನ್ನು ಸೃಷ್ಟಿ ಮಾಡಿಕೊಳ್ಳಲು ಶ್ರಮವಹಿಸಿ ಸಿದ್ಧಪಡಿಸಿಕೊಳ್ಳಬೇಕು. ವಿಜ್ಞಾನದಲ್ಲಿ ಹೊಸ ಶಬ್ದಗಳನ್ನು ಹೇಗೆ ಸಿದ್ಧಗೊಳಿಸಿಕೊಳ್ಳಬಹುದು ಎಂಬುದರ ಬಗೆಗೂ ಈ ಲೇಖನವು ಗಮನಹರಿಸಿದೆ. ಕನ್ನಡದಲ್ಲಿ ವೈಜ್ಞಾನಿಕ ಪರಿಭಾಷೆಯೇ ಬೆಳೆಯದೇ ಇದ್ದ ಕಾಲದಲ್ಲಿ ಇಂತಹ ಪ್ರಯತ್ನಗಳು ಕನ್ನಡದ ಬೆಳವಣಿಗೆಯ ದೃಷ್ಟಿಯಿಂದ ಅಗತ್ಯವಾಗಿ ಆಗಬೇಕಿತ್ತು. ಈ ಕಾರ್ಯವನ್ನು ಪ್ರಬುದ್ಧ ಕರ್ಣಾಟಕ ಯಶಸ್ವಿಯಾಗಿ ಸಾಧಿಸಿದೆ. ವಿಜ್ಞಾನದಲ್ಲಿ ಹೊಸ ಶಬ್ದಗಳು ಬೇಕಾದಾಗ ಬಳಕೆಯಲ್ಲಿರುವ ಪದಗಳನ್ನು ಸಾಂಕೇತಿಕವಾದ ಅರ್ಥದಲ್ಲಿ ಉಪಯೋಗಿಸುವುದು ಒಂದು ಮಾರ್ಗ. ಹಿಂದೆ ಇಲ್ಲದ ಹೊಸ ಪದಗಳನ್ನು ಸೃಷ್ಟಿಸಿಕೊಳ್ಳುವುದು ಮತ್ತೊಂದು ಮಾರ್ಗ ಈ ವಿಚಾರಗಳು ಯಾವುದಾದರೂ ವಿಷಯ ಕಂಡು ಹಿಡಿಯಲ್ಪಟ್ಟ ಸಂದರ್ಭಗಳಲ್ಲಿ ಪ್ರಾಮುಖ್ಯತೆ ಪಡೆದುಕೊಂಡರೆ, ವಿಜ್ಞಾನವು ಅಪಾರವಾಗಿ ಬೆಳವಣಿಗೆ ಸಾಧಿಸುತ್ತಿರುವ ಸಂದರ್ಭದಲ್ಲಿ ಈ ಎರಡೂ ಬಗೆಗಳನ್ನು ಹೊರತುಪಡಿಸಿ ಬೇರೆ ರೀತಿಯಿಂದಲೂ ಭಾಷಾಂತರ ಮಾಡಿಕೊಳ್ಳಬೇಕಾದುದು ಕೆಲವು ಬಾರಿ ಅನಿವಾರ್ಯವಾಗುತ್ತದೆ. ಈ ರೀತಿಯಾಗಿ ಭಾಷಾಂತರ ಮಾಡಿಕೊಳ್ಳುವಾಗ ಯಾವ ಮಾರ್ಗವನ್ನು ಹಿಡಿದರೆ ಒಳ್ಳೆಯದು. ಯಾವ ರೀತಿಯ

ವೈಜ್ಞಾನಿಕ ಪರಿಭಾಷೆ ಕನ್ನಡದ ಜಾಯಮಾನಕ್ಕೆ ಒಗ್ಗುತ್ತದೆ ಎಂಬುದರ ಬಗ್ಗೆಯೂ ಇಲ್ಲಿ ಅಲೋಚಿಸಬೇಕಾಗುತ್ತದೆ. ಭಾಷಾಂತರ ಮಾಡುವ ಸಂದರ್ಭದಲ್ಲಿ ನಮ್ಮ ವಿಭಕ್ತಿ ಕೃತ್ಪ್ರತ್ಯಯಗಳಿಗೆ ಸರಿಹೊಂದುವ ಪ್ರತಿ ಶಬ್ದಗಳನ್ನು ಕಲ್ಪಿಸಿಕೊಳ್ಳಬೇಕು. ಕನ್ನಡ ಭಾಷೆಯಲ್ಲೇ ಇರುವ ಪದಗಳನ್ನು ಕೆಲವೊಂದಕ್ಕೆ ಅನ್ವಯಿಸಿ ಹೇಳಬಹುದಾದರೂ ಅದರಲ್ಲಿ ಅರ್ಥದ ನಿಷ್ಕೃಷ್ಟತೆ ಅಥವಾ ಸ್ಪಷ್ಟತೆ ಇರದೇ ಸರಿಯಾದ ಅರ್ಥವು ಲಭಿಸದೇ ಹೋಗಬಹುದು. ಅದು ಸ್ಪಷ್ಟಗೊಂಡ ನಂತರ ಭಾಷಾಂತರ ಮಾಡಬೇಕು. ಶಬ್ದಗಳನ್ನು ಆರಿಸಿಕೊಳ್ಳುವಾಗ ಉಚ್ಚಾರಣೆಯಲ್ಲಿ ಸ್ವಲ್ಪ ಮಾತ್ರ ವ್ಯತ್ಯಾಸವನ್ನು ಅರ್ಥದಲ್ಲಿ ಬಹಳ ಅಂತರವನ್ನು ತರುವ ಪದಗಳನ್ನು ತೆಗೆದುಕೊಳ್ಳದಿರುವುದೇ ಒಳ್ಳೆಯದು. ಕನ್ನಡ ಭಾಷೆಗೆ ಹೊಸ ಪದಗಳನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಬೇರೆ ಬೇರೆ ಭಾಷೆಗಳಲ್ಲಿ ಆ ಪದಕ್ಕೆ ಇರುವ ಸಮಾನಾಂತರ ಪದಗಳನ್ನು ಗಮನಿಸಿ ಕನ್ನಡ ಭಾಷೆಗೆ ಉಚಿತವಾಗಿ ಕಂಡದ್ದನ್ನು ಆರಿಸಿಕೊಳ್ಳಬೇಕು. ವೈಜ್ಞಾನಿಕ ಶಬ್ದಗಳ ಮೂಲಾರ್ಥವನ್ನು ನೋಡಿಕೊಂಡು ಅವಕ್ಕೆ ಸರಿಯಾಗಿ ಪ್ರತಿ ಪದಗಳನ್ನು ಸೃಷ್ಟಿಸಿಕೊಳ್ಳಬೇಕು. ಅಷ್ಟೇ ಅಲ್ಲದೆ ಈ ಎಲ್ಲ ಕಾರ್ಯಗಳಿಗೆ ನಮ್ಮ ಕನ್ನಡ ಭಾಷೆಯು ಸಂಸ್ಕೃತ ಭಾಷೆಯ ನೆರವನ್ನು ಪಡೆದರೆ ಹೆಚ್ಚು ಅನುಕೂಲವಾಗುತ್ತದೆ. ಒಂದು ಶಬ್ದ ಸಮೂಹದಿಂದ ವಿವರಿಸಲ್ಪಡಬೇಕಾದ ಅರ್ಥವನ್ನು ಒಂದೇ ಪದದಿಂದ ಹೇಳುವುದೇ ಪರಿಭಾಷೆಯ ಮುಖ್ಯ ಉದ್ದೇಶವಾಗಿರುವುದರಿಂದ ಉಪಸರ್ಗಗಳು, ಪ್ರತ್ಯಯಗಳು, ಸಮಾಸಗಳು ಹೆಚ್ಚಾಗಿರುವ ಭಾಷೆಯಿಂದಲ್ಲದೆ ಬೇರೆ ಭಾಷೆಯ ಮೂಲಕ ಸಂಕೇತ ಶಬ್ದಗಳನ್ನು ಮಾಡಿಕೊಳ್ಳುವುದು ಅಸಾಧ್ಯ. ಭರತ ಖಂಡದ ಭಾಷೆಗಳಿಗೆಲ್ಲಾ ತಾಯಿಯಂತಿರುವ ಸಂಸ್ಕೃತದಿಂದಲೇ ಈ ಕೆಲಸವು ಸಾಧ್ಯವಾದಿತು. ಇಂಗ್ಲೀಷಿನಲ್ಲಿ ಕಲಿತವರಿಗೆ ಸಂಸ್ಕೃತದ ಪದಗಳು ಕಷ್ಟ ಎನಿಸಬಹುದು. ಇದಕ್ಕೆ ಕಾರಣ ಇಂಗ್ಲೀಷ್ ಸುಲಭ ಸಂಸ್ಕೃತ ಕಷ್ಟವಾಗಿದೆ ಎಂದು ಅರ್ಥವಲ್ಲ. ಕನ್ನಡಿಗರು ಸಂಸ್ಕೃತದ ಪದಗಳನ್ನು ಹೆಚ್ಚಿಗೆ ಬಳಸದೇ ಇರುವುದರಿಂದ ಅದು ತಾತ್ಕಾಲಿಕವಾಗಿ ಕಷ್ಟದಂತೆ ಕಂಡು ಬಂದರೂ ಬಳಕೆ ಹೆಚ್ಚಾದಂತೆ ಅದು ಇಂಗ್ಲೀಷಿನಷ್ಟೇ ಸುಲಭವಾಗುತ್ತದೆ ಈ ಎಲ್ಲಾ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪರಿಭಾಷೆಯನ್ನು ರಚಿಸಿಕೊಳ್ಳುವುದು ಉತ್ತಮ ಎಂಬ ಸೂಚನೆ ಸಲಹೆಗಳು ಹಲವಾರು ಲೇಖನದಲ್ಲಿ ದೊರಕುತ್ತದೆ.

ಕರ್ನಾಟಕ ವಿಜ್ಞಾನ ಪರಿಷತ್ ೧೯೬೦ರಲ್ಲಿ ಪ್ರಾದೇಶಿಕ ಭಿನ್ನತೆಗಳಿಂದಾಗಿ ಭಿನ್ನ ಭಿನ್ನವಾದ ಪಾರಿಭಾಷಿಕ ಪದಗಳು ಬಳಕೆಯಾಗುತ್ತಿರುವುದನ್ನು ಗಮನಿಸಿ ಏಕರೂಪವಾದ ಪಾರಿಭಾಷಿಕ ಪದಗಳ ಬಳಕೆಯಾಗಬೇಕೆಂದು ಯೋಚಿಸಿ ಪಾರಿಭಾಷಿಕ ಪಟ್ಟಿಯೊಂದನ್ನು ರಚಿಸುವ ಕಾರ್ಯವನ್ನು ಮಾಡಿತು. ಆದರೆ ಪ್ರಬುದ್ಧ ಕರ್ನಾಟಕವು ಏಕರೂಪವಾದ ಪಾರಿಭಾಷಿಕ ಪದಗಳ ಬಗ್ಗೆ ಯೋಚಿಸದಿದ್ದರೂ

ಎಲ್ಲರಿಗೂ ಅನುಕೂಲವಾಗುವ ಪಾರಿಭಾಷಿಕ ಪದಗಳ ರಚನೆ ಮಾಡುವುದು ಹೇಗೆ? ಸ್ವೀಕರಿಸುವ ಸಂದರ್ಭದಲ್ಲಿ ಯಾವ ಭಾಷೆಗೆ ಆದ್ಯತೆ ನೀಡಬೇಕು ಎಂಬಂತಹ ವಿಚಾರವನ್ನು ಅದಕ್ಕಿಂತಲೂ ಸುಮಾರು ೩೫ ವರ್ಷಗಳ ಹಿಂದೆಯೇ ಮಾಡಿರುವುದನ್ನು ಗಮನಿಸಬಹುದು. ಅಷ್ಟೇ ಅಲ್ಲದೆ ಅಲ್ಲಲ್ಲಿ ವ್ಯಕ್ತವಾಗಿರುವ ಅಂಶಗಳು ಇಂತಹ ಕಾರ್ಯಗಳಿಗೆ ಹೇಗೆ ಮಾರ್ಗದರ್ಶನ ನೀಡಿದವು ಎಂಬುದು ಗಮನಿಸಬೇಕಾದ ಅಂಶ. ಇಂತಹ ಪಾರಿಭಾಷಿಕ ಪದಗಳು ಕನ್ನಡಕ್ಕೆ ಹೊಂದಿಕೊಳ್ಳುತ್ತದೆ ಮತ್ತು ಅದರಿಂದ ದೇಶೀ ಭಾಷೆಯಲ್ಲಿ ವಿಚಾರಗಳನ್ನು ಹೇಳಲು ಸಾಧ್ಯವೇ ಎಂಬಂತಹ ಪ್ರಶ್ನೆಗಳು ಉದ್ಭವಿಸಿದಾಗ ಪ್ರಬುದ್ಧ ಕರ್ನಾಟಕ ಅದಕ್ಕೆ ಉತ್ತರಿಸಿದೆ ಭಾಷಾಂತರ ಮುಖಾಂತರ ಪದಗಳನ್ನು ಸ್ವೀಕರಿಸುವುದು ತಪ್ಪಲ್ಲ ಎಂದು ಅದನ್ನು ಸಮರ್ಥಿಸಿದೆ. ೧೯೫೧ರಲ್ಲಿ ಮೈಸೂರಿನ ವಿಶ್ವವಿದ್ಯಾನಿಲಯದ ಘಟಿಕೋತ್ಸವ ಸಮಾರಂಭದಲ್ಲಿ ಬರೋಡಾ ವಿಶ್ವವಿದ್ಯಾನಿಲಯ ವೈಸ್‌ಛಾನ್ಸಲರಾದ ಶ್ರೀ ವಾಡಿಯಾರವರು ಕನ್ನಡ ಭಾಷಾ ಮಾಧ್ಯಮವಾಗುವುದರಿಂದ ವೈಜ್ಞಾನಿಕ ವಿಚಾರಗಳನ್ನು ಸರಿಯಾಗಿ ಬೋಧಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯಪಟ್ಟಾಗ ಪ್ರಬುದ್ಧ ಕರ್ನಾಟಕವು ಅದನ್ನು ವಿರೋಧಿಸಿದೆ "ಭಾಷಾಂತರ ಎಂದಾಗ ಶ್ರೀ ವಾಡಿಯಾರವರ ಮನಸ್ಸಿನಲ್ಲಿ ಮೂಡುವ ಭಾವನೆಗಳೇನೆಂಬುದನ್ನು ನಾವು ಊಹಿಸಬಲ್ಲೆವು. ವಿಜ್ಞಾನದ ಪಾರಿಭಾಷಿಕ ಪದಗಳನ್ನು ನಾವು ಸ್ವೀಕರಿಸಬೇಕೆಂಬ ತತ್ವ ನಮ್ಮದು. ಇಂಗ್ಲೀಷ್ ಭಾಷೆಯಲ್ಲಿ ಬಳಸುವ ವೈಜ್ಞಾನಿಕ ಪದಗಳು ಇಂಗ್ಲೀಷ್ ಪದಗಳಲ್ಲ; ಗ್ರೀಕ್, ಲ್ಯಾಟೀನ್, ಜರ್ಮನ್ ಮೊದಲಾದ ಪರಭಾಷೆಯ ಪದಗಳು ಅವುಗಳನ್ನು ಇಂಗ್ಲೀಷ್ ಸ್ವೀಕರಿಸಿರುವಂತೆ ಕನ್ನಡವೂ ಸ್ವೀಕರಿಸುತ್ತದೆ"[೧] ಎಂದು ಪ್ರತಿಕ್ರಿಯೆ ನೀಡದೆ ಇಂಗ್ಲಿಷ್ ಭಾಷೆ ಬೇರೆ ಭಾಷೆಗಳಿಂದ ಪದಗಳನ್ನು ಸ್ವೀಕರಿಸಿ ಮುಂದುವರೆದಿರುವಂತೆ ಕನ್ನಡವು ಬೇರೆ ಭಾಷೆಯ ಪದಗಳನ್ನು ಸ್ವೀಕರಿಸಿ ಮುಂದುವರೆದರೆ ತಪ್ಪೇನು ಎಂಬುದು ಪ್ರಬುದ್ಧ ಕರ್ನಾಟಕದ ವಾದ. ಪಾರಿಭಾಷಿಕ ಶಬ್ದಗಳನ್ನು ಪರಿಚಯಿಸುವ ಸಂದರ್ಭದಲ್ಲೇ ಆಗಲಿ, ಸೃಷ್ಟಿಸುವ ಸಂದರ್ಭದಲ್ಲೇ ಆಗಲಿ, ಅವುಗಳನ್ನು ಬಳಕೆಗೆ ಅಗತ್ಯವಾಗಿ ಬೇಕಿದ್ದ ಲೇಖನಗಳನ್ನು ಪ್ರಕಟಿಸುವ ಕಾರ್ಯದಲ್ಲೇ ಪ್ರಬುದ್ಧ ಕರ್ನಾಟಕ ಅನನ್ಯತೆಯನ್ನು ಮೆರೆದಿದೆ. ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಗೊಂಡ ಹಲವಾರು ಲೇಖನಗಳು ನಂತರ ಗ್ರಂಥಗಳಾಗಿ ಪ್ರಕಟಗೊಂಡು ಅಪಾರವಾದ ಜನಪ್ರಿಯತೆಯನ್ನು ಗಳಿಸಿಕೊಂಡಿರುವುದನ್ನು ಗಮನಿಸಬಹುದು. ಆರ್.ಎಲ್.ನರಸಿಂಹಯ್ಯನವರ 'ಜಗತ್ತುಗಳ ಹುಟ್ಟು ಸಾವು' (೩೨/೨–೩–೪) ಜಿ. ಹನುಮಂತರಾವ್ ಅವರ 'ವಿಜ್ಞಾನ' (೧೫ನೇಯ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೩೩, ಸಂಚಿಕೆ ೫, ಪು. ೧೮೧.

ಸಂಚಿಕೆಯಿಂದ ೧೮ನೆ ಸಂಚಿಕೆಯವರಿಗೆ ಪ್ರಕಟಗೊಂಡಿದ್ದ ಬಿಡಿ ಲೇಖನಗಳು)ದಂತಹ ಗ್ರಂಥಗಳನ್ನು ಇಲ್ಲಿ ಗಮನಿಸಬಹುದು. 'ಅವಳಿಗಳ ರಹಸ್ಯ' (೨೩-೧) 'ಕಸದಿಂದ ರಸವಾಗುತ್ತಿರುವ ಬಗ್ಗೆ' (೫-೨) 'ಕ್ರಿಯಾ ವೇಗವರ್ಧಕಗಳು' (೨೮-೧) 'ವಿಶ್ವವ್ಯಾಪಕ ಶುದ್ಧ ಸಂಖ್ಯೆಗಳು' (೨೧-೩) 'ಜೀವೋತ್ಪನ್ನ' (೧೯-೩) 'ಪೆನಿಸಿಲಿನ್' (೨೭-೪) 'ಗಾಳಿ' (೨೮-೧) 'ಬಿಸಿಲೋಲೆ'(೨೪-೪)ಯಂತಹ ಬಿಡಿ ಬಿಡಿ ಲೇಖನಗಳು ಕೂಡ ಕನ್ನಡಿಗರ ಅವಶ್ಯಕತೆಗಳ ಕಡೆ ಗಮನಹರಿಸಿರುವುದಷ್ಟೆ ಅಲ್ಲದೇ ಲೇಖನಗಳ ಕೊನೆಯಲ್ಲಿ ಪಾರಿಭಾಷಿಕ ಶಬ್ದಗಳ ಪಟ್ಟಿಯನ್ನು ನೀಡಿ ಕನ್ನಡ ಭಾಷೆಯಲ್ಲಿ ಅವುಗಳು ಸೇರ್ಪಡೆಯಾಗುವುದಕ್ಕೆ ಸಹಕಾರ ನೀಡಿದೆ.

ಭಾಷೆಯ ಬೆಳವಣಿಗೆಗೆ ಕೊಡುಕೊಳ್ಳುವಿಕೆ ಅನಿವಾರ್ಯ. ಇದರಲ್ಲಿ ಲೋಪವೇನೂ ಇಲ್ಲ ಎಂಬ ಅಭಿಪ್ರಾಯ ಪತ್ರಿಕೆಯದ್ದು. ಈ ಕೊಡುಕೊಳ್ಳುವಿಕೆಯ ಕ್ರಿಯೆ ಕೇವಲ ವಿಜ್ಞಾನದ ವಿಷಯಗಳಿಗೆ ಮಾತ್ರ ಸಂಬಂಧಿಸಿದ್ದಲ್ಲ. ಕನ್ನಡ ಸಾಹಿತ್ಯ ಚರಿತ್ರೆಯ ಬೆಳವಣಿಗೆಯನ್ನು ಗುರುತಿಸಿದರೆ ಅದು ಆರಂಭದ ಕಾಲದಿಂದಲೂ ನಡೆದುಕೊಂಡು ಬಂದಿರುವ ಪ್ರಕ್ರಿಯೆ. ಹಾಗಾಗಿಯೇ ಪ್ರಬುದ್ಧ ಕರ್ನಾಟಕವು ತನ್ನ ಆರಂಭದ ದಿನಗಳಿಂದಲೂ ಭಾಷಾಂತರದ ಕೃತಿಗಳು ಕನ್ನಡಕ್ಕೆ ಅಗತ್ಯವಾಗಿದೆಯೇ? ಅಗತ್ಯವಾಗಿದ್ದರೆ ಯಾವ ಸ್ವರೂಪದಿಂದ ಬರಬೇಕು ಎಂಬಂತಹ ವಿಷಯಗಳ ಕಡೆಗೆ ಗಮನಹರಿಸಿದೆ. ಭಾಷಾಂತರ ಕುರಿತಂತೆ ಪ್ರಬುದ್ಧ ಕರ್ಣಾಟಕದ ನಿಲುವುಗಳು ಹಾಗೂ ಅಭಿಪ್ರಾಯಗಳು ಗಮನಾರ್ಹವಾಗಿದ್ದು ಅವು ಭಾಷಾಂತರದ ಸಾಧಕಭಾಧಕಗಳ ಬಗ್ಗೆ ಚರ್ಚಿಸಿದೆ.

**ಅನುವಾದ ಹಾಗೂ ಭಾಷಾಂತರ**

ಅನುವಾದ ಹಾಗೂ ಭಾಷಾಂತರ ಇವುಗಳು ಎರಡು ಭಾಷೆಗಳ ನಡುವೆ ನಡೆಯುವ ಪ್ರಕ್ರಿಯೆ. ಇಂತಹ ಅನುವಾದಗಳು ಎಲ್ಲಾ ಸಂದರ್ಭಗಳಲ್ಲೂ ಒಂದೇ ರೀತಿ ಇರುವುದಿಲ್ಲ. ಇದಕ್ಕೆ ಭಾಷಿಕ ಹಾಗೂ ಸಾಂಸ್ಕೃತಿಕ ಭಿನ್ನತೆಗಳು ಮುಖ್ಯಕಾರಣವಾಗಿರುತ್ತದೆ. ಹಾಗಾಗಿಯೇ ಅನುವಾದಕ ಸಂದರ್ಭಕ್ಕೆ ತಕ್ಕ ಹಾಗೆ ಔಚಿತ್ಯಪೂರ್ಣ ಪ್ರಜ್ಞೆಯಿಂದ ಅನುವಾದದ ರೀತಿಯನ್ನು ನಿರ್ಧರಿಸಬೇಕಾಗುತ್ತದೆ. ಭಿನ್ನ ಭಾಷೆ, ಭಿನ್ನ ಸಂಸ್ಕೃತಿ, ಭಿನ್ನ ಪ್ರಕಾರ ಇತ್ಯಾದಿ ತೊಂದರೆಗಳನ್ನು ನಿವಾರಿಸಿಕೊಳ್ಳುವುದರ ಜೊತೆಯಲ್ಲೇ ಅನುವಾದದ ವಿವಿಧ ಪ್ರಕಾರಗಳನ್ನು ತಿಳಿದುಕೊಂಡಿರುವುದು ಅವಶ್ಯಕವೆನಿಸುತ್ತದೆ. ಭಾಷಾಂತರ ಅಥವಾ ಅನುವಾದಗಳು ಕನ್ನಡ ಸಾಹಿತ್ಯಕ್ಕೆ ಅಗತ್ಯವೇ? ಅನಿವಾರ್ಯವೇ? ಅಗತ್ಯವೆನಿಸಿದರೆ ಅದರ ಸ್ವರೂಪವೇನು? ಅದರಿಂದ ಕನ್ನಡಿಗನು ಪಡೆಯುವ ಪ್ರಯೋಜನವೇನು? ಎಂಬಂತಹ ಪ್ರಶ್ನೆಗಳು ಕನ್ನಡಿಗರಿಗೆದುರಾಗಿದ್ದ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕ

ಅವುಗಳಿಗೆ ತನ್ನ ಕಾವ್ಯಾವಲೋಕಗಳಲ್ಲಿ ವಸ್ತುಕೋಶಗಳಲ್ಲಿ ವಿಮರ್ಶೆಗಳಲ್ಲಿ ಹಾಗೂ ಸ್ವತಂತ್ರವಾದ ಬರಹಗಳ ಮೂಲಕ ಚರ್ಚಿಸಿದೆ.

ನಾನಾ ವ್ಯಕ್ತಿಗಳಲ್ಲಿ ಹೇಗೆ ನಾನಾ ವಿಧವಾದ ಶಕ್ತಿ ವಿಶೇಷಗಳು ಇರುತ್ತವೆಯೋ ಹಾಗೆಯೇ ನಾನಾ ಭಾಷೆಗಳಿಗೂ ಬೇರೆ ಬೇರೆಯಾದ ಗುಣಸ್ವಭಾವ ಇರುತ್ತದೆ. ಆದುದರಿಂದ ಒಂದು ಭಾಷೆಯ ಕಾವ್ಯವನ್ನು ಮತ್ತೊಂದು ಭಾಷೆಗೆ ಪರಿವರ್ತನೆ ಮಾಡುವುದು ಮೂಲಗ್ರಂಥದ ಸ್ವಾರಸ್ಯವನ್ನೆಲ್ಲವನ್ನೂ ಇನ್ನೊಂದು ಭಾಷೆಯಲ್ಲಿ ತರುವುದು ಸುಲಭದ ಮಾತಲ್ಲ. ಈ ರೀತಿಯಾಗಿ ಹೊರಗಿನಿಂದ ತರುವ ಸಂದರ್ಭದಲ್ಲಿ ಮೂಲದಲ್ಲಿ ಇದ್ದುದನ್ನು ಇದ್ದಂತೆ ಪದಶಃ ಭಾಷಾಂತರ ಮಾಡಿಕೊಳ್ಳಬಹುದು ಅಥವಾ ಮೂಲದಲ್ಲಿನ ಕಥೆಯನ್ನು ನಮ್ಮ ನಡೆನುಡಿಗಳಿಗೆ ಹೊಂದಿಕೊಳ್ಳುವಂತೆ ವ್ಯತ್ಯಾಸಗೊಳಿಸಿ ಮೂಲದಲ್ಲಿನ ಆಶಯಗಳಿಗೆ ಭಾವನೆಗಳಿಗೆ ಲೋಪ ತರದಂತೆ ನಮ್ಮ ಭಾಷೆಗೆ ರೂಪಾಂತರಿಸಿಕೊಳ್ಳಬಹುದು ಅಥವಾ ಅನುವಾದ ಮಾಡಿಕೊಳ್ಳಬಹುದು. ಈ ಎರಡು ಬಗೆಗಳಲ್ಲಿ ತ.ಸು.ಶಾಮರಾಯರು ಗುರುತಿಸುವಂತೆ ಭಾಷಾಂತರ ಹಾಗೂ ಅನುವಾದಗಳಲ್ಲಿ ಅನುವಾದಕ್ಕಿಂತಲೂ ಭಾಷಾಂತರ ಹೆಚ್ಚು ಕಷ್ಟಕರವಾದದ್ದು ಒಂದು ಹಂತದಲ್ಲಂತೂ ಭಾಷಾಂತರವೆಂಬುದು ನೂತನ ಕಾವ್ಯನಿರ್ಮಾಣಕ್ಕಿಂತಲೂ ಹೆಚ್ಚು ಕಠಿಣವಾದದ್ದು. ಡಿ.ವಿ.ಜಿ. ಅವರ ಅಭಿಪ್ರಾಯದಂತೆ "ಅದು ಪರಕಾಯ ಪ್ರವೇಶ ಮಾಡಿಸುವ – ಮಾಡುವ ಅಲ್ಲ ಮಾಡಿಸುವಷ್ಟು ಕಷ್ಟದ ಕೆಲಸ"[೧] ಒಂದು ಭಾಷೆಯಲ್ಲಿರುವ ಅಂತಃಸತ್ವವನ್ನು ಇನ್ನೊಂದು ಭಾಷೆಯ ಮೂಲಕ ತೆರೆದು ತೋರಿಸುವುದೆಂದರೆ ದೇಹದಿಂದ ಜೀವವನ್ನು ಬೇರೆ ಮಾಡುವಂತೆ. ಹಾಗೆ ಒಂದು ವೇಳೆ ಒತ್ತಾಯಪೂರ್ವಕವಾಗಿ ಅದನ್ನು ಬೇರೆ ಮಾಡಿ ಬೇರೆ ಯಾವುದೋ ದೇಹದೊಳಕ್ಕೆ ಪ್ರವೇಶಗೊಳಿಸುವುದು ಇನ್ನಷ್ಟು ಕಷ್ಟದ ಕಾರ್ಯ. ಹಾಗೆ ಬಲವಂತವಾಗಿ ಇನ್ನೊಂದು ದೇಹದೊಳಗೆ ತುರುಕಿದರೂ ಅದು ಸ್ವಂತ ದೇಹದಲ್ಲಿ ಕೆಲಸ ಮಾಡುವಂತೆ ಹೊಸ ದೇಹದಲ್ಲಿ ಮಾಡಲಾಗುವುದಿಲ್ಲ. ಹಲವಾರು ಬಾರಿಯಂತೂ ಕೆಲವು ಮಾತುಗಳನ್ನು ಭಾಷಾಂತರ ಮಾಡಲು ಆಗುವುದೇ ಇಲ್ಲ. ಡಿ.ವಿ.ಜಿ.ಯವರು ಇದೇ ಲೇಖನದಲ್ಲಿ ಗುರುತಿಸುವಂತೆ "ಇಂತಹುಗಳನ್ನು ಮೂಲ ಭಾಷೆಯಿಂದ ಅನ್ಯಭಾಷೆಗೆ ಪರಿವರ್ತಿಸುವುದಕ್ಕೆ ಎಷ್ಟು ಕಷ್ಟಪಟ್ಟರೂ ಅದು ಸಕ್ಕರೆಯ ಸವಿಯನ್ನು ಬೆಲ್ಲದ ಮೂಲಕ ತಿಳಿಸಿಕೊಡುವ ಪ್ರಯತ್ನದಂತೆಯೇ! ತುಪ್ಪದ ರುಚಿಯನ್ನು ಒಳ್ಳೆಣ್ಣೆಯ ಮೂಲಕ ತಿಳಿಸಿಕೊಡುವಂತೆಯೇ ಇರುತ್ತದೆ.

---

೧. ಡಿ.ವಿ.ಗುಂಡಪ್ಪ, ಪ್ರಕ. ಸಂಪುಟ ೪, ಸಂಚಿಕೆ ೩, ಪು. ೧೨.

ಸಂಸ್ಕೃತದ ಪ್ರತಿಮಾ ನಾಟಕವನ್ನು ಕನ್ನಡಕ್ಕೆ ಅನುವಾದ ಮಾಡಿಕೊಟ್ಟ ಸೀತಾರಾಮಶಾಸ್ತ್ರಿಗಳು ಭಾಷಾಂತರದ ಬಗ್ಗೆ ಪ್ರಸ್ತಾಪಿಸಿ ಅದು ಎಷ್ಟು ತ್ರಾಸದಾಯಕವಾದ ಕಾರ್ಯ ಎಂಬುದನ್ನು ಸೂಚಿಸುತ್ತಾರೆ. "ಸಹೃದಯರು ಸಂತೋಷಿಸುವಂತೆ ಭಾಷಾಂತರ ಮಾಡುವುದೇ ಕಷ್ಟಕಾರ್ಯ....... ಮೂಲದ ಅಭಿಪ್ರಾಯವನ್ನು ಸ್ವಲ್ಪವೂ ಮೀರದೆ ಭಾಷಾ ಲಕ್ಷಣಕ್ಕೆ ಸ್ವಲ್ಪವೂ ಕುಂದನ್ನು ತಾರದೆ ಪ್ರಾಚೀನ ಮಾರ್ಗವನ್ನು ಅನುಸರಿಸಿ ಪರಿವರ್ತಿಸಬೇಕೆಂದು ಪ್ರವರ್ತಿಸಿರುವ ನನ್ನ ಕವಿತ್ವ ಎಲ್ಲಾದರೂ ಕೆಲವು ಎಡೆಯಲ್ಲಿ ಪಾಠಕರಿಗೆ ಕ್ಲಿಷ್ಟವಾಗಿ ತೋರಬಹುದು.[೧] ಆದರೂ ಓದುಗರು ಇದನ್ನು ಸ್ವೀಕರಿಸಬೇಕು ಎಂದು ಕೇಳಿಕೊಳ್ಳುತ್ತಾರೆ. ಅವರ ಈ ಹೇಳಿಕೆಯ ಭಾಷಾಂತರ ಬಗ್ಗೆ ಚರ್ಚೆಗಳು ನಡೆಯುತ್ತಿದ್ದ ಆರಂಭಕಾಲದಲ್ಲಿಯೇ ಬಂದಿದ್ದು ಭಾಷಾಂತರದ ಸಂದರ್ಭದಲ್ಲಿ ಅನುಸರಿಸಬೇಕಾದ ಮಾನದಂಡಗಳೇನು? ಅಂದಿನವರು ಭಾಷಾಂತರ ಸಂದರ್ಭದಲ್ಲಿ ಯಾವ ವಿಷಯಕ್ಕೆ ಹೆಚ್ಚಿನ ಮಾನ್ಯತೆ ನೀಡುತ್ತಿದ್ದರು ಎಂಬಂತಹ ಅಂಶಗಳ ಕಡೆ ಗಮನಸೆಳೆಯುತ್ತದೆ. ಮೂಲದ ಆಶಯಕ್ಕೆ ಕುಂದು ಬಾರದಂತೆ ಬರೆಯುವುದು ಅಗತ್ಯದ ಕೆಲಸ. ಹಾಗೆಂದ ಮಾತ್ರಕ್ಕೆ ಮೂಲದಲ್ಲಿ ಇರುವ ಸಮಸ್ತವನ್ನೂ ಕನ್ನಡಿಸಬೇಕೆಂಬ ಹುಚ್ಚು ಹಟ ಸರಿಯಲ್ಲ. ಭಾಷಾಂತರದ ಹೆಸರಿನಲ್ಲಿ ಹೊರಗಿನ ಸಾಮಾಗ್ರಿಗಳನ್ನು ಸಮಗ್ರವಾಗಿ ತುಂಬಿಕೊಳ್ಳುವುದು ಅಗತ್ಯವಿಲ್ಲ. ನಮ್ಮ ಭಾಷೆ ಹಾಗೂ ಸಂಸ್ಕೃತಿಗಳನ್ನು ಗಮನದಲ್ಲಿರಿಸಿಕೊಂಡು ಅವುಗಳನ್ನು ಸ್ವೀಕರಿಸಬೇಕು ಎಂಬ ಅಭಿಪ್ರಾಯವೂ ಪ್ರಬುದ್ಧ ಕರ್ಣಾಟಕದಲ್ಲಿ ವ್ಯಕ್ತವಾಗಿದೆ. ಪ್ರಣಯಾವರ್ತ ಅಥವಾ ಚಂಚಲಕುಮಾರಿ ಎಂಬ ಬಂಗಾಳಿ ಕಾದಂಬರಿ ಕನ್ನಡಕ್ಕೆ ಬಂದ ಸಂದರ್ಭದಲ್ಲಿ ಸಂಪಾದಕರು ಬಂಕಿಮ ಚಂದ್ರರ ಹಲವಾರು ಬಂಗಾಳಿ ಕೃತಿಗಳು ಕನ್ನಡಕ್ಕೆ ಅನುವಾದಗೊಂಡು ಬಂದಿರುವುದಾದರೂ ಕನ್ನಡಿಗರಾದ ನಾವು ನಿತ್ಯಗಟ್ಟಲೆಯ ಸಾಮಾನ್ಯ ವಸ್ತುಗಳಿಗೆ ಉತ್ತರ ದೇಶಕ್ಕೇಕೆ ಹೋಗಬೇಕು. ಉತ್ತಮವಾದ ವಿಶೇಷವಲ್ಲದ ನಮ್ಮ ಪರಿಸರದಲ್ಲೇ ಲಭಿಸುವ ವಸ್ತುಗಳನ್ನು ಬೇರೆ ಕಡೆಯಿಂದ ತರುವುದು ಉಚಿತವಲ್ಲ ಎಂದು ಅಭಿಪ್ರಾಯಪಡುತ್ತಾರೆ. ಅವರ ಈ ಅಭಿಪ್ರಾಯಕ್ಕೆ ವಿರೋಧವು ವ್ಯಕ್ತವಾದದ್ದೂ ಉಂಟು.

ಕಲೆಗೆ ದೇಶ ಭಾಷೆಗಳ ಪರಿಮಿತಿಯಿಲ್ಲ. ಉತ್ತಮವಾದ ವಿಚಾರಗಳಿದ್ದರೆ ಅದರಿಂದ ಕನ್ನಡಿಗರಿಗೆ ಉಪಯೋಗವಾಗುವಂತಿದ್ದರೆ ಎಲ್ಲಿಂದ ಬೇಕಾದರೂ ವಸ್ತುವನ್ನು ಸ್ವೀಕರಿಸಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿ ಸಿ.ಎಸ್.ವೆಂಕಟಾಚಾರ್ಯರು ಎ.ಆರ್.ಕೃಷ್ಣಶಾಸ್ತ್ರಿಗಳು ಬರೆದಿದ್ದ 'ಪ್ರಣಯಾವರ್ತ ಅಥವಾ

---

೧. ಸೀತಾರಾಮಶಾಸ್ತ್ರಿ, ಪ್ರಕ. ಸಂಪುಟ ೪, ಸಂಚಿಕೆ ೩, ಪು. ೨೩.

ಚಂಚಲಕುಮಾರಿ' ಎಂಬ ವಿಮರ್ಶೆಯನ್ನು ಖಂಡಿಸಿ ಜಯಕರ್ನಾಟಕ ಪತ್ರಿಕೆಯಲ್ಲಿ ಲೇಖನವನ್ನು ಬರೆದಿದ್ದರು. ಈ ಹಿಂದೆ ಎ.ಆರ್.ಕೃಷ್ಣಶಾಸ್ತ್ರಿಗಳು ತಮ್ಮ ವಿಮರ್ಶೆಯೊಂದರಲ್ಲಿ ಬಂಕಿಮಚಂದ್ರರ ಕೃತಿಗಳು ಸೊಗಸಾಗಿದೆ, ಅದನ್ನು ಅನುವಾದಿಸುವುದು ತಪ್ಪಲ್ಲ, ಅನುಕರಣೆ ಮಾಡುವುದು ತಪ್ಪಲ್ಲ, ಆದರೆ ತೀರಾ ಸಾಮಾನ್ಯವಾದ ವಸ್ತುಗಳನ್ನೂ ಎರವಲಾಗಿ ಪಡೆಯಬೇಕಾಗಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದರು. ಇದರ ಮೂಲಕ ಸಾಮಾನ್ಯ ವಸ್ತುಗಳಿಗೂ ಕನ್ನಡಿಗರು ಬಂಗಾಳವನ್ನು ಆಶ್ರಯಿಸದೆ ಕನ್ನಡನಾಡಿನಲ್ಲೇ ವಸ್ತುವನ್ನು ಹುಡುಕಬೇಕು ಎಂಬ ಸಂದೇಶವನ್ನು ನೀಡಿದ್ದರು. ಇದಕ್ಕೆ ಸಿ.ಎಸ್.ವೆಂಕಟಾಚಾರ್ಯರು ವಿರೋಧ ವ್ಯಕ್ತಪಡಿಸಿ ಕಲೆಯ ವಿಚಾರ ಬಂದಾಗ ಸಂಕುಚಿತ ಮನೋಭಾವ ತೋರಬಾರದು. ದೇಶ, ನಾಡು ಎಂಬ ಎಲ್ಲೆ ಹಾಕಿಕೊಳ್ಳುವುದು ಸರಿಯಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದಾಗ ಅದಕ್ಕೆ ಕೃಷ್ಣಶಾಸ್ತ್ರಿಗಳು ತೀವ್ರವಾಗಿ ಪ್ರತಿಕ್ರಿಯಿಸಿದ್ದಾರೆ. ತಾವು ವಿರೋಧಿಸಿರುವುದು ಬಂಕಿಮಚಂದ್ರರ ಕೃತಿಗಳನ್ನಲ್ಲ. ಅದು ಎಲ್ಲರ ಮೇಲೂ ಪ್ರಭಾವ ಬೀರುವ ಶಕ್ತಿಯುಳ್ಳದ್ದು. ಆದರೆ ಅದೇ ಕಾರಣದಿಂದ ಅದರಲ್ಲಿ ಬಂದಿರುವ ಎಲ್ಲಾ ವಿಚಾರಗಳನ್ನು ಹೆಸರು ಸ್ಥಳ ಬಿಡದಂತೆ ಅನುವಾದಿಸಿಕೊಳ್ಳುವುದು ತರವಲ್ಲ. "ನಾವು ಹೀಗೆ ಅಜೀವವೂ ಅಂಧಾನುಕರಣದಲ್ಲಿಯೇ ಗಾಣದ ಎತ್ತುಗಳಂತೆ ತಿರುತ್ತಿರೋಣವೇ? ಇಲ್ಲದಿದ್ದರೆ ಸ್ವಲ್ಪ ವಿವೇಚನೆ ಮಾಡಿ ಸ್ವಶಕ್ತಿಯೆಂಬುದಿದ್ದರೆ ಅದನ್ನು ಬಲಪಡಿಸಿ ವ್ಯಕ್ತಪಡಿಸಿ ಇಷ್ಟವನ್ನು ಸಾಧಿಸೋಣವೇ?[೧] ಎಂದು ಪ್ರಶ್ನಿಸುತ್ತಾರೆ. ಕನ್ನಡನಾಡಿಗೆ ಸಂಬಂಧಿಸಿದ ಕನ್ನಡ ನಾಡಿನಲ್ಲಿ ನಡೆದ ವಸ್ತುಗಳನ್ನು ಒಳಗೊಂಡ ಗ್ರಂಥಗಳು ಬರಬೇಕು ಎಂದು ಬಯಸುತ್ತಾರೆ. ಇಲ್ಲಿ ವ್ಯಕ್ತವಾಗಿರುವ ವಿರೋಧ ಅನುವಾದದ ಕ್ರಿಯೆಗಲ್ಲ. ಅನುವಾದದ ಹೆಸರಿನಲ್ಲಿ ತೀರಾ ಸಾಮಾನ್ಯವಾದ ವಸ್ತುಗಳನ್ನೂ ತರುವುದರ ವಿರುದ್ಧ. ಉತ್ತರ ದೇಶದಲ್ಲಿ ನಡೆದ ಒಂದು ಐತಿಹಾಸಿಕ ವೃತ್ತಾಂತವನ್ನು ಬರೆಯಬೇಕಾದರೆ ಆ ದೇಶದ ಸನ್ನಿವೇಶಗಳೇ ಬೇಕು. ಹಾಗಲ್ಲದೆ ಕಲ್ಪಿತವಾದ ಒಂದು ಸಾಮಾಜಿಕ, ವೃತ್ತಾಂತಕ್ಕೋ ಅದೇ ಸನ್ನಿವೇಶಗಳು ಅಗತ್ಯವಿಲ್ಲ. ಅವುಗಳಿಗೆ ನಮ್ಮ ನಾಡಿನ ಪರಿಸರದ ಹಿನ್ನೆಲೆಯನ್ನು ಒದಗಿಸಬಹುದು.

ಐತಿಹಾಸಿಕವಾಗಿ ಬೇರೆ ಬೇರೆ ಪ್ರಾಂತಗಳವರು ತಮ್ಮ ಪ್ರಾಂತಕ್ಕೆ ಸಂಬಂಧಿಸಿದಂತೆ ಕೃತಿಗಳನ್ನು ರಚಿಸಿಕೊಳ್ಳುತ್ತಿರುವಾಗ ಕನ್ನಡಿಗರಾದ ನಾವೂ ನಮಗೆ ಹೆಮ್ಮೆತರುವಂತಹ, ಅಭಿಮಾನ ಮೂಡಿಸುವಂತಹ ಕನ್ನಡ ಗ್ರಂಥಗಳನ್ನು ಸೃಷ್ಟಿಸಬೇಕು. ಸತ್ವವಿಲ್ಲದ ಭಾಷಾಂತರ ಅನುವಾದ ಕೃತಿಗಳು ಸಂಖ್ಯೆಯ ದೃಷ್ಟಿಯಿಂದ ಸಾಹಿತ್ಯವನ್ನು ಬೆಳೆಸಬಹುದೇ ಹೊರತು ಗುಣಾತ್ಮಕವಾಗಿ ಅದನ್ನು ಬೆಳೆಸಲು ಸಾಧ್ಯವಿಲ್ಲ. ಭಾಷೆಯ

---

೧. ಕಾವ್ಯಾವಲೋಕನ, ಪ್ರಕ. ಸಂಪುಟ ೫, ಸಂಚಿಕೆ ೪, ಪು. ೨.

ಅಭಿವೃದ್ಧಿಯ ದೃಷ್ಟಿಯಿಂದ ಪ್ರಗತಿ ಸಾಧಿಸಲು ಸಾಧ್ಯವಿಲ್ಲ. ಅನುವಾದದ ಹೆಸರಿನಿಂದ ಆ ಭಾಷೆಯಲ್ಲೇ ಬಳಕೆಯಾಗಿರುವ ಶಬ್ದಗಳನ್ನೆಲ್ಲವೂ ತೆಗೆದುಕೊಂಡರೆ ಅದು ಕನ್ನಡ ಭಾಷೆ ಬೆಳೆಯಲು ಸಹಕಾರಿಯಾಗುವುದಿಲ್ಲ. 'ಕೃಷ್ಣಕಾಂತನ ಉಯಿಲು' ಕಾದಂಬರಿಯನ್ನು ವಿಮರ್ಶಿಸುತ್ತಾ ಎ.ಆರ್.ಕೃಷ್ಣಶಾಸ್ತ್ರಿಗಳು ಆ ಕಾದಂಬರಿಯಲ್ಲಿ ಹೇರಳವಾಗಿ ಬಂದಿರುವ ಸಂಸ್ಕೃತ ಶಬ್ದಗಳ ಬಗ್ಗೆ ಚರ್ಚಿಸಿದ್ದಾರೆ. ಬಂಗಾಳಿ ಕಾದಂಬರಿಯಲ್ಲಿ ಹೇರಳವಾಗಿ ಬಳಕೆಯಾಗಿರುವ ಸಂಸ್ಕೃತ ಶಬ್ದಗಳನ್ನೇ ನಾವು ಇಟ್ಟುಕೊಂಡರೆ ಭಾಷೆ ಸಂಸ್ಕೃತಮಯವಾಗುತ್ತದೆ. ಸಂಸ್ಕೃತದ ಪದಗಳನ್ನು ಬಳಸುವುದು ತಪ್ಪಲ್ಲ. ಆದರೆ ಎಲ್ಲಿ ಸುಲಭವಾದ ಕನ್ನಡ ಮಾತುಗಳಿಂದಲೇ ಬೇಕಾದ ಅರ್ಥವನ್ನು ತಿಳಿಸಲು ಸಾಧ್ಯವೋ ಅಲ್ಲಿ ಅನಾವಶ್ಯಕವಾಗಿ ಸಂಸ್ಕೃತವನ್ನು ಉಪಯೋಗಿಸಬಾರದು. ಹಾಗೆಂದ ಮಾತ್ರಕ್ಕೆ ಕನ್ನಡ ಪದಗಳನ್ನೇ ಹೆಚ್ಚಾಗಿ ಪ್ರಯೋಗಿಸುವೆನೆಂದು ಹೊರಟು ಅಪ್ರಸಿದ್ಧವಾದ, ಜನರಿಗೆ ಅರ್ಥವಾಗದ, ಕನ್ನಡ ಪದಗಳನ್ನು ಬಲವಂತಾಗಿ ತರುವುದು ಅವಶ್ಯಕವಲ್ಲ. ಆದುದರಿಂದಲೇ "ಇಂಥ ಕನ್ನಡ ಪದಗಳನ್ನು ಪ್ರಯೋಗಿಸುವುದು ಚೆನ್ನಾಗಿ ತೋರುವುದಿಲ್ಲ. ಅವುಗಳಿಗೆ ಬದಲಾಗಿ ಸಂಸ್ಕೃತ ಪದಗಳನ್ನು ಉಪಯೋಗಿಸುವುದು ಎಷ್ಟೋ ಮೇಲು"[೧] ಎಂಬ ಅಭಿಪ್ರಾಯವನ್ನು ಅವರೆ ವ್ಯಕ್ತಪಡಿಸುತ್ತಾರೆ. ಭಾಷಾಂತರ, ಅನುವಾದಗಳು ಹೆಚ್ಚು ಹೆಚ್ಚಾಗಿ ಬರುತ್ತಿದ್ದ ಸಂದರ್ಭದಲ್ಲಿ ಇಂತಹ ಚರ್ಚೆಗಳು ಅಗತ್ಯವಾಗಿದ್ದು ಪ್ರಬುದ್ಧ ಕರ್ಣಾಟಕ ಅದನ್ನು ನೆರವೇರಿಸಲು ಪ್ರಯತ್ನಿಸಿದೆ.

ನಂಜನಗೂಡು ತಿರುಮಲಾಂಬಾ ಅವರ ಪೂರ್ಣಕಲ ಕಾದಂಬರಿಯ ವಿಮರ್ಶೆಯ ಸಂದರ್ಭದಲ್ಲೂ ಕನ್ನಡ ಭಾಷೆಗೆ ಪರಭಾಷೆಯ ಪದಗಳ ಸೇರುವಿಕೆಯ ವಿಚಾರ ಪ್ರಸ್ತಾಪವಾಗಿದೆ. ತಿರುಮಲಾಂಬಾ ಅವರು ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ತಮ್ಮ ಗ್ರಂಥದಲ್ಲಿ ಬಂದಿರುವ ಹೆಸರುಗಳು ಆಯಾ ಗುಣಪಾತ್ರಗಳ ಗುಣಸ್ವಭಾವಕ್ಕೆ ತಕ್ಕುದಾದಂತೆ ಇಟ್ಟ ಹೆಸರುಗಳಾಗಿವೆ. ಅನ್ಯ ದೇಶದವರ ಹೆಸರುಗಳನ್ನು ರೂಢಿಗೆ ತಂದು ಅನ್ಯ ದೇಶದವರ ಆಚಾರ ವಿಚಾರಗಳನ್ನು ಅನುಕರಣಕ್ಕೆ ತಂದು ಅವರಂತೆಯೇ ಆಗಬೇಕು ಎಂಬ ಅಭಿಲಾಷೆ ತಮಗೆ ಇಲ್ಲ ಎಂದು ಹೇಳಿಕೊಂಡ ಸಂದರ್ಭದಲ್ಲಿ ಅದು ಬಿ.ವೆಂಕಟಾಚಾರ್ಯರ ಕಾದಂಬರಿಗಳನ್ನು ಕುರಿತಾದ ಟೀಕೆ ಎಂಬುದನ್ನು ಅರ್ಥೈಸಿಕೊಂಡ ಕೃಷ್ಣಶಾಸ್ತ್ರಿಗಳು ಅವರ ಕಾದಂಬರಿಯಲ್ಲಿ ಬಂದಿರುವ ಹೆಸರುಗಳನ್ನು ಗಮನಿಸಿ ಅವು ನಿಜವಾಗಿಯೂ ಅಚ್ಚಗನ್ನಡ ಪದಗಳಾಗಿವೆಯೇ ಎಂದು ವಿಶ್ಲೇಷಿಸುತ್ತಾರೆ. ತಿರುಮಲಾಂಬಾ ಅವರ ಮಾತುಗಳಲ್ಲಿ ಕೇವಲ ಇನ್ನೊಬ್ಬರನ್ನು ಟೀಕಿಸುವ ಗುಣ ಕಾಣಿಸುತ್ತಿದೆ. ಹೀಗೆ

---

೧. ಕಾವ್ಯಾವಲೋಕನ, ಪ್ರ.ಕ. ಸಂಪುಟ ೩, ಸಂಚಿಕೆ ೩, ಪು. ೨.

ಟೀಕಿಸಬೇಕೆಂಬ ಕಾರಣದಿಂದಾಗಿಯೇ ಟೀಕಿಸಿದೆ, ಅದರಲ್ಲಿ ಬಂದಿರುವ ವಿಚಾರಗಳು ಕನ್ನಡಿಗರ ಜ್ಞಾನಾಭಿವೃದ್ಧಿಗೆ ಬೆಳವಣಿಗೆಗೆ ಸಹಾಯಕವಾಗಿದೆಯೇ ಎಂಬುದನ್ನು ಗುರುತಿಸಬೇಕು ಎಂಬುದನ್ನು ಸೂಚಿಸುತ್ತಾರೆ. ಯಾವುದೇ ಕೃತಿ ಅನುವಾದಗೊಂಡು ಬಂದಾಗ ಅದರಲ್ಲಿಯ ಸ್ವಾರಸ್ಯವನ್ನು ಗುರುತಿಸುವ ಕಾರ್ಯವಾಗಬೇಕೇ ವಿನಃ ಅನುವಾದಗೊಂಡ ಪದಗಳ ಬೆನ್ನುಹತ್ತಿ ತಪ್ಪು ಹುಡುಕಲು ಹೊರಡುವುದು ಪ್ರಯೋಜನವಿಲ್ಲದ ಕಾರ್ಯ ಎಂಬ ಅಭಿಪ್ರಾಯವು ಪ್ರಬುದ್ಧ ಕರ್ಣಾಟಕದ ಹಲವಾರು ಬರಹಗಳಲ್ಲಿ ವ್ಯಕ್ತವಾಗಿದೆ.[೧]

ಮೇಲೆ ಗಮನಿಸಿದ ಅಂಶಗಳು ನಮ್ಮ ದೇಶದ ನಮ್ಮ ಪರಿಸರದ ಕೃತಿಗಳ ಅನುವಾದ ಭಾಷಾಂತರ ಇವುಗಳನ್ನು ಕುರಿತ ಮಾತುಗಳಾದರೆ ಬೇರೆ ಬೇರೆ ದೇಶದ ಕೃತಿಗಳನ್ನು ಕನ್ನಡಕ್ಕೆ ಪರಿವರ್ತಿಸುವ ಸಂದರ್ಭದಲ್ಲಿ ಪರಿಗಣಿಸಬೇಕಾಗಿರುವ ಅಂಶಗಳೇ ಬೇರೆ 'ಅಲೆಕ್ಸಾಂಡರ್ ಡೂಮಾರವರ ದಿ ಕೌಂಟ್ ಆಫ್ ಮಾಂಟಕ್ರಿಸ್ಟೋ' ಎಂಬ ಕೃತಿ ಕನ್ನಡಕ್ಕೆ 'ರಾಜಾಮಲಯಸಿಂಹ' ಆಗಿ ಪರಿವರ್ತನೆಗೊಂಡು ಬಂದಾಗ ವಿ.ಸಿ. ಅವರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಗಮನಾರ್ಹ. ಪರದೇಶದ ಕೃತಿಗಳನ್ನು ಕನ್ನಡಕ್ಕೆ ಸ್ವೀಕರಿಸುವಾಗ ಕನ್ನಡ ಭಾಷೆ ಹಾಗೂ ಅದರ ಸಂಸ್ಕೃತಿಯನ್ನು ಗಮನದಲ್ಲಿ ಇರಿಸಿಕೊಂಡು ಅವುಗಳನ್ನು ಕನ್ನಡಕ್ಕೆ ಸ್ವೀಕರಿಸಬೇಕು. ಕನ್ನಡ ಸಂಸ್ಕೃತಿಗೆ ಒಗ್ಗದ ವಿಚಾರಗಳನ್ನು ವಿಷಯಗಳನ್ನು ಭಾಷಾಂತರಿಸಿಕೊಡುವುದರಿಂದ ಯಾರಿಗೂ ಪ್ರಯೋಜನವಿಲ್ಲ. ನಮ್ಮ ದೇಶದ ಬೇರೆ ಭಾಗಗಳಲ್ಲಿನ ಕೃತಿಗಳನ್ನು ಪರಿವರ್ತಿಸಿದರೆ ಅದರಲ್ಲಿ ಬರುವ ಆಚಾರ ವಿಚಾರಗಳಿಗೆ ಹಾಗೂ ನಮ್ಮ ಕನ್ನಡ ನಾಡಿನ ಆಚಾರ ವಿಚಾರಗಳಿಗೆ ಅಂತಹ ವ್ಯತ್ಯಾಸ ಇಲ್ಲದೇ ಇರುವುದರಿಂದ ವಿಚಿತ್ರವಾಗಿ ಕಂಡುಬರುವುದಿಲ್ಲ. ಐರೋಪ್ಯ ಸಾಮಾಜಿಕ ಪದ್ಧತಿಯನ್ನು ಒಳಗೊಂಡ ಗದ್ಯ ಪದ್ಯ ರೂಪಕದಂತಹುಗಳನ್ನು ಪರಿವರ್ತಿಸ ಹೊರಟಾಗ ಆಭಾಸಗಳು, ಧರ್ಮ ವಿರುದ್ಧ ಭಾವನೆಗಳು, ಕಾಣಿಸಿಕೊಳ್ಳಬಹುದು. ಆದುದರಿಂದ ಪರಿವರ್ತನೆ ಮಾಡಲು ಬಯಸುವವರು ಬಹಳ ಯೋಚಿಸಿಯೇ ಮೂಲವನ್ನು ಆಯ್ದುಕೊಳ್ಳುವುದು ಉತ್ತಮ. ಭಾಷಾಂತರ ಮಾಡುವಾಗ ಕರ್ತೃವಿನ ಆಶಯಕ್ಕೆ ಭಂಗಬರದಂತೆ ಅವನ ದಕ್ಷತೆಗೆ ಲೋಪಬರದಂತೆ ನೋಡಿಕೊಂಡು ನಮ್ಮ ಆವರಣಕ್ಕೆ ತರಬೇಕು. ಇಂತಹ ಸಂದರ್ಭದಲ್ಲಿ ಮೂಲ ಗ್ರಂಥದಲ್ಲಿ ಬರುವ ಪಾತ್ರಗಳ ಹೆಸರು ಮೊದಲಾದವುಗಳನ್ನು ಹಾಗೆಯೇ ಇಟ್ಟುಕೊಂಡು ಕಥಾಭಾಗದಲ್ಲಿ ಬರೆಯಬಹುದು ಅಥವಾ ಎಲ್ಲಾ ಪಾತ್ರ

---

೧. ತಿರುಮಲಾಂಬಾ ಅವರ ಬರಹಗಳಲ್ಲಿ ಬಳಕೆಯಾಗಿರುವ ಅನ್ಯದೇಶ್ಯ ಎಂಬ ಪದ ಬೇರೆ ದೇಶ ಎಂಬ ಅರ್ಥದಲ್ಲಿ ಬಳಕೆಯಾಗದೆ ಉತ್ತರ ಭಾರತದ ಭಾಗಗಳು ಎಂಬ ಅರ್ಥದಲ್ಲಿ ಬಳಕೆಯಾಗಿದೆ.

ಪ್ರದೇಶಗಳಿಗೆ ಬೇರೆ ಬೇರೆ ಹೆಸರು ಕೊಟ್ಟು ಕೆಲವು ಬದಲಾವಣೆ ಮಾಡಿ ಉಳಿದ ಭಾಗ ಕ್ರಮವಾಗಿ ಭಾಷಾಂತರಿಸಬಹುದು. ಅಥವಾ ಮೂಲಗಳ ಆಧಾರದ ಮೇಲೆ ಕನ್ನಡ ಜನರ ನಡವಳಿಕೆ ಮತ್ತು ಭಾಷೆಗಳಿಗೆ ತಕ್ಕಂತೆ ಕನ್ನಡಿಗರಿಗೆ ಸ್ವಾಭಾವಿಕವಾಗಿ ತೋರುವ ಹಾಗೆ ಪರಕೀಯವಾದ ವಸ್ತುಗಳನ್ನು ಸ್ವತಂತ್ರ ಕೃತಿಯೆಂಬಂತೆ ಭ್ರಾಂತಿಉಂಟಾಗುವಂತೆ ಮಾರ್ಪಡಿಸಬಹುದು. ಇವುಗಳಲ್ಲಿ ಯಾವುದೇ ಮಾಡಬೇಕಾದರೂ ವಿಶೇಷ ಎಚ್ಚರಿಕೆ ಬೇಕು. ಇಲ್ಲವಾದಲ್ಲಿ ಅನೇಕ ವಿಧವಾದ ವಿರೂಪಗಳು ಕಾಣಿಸುತ್ತದೆ. ಪ್ರಬುದ್ಧ ಕರ್ಣಾಟಕದಲ್ಲಿ ಅನುವಾದ ಹಾಗೂ ಭಾಷಾಂತರ ಕುರಿತಾಗಿ ಇಂತಹ ಅಭಿಪ್ರಾಯಗಳು ಪ್ರಕಟಗೊಂಡ ಕಾಲ ಕಳೆದ ಶತಮಾನದ ಎರಡನೇ ಮತ್ತು ಮೂರನೇ ದಶಕ. ಅದು ಬಿ.ಎಂ.ಶ್ರೀ ಅವರ ಇಂಗ್ಲಿಷ್ ಗೀತೆಗಳು ಪ್ರಕಟಗೊಂಡಿದ್ದ ಕಾಲ. ಭಿನ್ನವಾಗಿದ್ದ ವಸ್ತು ಶೈಲಿ ಇವುಗಳನ್ನು ಹೊಂದಿದ್ದ ಆ ಗ್ರಂಥ ಎಲ್ಲರ ಗಮನಸೆಳೆದು ಅನುವಾದದ ಸಾಧಕಬಾಧಕಗಳ ಬಗ್ಗೆ ಚರ್ಚೆ ನಡೆಯುತ್ತಿದ್ದ ಸಂದರ್ಭದಲ್ಲಿಯೇ ಪ್ರಬುದ್ಧ ಕರ್ಣಾಟಕ ಪ್ರಕಟಿಸಿದ ಈ ನಿಲುವುಗಳು ಭಾಷಾಂತರ ಹಾಗೂ ಅನುವಾದಗಳ ಬಗ್ಗೆ ಸ್ಪಷ್ಟವಾದ ನಿಲುವು ತಳೆಯಲು ಸಹಕಾರಿಯಾಗಿದೆ. ಭಾಷಾಂತರ ಕುರಿತಾಗಿ ಪ್ರಬುದ್ಧ ಕರ್ಣಾಟಕದ ನಂತರದ ಸಂಚಿಕೆಗಳಲ್ಲೂ ಸಾಂದರ್ಭಿಕವಾಗಿ ವಿಷಯಗಳು ಪ್ರಸ್ತಾಪವಾಗಿದ್ದರೂ ಆರಂಭದಲ್ಲಿ ಬಂದ ಇಂತಹ ಚರ್ಚೆಗಳು ನಂತರ ಬಂದ ಭಾಷಾಂತರಕ್ಕೆ ಮಾರ್ಗಸೂಚಿಯಾಗಿದೆ.

ಅನುವಾದಗಳಲ್ಲಿ ಹಲವು ಬಗೆಗಳನ್ನು ಗುರುತಿಸಬಹುದು. ನೇರ ಅನುವಾದ, ಭಾವಾನುವಾದ, ನಿಕಟ ಅನುವಾದ, ಸೃಜನಾತ್ಮಕ ಅನುವಾದ ರೂಪಾಂತರ ವಿಸ್ತಾರನುವಾದ ಸಂಗ್ರಹಾನುವಾದ, ಸರಳಾನುವಾದ, ಅರ್ಥಾನುವಾದ ಇತ್ಯಾದಿ. ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡಿರುವ ಅನುವಾದಿತ ಬರಹಗಳನ್ನು ಗಮನಿಸಿದರೆ ಮೇಲೆ ಹೇಳಿರುವ ಬಹುತೇಕ ಎಲ್ಲ ಬಗೆಯ ಅನುವಾದಗಳಿಗೆ ಪ್ರಬುದ್ಧ ಕರ್ಣಾಟಕ ಮಾರ್ಗದರ್ಶಿಯಾಗಿದೆ. ಅಷ್ಟೇ ಅಲ್ಲದೆ ವೇದಿಕೆಯನ್ನು ಒದಗಿಸಿ ಪ್ರಯೋಗಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಅವುಗಳು ನಾಟಕ ಸಣ್ಣಕಥೆ, ಪ್ರಬಂಧ, ಭಾಷಣ, ಕವಿತೆ, ಲೇಖನ ಹೀಗೆ ವಿವಿಧ ಪ್ರಕಾರಗಳ ಮೂಲಕ ಅನುವಾದಗೊಂಡೋ, ರೂಪಾಂತರಗೊಂಡೋ, ಭಾಷಾಂತರಗೊಂಡೋ ಕನ್ನಡಕ್ಕೆ ಬಂದಿವೆ.

ಭಾಷಿಕ ಸಾಂಸ್ಕೃತಿಕ ಇವೇ ಮೊದಲಾದ ಕಾರಣಗಳಿಂದಾಗಿ ನಿರ್ದಿಷ್ಟವಾಗಿ ಮೂಲದ ಯಥಾವತ್ತನ್ನು ಅನುಕರಣೆ ಮಾಡಲು ಅಸಾಧ್ಯವಾದಾಗ ನಮ್ಮ ಸಂಸ್ಕೃತಿಗೆ ಹೊಂದುವಂತೆ ವಸ್ತುವನ್ನು ಅಳವಡಿಸಿಕೊಳ್ಳಬೇಕಾಗುತ್ತದೆ. ಹೀಗೆ ಹೊಂದಿಕೆ ಮಾಡುವಾಗ ಸಾದೃಶವಿರುವ ಸನ್ನಿವೇಶಗಳನ್ನು ಹುಡುಕಬೇಕಾಗುತ್ತದೆ. ಹಾಗಾದಾಗ

ಮಾತ್ರ ಅಳವಡಿಕೆ ರೂಪಾಂತರ ಯಶಸ್ವಿಯಾಗುತ್ತದೆ. ಇಂತಹ ರೂಪಾಂತರಗಳು ತೀರಾ ಹೊಸದೆನಿಸಿದ್ದ ಕಾಲದಲ್ಲಿಯೇ ಬಿ.ಎಂ.ಶ್ರೀಕಂಠಯ್ಯನವರ ಅಶ್ವತ್ಥಾಮನ್ ನಾಟಕದ ಮೂಲಕ ಅದನ್ನು ಕನ್ನಡಕ್ಕೆ ಪರಿಚಯಿಸಿದ ಕೀರ್ತಿ ಪ್ರಬುದ್ಧ ಕರ್ಣಾಟಕಕ್ಕೆ ಸಲ್ಲುತ್ತದೆ. ಸೋಪೋಕ್ಲಿಸ್ ಕವಿಯ ಅಯಾಸ್ ನಾಟಕದಿಂದ ಪ್ರೇರಿತರಾಗಿ ಅದರ ದುರಂತ ಪರಿಕಲ್ಪನೆಯನ್ನು ನಮ್ಮ ಮಹಾಭಾರತದ ಕಥೆಗೆ ಅಳವಡಿಸಿದ ರೂಪಾಂತರವೇ ಅಶ್ವತ್ಥಾಮನ್. ನಾಟಕ ರಂಗಕ್ಕೆ ಹೊಸದಾಗಿದ್ದ ಆತ್ಮಹತ್ಯೆ, ಭೀಕರತೆ, ರೌದ್ರತೆಯ ಅಂಶಗಳನ್ನು ರಂಗದ ಮೇಲೆ ತರಬಾರದೆಂಬ ಮನೋಧರ್ಮವಿದ್ದ ಕಾಲದಲ್ಲಿ ಅದೇ ಮಾದರಿಯ ನಾಟಕವನ್ನು ಕನ್ನಡಕ್ಕೆ ನೀಡಿತು ಹಾಗೂ ನಂತರ ಬಂದ ಇದೇ ರೀತಿಯ ನಾಟಕಗಳಿಗೆ ಮಾರ್ಗದರ್ಶಿಯಾಯಿತು.

ಇದೇ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡ ಇನ್ನೊಂದು ನಾಟಕ 'ಪಾರಸಿಕರು' ಗ್ರೀಕ್ ನಾಟಕ ಕನ್ನಡ ವಾತಾವರಣಕ್ಕೆ ಸಂಪೂರ್ಣ ಹೊಂದಿಕೊಳ್ಳುವುದಿಲ್ಲವೆಂದೋ ಅಥವಾ ಮೂಲವನ್ನು ಇದ್ದ ಹಾಗೆಯೇ ಭಾಷಾಂತರ ಮಾಡುವುದರ ಮೂಲಕ ಪರಿಚಯವನ್ನು ಹೆಚ್ಚು ಸ್ವಾಭಾವಿಕವಾಗಿ ಮಾಡಿಕೊಡಬೇಕೆಂಬ ಅಭಿಪ್ರಾಯದಿಂದಲೋ ಅಂತು ಪಾರಸಿಕರು ಮೂಲದಲ್ಲಿದ್ದಂತೆಯೇ ಭಾಷಾಂತರಗೊಂಡಿದೆ.

ಸೀತಾರಾಮಶಾಸ್ತ್ರೀಗಳ 'ಪ್ರತಿಮಾ ನಾಟಕ' (ಪ್ರ. ಕ. ೪-೧, ೨, ೩) ಅಳಸಿಂಗಾಚಾರ್ಯರ 'ಕರ್ನಾಟಕ ಸ್ವಪ್ನ ವಾಸವದತ್ತ ನಾಟಕ' (ಪು. ೬-೧, ೨, ೩, ೪) ರಾಷ್ಟ್ರಕೂಟರ ಕಾಲದ ಭಾರತೀಯ ಸಾಹಿತ್ಯ (೩೮-೩) ಲಲ್ಲೇಶ್ವರಿಯ ವಚನಗಳು (೩೨-೨) ಕೆ.ಕೃಷ್ಣಮೂರ್ತಿಗಳಿಂದ ಅನುವಾದಿಸಲ್ಪಟ್ಟ ಕನ್ನಡ ಕಾವ್ಯಪ್ರಕಾಶ, ಕನ್ನಡ ಕಾವ್ಯಾಲಂಕಾರ, ಆನಂದವರ್ಧನನ ಕಾವ್ಯಮೀಮಾಂಸೆ, ಕನ್ನಡ ಧ್ವನ್ಯಾಲೋಕ, ಎಲ್.ಗುಂಡಪ್ಪನವರಿಂದ ಅನುವಾದಗೊಂಡಿರುವ ಉದಯನ ಚರಿತ್ರ ಸಂಗ್ರಹ (೨೧/೩-೪), (೨೨/೩-೪) (೨೫/೨-೪) ಇವೇ ಮೊದಲಾದವು ಸಂಸ್ಕೃತ ಭಾಷೆಯಿಂದ ಬಂದಿರುವ ಬರಹಗಳಾದರೆ ಉದ್ಧಾರ ಭ್ರಾಂತಿ (೩೨-೨), ಸಾತ್ವಿಕ ಶಕ್ತಿ (೩೩-೨), ಜೀವದ ವಿವಿಧ ವಿನ್ಯಾಸಗಳು (೩೩-೨) ಇವೇ ಮೊದಲಾದ ಬರಹಗಳು ಆಂಗ್ಲಭಾಷೆಯಿಂದ ಬಂದವು. ಬಂಗಾಳಿ ಭಾಷೆಯಿಂದ ರವೀಂದ್ರನಾಥ ಠಾಕೂರರ ಅನೇಕ ಪ್ರಬಂಧಗಳನ್ನು ಎ.ಆರ್.ಕೃಷ್ಣಶಾಸ್ತ್ರಿಗಳು, ವೆಂಕಣಯ್ಯನವರು, ಡಾ. ಎ.ಎನ್.ನರಸಿಂಹಯ್ಯನವರು ಅನುವಾದಿಸಿಕೊಟ್ಟಿದ್ದಾರೆ. ರಾಳಪಲ್ಲಿ ಅನಂತ ಕೃಷ್ಣಶರ್ಮರು ಬಳ್ಳಾರಿಯಲ್ಲಿ ೨೦-೦೯-೧೯೩೪ರಂದು ಕೃಷ್ಣಮಾಚಾರ್ಯ ಶ್ರೀನಿವಾಸರ ಸ್ಮಾರಕೋತ್ಸವದಲ್ಲಿ ಮಾಡಿದ ಭಾಷಣದ ತೆಲುಗು ಅನುವಾದವೇ 'ನಾಟಕೋತ್ಸವ'. ಹೀಗೆ ವಿವಿಧ ಭಾಷೆಯ ವಿಚಾರಗಳು ಕನ್ನಡಿಗರಿಗೆ ಮುಟ್ಟಿಸುವ

ಪ್ರಬುದ್ಧ ಕರ್ಣಾಟಕದ ಕಾರ್ಯ ಮಹತ್ತರವಾದದ್ದು. ಆಧುನಿಕ ಸಾಹಿತ್ಯದ ಆರಂಭಘಟ್ಟದಲ್ಲಿಯೇ ಭಾರತದ ಪ್ರಮುಖವಾದ ಹಲವಾರು ಭಾಷೆಗಳಿಂದ ಕನ್ನಡ ಭಾಷೆಗೆ ಬಂದ ಹಲವಾರು ಬರಹಗಳು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡಿವೆ ಎಂಬುದು ಪ್ರಮುಖವಾಗಿ ಗಮನಿಸಬೇಕಾದ ಅಂಶ.

**ಕನ್ನಡಿಗರ ಅಭಿವೃದ್ಧಿ**

ಕನ್ನಡ ನಾಡು ಅಥವಾ ಕರ್ನಾಟಕದ ಅಭಿವೃದ್ಧಿ ಎಂದಾಗ ಅದು ಕೇವಲ ರಾಜಕೀಯ, ಭೌಗೋಳಿಕ ರೇಖೆಯ ಒಳಗಿನ ಪ್ರದೇಶದ ಅಭಿವೃದ್ಧಿ ಎಂದು ಅರ್ಥವಲ್ಲ. ಅದು ಕೇವಲ ಭೌತಿಕವಾದ ಜಗತ್ತಲ್ಲ. ಅದು ಚಿಂತನಾಶೀಲ, ಜೀವಂತ ಹಾಗೂ ಜನಗಳ ಆಲೋಚನೆ, ಕರ್ನಾಟಕತ್ವದ ಪರಿಕಲ್ಪನೆ ಕೇವಲ ನಾಡಿಗೆ ಮಾತ್ರ ಸೀಮಿತವಾಗದೆ ನುಡಿಯನ್ನು ನಾಡವರನ್ನೂ ಒಳಗೊಂಡ ಸಮಗ್ರ ಸ್ವರೂಪದ್ದಾಗಿದೆ. ಕರ್ನಾಟಕದ ಅಭಿವೃದ್ಧಿ ಎಂದಾಗ ಅದು ಕನ್ನಡ-ಕನ್ನಡಿಗ ಕರ್ಣಾಟಕದ ಅಭಿವೃದ್ಧಿ ಎಂದೇ ಅರ್ಥ. ಇದರ ಬಗ್ಗೆ ಕಾಲ ಕಾಲಕ್ಕೆ ಹಿರಿಯರು ವಿಚಾರಶೀಲರು ಪ್ರಸ್ತಾಪಿಸುತ್ತಾ ಮಾರ್ಗದರ್ಶನ ಮಾಡುತ್ತಾ ಅವಶ್ಯ ಬಿದ್ದಾಗ ಹೋರಾಡುತ್ತಾ ಕ್ರಿಯಾಶೀಲರಾಗಿ ಕಾರ್ಯಗಳನ್ನು ಮಾಡುತ್ತಾ ಬಂದಿದ್ದಾರೆ. ನುಡಿಯ ಅಭಿವೃದ್ಧಿಯಲ್ಲೇ ನಾಡಿನ ಅಭಿವೃದ್ಧಿ ಇದೆ. ನಾಡಿನ ಅಭಿವೃದ್ಧಿಯಲ್ಲಿ ನಾಡಿನವರ ಅಭಿವೃದ್ಧಿ ಇದೆ. ಹಾಗಾಗಿ ಈ ಮೂರೂ ವಿಚಾರಗಳು ಪರಸ್ಪರ ಅವಲಂಬಿಯಾಗಿದ್ದು ಒಂದನ್ನು ಬಿಟ್ಟು ಇನ್ನೊಂದಿಲ್ಲ. ಹಾಗಾಗಿಯೇ ಪ್ರಬುದ್ಧ ಕರ್ಣಾಟಕವು, ಕನ್ನಡಿಗರಿಂದ ಕನ್ನಡಕ್ಕೆ ಹಾಗೂ ಕನ್ನಡನಾಡಿಗೆ ಸೇವೆ ಸಲ್ಲಬೇಕೆಂಬ ಆಶಯವನ್ನು ವ್ಯಕ್ತಪಡಿಸಿದೆ. ಇದಕ್ಕೆ ಪೂರಕವಾಗಿ ತಮ್ಮ ತನುಮನಧನಗಳನ್ನು ನಾಡು-ನುಡಿಗಾಗಿ ಅರ್ಪಿಸಿದ ಮಹನೀಯರುಗಳ ವಿಚಾರಗಳನ್ನು ಪ್ರಕಟಿಸಿದೆ. ಅದರ ಮೂಲಕ ಕನ್ನಡಿಗರು ಕನ್ನಡಕ್ಕಾಗಿ ಏನೆಲ್ಲ ಕಾರ್ಯಗಳನ್ನು ಮಾಡಬಹುದೆಂಬುದನ್ನು ಸೂಚಿಸಿದೆ. ಇದರ ಜೊತೆಯಲ್ಲೇ ಕನ್ನಡಿಗರಾಗಿರುವವರು ಅಭಿವೃದ್ಧಿಹೊಂದಬೇಕಾದರೆ ಯಾವ ಕಾರ್ಯಗಳನ್ನು ಮಾಡಬಹುದು ಎಂಬುದನ್ನು ಗಮನಿಸಿದೆ. ಕನ್ನಡಿಗರಿಂದ ನಾಡಿಗೆ ಆಗಬೇಕಾದ ಕಾರ್ಯಗಳ ಬಗ್ಗೆ ಯೋಚಿಸುವಾಗ ಅದು ನಾನಾ ಮುಖವಾಗಿ ಆಗಬೇಕಾಗಿರುವುದನ್ನು ಗುರುತಿಸಿವೆ.

ಉತ್ತಮವಾದ ಸಾಹಿತ್ಯ ಗ್ರಂಥಗಳು ನಾಡಿನ ಆಸ್ತಿ. ಈ ನಾಡಿನ ಆಸ್ತಿಯನ್ನು ಸಂರಕ್ಷಿಸಬೇಕಾದುದು ಕನ್ನಡಿಗರ ಕರ್ತವ್ಯ. ವೈಯಕ್ತಿಕವಾಗಿ ತಮ್ಮ ಗ್ರಂಥಗಳ ಸಂರಕ್ಷಣೆಯ ಬಗ್ಗೆ ಗಮನಹರಿಸುವ ಕನ್ನಡಿಗರು ಅದೇ ಸಾರ್ವಜನಿಕ ಗ್ರಂಥಭಂಡಾರಗಳಲ್ಲಿರುವ ಗ್ರಂಥಗಳ ಬಗ್ಗೆ ಕಾಳಜಿಯನ್ನು ತೋರುವುದಿಲ್ಲ. ಓದುಗನ ವೇಷ ತೊಟ್ಟು ಗ್ರಂಥಭಂಡಾರವನ್ನು ಪ್ರವೇಶಿಸಿದ ಕೆಲವರು ಮಾಡುವ ಅವಿವೇಕದ

ಸಾಧ್ಯವಾಗುತ್ತದೆ. ನಮ್ಮ ನಮ್ಮ ನಡುವೆ ಏನೇ ಭಿನ್ನಾಭಿಪ್ರಾಯಗಳು ಇರಬಹುದು. ಭಿನ್ನಭಿನ್ನವಾದ ಅಭಿರುಚಿಗಳು ಇರಬಹುದು. ಅದು ನಮ್ಮ ವೈಯಕ್ತಿಕ ವಿಚಾರಗಳಾಗಿರಬೇಕೇ ಹೊರತು ನಾಡಿನ ವಿಚಾರ ಬಂದಾಗ ಕಿತ್ತಾಡದೆ ಕನ್ನಡ ನಾಡು–ನುಡಿಯ ಬೆಳವಣಿಗೆಗೆ ಒಮ್ಮನದಿಂದ ದುಡಿಯಬೇಕಾಗಿದೆ. ಕನ್ನಡನಾಡು ಪುನರುಜ್ಜೀವನಗೊಳ್ಳಬೇಕಾದರೆ ಕನ್ನಡಿಗರು ಎಚ್ಚರಗೊಳ್ಳಬೇಕು. ತಾನು ಎಚ್ಚರ–ಗೊಳ್ಳುವುದಷ್ಟೇ ಅಲ್ಲದೆ ಉಳಿದವರನ್ನೂ ಎಚ್ಚರಗೊಳಿಸಬೇಕಾಗಿದೆ. ಇದಕ್ಕೆ ಕನ್ನಡಿಗರೆಲ್ಲರ ಸಹಕಾರ ಅಗತ್ಯ ಎಂಬಂತಹ ವಿಚಾರಗಳು ಪ್ರಬುದ್ಧ ಕರ್ಣಾಟಕದಲ್ಲಿ ಪದೇ ಪದೇ ಪ್ರಸ್ತಾಪಗೊಂಡಿದೆ.

ಕನ್ನಡಿಗರ ಅಭಿವೃದ್ಧಿಯಷ್ಟೇ ಅಲ್ಲದೆ ಕನ್ನಡಿಗರು ಉದ್ದಾರವಾಗಬೇಕಾದರೆ ಯಾವೆಲ್ಲಾ ವಿಚಾರಗಳ ಕಡೆ ಗಮನಹರಿಸಬೇಕೆಂಬುದರ ಕಡೆಗೂ ಪ್ರಬುದ್ಧ ಕರ್ಣಾಟಕದ ಗಮನಹರಿದಿದೆ. ಸಾಹಿತ್ಯ, ಸಾಮಾಜಿಕ, ಆರ್ಥಿಕ ಎಂಬ ಎಲ್ಲಾ ಕ್ಷೇತ್ರಗಳಲ್ಲೂ ಕನ್ನಡಿಗರು ಪ್ರಬಲರಾಗಬೇಕು. ಇದಕ್ಕಾಗಿ ಕನ್ನಡಿಗರಲ್ಲಿ ಒಗ್ಗಟ್ಟು ಇರಬೇಕು. ಕನ್ನಡಿಗರು ತಮ್ಮ ಉದ್ದಾರದ ಮಾಡಿಕೊಳ್ಳಬೇಕಾಗಿದೆ. ಬೇರೆಯವರ ಬಗ್ಗೆ ಆಲೋಚಿಸುತ್ತಾ ತಮ್ಮ ಉದ್ದಾರ ಬಗ್ಗೆ ಆಲೋಚಿಸದೇ ಹೋದರೆ ಅದಕ್ಕಿಂತ ವಿಪರ್ಯಾಸ ಬೇರೊಂದಿಲ್ಲ. ಕನ್ನಡ ನಾಡಿನ ಬಗ್ಗೆ ಕನ್ನಡಿಗರೇ ಆಲೋಚಿಸುವುದು ಸ್ವಾಭಾವಿಕ ನ್ಯಾಯಬದ್ಧ ಹಾಗೂ ಕ್ಷೇಮಕರವಾದದ್ದು. ಕನ್ನಡದಲ್ಲಿ ವಿಶ್ವದ ಯಾವುದೇ ವಿಚಾರಗಳನ್ನೇ ಆಗಲಿ ಸಮರ್ಥವಾಗಿ ಬರೆಯಬಲ್ಲ ಬರಹಗಾರರಿದ್ದಾರೆ. ಆದರೆ ಅವರಿಗೆ ಸಿಗಬೇಕಾಗಿರುವ ಸೂಕ್ತ ಬೆಂಬಲ ದೊರಕುತ್ತಿಲ್ಲ. ಕಷ್ಟಪಟ್ಟು ತಮ್ಮೆಲ್ಲಾ ಶಕ್ತಿಯನ್ನು ಜ್ಞಾನವನ್ನು ವಿನಿಯೋಗಿಸಿ ಗ್ರಂಥಗಳನ್ನೂ ರಚಿಸುವವರಾದರೂ ಅದನ್ನು ಪ್ರಕಟಿಸುವವರಿಲ್ಲದೆ, ಪ್ರೋತ್ಸಾಹಿಸುವವರಿಲ್ಲದೆ ಕೊರಗುತ್ತಿದ್ದಾರೆ. ಪ್ರಕಟಿಸಲು ಬೇಕಾದ ಧನಸಹಾಯವಿಲ್ಲದೆ ಅವರ ಪ್ರತಿಭೆ ಜ್ಞಾನ ಎಲ್ಲವೂ ವ್ಯರ್ಥವಾಗುತ್ತಿದೆ. ಕನ್ನಡನಾಡಿನಲ್ಲಿ ಆರ್ಥಿಕವಾಗಿ ಸಬಲರಾಗಿರುವವರು ಇತ್ತ ಕಡೆ ಗಮನಹರಿಸಬೇಕು. ಕನ್ನಡನಾಡಿನ ಜನಬಲ ಧನಬಲ ಅಭಿಮಾನಬಲ ಇವೆಲ್ಲವೂ ಕನ್ನಡ ಕಾರ್ಯಗಳಿಗಾಗಿ ಕನ್ನಡಿಗರಿಗಾಗಿ ಬಳಕೆಯಾಗಬೇಕು. ಕನ್ನಡಿಗರಲ್ಲಿ ಸ್ವಾಭಿಮಾನ ಉಕ್ಕಬೇಕು. ಹೊರಗಿನವರು ನಮ್ಮಲ್ಲಿಗೆ ಬಂದು ನಮ್ಮ ನಾಡಿನಿಂದ ಎಲ್ಲಾ ಸೌಲಭ್ಯಗಳನ್ನು ಪಡೆಯುತ್ತಾ ಅವರ ಭಾಷೆಯನ್ನು ನಮ್ಮ ನಾಡಿನಲ್ಲಿ ಹರಡುತ್ತಿರುವ ಸಂದರ್ಭದಲ್ಲಿ ಕನ್ನಡಿಗರು ತಮ್ಮ ಕೋಪವನ್ನು ಪ್ರಕಟಿಸದೆ ಇದ್ದರೆ ಅದರಿಂದ ಕನ್ನಡಿಗರು ಉದ್ದಾರವಾಗಲು ಸಾಧ್ಯವಿಲ್ಲ. ಶಾಲಾಕಾಲೇಜುಗಳಲ್ಲಿ ಗ್ರಾಮ–ಪಂಚಾಯಿತಿಯಿಂದ ಹಿಡಿದು ವಿಧಾನಸೌಧದ ತನಕ, ಕನ್ನಡವೇ ಬಳಕೆಯಾಗುವಂತೆ ನೋಡಿಕೊಳ್ಳಬೇಕು. ನ್ಯಾಯಾಲಯದಲ್ಲಿ ಕಲಾ ಮಾಧ್ಯಮಗಳಲ್ಲಿ ಎಲ್ಲೆಲ್ಲಿ ಸಾಧ್ಯವೋ

ಆಯಾ ಎಲ್ಲಾ ಕಡೆಗಳಲ್ಲಿ ಕನ್ನಡವೇ ಆವರಿಸಿಕೊಳ್ಳಬೇಕು. ಕನ್ನಡಿಗರು ಕನ್ನಡವನ್ನೇ ಕೋರುವ, ಕೇಳುವ, ಬಳಸುವ ತನಕ ಕನ್ನಡನಾಡಿನ ನುಡಿಯ ಸ್ಥಿತಿ ಸುಧಾರಿಸಲು ಸಾಧ್ಯವಾಗದು. ಆದುದರಿಂದಲೇ ಪ್ರಬುದ್ಧ ಕರ್ಣಾಟಕವು ಕನ್ನಡ–ನಾಡು, ನುಡಿಗಾಗಿ ಸೇವೆ ಸಲ್ಲಿಸಿದ ಮಹನೀಯರುಗಳ ವಿಚಾರಗಳನ್ನು ಪ್ರಕಟಿಸಿ ಅವರ ಮಾರ್ಗದರ್ಶನ, ಅನುಭವ, ಸಾಧನೆ ಇವುಗಳು ಕನ್ನಡಿಗರಿಗೆ ಸ್ಪರ್ಧಿಯಾಗಲೆಂದು ಬಯಸಿದೆ.

**ಕನ್ನಡಕ್ಕಾಗಿ ದುಡಿದ ಮಹನೀಯರು**

ಆಧುನಿಕ ಕನ್ನಡ ಸಾಹಿತ್ಯವು ಅಭಿವೃದ್ಧಿಯನ್ನು ಸಾಧಿಸುತ್ತಾ ಬಂದ ಹಾಗೆ ಅದನ್ನು ಬೆಂಬಲಿಸುವ ಹಾಗೂ ಅದರ ಏಳಿಗೆಗಾಗಿ ಶ್ರಮಿಸುವವರ ಸಂಖ್ಯೆಯೂ ಅಧಿಕವಾಗ ತೊಡಗಿತು. ನಾಡು–ನುಡಿಗಾಗಿ ಸೇವಯನ್ನು ಸಲ್ಲಿಸಿ ಅದನ್ನು ಅಭಿವೃದ್ಧಿಗೊಳಿಸುವ ದೃಷ್ಟಿಯಿಂದ ಹಲವಾರು ಮಹನೀಯರು ಹಲವಾರು ರೀತಿಯಲ್ಲಿ ಅದಕ್ಕಾಗಿ ಶ್ರಮಿಸಿದರು. ಇಂತಹ ಮಹನೀಯರ ಸೇವೆಯನ್ನು ಸ್ಮರಿಸುವುದರ ಮೂಲಕ ಕನ್ನಡಿಗರಲ್ಲಿ ನಾಡು ಹಾಗೂ ನುಡಿಯ ಬಗ್ಗೆ ಅಭಿಮಾನ ಮೂಡಿಸುವ ಮತ್ತು ಪ್ರಗತಿಯನ್ನು ಸಾಧಿಸಲು ಯಾವ ಯಾವ ಕ್ಷೇತ್ರಗಳಲ್ಲಿ ಅವಕಾಶವಿದೆ ಎಂಬುದನ್ನು ತಿಳಿಸಿಕೊಡುವ ಪ್ರಯತ್ನಗಳನ್ನು ಪ್ರಬುದ್ಧ ಕರ್ನಾಟಕವು ಮಾಡಿದೆ. ಕನ್ನಡದ ಬೆಳವಣಿಗೆಯ ದೃಷ್ಟಿಯಿಂದ ದುಡಿದ ಮಹನೀಯರು ಮರಣವನ್ನಪ್ಪಿದಾಗ; ಹಬ್ಬ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದಾಗ ಇವೇ ಮೊದಲಾದ ಸಂದರ್ಭಗಳಲ್ಲಿ ಅಭಿನಂದನೆಗಳನ್ನು ಸಲ್ಲಿಸುವ ಸಮಯಗಳಲ್ಲಿ ಅವರ ವಿಶೇಷ ಗುಣ, ಸಾಧನೆ ಇವುಗಳನ್ನು ಒಳಗೊಂಡ ಕಿರು ಪರಿಚಯಗಳನ್ನು ಮಾಡಿಕೊಟ್ಟಿದೆ. ಕನ್ನಡ ನಾಡಿಗೆ ಅವರು ಸಲ್ಲಿಸಿರುವ ವಿಶೇಷ ಸೇವೆಯನ್ನು ಗುರುತಿಸುವ ಮೂಲಕ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸಿದೆ. ಈ ರೀತಿಯಾಗಿ ಪ್ರಬುದ್ಧ ಕರ್ನಾಟಕದ ಕೃತಜ್ಞತೆಗಳಿಗೆ ಪಾತ್ರರಾದವರಲ್ಲಿ, ಕನ್ನಡದ ಕವಿಗಳು, ಕಲಾವಿದರು, ಪತ್ರಕರ್ತರು, ಸಂಶೋಧಕರು, ಹಳಗನ್ನಡ ವಿಷಯದಲ್ಲಿ ಪಂಡಿತರು ಮಹಿಳೆಯರ ಅಭಿವೃದ್ಧಿಗಾಗಿ ದುಡಿದವರು, ಸಂಸ್ಕೃತ ಹಾಗೂ ಕನ್ನಡ ಭಾಷೆಗಳೆರಡರಲ್ಲಿ ಪಾಂಡಿತ್ಯಗಳಿಸಿದ ಉಭಯ ಭಾಷಾ ಪಂಡಿತರು, ಗ್ರಂಥ ಸಂಪಾದಕರು, ಅಕ್ಷರ ಲಿಪಿ ಸಂಸ್ಕರಣಕಾರರು, ಉತ್ತಮ ವಾಗ್ಮಿಗಳು, ಕನ್ನಡದ ಏಳಿಗೆಗಾಗಿ ಧನ ಸಹಾಯ ಮಾಡಿದವರು, ಶ್ರೇಷ್ಠಮಟ್ಟದ ಅಧ್ಯಾಪಕರು, ಭಾಷಾಂತರಕಾರರು, ಕರ್ನಾಟಕ ಏಕೀಕರಣಕ್ಕಾಗಿ ದುಡಿದವರು. ಶಿಕ್ಷಣ ಮಾಧ್ಯಮವಾಗಿ ಕನ್ನಡವನ್ನು ತರಲು ಯತ್ನಿಸಿದವರು, ಸಮಾಜ ಸೇವಕರು, ಮಕ್ಕಳ ವಿದ್ಯಾಭ್ಯಾಸಕ್ಕೆ ನೆರವಾದವರು. ಹೀಗೆ ಹತ್ತು ಹಲವು ಬಗೆಯಲ್ಲಿ ಕನ್ನಡದ ಅಭಿವೃದ್ಧಿಯನ್ನು ಬಯಸಿದವರ ಪರಿಚಯ ಇಲ್ಲಿ ಲಭ್ಯವಾಗುತ್ತದೆ. ಇಷ್ಟೇ ಅಲ್ಲದೆ ನಾಡಿನ ಸ್ವಾತಂತ್ರಕ್ಕಾಗಿ ಹೋರಾಡಿದ ಮಹಾತ್ಮ ಗಾಂಧಿ, ಭಾಷಾವಾರು ಪ್ರಾಂತಗಳಿಗೆ

ಕಾರಣಕರ್ತರಾದ ಸರ್ದಾರ್ ವಲ್ಲಭಾಯಿ ಪಟೇಲ್, ನಾಡಿನ ಕಣ್ಣಾಗಿದ್ದ ರವೀಂದ್ರನಾಥ ಠಾಗೋರ್, (೨೩-೧) ತೆಲಗು ಕವಿಗಳಾದ ಚಿಲುಕುರಿ ನಾರಾಯಣ (೩೩-೨) ಸಂಸ್ಕೃತ ಕವಿಗಳಾದ ಎಂ. ಹಿರಿಯಣ್ಣನವರು, ಡಾ. ವಿಷ್ಣು ಸೀತಾರಾಮ ಸುಖತನಕರ್ (೨೫-೧) ಬೌದ್ಧ ದರ್ಶನ ಮಾಡಿಸಿದ ಅರ್ಥರ್ ಬೇರೀಡೇಲ್ ಕೀತ್ ಇವರೇ ಮೊದಲಾದವರ ಬಗ್ಗೆ ಪರಿಚಯಾತ್ಮಕ ಕಿರು ಬರಹಗಳಿದ್ದರೂ, ಕನ್ನಡಕ್ಕಾಗಿ ದುಡಿದವರಿಗೇ ಸಿಂಹಪಾಲು ಲಭಿಸಿದೆ. ಇಂತಹ ಮಹಾನ್ ವ್ಯಕ್ತಿಗಳ ಪರಿಚಯ ಮಾಡಿಕೊಡುವುದು ಹಾಗೂ ಅವರುಗಳು ಕನ್ನಡ ನಾಡು, ನುಡಿಗೆ ಸಲ್ಲಿಸಿದ ಸೇವೆಯನ್ನು ಸ್ಮರಿಸುವುದು ತನ್ನ ಕರ್ತವ್ಯವೆಂದು ಪ್ರಬುದ್ಧ ಕರ್ನಾಟಕವು ಭಾವಿಸಿದೆ. ಶ್ರದ್ಧಾಂಜಲಿಗೆ ಒಳಗಾಗಿರುವ ಇಂತಹ ವ್ಯಕ್ತಿಗಳ ಪರಿಚಯದ ಅಗತ್ಯವೇನು ಎಂಬುದನ್ನು ಕುರಿತಂತೆ ಸಂಪಾದಕರು "ತುಂಬು ಜೀವನವನ್ನು ಬಾಳಿ ಶಕ್ತಿಯಿದ್ದಷ್ಟೂ ದುಡಿದು ಕನ್ನಡಕ್ಕೆ ನಾನಾ ರೀತಿಯಲ್ಲಿ ಸಹಾಯ ಮಾಡಿ ಕಣ್ಮರೆಯಾದ ಈ ಎಲ್ಲ ಹಿರಿಯರ ಪುಣ್ಯ ಸ್ಮರಣೆ ಕನ್ನಡಿಗರ ಹೃದಯದಲ್ಲಿ ನಿಂತು ಕನ್ನಡ ಸೇವೆಗೆ ಸ್ಥಿರ ಪ್ರೇರಣೆಯಾಗಲೆಂದು ಹಾರೈಸುತ್ತೇವೆ"[೧] ಎಂದು ಹೇಳಿರುವುದು ಇಂತಹ ಮಹಾ ಪುರುಷರ ಪರಿಚಯ ಕನ್ನಡಿಗರಿಗೆ ಅವಶ್ಯಕವಾಗಿ ಬೇಕು ಹಾಗೂ ಅದರಿಂದ ಕನ್ನಡಿಗರು ಸ್ಫೂರ್ತಿಯನ್ನು ಪಡೆಯಬೇಕು ಎಂಬ ಅದರ ಆಶಯವನ್ನು ತಿಳಿಸಿದೆ. ಆಧುನಿಕ ಕನ್ನಡ ಸಾಹಿತ್ಯವನ್ನು ಗಮನಿಸಿದರೆ ಸಾಮಾಜಿಕ ಪುರುಷರ ಹಾಗೂ ಗಣ್ಯವ್ಯಕ್ತಿಗಳ ಸ್ಮರಣೆಯನ್ನುಂಟು ಮಾಡುವ ಬರಹಗಳು ವಿಪುಲವಾಗಿ ದೊರೆಯುತ್ತದೆ. ಪ್ರಬುದ್ಧ ಕರ್ನಾಟಕವು ಇದಕ್ಕೆ ನೀಡಿರುವ ಕೊಡುಗೆಯೂ ಕಡಿಮೆಯೇನಿಲ್ಲ. ಪ್ರಬುದ್ಧ ಕರ್ನಾಟಕ ತನ್ನ ಸಂಪಾದಕೀಯಗಳಲ್ಲಿ, ವಸ್ತುಕೋಶಗಳಲ್ಲಿ ೧೯೧೯ ರಿಂದ ೧೯೫೦ರ ಅವಧಿಯಲ್ಲಿ ಕನ್ನಡಕ್ಕಾಗಿ ದುಡಿದು ಮಡಿದ ಸುಮಾರು ಅರವತ್ತಕ್ಕಿಂತಲೂ ಹೆಚ್ಚಿನ ಹಿರಿಯರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಿದೆ ಹಾಗೂ ವಿವಿಧ ಕಾರಣಗಳಿಂದಾಗಿ ಅಭಿನಂದನೆಗೆ ಒಳಗಾದವರುಗಳ ಪರಿಚಯಗಳನ್ನು ಮಾಡಿಕೊಟ್ಟಿದೆ. ಇದೇ ಸಂದರ್ಭದಲ್ಲಿ ಒಬ್ಬನೇ ವ್ಯಕ್ತಿಯನ್ನು ಕುರಿತಂತೆ ಒಂದಕ್ಕಿಂತಲೂ ಹೆಚ್ಚು ಲೇಖನಗಳು, ಕವಿತೆಗಳೂ ಪ್ರಕಟವಾಗಿರುವುದೂ ಉಂಟು. ಕನ್ನಡ ನಾಡಿಗೆ ಆತ ಸಲ್ಲಿಸಿದ ಸೇವೆ ಹಾಗೂ ಆತನಲ್ಲಿ ಗುರುತಿಸಿದ ಆದರ್ಶ ಇವುಗಳು ಬರಹದ ವಸ್ತುಗಳಾಗಿವೆ. ಆ ವ್ಯಕ್ತಿಯಲ್ಲಿರುವ ಯಾವ ಗುಣ ಆಕರ್ಷಣೀಯವಾಗಿ ಕಂಡಿವೆ ಎಂಬುದನ್ನು ಬರಹಗಳಲ್ಲಿ ತರಲಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಅಧ್ಯಯನದ ಈ ಸಂದರ್ಭದಲ್ಲಿ ಇಲ್ಲಿ ಪ್ರಕಟಗೊಂಡಿರುವ ಮಹನೀಯರುಗಳಲ್ಲಿ ಕನ್ನಡ ಜನಗಳಿಗೆ ಹಲವಾರು ಜನ

---

೧. ವಸ್ತುಕೋಶ, ಪ್ರ.ಕ. ಸಂಪುಟ ೨೪, ಸಂಚಿಕೆ ೧, ಪು. ೧೦೧.

ಪರಿಚಿತರು ಇನ್ನು ಹಲವಾರು ಜನ ಅಪರಿಚಿತರು ಅಂದಿನ ಕಾಲದಲ್ಲಿ ಪ್ರಸ್ತುತರಾಗಿದ್ದು ಇಂದಿನ ಸಾಹಿತ್ಯಾಸಕ್ತರ ದೃಷ್ಟಿಯಿಂದ ಅಪ್ರಸ್ತುತರಾಗಿರುವವರ ವಿವರಗಳು ಇಲ್ಲಿ ಲಭ್ಯ. ಇಂದು ಅವರು ಅವಗಣನೆಗೆ ಒಳಗಾಗಿದ್ದರೂ ಕನ್ನಡ ನಾಡಿನ ಸಮಗ್ರ ಬೆಳವಣಿಗೆಯಲ್ಲಿ ಅವರುಗಳು ನಿರ್ವಹಿಸಿದ ಪಾತ್ರ ಅಮೂಲ್ಯವಾದದ್ದು. ಆ ಪ್ರಬುದ್ಧ ಕರ್ನಾಟಕ ಪರಿಚಯ ಮಾಡಿಕೊಡುವ ಈ ವ್ಯಕ್ತಿಗಳು ಓದುಗರಲ್ಲಿ ಆ ವ್ಯಕ್ತಿಯೂ ತನ್ನ ನಾಡಿಗೆ ಸೇರಿದವನು. ತನ್ನ ನುಡಿಗೆ ಸಂಬಂಧಿಸಿದವನು ಎಂಬ ಪ್ರೀತಿಯನ್ನು ಹಾಗೂ ತಾನೂ ಕೂಡ ಆ ವ್ಯಕ್ತಿಯ ಜೊತೆಯಲ್ಲಿಯೇ ಇದ್ದವನು ಎಂಬ ಅಭಿಮಾನವನ್ನು ಮೂಡಿಸುತ್ತಾರೆ. ಅವರುಗಳ ಬಗ್ಗೆ ಪರಿಚಯ ಮಾಡುವ ವ್ಯಕ್ತಿಗೆ ಆತ ಸ್ನೇಹಿತ, ಸಾಹಿತಿ, ಕವಿ, ಗುರು ಹೀಗೆ ಯಾರೇ ಆಗಿದ್ದರೂ ಅವರ ಮರಣದ ನಂತರ ಸೃಷ್ಟಿಯಾಗಿರುವ ಬರಹಗಳಾಗಿದ್ದರಿಂದ ಅವುಗಳಲ್ಲಿ ಬಹುತೇಕ ಸ್ತುತಿಭರಿತ ಶೋಕ ವ್ಯಕ್ತವಾಗಿರುತ್ತದೆ. ಅಳಿದ ವ್ಯಕ್ತಿಯ ವಿಶಿಷ್ಟವಾದ ಗುಣ ಸ್ವಭಾವ ಇವುಗಳ ಕಡೆ ಗಮನ ಸೆಳೆಯುತ್ತದೆ.

ಕನ್ನಡ ನಾಡಿನ ಏಳಿಗೆಯಲ್ಲಿ ಜನರನ್ನು ಜಾಗೃತಗೊಳಿಸುವ ಸಂದರ್ಭದಲ್ಲಿ ಕನ್ನಡದ ಕವಿಗಳು ಸಲ್ಲಿಸಿರುವ ಸೇವೆ ಅಪಾರ. ಪ್ರಬುದ್ಧ ಕರ್ನಾಟಕ ಸ್ಮರಿಸಿರುವ ಕವಿಗಳಲ್ಲಿ ಉತ್ತರ ಕರ್ನಾಟಕದವರು, ಮಲೆನಾಡಿನ ಸೀಮೆಯವರು, ಕರಾವಳಿಯವರು, ಬಯಲು ಸೀಮೆಯವರು ಹೀಗೆ ನಾಡಿನ ವಿವಿಧ ಮೂಲೆಯವರೂ ಇದ್ದಾರೆ. ತಾನು ಯಾವುದೋ ಒಂದು ಪ್ರಾಂತ್ಯಕ್ಕೆ ಸೇರಿದವನೆಂಬ ಪೊಳ್ಳು ಜಂಬವಾಗಲೀ ಅಹಂಕಾರವಾಗಲೀ ಪ್ರಬುದ್ಧ ಕರ್ನಾಟಕಕ್ಕೆ ಇಲ್ಲ. ಮೈಸೂರಿನ ಕನ್ನಡ ಭಾಷೆ ಹಾಗೂ ಇಲ್ಲಿನ ಪಂಡಿತರೇ ಶ್ರೇಷ್ಠರೆಂಬ ಭಾವನೆಯೂ ಇದರಲ್ಲಿ ವ್ಯಕ್ತವಾಗಿಲ್ಲ. ನಾಡಿನ ಯಾವುದೇ ಕವಿಯಲ್ಲಿ ಇರಬಹುದಾದ ಉತ್ತಮಾಂಶಗಳಿಗೆ ಗೌರವ ಹಾಗೂ ಬೆಂಬಲ ಇದ್ದರಲ್ಲಿ ವ್ಯಕ್ತವಾಗಿದೆ. 'ಪಂಜೆ ಮಂಗೇಶರಾಯ'ರ(೧೯/೨-೩) ಮರಣದ ಸಂದರ್ಭದಲ್ಲಿ ಅವರು ಶಾಲೆಗಳ ಇನ್ಸ್‌ಪೆಕ್ಟರ್, ಹೈಸ್ಕೂಲಿನ ಹೆಡ್ ಮಾಸ್ಟರ್ ಇವೇ ಮೊದಲಾದ ಕರ್ತವ್ಯಗಳನ್ನು ನಿರ್ವಹಿಸಿದ ವಿಚಾರದ ಬಗ್ಗೆ ಮಾಹಿತಿ ನೀಡಿದೆ. ಮಕ್ಕಳೊಡನೆ ಮಕ್ಕಳಾಗಿ, ಅವರಲ್ಲಿ ಕನ್ನಡದ ಬಗ್ಗೆ ಆಸಕ್ತಿ ಮೂಡಿಸಿದ ಅವರ ವಿಶೇಷ ಗುಣವನ್ನು ಪ್ರಶಂಸಿದೆ. ಉತ್ತಮ ಉಪಾಧ್ಯಾಯರಾಗಿದ್ದರ ಬಗ್ಗೆ ವಿವರಣೆ ಇದೆ. ಪ್ರೀತಿ ಹಾಗೂ ಸ್ನೇಹಗಳು ಅವರ ಬಾಳಿನ ಮುಖ್ಯವಾದ ಆಕರ್ಷಣೆ ಅವರ ಮಾತಿನಲ್ಲಿ ನಯವಿದೆ. ನಗುವಿನಲ್ಲಿ ಮುಗ್ಧತೆ ಇದೆ, ಅವರ ಕಾವ್ಯದಲ್ಲಿ ಕಾಂತಿಯಿದೆ ಎಂಥವರ ಮನಸ್ಸನ್ನೂ ಸೆಳೆಯಬಲ್ಲ ಶಕ್ತಿ ಇದೆ.

ಪಂಜೆಯವರು ಯಾವುದೇ ಕೀರ್ತಿಯ ಆಸೆಗೆ ಒಳಗಾಗದೆ ಕನ್ನಡದ ತೇರನ್ನು ಎಳೆಯುವುದರ ಮುಖಾಂತರ ಅದರ ಮುನ್ನಡೆಗೆ ಶ್ರಮಿಸಿದವರು. ಅವರ ಈ

ಕಾರ್ಯದಲ್ಲಿ ಕೈ ಜೋಡಿಸಿದವರು ಹಲವಾರು ಮಂದಿ, ಕನ್ನಡ ತೇರಿನಲ್ಲಿ ಕನ್ನಡ ಮಾತೆಯನ್ನು ಕೂರಿಸಿ ಮೆರವಣಿಗೆ ಮಾಡಬೇಕೆಂದು ಆಶಿಸಿದವರು ಎಷ್ಟೋ ಮಂದಿ. ಬಿ.ಎಂ.ಶ್ರೀಕಂಠಯ್ಯ (೨೭-೩) ಅವರು ಕನ್ನಡದ ಪರವಾಗಿ ನಾನಾ ರೀತಿಯ ಸೇವೆಯನ್ನು ಸಲ್ಲಿಸಿದವರು ಸಾಹಿತ್ಯ ನಿರ್ಮಾಣ, ಪ್ರಚಾರ, ಹೊಸಗನ್ನಡದ ರೂಪ ಹಾಗೂ ಅದರ ವಿಮರ್ಶೆ, ಭಾಷೆ ಮತ್ತು ವಿದ್ಯಾ ಸಂಸ್ಕೃತಿಗಳ ಪರಿಶೀಲನೆ, ಗ್ರಂಥ ಪರಿಶೋಧನೆ, ಸಂಪಾದನೆಗಳಂತಹ ಕಾರ್ಯಗಳಷ್ಟೇ ಅಲ್ಲದೆ ಸಾಹಿತ್ಯದ ಅಂಗಶಾಸ್ತ್ರಗಳ ಅಧ್ಯಯನ ಮಾಡಿ, ಚಾರಿತ್ರಿಕ ದೃಷ್ಟಿಯಿಂದ, ಸಾರ ಸಂಗ್ರಹದ ದೃಷ್ಟಿಯಿಂದ, ರಸಾಸ್ವಾದನ ದೃಷ್ಟಿಯಿಂದ, ಮೌಲ್ಯ ನಿರ್ಣಯಗಳ ದೃಷ್ಟಿಯಿಂದ ಅದಕ್ಕೆ ನೆಲೆಯನ್ನು ಒದಗಿಸಿದವರು. ಇವರ ನಿಧನ ಅನೇಕ ಕವಿತೆಗಳಿಗೆ ಲೇಖನಗಳಿಗೆ ಕಾರಣವಾಯಿತು. ಅವರ ಆದರ್ಶ, ಕನ್ನಡ ಕವಿಗಳಿಗೆ ನೀಡಿದ ಪ್ರೋತ್ಸಾಹ, ತೋರಿದ ಮಾರ್ಗದರ್ಶನ, ಮಾಡಿದ ಭಾಷಣ ಕನ್ನಡ ಪ್ರಚಾರ ಇವೆಲ್ಲವೂ ಲೇಖನ ಹಾಗೂ ಕವನಗಳ ವಸ್ತುಗಳಾಗಿವೆ.

ಬಿ.ಎಂ.ಶ್ರೀ ಅವರ ಬಗ್ಗೆ ಸಂಪಾದಕೀಯದಲ್ಲಿ 'ಅವರನ್ನು ಇಂದು ನಾವು ಕಳೆದು ಕೊಂಡಿರುವೆವಾದರೂ ಅವರು ಈ ನಾಡಿನಲ್ಲಿ ರಕ್ತದಲ್ಲಿ ಸೇರಿದ್ದಾರೆ. ಅವರ ಆಸೆ ನಮ್ಮದು. ಅವರು ಹಿಡಿದ ಕೆಲಸ ನಾಡಿನ ಕೆಲಸ ಅವರ ಧ್ವನಿ ಕರ್ತವ್ಯದ ಕರೆ. ಅವರು ಬಿತ್ತಿದ ಶಾಸ್ತ್ರ, ಕೃತಿ ಧರ್ಮ, ವಿಮರ್ಶನ ಮಾರ್ಗ, ನಾಡಿನ ಶಾಶ್ವತ ಮಂಗಳವನ್ನು ಸಾಧಿಸುವ ತಂತ್ರ' ಎಂಬ ಅಭಿಪ್ರಾಯ ಪ್ರಕಟಗೊಂಡಿದೆ. ಅವರ ಸ್ಮರಣೆಯ ಮೂಲಕ ಕನ್ನಡ ನಾಡು-ನುಡಿಗಳು ಸರ್ವತೋಮುಖ ಅಭಿವೃದ್ಧಿ ಸಾಧಿಸಬೇಕು. ಅವರು ತೋರಿಸಿಕೊಟ್ಟ ಮಾರ್ಗದಲ್ಲಿ ಮುನ್ನಡೆದಾಗ ಮಾತ್ರ ಕನ್ನಡ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗುತ್ತದೆ. ಬಿ.ಎಂ.ಶ್ರೀಯವರ ಮರಣದ ಹಾಗೆಯೇ ಪ್ರಬುದ್ಧ ಕರ್ನಾಟಕದ ಲೇಖಕರ ಗಮನ ಸೆಳೆದ ಮತ್ತೊಬ್ಬ ಕವಿ ಟಿ.ಎಸ್.ವೆಂಕಣಯ್ಯನವರು(೨೦-೩). ಅವರು ಅಧ್ಯಾಪಕರಾಗಿ ವಿದ್ಯಾರ್ಥಿಗಳನ್ನು ತಮ್ಮ ಪ್ರೀತಿ ಹಾಗೂ ವಾತ್ಸಲ್ಯಗಳಿಂದ ತೊಡಗಿಸುತ್ತಿದ್ದ ವಿಶಿಷ್ಟ ವ್ಯಕ್ತಿತ್ವದಿಂದಾಗಿ ಗಮನ ಸೆಳೆಯುತ್ತಾರೆ. ವೆಂಕಣಯ್ಯನವರ ಮರಣದ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕದ ಒಂದು ಸಂಚಿಕೆ ಅವರಿಗಾಗಿಯೇ ಮೀಸಲಾಗಿದೆ. ಬಹುಧಾನ್ಯ ಸಂವತ್ಸರದ ಕಾಮನ ಸಂಚಿಕೆಯಲ್ಲಿ ವೆಂಕಣಯ್ಯನವರಲ್ಲಿದ್ದ ಕವಿತ್ವ, ಆದರ್ಶ, ವಿಮರ್ಶಿಸುವ ಶಕ್ತಿ ಸಂಘಟನಾ ಚತುರ್ಯ ಇವುಗಳನ್ನು ವಿವರಿಸಿದೆ. ಒಬ್ಬೊಬ್ಬ ಕವಿಗೆ ವೆಂಕಣಯ್ಯನವರ ಒಂದೊಂದು ಗುಣಗಳು ಆದರ್ಶವಾಗಿ ಕಂಡಿವೆ. ಕಣ್ಮರೆಯಾದ ಕನ್ನಡ ಹಕ್ಕಿ ವೆಂಕಣಯ್ಯನವರು ಕನ್ನಡದ ಕವಿಗಳಿಗೆ ಮಾರ್ಗದರ್ಶಕರಾಗಿ ಪ್ರೋತ್ಸಾಹಕಾಗಿ ಹೊಸ ಹುರುಪಿಗೆ ಕಾರಣ ಕರ್ತರಾಗಿ ದುಡಿದ ಬಗೆಯನ್ನು ವಿವರಿಸಿದರೆ ಗೋಕ್ನ ಅವರ

ಕವನ ವೆಂಕಣಯ್ಯನವರ ಬದುಕಿನಲ್ಲಿ ನಡೆದ ಘಟನೆಯೊಂದನ್ನು ಪರಿಚಯಿಸುತ್ತದೆ. ಶ್ರೀ ಪರಮೇಶ್ವರ ಅವರ ಕವನ ವೆಂಕಣಯ್ಯನವರಿಲ್ಲದ ಕನ್ನಡ ನಾಡಿನ ಅವರ ಶಿಷ್ಯರಿಗೆ ಕಾಡಿದ ಅನಾಥ ಪ್ರಜ್ಞೆಯ ಪರಿಚಯವನ್ನು ವಿವರಿಸಿದೆ. ಇವುಗಳಲ್ಲಿಯೇ ಪ್ರಕಟಗೊಂಡಿರುವ ಕುವೆಂಪು ಅವರ ವೆಂಕಣಯ್ಯನವರಿಗೆ ಎಂಬ ಆರು ಸಾಲಿನ ಕವನವಂತೂ ಅವರ ಸಾವಿನ, ನೋವಿನ ತೀವ್ರತೆಯನ್ನು ಪರಿಚಯಿಸುತ್ತದೆ. ಈ ಮಹನೀಯರುಗಳು ತಮ್ಮ ಬರಹಗಳ ಮೂಲಕ ಕನ್ನಡದ ಸೇವೆಯನ್ನು ಮಾಡಿದರೆ ದಿ.ಆರ್.ನರಸಿಂಹಾಚಾರ್ಯರ ಸೇವೆಯ ಪರಿಯೇ ಬೇರೆ. ದಿ.ಆರ್.ನರಸಿಂಹಾಚಾರ್ಯರು (೧೮-೩) ಭಾರತದ ಅನೇಕ ಭಾಷೆಗಳಲ್ಲಿ ಪಾಂಡಿತ್ಯ ಗಳಿಸಿದ್ದವರು. ವಿಷಯ ವಿಮರ್ಶೆ ನಿಷ್ಪಕ್ಷವಾದ ಪರಿಜ್ಞಾನ ಪ್ರಾಮಾಣಿಕತೆ ಇವುಗಳಿಂದಾಗಿ ಖ್ಯಾತಿ ಗಳಿಸಿಕೊಂಡವರು. 'ಕನ್ನಡದಲ್ಲಿಯೂ ವಿದ್ವತ್ತಿಗೆ ಅವಕಾಶವಿದೆ ಎಂಬುದನ್ನು ತೋರಿಸಿ ಕೊಟ್ಟವರು ಅವರು. ಕನ್ನಡವನ್ನು ಕಣ್ಣೆತ್ತಿ ಕೂಡ ನೋಡಲು ಜನರು ಹಿಂದೆಗೆಯುತ್ತಿದ್ದ ಕಾಲದಲ್ಲಿ ಆ ಭಾಷಾ ಸಾಹಿತ್ಯಗಳ ಹಿಂದಿನ ಚರಿತ್ರೆಯನ್ನು ಕೂಲಂಕಷವಾಗಿ ವಿಮರ್ಶೆ ಮಾಡಿ ಮುಂದಿನವರ ಕಟ್ಟಡಕ್ಕೆ ತಳಹದಿ ಅದದ್ದು ಕನ್ನಡಿಗರ ಪುಣ್ಯ'[೧] ಹೊಸದಾಗಿ ಕಂಡು ಹಿಡಿದ ವಿಷಯಗಳನ್ನು ಹೇಳುವ ಸಂದರ್ಭದಲ್ಲಿ ತೂಕ ಮಾಡಿದಂತೆ ಒಂದು ಮಾತೂ ಹೆಚ್ಚು ಕಡಿಮೆಯಾಗದಂತೆ ನಿರೂಪಿಸುವ ಶಕ್ತಿ ಪಡೆದಿದ್ದವರು. 'ಪ್ರಾಕೃತ ವಿಮರ್ಶ ವಿಚಕ್ಷಣ', 'ರಾವ್ ಬಹದ್ದೂರ್', 'ಮಹಾಮಹೋಪಾಧ್ಯಾಯರು', 'ಕರ್ನಾಟಕ ಪ್ರಾಚ್ಯ ವಿದ್ಯಾವೈಭವ' ಇವೇ ಮೊದಲಾದ ಅಗ್ಗಳಿಕೆಗೆ ಪಾತ್ರರಾಗಿದ್ದವರು. ಶ್ರೀಯುತರ ಬಗ್ಗೆ ಪ್ರಬುದ್ಧ ಕರ್ನಾಟಕ ಇನ್ನೊಂದು ಕಡೆಯಲ್ಲಿ ಅವರು ಬರೆದ 'ಕವಿ ಚರಿತ್ರೆಯಂತ' ಕೃತಿಗಳ ಬಗ್ಗೆ ಹೇಳುತ್ತಾ ಎಂದಿಗೆ ವಿದ್ವಾಂಸರೆಲ್ಲರೂ ಇಂತಹ ಬುದ್ಧಿಯಿಂದಲೇ ತಮಗೆ ಸಾಧ್ಯವಾದ ವಿಚಾರಗಳಲ್ಲಿ ಉತ್ತಮಾಂಶಗಳನ್ನು ತಮ್ಮ ಮಾತೃಭಾಷೆಯಲ್ಲಿ ತಿಳಿಸಬೇಕೆಂದು ಹೊರಡುವರೋ ಅಂದಿಗೆ ನಮ್ಮ ದೇಶವು ಕಣ್ಣು ಬಿಟ್ಟಿತೆಂದು ಹೇಳಬಹುದು ಎಂದು ಶ್ಲಾಘಿಸಿದೆ. ವಿದ್ವಾಂಸರುಗಳಿಂದ ಕನ್ನಡನಾಡು ಬಯಸುತ್ತಿದ್ದ ಸೇವೆಯ ಪರಿ ಇಂಥಹುದ್ದು, ನಾಡಿನ ವಿವಿಧ ವಿಚಾರಗಳಿಗೆ ಸಂಬಂಧಿಸಿದಂತೆ ನಡೆಯುತ್ತಿದ್ದ ಸಂಶೋಧನೆಗಳಲ್ಲಿ ಕನ್ನಡಿಗರು ಪಾಲ್ಗೊಳ್ಳಬೇಕು ಎಂಬುದು ಪ್ರಬುದ್ಧ ಕರ್ನಾಟಕದ ಇಚ್ಛೆಯಾಗಿತ್ತು. ಆದುದರಿಂದಲೇ ಸಂಶೋಧಕರಾದ ದಿ. ಎಚ್.ಕೃಷ್ಣರವರಿಗೆ(೨೯-೩), ದಿ. ನಾರಾಯಣ ಶ್ರೀನಿವಾಸ ರಾಜ ಪುರೋಹಿತರವರಿಗೆ(೩೫-೧), ದಿ. ಕೆ.ಬಿ.ಪಾಠಕ್‌ರವರಿಗೆ ಶ್ರದ್ಧಾಂಜಲಿ ಸಮರ್ಪಿಸಿದೆ. ಇವರುಗಳು ಕನ್ನಡಕ್ಕಾಗಿ ಮಾಡಿರುವ ಸಂಶೋಧನೆ ನಾನಾ ವಿಧವಾದುದು. ಎಂ.ಎಚ್.ಕೃಷ್ಣರವರು ಮೈಸೂರು ಮಹಾರಾಜ ಕಾಲೇಜಿನ ಇತಿಹಾಸ

---

೧. ವಸ್ತುಕೋಶ, ಪ್ರಕ. ಸಂಪುಟ ೧೮, ಸಂಚಿಕೆ ೩, ಪು. ೧೨೦.

ಪ್ರಾಧ್ಯಾಪಕರಾಗಿದ್ದು ಅನೇಕ ಇತಿಹಾಸ ಸಂಶೋಧನೆಯ ಲೇಖನಗಳನ್ನು ಕನ್ನಡಿಗರಿಗೆ ಒದಗಿಸಿಕೊಟ್ಟವರು. ಕನ್ನಡದ ಮೊತ್ತಮೊದಲನೆಯ ಶಾಸನವಾದ ಹಲ್ಮಿಡಿ ಶಾಸನದ ಬಗ್ಗೆ ಹೊಸ ಬೆಳಕನ್ನು ಚೆಲ್ಲಿದವರು. ಕರ್ನಾಟಕ ಏಕೀಕರಣಕ್ಕಾಗಿ ಭಾರತದ ಸ್ವಾತಂತ್ರ್ಯಕ್ಕಾಗಿ ದುಡಿದವರು ಇಂದಿಗೂ ಪ್ರಸ್ತುತವಾಗಿರುವ ಕರ್ನಾಟಕದ ಭೂಪಟ ಇವರ ಕೊಡುಗೆ. ಇವರ ಹಾಗೆಯೇ ಇತಿಹಾಸ ಸಂಶೋಧನೆಗೆ ದುಡಿದ ದಿ.ನಾರಾಯಣ ಶ್ರೀನಿವಾಸ ರಾಜಪುರೋಹಿತರವರು ಕನ್ನಡ ಕವಿಗಳ ಕಾಲ ದೇಶ ಮತ ಕೃತಿ ರಾಜಾಶ್ರಯ ಇವುಗಳ ನಿರ್ಣಯದ ಬಗ್ಗೆ ಸಂಶೋಧನೆ ಮಾಡಿದವರು. ಕರ್ನಾಟಕ ಇತಿಹಾಸ, ದಾನ ಧರ್ಮಪದ್ಧತಿ, ಶ್ರೀ ಮದ್ವಾಚಾರ್ಯ ಚರಿತೆ, ಹೀಗೆ ಮಹತ್ವವಾದ ಕೃತಿಗಳನ್ನು ಕನ್ನಡಕ್ಕೆ ನೀಡಿದವರು. ಡೆಕ್ಕನ್ ಕಾಲೇಜಿನಲ್ಲಿ ಬಹುಕಾಲ ಪ್ರೊಫೆಸರ್ ಆಗಿ ಸೇವೆ ಸಲ್ಲಿಸಿದ್ದ ಪ್ರೊ. ಕೆ.ಬಿ.ಪಾಠಕ್ ಅವರು ಈ ಮೊದಲು ದಿ.ಲ್ಯೂಯಿ ರೈಸ್ ಅವರ ಜೊತೆಯಲ್ಲಿ ಮೈಸೂರು ಶಾಸನ ಇಲಾಖೆಯಲ್ಲಿ ಸಹಾಯಕರಾಗಿ ಸೇವೆ ಸಲ್ಲಿಸಿದ್ದರು. ಕನ್ನಡದಲ್ಲಿ ಇದುವರೆವಿಗೆ ದೊರೆತಿರುವ ಗ್ರಂಥಗಳಲ್ಲಿ ಮೊಟ್ಟ ಮೊದಲನೆಯದಾದ ಕವಿರಾಜಮಾರ್ಗವನ್ನು ಇವರು ಆಗಲೇ ಪರಿಷ್ಕರಿಸಿ ಪ್ರಕಟಿಸಿದ್ದು. ಇಂತಹ ಮಹನೀಯರುಗಳು ಮಾಡಿರುವ ಸಂಶೋಧನಾ ಕಾರ್ಯಗಳಿಗಾಗಿ ಕನ್ನಡಿಗರು ಅವರನ್ನು ಸ್ಮರಿಸಿಕೊಳ್ಳುವುದು ಹಾಗೂ ಹೊಸ ಸಂಶೋಧನೆಗಳಲ್ಲಿ ತೊಡಗಿ ಕನ್ನಡ ನಾಡಿನ ಇತಿಹಾಸವನ್ನು ಖಚಿತಪಡಿಸುವಂತಹ ಕಾರ್ಯಗಳಲ್ಲಿ ನಿರತರಾಗಲೆಂಬ ಆಶಯವನ್ನು ಪ್ರಬುದ್ಧ ಕರ್ನಾಟಕ ವ್ಯಕ್ತಪಡಿಸಿದೆ.

ನಾಡಿನ ಬೆಳವಣಿಗೆಯಲ್ಲಿ ಸಾಹಿತ್ಯ, ಸಂಶೋಧನೆಗಳು, ಹಾಗೆಯೇ ಕಲೆಯೂ ಅಭಿವೃದ್ಧಿಯನ್ನು ಸಾಧಿಸಬೇಕು. ಉತ್ತಮ ಕಲಾವಿದರುಗಳು ಅದು ಸಂಗೀತ, ಶಿಲ್ಪ, ಚಿತ್ರಕಲೆ, ನಾಟಕ ಯಾವುದೇ ಆಗಿರಲಿ ಆ ಕ್ಷೇತ್ರದಲ್ಲಿ ಬೆಳೆದು ಬರಬೇಕು. ಯಾವುದೇ ನಾಡಿನಲ್ಲಿ ಸಾಂಸ್ಕೃತಿಕ ಕ್ಷೇತ್ರದ ಬೆಳವಣಿಗೆಯಾದರೆ ಅದು ನಾಡು ಬೆಳವಣಿಗೆಯಾದಂತೆಯೇ ಎಂಬುದನ್ನು ಅರಿತಿರುವ ಪ್ರಬುದ್ಧ ಕರ್ನಾಟಕ ತನ್ನ ನಾಡಿನ ಉತ್ತಮ ಕಲಾವಿದರ ಮರಣದ ಸಂದರ್ಭದಲ್ಲಿ ಶ್ರದ್ಧಾಂಜಲಿಯನ್ನು ಅರ್ಪಿಸಿ ಅಂತಹ ಮಹನೀಯರು ಕನ್ನಡನಾಡಿನ ಮತ್ತೊಮ್ಮೆ ಹುಟ್ಟಿಬರಲಿ ಎಂದು ಆಶಿಸಿದೆ. ಕನ್ನಡ ನಾಡು ಕಂಡ ಅದ್ಭುತ ಕಲಾವಿದರುಗಳಾದ ವೈಣಿಕ ಶಿಖಾಮಣಿ ಶೇಷಣ್ಣನವರು ಹಾಗೂ ನಟಶಿರೋಮಣಿ ವರದಾಚಾರ್ಯರ(೮-೧) ಬಗ್ಗೆ ಬರೆಯುತ್ತಾ 'ಕರ್ನಾಟಕ ಕಲಾಪ್ರಸಾದದ ಮೇಲೆ ನಿಂದಿದ್ದ ಕಲಶಗಳಲ್ಲಿ ದೊಡ್ಡ ದೊಡ್ಡ ಎರಡು ಸುವರ್ಣ ಕಲಶಗಳು ಬಿದ್ದು ಹೋದವು' ಎಂದು ಪ್ರತಿಕ್ರಿಯೆ ವ್ಯಕ್ತಪಡಿಸಿದೆ. ವೀಣೆ ಶೇಷಣ್ಣನವರಲ್ಲಿದ್ದ ಅತಿಥಿ ಸತ್ಕಾರದ ಗುಣ, ನವರಾತ್ರಿ ಗೋಕಲಾಷ್ಟಮಿ ವಿನಾಯಕ ಹಬ್ಬಗಳಲ್ಲಿ ಅವರಿಂದ ದೊರೆಯುತ್ತಿದ್ದ ಸಂಗೀತದ ಸವಿರುಚಿ ಇವುಗಳ ನೆನಪನ್ನು

ಮೆಲುಕು ಹಾಕಿದೆ. ಹಾಗೇಯೇ ಕರ್ನಾಟಕ ನಾಟಕ ರಂಗಕ್ಕೆ ಆಧುನಿಕತೆಯ ಮೆರಗು ನೀಡಿದ ವರದಾಚಾರ್ಯರ ಸಾಧನೆಗಳ ಬಗ್ಗೆ ಹೇಳುತ್ತಾ "ಜನಗಳಿಗೆ ಆಗ ಅದೊಂದು ಹುಚ್ಚು ಹಿಡಿದು ಹೋಗಿತ್ತು. ಆ ನಾಟಕವನ್ನು ನೋಡುವವರೂ ಹಾಡುಗಳನ್ನು ಅರಿಯವದರೂ ಅಪ್ರಯೋಜನಕರೆನಿಸಿಕೊಳ್ಳುತ್ತಿದ್ದರು"[೧] ಎಂಬ ಸತ್ಯವನ್ನು ಹೊರಹಾಕಿದೆ. ಇಂಥವರ ಮರಣದಿಂದಾಗಿ ಶಾರದೆಯ ವೀಣಾನಾದವು ನಿಂತು ಹೋಯಿತು. ರತ್ನವಳಿಯಿಂದ ರಂಜಿಸುತ್ತಿದ್ದ ದೃಶ್ಯ ಪ್ರಪಂಚವು ಅದೃಶ್ಯವಾಯಿತು ಎಂದು ವಿಷಾದವನ್ನು ವ್ಯಕ್ತಪಡಿಸಿದೆ. ಕನ್ನಡ ನಾಡು ಕಳೆದುಕೊಂಡ ವೀಣಾನಾದ ಹಾಗೂ ದೃಶ್ಯ ಪ್ರಪಂಚಗಳು ಕನ್ನಡಿಗರಿಗೆ ಮತ್ತೆ ದೊರೆಯಬೇಕು ಅದನ್ನು ಗಳಿಸಿಕೊಡಲು ಕನ್ನಡಿಗರು ಶ್ರಮವಹಿಸಬೇಕು ಎಂಬ ಆಶಯವನ್ನು ಈ ಕಿರುಪರಿಚಯವನ್ನು ಒದಗಿಸಿಕೊಟ್ಟಿದೆ.

ಕನ್ನಡ ಪ್ರೇಮ, ಕಲಾ ಪ್ರಪಂಚದ ಸಾಧನೆಯಂತಹ ವಿಷಯಗಳನ್ನು ಜನ ಸಾಮಾನ್ಯರವರೆಗೂ ಕರೆದೊಯ್ಯುವುದು ಪ್ರತಿಕೆಗಳು. ಸಾಹಿತ್ಯ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಯ ಆಶಯಗಳನ್ನೊಳಗೊಂಡ ಪತ್ರಿಕೆಗಳು ಕನ್ನಡ ನಾಡಿನ ಸಮಗ್ರ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದರೆ. ಅಂತಹ ಪತ್ರಿಕೆಗಳನ್ನು ಸಂಪಾದಿಸಿ ಜನ ಸಾಮಾನ್ಯರಿಗೂ ಮುಟ್ಟಿಸಿದ ಕೀರ್ತಿ ನಮ್ಮ ಪತ್ರಕರ್ತರದ್ದು, ಬೊಂಬಾಯಿ ಸೀಮೆಯಿಂದ ಹೊರಡುತ್ತಿದ್ದ ಪತ್ರಿಕೆಯಾದ 'ಪ್ರಭೋದಕ' ಹಾಗೂ ಅದರ ಸಂಪಾದಕರಾದ ಎಂ.ಚಂದ್ರಶೇಖರ ಶರ್ಮರು ಕನ್ನಡದ ಏಳಿಗೆಗಾಗಿ ದುಡಿದವರು. 'ಗೌರೀಶಂ' ಎಂಬ ಹೆಸರಿನಲ್ಲಿ ಲೇಖನಗಳನ್ನು ಬರೆದು ಕನ್ನಡಿಗರ ಗೌರವಕ್ಕೆ ಪಾತ್ರರಾಗಿದ್ದವರು. ಇವರಂತೆಯೇ ಒಕ್ಕಲಿಗರ ಪತ್ರಿಕೆಯನ್ನು ಪ್ರಾರಂಭಿಸಿ ನಾಡು ನುಡಿಗಳ ಏಳಿಗೆಗಾಗಿ ದುಡಿದವರು ಬಿ.ಪುಟ್ಟಯ್ಯ(೨೬–೪)ನವರು. ಸರ್ಕಾರದ ಮುದ್ರಣಾಲಯದ ಅಧಿಕಾರಿಗಳಾಗಿದ್ದವರು. ಇವರುಗಳು ಕನ್ನಡಕ್ಕಾಗಿ ದುಡಿದ ಪರಿಯನ್ನು ಪ್ರಬುದ್ಧ ಕರ್ನಾಟಕ ಕೃತಜ್ಞತೆಯಿಂದ ಸ್ಮರಿಸಿದೆ. ಅಷ್ಟೇ ಅಲ್ಲದೆ ಎಂ.ವೆಂಕಟಕೃಷ್ಣಯ್ಯನವರು (೧೫–೩) ತಾತಯ್ಯನವರೆಂದೇ ಪ್ರಖ್ಯಾತ ಪಡೆದ ಇವರು ಸಾಮಾಜಿಕ, ರಾಜಕೀಯ, ವಿದ್ಯಾಭ್ಯಾಸ ಮೊದಲಾದ ಎಲ್ಲ ಚಳುವಳಿಗಳಲ್ಲಿ ಮುಂದಾಳತ್ವ ವಹಿಸಿದ್ದವರು. ಬಹುಕಾಲ ವೃತ್ತ ಪತ್ರಿಕೆ ನಡೆಸಿ ದೇಶದ ಜನರ ತಿಳುವಳಿಕೆಯನ್ನು ಬೆಳೆಸಿದವರು. ಇವರ ಮರಣದ ಸಂದರ್ಭದಲ್ಲಿ ಸಂಪಾದಕರು ಹೇಳುವ "ಅವರ ಸ್ಥಾನವನ್ನು ತುಂಬುವ ಮತ್ತೊಂದು ವ್ಯಕ್ತಿ ಈ ದೇಶದಲ್ಲಿ ಇಲ್ಲವಲ್ಲ ಎಂಬ ಕೊರಗು ಮಾತ್ರ ಉಳಿದಿದೆ"[೨] ಎಂಬ ಮಾತುಗಳು ಉಳಿದ ಮಹನೀಯರ

---

೧. ವಸ್ತುಕೋಶ, ಪ್ರ.ಕ. ಸಂಪುಟ ೮, ಸಂಚಿಕೆ ೧, ಪು. ೫.
೨. ವಸ್ತುಕೋಶ, ಪ್ರ.ಕ. ಸಂಪುಟ ೧೪, ಸಂಚಿಕೆ ೨.

ವಿಚಾರಗಳಿಗೂ ಅನ್ವಯವಾಗುತ್ತದೆ. ಆ ಸ್ಥಾನವನ್ನು ತುಂಬಬೇಕು ಎಂಬ ಬಯಕೆಯೂ ಇಲ್ಲಿದೆ. ಇವರುಗಳ ಜೊತೆಯಲ್ಲೇ ಪತ್ರಕರ್ತರಾಗಿ ದುಡಿದ ಎಂ.ಎ.ರಾಮಾನುಜಯ್ಯಂಗಾರರ ಸೇವೆಯೂ ಪ್ರಬುದ್ಧ ಕರ್ನಾಟಕದ ಪ್ರಶಂಸೆಗೆ ಒಳಗಾಗಿದೆ(೧೯-೧). ಇವರು ಮಹಾರಾಣಿ ಕಾಲೇಜಿನಲ್ಲಿ ಬೋಧಕರಾಗಿ ಸೇವೆ ಪ್ರಾರಂಭಿಸಿ ನಂತರ ಪತ್ರಿಕೋದ್ಯಮದ ಸೆಳೆತಕ್ಕೆ ಒಳಗಾದವರು. 'ಆರ್ಯಮತ ಸಂಜೀವಿನಿ' 'ಕಾವ್ಯಮಂಜರಿ' ನಂತರ ಕಾವ್ಯ ಕಲಾನಿಧಿಯಂತಹ ಪತ್ರಿಕೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇದರಲ್ಲಿ ಅನೇಕ ಚಂಪೂ ಕೃತಿಗಳು, ಪಟ್ಪದಿ ಗ್ರಂಥಗಳ, ಶುದ್ಧವಾಗಿ ಸಂಪಾದನೆಗೊಂಡಿರುವುದಲ್ಲದೆ ಅವಶ್ಯವಿರುವ ಕಡೆಗಳಲ್ಲಿ ಟಿಪ್ಪಣಿಗಳೊಡನೆ ಮುದ್ರಿತವಾಗಿದೆ, ಇದಕ್ಕೆ ಕಾರಣಕರ್ತರಾಗಿ ಜನತೆಯ ಜ್ಞಾನಾಭಿವೃದ್ಧಿಗೆ ಸಹಾಯಕರಾಗಿ ಇವರು ದುಡಿದಿರುವುದನ್ನು ಪತ್ರಿಕೆಯು ಗಮನಿಸಿದೆ.

ಆಧುನಿಕ ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಭಾಷಾಂತರಕಾರರಿಂದ ದೊರೆತಿರುವ ಕೊಡುಗೆ ಅಮೂಲ್ಯವಾದದ್ದು ಹಾಗೂ ಅಪೂರ್ವವಾದದ್ದು. ಸಂಸ್ಕೃತ, ತೆಲಗು, ತಮಿಳು, ಬಂಗಾಳ, ಗ್ರೀಕ್ ಇವೇ ಮೊದಲಾದ ಭಾಷೆಗಳಲ್ಲಿ ಆಳವಾದ ಪಾಂಡಿತ್ಯವನ್ನು ಪಡೆದಿದ್ದ ಇವರುಗಳು ತಮಗೆ ತಿಳಿದಿದ್ದ ಭಾಷೆಗಳಲ್ಲಿ ಇರುವ ಸಾಹಿತ್ಯದ ಸ್ವಾರಸ್ಯಕರವಾಗಿರುವ ಭಾಗಗಳನ್ನು ಕನ್ನಡಿಗರಿಗೆ ದೊರಕಿಸಿ ಕೊಡುವ ಪ್ರಯತ್ನಗಳನ್ನು ಮಾಡಿದ್ದಾರೆ. ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ, ಅಭಿರುಚಿಯನ್ನು ಬೆಳೆಸುವ ದೃಷ್ಟಿಯಿಂದ ಅಗತ್ಯವೆನಿಸುವ ಸಾಹಿತ್ಯವನ್ನು ಕನ್ನಡಿಗರಿಗೆ ದೊರಕಿಸಿ ಕೊಡಬೇಕೆಂಬ ಆಶಯ ಇವರದ್ದಾಗಿತ್ತು. ಅಳಸಿಂಗಾಚಾರ್ಯರು (೨೨-೪) ಮೈಸೂರು ಸೀತಾರಾಮಶಾಸ್ತ್ರಿಗಳು (೧೫-೩) ಸೋಸಲೆ ಅಯ್ಯಾಶಾಸ್ತ್ರಿಗಳು (೧೬-೧) ಇವರೇ ಮೊದಲಾದವರು ಸಂಸ್ಕೃತದಿಂದ ಕನ್ನಡಕ್ಕೆ ಉತ್ತಮವಾದ ಕೃತಿಗಳನ್ನು ದೊರಕಿಸಿಕೊಟ್ಟಿದ್ದಾರೆ. ಇವರ ಭಾಷಾಂತರದ ಸ್ವಾರಸ್ಯವನ್ನು ಕುರಿತು, ಅವುಗಳು ಶ್ರೇಷ್ಠ ಮಟ್ಟದ್ದಾಗಿದ್ದು ಮೂಲದಲ್ಲಿ ಇರುವುದಕ್ಕಿಂತಲೂ ಕೆಲವು ಬಾರಿ ಸೊಗಸಾಗಿರುವುದನ್ನು ಪ್ರಬುದ್ಧ ಕರ್ನಾಟಕ ಗುರುತಿಸಿ ಅದು ಕನ್ನಡಕ್ಕೆ ಸಂದ ವಿಶೇಷ ಕೊಡುಗೆಯೆಂದೇ ಭಾವಿಸಿದೆ. ಅಳಸಿಂಗಾಚಾರ್ಯರ ವಿದ್ವತ್ತಿನ ಬಗ್ಗೆ ಪ್ರಸ್ತಾಪಿಸುತ್ತಾ ಹಿಂದೆ ಬಸಪ್ಪಶಾಸ್ತ್ರಿಗಳ ಕಾಳಿನ ದಾಸನ ಶಾಕುಂತಲ ನಾಟಕವನ್ನು ಕನ್ನಡಕ್ಕೆ ತಂದು ಕೊಟ್ಟು ಕನ್ನಡಕ್ಕೆ ಉಪಕಾರ ಮಾಡಿದ್ದಾರೆ. ಈಗ ಅದೇ ಕೆಲಸವನ್ನು ಅಳಸಿಂಗಾಚಾರ್ಯರು ಮಾಡಿದ್ದಾರೆ. ಇವರನ್ನು ಕುರಿತು ಸಂಪಾದಕರು, ಕಾಳಿದಾಸ ಒಬ್ಬ ಬಸಪ್ಪ ಶಾಸ್ತ್ರಿಗಳನ್ನು ಸಂಪಾದಿಸಿದರೆ ಭಾಸನು ಒಬ್ಬ ಅಳಸಿಂಗಾಚಾರ್ಯರನ್ನು ಸಂಪಾದಿಸಿದ ಇವುಗಳಿಂದ ಕವಿಗಳು ಎಷ್ಟು ಕೃತಾರ್ಥರೋ ಭಾಷಾಂತರಕಾರರಾಗಿಯೂ ಅಷ್ಟೇ ಕೃತಾರ್ಥರು. ಈ ಭಾಷಾಂತರಗಳು ಜೀವ ಪುಷ್ಟಿಯಲ್ಲೂ ಸರಳತೆಯಲ್ಲೂ ಪದ ಮೈತ್ರಿಯಲ್ಲಿಯೂ

ಮೂಲವನ್ನು ಕೆಲವೆಡೆ ಕೀಳಾಗಿಸಿವೆ ಎಂಬ ಹೊಗಳಿಕೆಯ ಮಾತುಗಳನ್ನಾಡಿದ್ದಾರೆ. ಮೈಸೂರು ಸೀತಾರಾಮಶಾಸ್ತ್ರಿಗಳು 'ಪ್ರತಿಮಾ ನಾಟಕ' 'ವೇಣೀಸಂಹಾರ'ದಂತಹ ಉತ್ಕೃಷ್ಟ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿಕೊಟ್ಟಿದ್ದಾರೆ. ಸಂಸ್ಕೃತದಲ್ಲಿ ಸೊಗಸಾಗಿರುವ ವಿಚಾರಗಳೆಲ್ಲವೂ ಕನ್ನಡಕ್ಕೆ ಬರಬೇಕೆಂಬುದು ಇವರ ಅಭಿಪ್ರಾಯ. ಇವರು ಪರಿಷ್ಕರಿಸಿ ಪ್ರಕಟಿಸಿದ 'ಭಕ್ತವಿಜಯ' ಹಾಗೂ 'ಸಹಸ್ರ ನಾಮಾವಳಿ' ಅಂದಿನ ದಿನಗಳಲ್ಲಿ ಕನ್ನಡ ನಾಡಿನಲ್ಲೆಲ್ಲಾ ಪ್ರಖ್ಯಾತಿ ಗಳಿಸಿದ್ದವು ಎಂಬುದನ್ನು ಪ್ರಬುದ್ಧ ಕರ್ನಾಟಕ ಸ್ಮರಿಸಿದೆ. ದಿ.ಸೋಸಲೆ ಅಯ್ಯಾಶಾಸ್ತ್ರಿಗಳಂತೂ (೧೬-೧) ಮಹಾರಾಜರಿಂದಲೇ 'ಕವಿ ತಿಲಕ' ಬಿರುದನ್ನು ಗಳಿಸಿದ್ದವರು. ಸಂಸ್ಕೃತದಲ್ಲಿ ಪರಿಪೂರ್ಣ ಪಾಂಡಿತ್ಯ ಪಡೆದಿದ್ದ ಇವರು ಶೇಷನಾರಾಯಣ, ನಳಚರಿತ್ರೆ, ಕರ್ನಾಟಕ ರಾಮಾಯಣದಂತಹ ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾರೆ. ಇಂತಹ ಸ್ಮರಣೆ ಕನ್ನಡಿಗರಿಗೆ ಅಗತ್ಯವಾಗಿ ಆಗಬೇಕಾಗಿದೆ. ಆಧುನಿಕ ಕನ್ನಡಕ್ಕೆ ಸಂಸ್ಕೃತದ ಪಂಡಿತರಿಂದೇನು ಆಗುತ್ತದೆ ಎಂದು ಹಳಿಯುವವರು ಇಂಥವರ ಸೇವೆಯನ್ನು ಗಮನಿಸಬೇಕು. ಪ್ರಾಚೀನ ಪಂಡಿತರು ಆಧುನಿಕ ಸಾಹಿತ್ಯಕ್ಕೆ ರಚನಾತ್ಮಕವಾಗಿ ಹೇಗೆ ಸಹಾಯ ಮಾಡಬಹುದೆಂಬುದಕ್ಕೆ ಅವರು ಒಂದು ಒಳ್ಳೆಯ ದೃಷ್ಟಾಂತವಾಗಿದ್ದರೆಂದು ನಾವು ಭಾವಿಸುತ್ತೇವೆ ಎನ್ನುವಷ್ಟರ ಮಟ್ಟಿಗೆ ಅವರುಗಳಿಂದ ಕನ್ನಡ ಸಾಹಿತ್ಯಕ್ಕೆ ಸೇವೆ ಸಂದಿದೆ.

ಒಳ್ಳೆಯ ಭಾಷಾಂತರಗಳಿಂದ ಕನ್ನಡವನ್ನು ಹೇಗೆ ಬೆಳೆಸಬಹುದೆಂಬುದಕ್ಕೆ ಇಂತಹವರು ಸಾಕ್ಷಿಯಾಗಿದ್ದಾರೆ. ಹೀಗೆ ಭಾಷಾಂತರಗಳ ಮೂಲಕ ಕನ್ನಡ ಸಾಹಿತ್ಯವನ್ನು ಬೆಳೆಸಿರುವವರ ಜೊತೆಯಲ್ಲಿಯೇ ಹಳೆಗನ್ನಡ ಕಾವ್ಯಗಳ ಬಗ್ಗೆ ಆಸಕ್ತಿಯನ್ನು ತಾಳಿ ಅವುಗಳನ್ನು ಪರಿಷ್ಕರಿಸಿ, ಪ್ರಕಟಿಸಿ ಕನ್ನಡಗರಿಗೆ ಸೇವೆ ಸಲ್ಲಿಸಿರುವ ಮಹನೀಯರನ್ನು ಸ್ಮರಿಸುವುದು ಅಗತ್ಯವೆಂದು ಭಾವಿಸಿರುವ ಪ್ರಬುದ್ಧ ಕರ್ನಾಟಕ, ದಿ.ಅಲೆಮನೆ ವೆಂಕಟರಾಯರು(೧೭-೧), ಆರ್.ತಾತಾಚಾರ್ಯ (೧೪-೪) ರಂತಹ ಪಂಡಿತರುಗಳ ಪರಿಚಯ ಮಾಡಿಕೊಟ್ಟಿದೆ. ಇವರುಗಳು ಹಳೆಗನ್ನಡ ಸಾಹಿತ್ಯದಲ್ಲಿ ತೀವ್ರವಾದ ಆಸಕ್ತಿ ಹೊಂದಿದ್ದವರು, ವೆಂಕಟರಾಯರು 'ಶಾಂತಿ ಪುರಾಣ' 'ಕವಿರಾಜ ಮಾರ್ಗ' ದಂತಹ ಹಳೆಗನ್ನಡ ಪ್ರೌಢಗ್ರಂಥಗಳನ್ನು ಅಚ್ಚು ಹಾಕಿಸಿ ಕನ್ನಡಿಗರಿಗೆ ಸಹಾಯ ಮಾಡಿದ್ದರೆ, ತಾತಾಚಾರ್ಯ ಅವರೂ ಕೂಡ ಜೈನ ಸಾಹಿತ್ಯದಲ್ಲಿ ವಿಶೇಷ ಪರಿಣತಿಗಳಿಸಿ ಆ ವಿಷಯದಲ್ಲಿ ಕನ್ನಡಿಗರ ಅಭಿವೃದ್ಧಿಯಾಗುವ ಹಾಗೆ ಶ್ರಮಿಸಿದವರು. ಹೀಗೆ ಕನ್ನಡದ ನಾನಾ ವಿಷಯಗಳಿಗೆ ಸಂಬಂಧಿಸಿದಂತೆ ಕನ್ನಡವನ್ನು ಶ್ರೀಮಂತಗೊಳಿಸಲು ಪ್ರಯತ್ನಿಸಿದವರ ಪರಿಚಯ ದೊರೆತಿರುವಂತೆಯೇ ಮಹಾರಾಣಿ ಕಾಲೇಜಿನಲ್ಲಿ ಅರ್ಥಶಾಸ್ತ್ರ ಉಪನ್ಯಾಸಕಿಯಾಗಿ ಪಾಶ್ಚಾತ್ಯ ದೇಶದಲ್ಲಿ ಪಿ.ಎಚ್.ಡಿ ಪದವಿಯನ್ನು ಪಡೆದ ಡಾ.ಯು.ಅಭಯಾಂಬಾಳ್(೧೫-೩) ಅಂತಹವರ

ಸ್ಮರಣೆಯೂ ಅಗತ್ಯವೆಂದು ಪ್ರಬುದ್ಧ ಕರ್ನಾಟಕ ಭಾವಿಸಿದೆ. ಮಹಿಳೆಯರು ಕಾಲೇಜಿನಲ್ಲಿ ಮೆಟ್ಟಿಲನ್ನು ಹತ್ತುವುದು ಕಷ್ಟವಾಗಿದ್ದ ಕಾಲದಲ್ಲಿ ತಾವು ಉಚ್ಚ ವಿದ್ಯಾಭ್ಯಾಸವನ್ನು ಪಡೆಯುವುದು ಮಾತ್ರವಲ್ಲದೆ ತನ್ನ ನಾಡಿನ ಮಹಿಳೆಯರ ಪರಿಸ್ಥಿತಿಯನ್ನು ಉತ್ತಮಗೊಳಿಸಬೇಕೆಂದು ದುಡಿದ ಅವರ ಪ್ರಯತ್ನ ಕನ್ನಡದ ಇತರ ಮಹಿಳೆಯರಿಗೂ ಆದರ್ಶವಾಗಲಿ ಎಂಬ ಅಭಿಪ್ರಾಯ ಪ್ರಬುದ್ಧ ಕರ್ನಾಟಕದ್ದು, ಡಾ.ಯು.ಅಭಯಾಂಬಾಳ್ ಅವರ ಹಾಗೆಯೇ ಉಪನ್ಯಾಸಕರಾಗಿದ್ದು ತಮ್ಮ ಉಪನ್ಯಾಸಗಳ ಮೂಲಕ ವಿದ್ಯಾರ್ಥಿಗಳಲ್ಲಿ ಜ್ಞಾನವನ್ನು ಹಾಗೂ ಕನ್ನಡದ ಅಭಿಮಾನವನ್ನು ತುಂಬಿದ ಉಪನ್ಯಾಸಕರುಗಳಾದ ಬೆಳ್ಳಾವೆ ವೆಂಕಟನಾರಾಯಣಪ್ಪ (೨೫-೧), ಕಾನಕಾನಹಳ್ಳಿ ವರದಾಚಾರ್ಯರು(೨೪-೧) ಇವರುಗಳ ಸೇವೆಯನ್ನೂ ಕೃತಜ್ಞತೆಯಿಂದ ಸ್ಮರಿಸಿದೆ. ಬೆಳ್ಳಾವೆ ವೆಂಕಟನಾರಾಯಣಪ್ಪನವರು ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಭೌತಶಾಸ್ತ್ರ ಅಧ್ಯಾಪಕರಾಗಿದ್ದು ವಿಜ್ಞಾನದ ವಿಷಯದಲ್ಲಿ ವಿದ್ಯಾರ್ಥಿಗಳಲ್ಲಿ ಆಸಕ್ತಿ ಮೂಡಿಸಿದವರು, ಸನಾತನ ಧರ್ಮದ ಉಳಿವಿಗಾಗಿಯೂ ಶ್ರಮಿಸಿದರು. ವೈಜ್ಞಾನಿಕ ಕೃತಿಗಳ ಸೃಷ್ಟಿ, ಕನ್ನಡ ಭಾಷೆಯ ಪಡೆಯ ಯೋಜನೆ, ಸಂಘಟನೆ, ಹೊಸ ದೃಷ್ಟಿ ಸ್ಥಾಪನೆ, ಪ್ರಚಾರ ಕಾರ್ಯ ಇವೇ ಮೊದಲಾದವುಗಳಿಗೆ ಬೇಕಾದ ಎಲ್ಲ ಸಲಕರಣೆಗಳನ್ನೂ ಒದಗಿಸಿ ಕೊಟ್ಟವರು, ಕಾನ್‌ಕಾನಹಳ್ಳಿಯ ವರದಾಚಾರ್ಯರ ಅಧ್ಯಾಪನ ವೈಖರಿಯಂತೂ ಅಂದಿನ ಕಾಲದಲ್ಲಿ ತೀರಾ ಜನಪ್ರಿಯ. ತಮ್ಮ ಬೋಧನಾ ಕ್ರಮದಿಂದಲೇ ಪ್ರಖ್ಯಾತಿ ಪಡೆದಿದ್ದ ಇವರ ಬೋಧನಾ ಕ್ರಮಕ್ಕೆ ಮನಸೋತು "ಕನ್ನಡ ಭಾಷಾ ಪರಿಚಯವಿಲ್ಲದ ಆಂಗ್ಲ ಅಧಿಕಾರಿಗಳೂ ಅವರ ಪಾಠವನ್ನು ಮರೆಯಲ್ಲಿ ನಿಂತು ಕೇಳಿ ಸಂತೋಷಪಟ್ಟ ಸನ್ನಿವೇಶಗಳೂ ಉಂಟು".[೧] ಇಂತಹ ಉತ್ತಮ ಉಪನ್ಯಾಸಕರುಗಳ ಕಾರಣದಿಂದಾಗಿಯೇ ಕನ್ನಡದ ಬಗ್ಗೆ ಆಸಕ್ತಿ ಮೂಡುತ್ತಿತ್ತು ಎಂಬ ಅಂಶದ ಕಡೆ ಪ್ರಬುದ್ಧ ಕರ್ನಾಟಕ ಗಮನ ಸೆಳೆದಿದೆ. ಹೀಗೆ ನಾನಾ ಬಗೆಯಿಂದ ಹೀಗೆ ಕನ್ನಡದ ಸಾಂಸ್ಕೃತಿಕ ಹಾಗೂ ಸಾಹಿತ್ಯದ ವಿಚಾರಗಳ ಬೆಳವಣಿಗೆಗೆ ಕಾರಣರಾದವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುವುದರ ಮೂಲಕ ಅವರುಗಳ ಸೇವೆಯನ್ನು ಸ್ಮರಿಸಿದೆ. ಇವುಗಳ ಜೊತೆಯಲ್ಲೇ ಕನ್ನಡಕ್ಕೆ ಪ್ರಾಧಾನ್ಯತೆ ಕೊಟ್ಟು ಆರ್ಥಿಕವಾಗಿ ಕನ್ನಡಕ್ಕೆ ಸಹಾಯ ಮಾಡಿ ಅದನ್ನು ಬೆಳೆಸಲು ಪ್ರಯತ್ನಿಸಿದವರಗೆಗೂ ಪ್ರಬುದ್ಧ ಕರ್ನಾಟಕದಲ್ಲಿ ಸ್ಥಾನ ದೊರೆತಿದೆ. ಕೆ.ಪಿ.ಪುಟ್ಟಣ್ಣ ಚೆಟ್ಟಿ(೨೦-೧), ಹಸೂಡಿ ವೆಂಕಟ ಶಾಸ್ತ್ರಿಗಳಂಥವರು(೨೨-೪) ಕನ್ನಡ ಹಾಗೂ ಕನ್ನಡ ನಾಡಿನ ಬೆಳವಣಿಗೆಗೆ ಮಾಡಿದ ಆರ್ಥಿಕ ಸಹಾಯವನ್ನು ಸ್ಮರಿಸಿದೆ. ಇಷ್ಟೇ ಅಲ್ಲದೆ ನಾಡಿನ ಏಕೀಕರಣದ ಸಂದರ್ಭದಲ್ಲಿ ದುಡಿದ ಕನ್ನಡ ಕಲಿ ಮುದುವೀಡು

---

೧. ವಸ್ತುಕೋಶ, ಪ್ರಕ. ಸಂಪುಟ ೨೪, ಸಂಚಿಕೆ ೧, ಪು. ೧೦೧.

ಕೃಷ್ಣರಾಯರು (೨೯-೧) ಶಿವಮೊಗ್ಗ ಪ್ರಾಂತ್ಯದಲ್ಲಿ ಕನ್ನಡದ ಸಮಗ್ರ ಅಭಿವೃದ್ಧಿಗೆ ದುಡಿದ ಕುಕ್ಕೆ ಸುಬ್ರಮಣ್ಯಶಾಸ್ತ್ರಿಗಳು (೨೭-೪) ಸರ್ವಧರ್ಮ ಸಮಾನತೆಗೆ ಪಣತೊಟ್ಟು ಎಲ್ಲ ಧರ್ಮಗಳ ಉಪದೇಶ ಜನತೆಗೆ ದೊರೆಯುವಂತೆ ಮಾಡಿದ ಸಮಾಜ ಸೇವಕ ಮಂಜಯ್ಯ ಹೆಗ್ಗಡೆ(೨೭-೩)ಯವರು ಶಿಕ್ಷಣದಲ್ಲಿ ಕನ್ನಡ ಮಾಧ್ಯಮ ಸ್ಥಾಪನೆ, ಶಿಕ್ಷಣದಲ್ಲಿ ಸುಧಾರಣೆಯಂತೆ ಜವಾಬ್ದಾರಿಯನ್ನು ಸಮರ್ಪಕವಾಗಿ ನಿರ್ವಹಿಸಿದ ಎನ್.ಎಸ್.ಸುಬ್ಬರಾಯರು(೨೫-೧) ಅಕ್ಷರ ಸಂಸ್ಕರಣೆಯಂತಹ ವಿಚಾರದಲ್ಲಿ ಪಾಂಡಿತ್ಯಗಳಿಸಿದ್ದ ಬಿ.ಶ್ರೀಕಂಠಯ್ಯ(೨೬-೪)ಇಂತಹ ಮಹನೀಯರುಗಳ ಸೇವೆಯನ್ನು ಸ್ಮರಿಸಿದೆ. ಅವರಂತೆ ಕನ್ನಡ ನಾಡಿಗೆ ದುಡಿಯುವ ಯುವ ಜನತೆಯ ಪಡೆ ಸಿದ್ಧವಾಗಬೇಕು ಎಂದು ಆಶಿಸಿದೆ. ಬಿ.ಎಂ.ಶ್ರೀಕಂಠಯ್ಯ ಅವರ ಮರಣದ ಸಂದರ್ಭದಲ್ಲಿ ಸಂಪಾದಕರು ಗುರುತಿಸಿರುವ ಹಾಗೆ "ಅಂಥವರನ್ನು ಇಂದು ನಾವು ಕಳೆದು ಕೊಂಡಿರುವುದಾದರೂ ಅವರು ಈ ನಾಡಿನ ರಕ್ತದಲ್ಲಿ ಸೇರಿದ್ದಾರೆ. ಅವರ ಆಸೆ ನಮ್ಮದು. ಅವರು ಹಿಡಿದ ಕೆಲಸ, ಅವರ ಧ್ವನಿ, ಕರ್ತವ್ಯದ ಕರೆ, ಅವರು ಬಿತ್ತಿದ ಶಾಸ್ತ್ರ, ಕೃತಿಧರ್ಮ, ವಿಮರ್ಶನ ಮಾರ್ಗ, ನಾಡಿನ ಮಂಗಳವನ್ನು ಸಾಧಿಸುವ ತಂತ್ರ, ಅವರ ದರ್ಶನ ನಮ್ಮ ಬಾಳನ್ನು ಬೆಳಗಿ ನಮ್ಮನ್ನು ಮುಂದೆ ನಡೆಸುವ ದೀವಿಗೆ ಆಗಿರುತ್ತದೆ"[೧] ಎಂಬ ನುಡಿಗಳು ನಾಡು ನುಡಿಗಾಗಿ ಶ್ರಮಿಸಿದ ಈ ಎಲ್ಲ ಹಿರಿಯ ಚೇತನಗಳಿಗೂ ಅನ್ವಯಿಸುತ್ತದೆ.

ಕನ್ನಡದ ಹಿರಿಯ ಚೇತನಗಳಿಂದ ಇಂತಹ ಮಾರ್ಗದರ್ಶನ, ಸೌಲಭ್ಯವನ್ನು ಪಡೆದುಕೊಂಡಿರುವ ಕನ್ನಡಿಗರು ಅವುಗಳನ್ನು ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ಆಧುನಿಕವಾಗಿ ಯೋಚಿಸಿ ಕನ್ನಡ ನಾಡನ್ನು ಸುಸಂಸ್ಕೃತ ಹಾಗೂ ಸಮೃದ್ಧವಾದ ನಾಡಾಗಿಸಬೇಕು. ಇದಕ್ಕಾಗಿ ನಮ್ಮ ಸಮಾಜದಲ್ಲಿರುವ ಕೊಳಕುಗಳನ್ನು ನ್ಯೂನತೆಗಳನ್ನು ಸರಿಪಡಿಸಬೇಕು ಎಂಬ ಸಮಾಜ ಸುಧಾರಣೆಯ ಆಶಯಗಳನ್ನು ಹೊತ್ತ ಹಲವಾರು ಬರಹಗಳನ್ನು ಪ್ರಬುದ್ಧ ಕರ್ಣಾಟಕವು ಪ್ರಕಟಿಸಿದೆ.

**ಸಮಾಜ ಸುಧಾರಣೆ**

ಆಧುನಿಕ ವಿದ್ಯಾಭ್ಯಾಸ ಕ್ರಮದಿಂದ ಹೊಸ ರೀತಿಯ ಪರಿಣಾಮಗಳು ಸಮಾಜದ ಮೇಲೆ ಉಂಟಾದವು. ಬುದ್ಧಿಜೀವಿಗಳ ಹೊಸವರ್ಗವೊಂದು ನಮ್ಮಲ್ಲಿಯೇ ಸೃಷ್ಟಿಯಾಯಿತು. ತಾವು ಪಡೆದ ಹೊಸ ಜ್ಞಾನದಿಂದ ನಮ್ಮದೆಲ್ಲವನ್ನು ಪರೀಕ್ಷಿಸಿ ನೋಡುವ ವಿಚಾರವಂತಿಕೆಯೂ ಬೆಳೆಯತೊಡಗಿತು. ಸಮಾಜದಲ್ಲಿ ಅದುವರೆವಿಗೆ ಬೆಳೆದುನಿಂತಿದ್ದ ಅಂಧಶ್ರದ್ಧೆ ತಾರತಮ್ಯ ಅರ್ಥರಹಿತ

---

೧. ಸಂಪಾದಕೀಯ, ಪ್ರ.ಕ. ಸಂಪುಟ ೨೬, ಸಂಚಿಕೆ ೩, ಪು. ೧೧೯.

ಸಂಪ್ರದಾಯಗಳನ್ನು ವಿರೋಧಿಸುವ ವರ್ಗವೊಂದು ಸೃಷ್ಟಿಯಾಯಿತು. ಪ್ರಾಚೀನ ವಿಚಾರಗಳೆಲ್ಲವೂ ಪರಮ ಪವಿತ್ರವಾದದ್ದು. ಅದೇ ಧರ್ಮದ ಸರ್ವಸ್ವ ಎಂದು ಭಾವಿಸಿದ್ದ ಸನಾತನಿಗಳ ನಂಬಿಕೆ ಒಂದು ಕಡೆಯಾದರೆ ನಮ್ಮದೆಲ್ಲವೂ ಬರೀ ಜೊಳ್ಳು ಪಾಶ್ಚಾತ್ಯರಿಂದ ಬಂದದ್ದೇ ಶ್ರೇಷ್ಠ ಎಂಬ ನಂಬಿಕೆ ಇನ್ನೊಂದು ಕಡೆ. ಇಂತಹ ಸಂದಿಗ್ಧ ಕಾಲದಲ್ಲಿ ಜನರಲ್ಲಿ ಉಂಟಾದ ವೈಚಾರಿಕ ಪ್ರಜ್ಞೆ ಹಾಗೂ ತೌಲನಿಕಪ್ರಜ್ಞೆಯಿಂದಾಗಿ ಭಾರತದ, ಕನ್ನಡನಾಡಿನ ಪರಿಸ್ಥಿತಿಯನ್ನು ಬೇರೆಯವರ ಜೊತೆಯಲ್ಲಿ ಹೋಲಿಸಿ ನೋಡುವ ಪ್ರಯತ್ನ ನಡೆಯಿತು. ನಮ್ಮ ಸಂಸ್ಕೃತಿಯನ್ನು ಪುನರುತ್ಥಾನಗೊಳಿಸುವ ಕಡೆ ಜನತೆಯ ಗಮನಹರಿಯಿತು. ಸಮಾಜ ಸುಧಾರಣೆಯಾಗದೆ ಯಾವುದನ್ನೂ ಉದ್ಧಾರಗೊಳಿಸಲು ಸಾಧ್ಯವಿಲ್ಲ. ಹಾಗಾಗಿಯೇ ಸಮಾಜ ಸುಧಾರಣೆಯಾಗಬೇಕು. ನಮ್ಮ ಸಾಮಾಜಿಕ ಪಿಡುಗುಗಳನ್ನು ದೂರ ಮಾಡಬೇಕು ಎಂದು ಬಯಸಿದ ಕೆಲವು ಸಾಹಿತಿಗಳು ಸಮಾಜದ ಸಮಸ್ಯೆಗಳಿಗೆ ಸ್ಪಂಧಿಸಿದರು. ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಗೊಂಡಿರುವ ಹಲವಾರು ಬರಹಗಳನ್ನು ಗಮನಿಸಿದರೆ ಅದರಲ್ಲಿ ಕನ್ನಡ ನಾಡನ್ನು, ನಾಡಿನ ಜನರನ್ನು ಚಿಂತನಶೀಲರನ್ನಾಗಿ ಮಾಡಿ ಅವರಲ್ಲಿ ಸುಧಾರಣೆ ತರಬೇಕೆಂಬ ಆಶಯ ಹೊತ್ತಿರುವ ಬರಹಗಳು ಹಲವಾರಿವೆ. ಇವುಗಳಲ್ಲಿ ಕೆಲವು ಏನನ್ನು ಮಾಡಬಾರದು ಎಂಬುದನ್ನು ಸೂಚಿಸಿದರೆ ಇನ್ನು ಏನನ್ನು ಮಾಡುವುದರಿಂದ ಸಮಾಜ ಸುಧಾರಣೆಹೊಂದುತ್ತದೆ ಎಂಬ ಸಂದೇಶವನ್ನು ನೀಡುತ್ತವೆ.

ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗಿರುವ ಲೇಖನಗಳು ಬಹುಪಾಲು ತಿಳುವಳಿಕೆಗಾಗಿಯೇ ಇರುವುದಾದರೂ ಕಲೆಗಾಗಿ, ನೀತಿಗಾಗಿ ಪ್ರಕಟಗೊಂಡಿರುವ ಬರಹಗಳು ಕಡಿಮೆಯೇನಿಲ್ಲ. ಸಾಹಿತ್ಯಾಭಿಮಾನಿಗಳ ನೆಚ್ಚಿನ ಪತ್ರಿಕೆಯಾಗಿರುವುದರಿಂದ ಸಾಹಿತ್ಯದ ಮುಖಾಂತರವಾಗಿಯೇ ಸಮಾಜದ ಉದ್ಧಾರದ ಆದರ್ಶಗಳನ್ನು ಚಿತ್ರಿಸುವ ಬಯಕೆ ಅದರದ್ದು. ಸ್ವಕೇಂದ್ರಿತನಾದ ಮನುಷ್ಯ ಮಹಾಕವಿಯಾಗಲೀ ಶ್ರೇಷ್ಠ-ವ್ಯಕ್ತಿಯಾಗಲೀ ಆಗುವುದಿಲ್ಲ. ಜನಪರ ಕಾಳಜಿಯನ್ನುಳ್ಳ ಕವಿಯ ಕಾವ್ಯರಚನೆಯ ಅಂತಿಮಗುರಿ ಲೋಕಕಲ್ಯಾಣವೇ ಹೊರತು ವೈಯಕ್ತಿಕ ಸ್ವಾರ್ಥ ಸಾಧನೆಯಲ್ಲ. ಹಾಗೆಯೇ ಸಮಾಜದ ಎಲ್ಲ ವರ್ಗಗಳಿಂದ ಸ್ವೀಕರಿಸಲ್ಪಟ್ಟು ಬೆಳೆದ ಈ ಪತ್ರಿಕೆಯ ಬರಹಗಳಲ್ಲೂ ಈ ಆಶಯವನ್ನು ಗುರುತಿಸಬಹುದು. ಸಾಮಾಜಿಕ ಪಿಡುಗುಗಳಾದ ಸಂಪ್ರದಾಯದ ಅಂಧಾನುಕರಣೆ, ವರ್ಣಾಶ್ರಮ, ಜಾತೀಯತೆ, ಸ್ತ್ರೀಶೋಷಣೆ ತರತಮ ಭಾವನೆ, ಇವೇ ಮೊದಲಾದ ವಿಚಾರಗಳನ್ನು ಖಂಡಿಸುವ ಬರಹಗಳನ್ನು ಪ್ರಕಟಿಸುವ ಮೂಲಕ ತನ್ನ ಸಾಮಾಜಿಕ ಬದ್ಧತೆಯನ್ನು ಪ್ರದರ್ಶಿಸಿದೆ. ಈ ಸಂದರ್ಭದಲ್ಲಿ ಇಲ್ಲಿ

ಪ್ರಾತಿನಿಧಿಕವಾಗಿ ಕೆಲವು ಬರಹಗಳನ್ನಷ್ಟೇ ಆರಿಸಿಕೊಂಡು ಅವುಗಳಲ್ಲಿರುವ ಆಶಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಸಂಪ್ರದಾಯವೆಂಬುದು ಪ್ರಾಚೀನ ಕಾಲದಿಂದಲೂ ಒಪ್ಪಿಕೊಂಡು ಬಂದು ನಡೆಸುವ ಆಚರಣೆ ಹಾಗೂ ನಂಬಿಕೆ. ಇದರ ನಂಬಿಕೆ ಅಪನಂಬಿಕೆ ಉದ್ದೇಶ ಇವುಗಳೆಲ್ಲವೂ ಚರ್ಚಿತ ವಿಷಯವಾದರೂ ಸಂಪ್ರದಾಯವೆಂಬ ಕಾರಣದಿಂದ ಪ್ರಾಚೀನ ಕಾಲದಿಂದಲೂ ಬಂದಿರುವ ವಿಚಾರಗಳೆಲ್ಲವೂ ಕಣ್ಣುಮುಚ್ಚಿ ಒಪ್ಪುವುದು ವಿವೇಕವಂತರ ಕಾರ್ಯವಲ್ಲ. ಪ್ರಬುದ್ಧ ಕರ್ಣಾಟಕದಲ್ಲಿ ಅಶ್ವತ್ಥಾಮನ್, ಶೂದ್ರತಪಸ್ವಿಯಂತಹ ನಾಟಕಗಳು ಪ್ರಕಟವಾದಾಗ ಅದು ಸಾಕಷ್ಟು ಚರ್ಚೆಗೆ ಗ್ರಾಸ ಒದಗಿಸಿತು. ಅಶ್ವತ್ಥಾಮನನ್ನು ಬಿ.ಎಂ.ಶ್ರೀ ಅವರು ತಮ್ಮ ನಾಟಕದಲ್ಲಿ ಆತ್ಮಹತ್ಯೆ ಮಾಡಿಕೊಂಡಂತೆ ಚಿತ್ರಿಸಿರುವುದಕ್ಕೆ ಕರ್ಣಾಟಕದ ಬೇರೆ ಬೇರೆ ಪ್ರದೇಶಗಳಿಂದ ಪ್ರತಿರೋಧ ವಿರೋಧ ವ್ಯಕ್ತವಾಯಿತು. ನಾಟಕದ ಭಾಷೆ ಹಳೆಗನ್ನಡ ಎಂಬ ಗೊಣಗಾಟ ಇದ್ದರೂ ಅದು ಪ್ರಮುಖ ವಿಚಾರವಾಗದೆ ಅಶ್ವತ್ಥಾಮನ್ ಅಂತ್ಯ ಚರ್ಚೆಗೆ ಕಾರಣವಾಯಿತು. ಚಿರಂಜೀವಿಯಾದ ಅಶ್ವತ್ಥಾಮನನ್ನು ಸತ್ತಂತೆ ಚಿತ್ರಿಸಿರುವುದು ಸಂಪ್ರದಾಯದ ಉಲ್ಲಂಘನೆಯಾಗಿದೆ ಎಂಬ ಕೂಗೂ ಕೇಳಿ ಬಂದಿತು. ಈ ಸಂದರ್ಭದಲ್ಲಿ ಪ್ರಬುದ್ಧ ಕರ್ಣಾಟಕ ಪ್ರದರ್ಶಿಸಿದ ನಿಲುವು ಗಮನಾರ್ಹ. ಅದು ತನ್ನ ಸಂಪಾದಕೀಯದಲ್ಲಿ "ಈ ಗೊಣಗಾಟಕ್ಕೆ ನಮ್ಮ ಸಂಪ್ರದಾಯ ಪ್ರೀತಿಯೂ ಅದರಿಂದ ಬಂದ ಒಂದು ದೌರ್ಬಲ್ಯವೂ ಕಾರಣವೆಂದು ತೋರುತ್ತದೆ. ನಮ್ಮ ವಿಮರ್ಶಕರೊಬ್ಬರು ಹೇಳಿದ ಹಾಗೆ ಸಂಪ್ರದಾಯವೆಂಬುದು ನಮ್ಮ ಮೇಲೆ ಎಷ್ಟರಮಟ್ಟಿಗೆ ಹೆಪ್ಪುಗಟ್ಟಿಕೊಂಡು ಹೋಗಿದೆಯೆಂದರೆ "ಹೊಸಚಿಪ್ಪಿಗೆ ಗೋಣಿ ಹೊಲೆದ ಎಂದರೆ ನಾವು ಛೆ ಛೆ ಹೊಸ ಅಗಸ ಗೋಣಿ ಒಗೆದ ಎಂದು ಇರಬೇಕು ಎನ್ನುವವರು ನಾವು"[೧]ಎಂದಿರುವ ಮಾತುಗಳು ಸಂಪ್ರದಾಯದ ಹೆಸರಿನಲ್ಲಿ ಎಲ್ಲವನ್ನೂ ಒಪ್ಪುವುದು ಅವಿವೇಕತನ ಎಂಬುದನ್ನು ಸ್ಪಷ್ಟೀಕರಿಸಿದೆ.

ಬ್ರಹ್ಮನ ವಿವಿಧ ಅಂಗಗಳಲ್ಲಿ ಹುಟ್ಟಿದವರು ಎಂಬ ಕಾರಣದಿಂದಾಗಿಯೇ ಸಮಾಜದಲ್ಲಿ ಭಿನ್ನಭಿನ್ನವಾದ ಸ್ಥಾನಮಾನಗಳನ್ನು ಹೊಂದಬೇಕು ಎಂಬ ಮೂಢನಂಬಿಕೆ ಹಾಗೂ ಮೌಢ್ಯದ ವಿರುದ್ಧದ ಧ್ವನಿಯಾಗಿ ಮೂಡಿಬಂದಿರುವ ನಾಟಕ ಕುವೆಂಪು ಅವರ ಶೂದ್ರತಪಸ್ವಿ. ತನ್ನ ಮಗನ ಮರಣಕ್ಕೆ ವರ್ಣ ಸಂಕರವೇ ಕಾರಣ ಶೂದ್ರನೋರ್ವನ ತಪಸ್ಸು ಇದಕ್ಕೆ ಕಾರಣವೆಂಬ ಆಪಾದನೆಯೊಂದನ್ನು ಬ್ರಾಹ್ಮಣನೊಬ್ಬನು ರಾಮನ ಬಳಿ ತಂದಾಗ ಆತನಿಗೆ ಬ್ರಾಹ್ಮಣನ ಅವಿವೇಕಕ್ಕೆ ಕನಿಕರ

---

೧. ವಸ್ತುಕೋಶ, ಪ್ರಕ. ಸಂಪುಟ ೧೧, ಸಂಚಿಕೆ ೪, ಪು. ೭.

ಉಂಟಾಗುತ್ತದೆ. ಅವನಿಗೆ ಬುದ್ಧಿ ಕಲಿಸಬೇಕೆಂಬ ಆಲೋಚನೆ ಬರುತ್ತದೆ. ರಾಮ ಶಂಭೂಕನನ್ನು ಭೇಟಿಯಾಗಿ ಪ್ರಯೋಗಿಸಿದ ಬ್ರಹ್ಮಾಸ್ತ್ರ ಶಂಭೂಕನನ್ನು ಬಿಟ್ಟು ಬ್ರಾಹ್ಮಣನನ್ನು ಸುತ್ತುವರಿಯುತ್ತದೆ. ಇದರಿಂದ ತಪ್ಪಿಸಿಕೊಳ್ಳಲು ಬ್ರಾಹ್ಮಣ ಶೂದ್ರನಾದ ಶಂಭೂಕನಿಗೆ ಶರಣಾಗುತ್ತಾನೆ. ಅವನಿಗೆ ತನ್ನ ತಪ್ಪಿನ ಅರಿವಾಗುತ್ತದೆ.

**ಬೋಧಮಾಯ್ತೆನಗೀಗಳ್ ಮಹಾಪ್ರಜ್ಞೆ**
**ಬುದ್ಧಿಗಲಿದಯ್ ಸಂಪ್ರದಾಯ ಬದ್ಧಂಗೆ**
**ಶಾಸ್ತ್ರ ಸಂಮೂಡಂಗೆ ಜಾತಿಗರ್ವಾಂಧಂಗೆ**
**ಆವ ಜಾತಿ ತರುವೋ ಇಂಧನೆಗೆ ಹೊರತುಂಟೇ**
**ಬೆಂಕಿಗೆ ಬೇಧಮೇ? ದಳ್ಳುರಿಗೆ ದಾಕ್ಷಿಣ್ಯವೇ**
**ಆರಾದರೇನ್? ಆರಾಧ್ಯರ್ ತಪೋಧನರ್**

**ನಮಸ್ಕಾರಮೆ ಪುಣ್ಯಂ ತಿರಸ್ಕಾರಮೇ ಪಾಪಂ**[೧] ಎಂಬ ಪ್ರಜ್ಞೆ ಮೂಡುತ್ತದೆ. ಯಾವ ಜಾತಿಯ ತರುವಾದರೂ ಬೆಂಕಿ ಹೇಗೆ ಬೇಧ ತೋರುವುದಿಲ್ಲವೋ ಹಾಗೆಯೇ ಜ್ಞಾನ, ವಿವೇಕ, ತಿಳುವಳಿಕೆ ಹಾಗೂ ಸಾಧನೆಗೆ ಯಾವ ಜಾತಿಯಾಗಲೀ ವರ್ಣವಾಗಲೀ ಅಡ್ಡಬರುವುದಿಲ್ಲ. ವಿವೇಕ ಜ್ಞಾನ ಯಾರ ಸ್ವತ್ತಲ್ಲ. ಅದು ಪರಿಶ್ರಮ ಹಾಗೂ ನಡವಳಿಕೆಯ ಮೂಲಕ ಪಡೆಯುವಂಥಾದ್ದು. ಯಾರು ಅಡೆತಡೆಗಳನ್ನು ಉಂಟುಮಾಡಿದರೂ ಇದನ್ನು ತಡೆಯಲು ಸಾಧ್ಯವಿಲ್ಲ. ಈ ನಾಟಕದಲ್ಲಿ ಜ್ಞಾನಿಯಾದ ಶೂದ್ರನಿಗೆ ಅಜ್ಞಾನಿಯಾದ ಬ್ರಾಹ್ಮಣ ಶರಣು ಬರುವುದೂ ಇದೇ ವಿಚಾರವನ್ನು ಸೂಚಿಸುತ್ತದೆ. ನಾಟಕದ ಆರಂಭದಲ್ಲಿ ಶೂದ್ರನಿಗೆ ನಮಸ್ಕರಿಸಲೂ ಒಪ್ಪದ ಬ್ರಾಹ್ಮಣ ಕೊನೆಗೆ ತನ್ನ ಜೀವ ಉಳಿಸಿಕೊಳ್ಳಲು ಅವನಿಗ ಶರಣು ಬರುವ ಸಂದರ್ಭ ಶ್ರೇಣೀಕೃತ ಸಮಾಜದ ವ್ಯವಸ್ಥೆಯ ಮೌಲ್ಯಗಳನ್ನು ತಿರಸ್ಕರಿಸಿ ಹೊಸಮೌಲ್ಯಗಳನ್ನು ಹುಟ್ಟುಹಾಕುವ ಆಶಯವನ್ನಿಟ್ಟುಕೊಂಡಿರುವುದನ್ನು ಗಮನಿಸಬಹುದು. ಹೀಗೆ ವರ್ಣಾಶ್ರಮದ ವಿರುದ್ಧದ ಧ್ವನಿಯಾಗಿ ಶೂದ್ರ ತಪಸ್ವಿ ಪ್ರಕಟಗೊಂಡಿರುವಂತೆಯೇ ಜಾತೀಯತೆಯ ವಿರುದ್ಧ ಪ್ರಕಟಗೊಂಡಿರುವ ಕೃಷ್ಣಮೂರ್ತಿ ಪುರಾಣಿಕರ ಕಾಳನ ಕೆರೆ ಗಮನಸೆಳೆಯುತ್ತದೆ.

ಜಾತೀಯತೆ ದೇಶಕ್ಕೆ ಅಂಟಿರುವ ಶಾಪ ದೇಶದ ಭಾಗವಾಗಿರುವ ಕನ್ನಡ ನಾಡೂ ಇದಕ್ಕೆ ಹೊರತಲ್ಲ. ಕಾಲದಿಂದ ಕಾಲಕ್ಕೆ ಅದಕ್ಕೆ ವಿರೋಧ ಅಲ್ಲಲ್ಲಿ ವ್ಯಕ್ತವಾದರೂ ಅದು ನಾಶವಾಗದೇ ಬೆಳೆಯುತ್ತಾ ಉಳಿಯುತ್ತಾ ಬಂದಿದೆ. 'ಕಾಳನ ಕೆರೆ' ಕವನ ಜಾತೀಯತೆಯ ಕ್ರೌರ್ಯದ ಮುಖವನ್ನು ಯಶಸ್ವಿಯಾಗಿ ತೆರೆದಿಟ್ಟಿದೆ. ಊರ ಜನಗಳಿಗೆ ನೀರಿನ ಕೊರತೆ ಆವರಿಸಿದಾಗ ಜನಗಳ ಸಹಕಾರದಿಂದ ಕೆರೆಯ

---

೧. ಕುವೆಂಪು, ಪ್ರ.ಕ. ಸಂಪುಟ ೨೫, ಸಂಚಿಕೆ ೨, ಪು. ೨೩.

ನಿರ್ಮಾಣವಾಗುತ್ತದೆ. ಆದರೆ ಅದರಲ್ಲಿ ದೊರೆತದ್ದು ಸವಕಳು ನೀರು ಇದಕ್ಕೆ ಕಾರಣ ಹುಡುಕಿದಾಗ ದೊರೆತ ಉತ್ತರ

**ನಮ್ಮೂರ ಹೊಲೆಯರಲಿ ಮುಟ್ಟಾಳನಾದವನು**

**ಮುಟ್ಟಿ ಹೊಲೆಗೆಡೆಸಿದನು ಸವಿನೀರ ಕೆರೆಯಿದನು**[೧] – ಈ ಮಾತು ಕೇಳಿ ಕಂಗೆಟ್ಟ ಜನ ಹೊಲೆಯರನು ದೂರಿದರು ಪರಿಹಾರ ಏನೆಂದು ಹುಡುಕಿದರು. ಅದಕ್ಕೆ ಭೂತ ಬಲಿಬೇಕು ಸಾವಿರ ಎಳೆಗಾಯಿಗಳ ನೀರು ಸುರಿಯಬೇಕು. ಪಾಯಸದ ಎಡೆಮಾಡಿ ಹಗಲು ತೀರದ ಮುನ್ನ ಹೊಂಡಕ್ಕೆ ಎಸೆಯಬೇಕು. ಅಪ್ಪಿತಪ್ಪಿಯೂ ಹೊಲೆಯರು ಅತ್ತ ಸುಳಿಯಬಾರದು ಎಂಬ ಭಟ್ಟರ ಸೂಚನೆಯನ್ನು ಪಾಲಿಸಿದಾಗ ದೊರೆತದ್ದು ಸಿಹಿನೀರಲ್ಲ. ಇದ್ದ ನೀರೂ ಬತ್ತಿ ಹೋದಾಗ ಜನರೆಲ್ಲರ ದೃಷ್ಟಿ ಬಿದ್ದಿದ್ದು ಕಾಳನ ಮೇಲೆ. ತಾವು ಈ ವಿಷಯವನ್ನು ಚರ್ಚಿಸುತ್ತಿದ್ದಾಗ ತಮ್ಮೊಡನೆ ಇದ್ದು ತಾವೆಲ್ಲರೂ ಅಲ್ಲಿಂದ ಚದುರದೇ ಕೆರೆಯ ಬಳಿಯೇ ಉಳಿದಿದ್ದ ಕಾಳನ ಮೇಲೆ. ಆದರೆ ಕಾಳ ಅಲ್ಲಿಯೇ ಉಳಿದುದಕ್ಕೆ ಕಾರಣವಿತ್ತು.

**"ಊರನು ಹಸನಾಗಿಡುವ ಊರ ಹೊಲೆಯರು ನಾವು**

**ನೀರನೆಡೆಗೈತರಲು ನೀರೆಂತು ಕಹಿಯಾಯ್ತು"**[೨] ಎಂದು ಆತನ ಮನಸ್ಸು ಯೋಚಿಸುತ್ತಿತ್ತು. ಭಟ್ಟರ ಮಾತು ಕೇಳಿ ತನ್ನ ಜನಗಳ ಮನ ಕತಕತನೆ ಕುದಿಯುವಾಗ ನೀರು ಸಿಹಿಯಾಗುವುದು ಉಂಟೇ? ತನ್ನ ಊರ ಜನರಿಗೆ ಸಿಹಿನೀರು ದೊರೆಯಬೇಕಾದರೆ ತಾನೇಕೆ ಬಲಿಯಾಗಬಾರದು. ಇದು ಅವನ ಮನದಲ್ಲಿ ಸುಳಿದಾಡುತ್ತಿದ್ದ ಯೋಜನೆಗಳು. ನಂತರದ ಸಂದರ್ಭದಲ್ಲಿ ಕಾಳ ಹೇಳುವ

**ಒಡೆಯರೆ ಹೊಲೆ ಜಾತಿ ಹೊಲೆಯಲ್ಲ**

**ವೇಕಿಂತು ಹಳಿಯುವಿರಿ ದೇವನಿತ್ತಿಹ ಜನ್ಮ**

**ವೆಂದಿಗೂ ಶುದ್ಧವಿದೆ**[೩] – ಎಂಬ ಮಾತುಗಳು ಹುಟ್ಟಿನಿಂದ ಜಾತಿಯನ್ನು ನಿರ್ಧಾರ ಮಾಡುವ ಜನಗಳಿಗೆ ರುಚಿಸದೇ ಹೋದರೂ ಕವಿಯ ಮನದ ಆಶಯವೇನೆಂಬುದನ್ನು ಪ್ರತಿಧ್ವನಿಸುತ್ತದೆ. ನಂತರ ಕಾಳ ಊರ ಜನಗಳಿಗಾಗಿ ಬಲಿಯಾಗುತ್ತಾನೆ. ಊರ ಕೆರೆಯಲ್ಲಿ ಸಿಹಿ ನೀರು ಬರುತ್ತದೆ. ಊರ ಜನರ ಕಣ್ಣು ತೆರೆಯುತ್ತದೆ. ಊರಿನ ಕೆರೆಗೆ ಕಾಳನ ಹೆಸರೇ ಅಂಕಿತವಾಗಿ ಕಾಳನ ಕೆರೆಯಾಗುತ್ತದೆ. ಜಾತೀಯತೆಯ ಬೆನ್ನು ಹತ್ತಿ ವ್ಯರ್ಥ ಆಚರಣೆಗಳ ಮೂಲಕ

---

೧. ಕೃಷ್ಣಮೂರ್ತಿ ಪುರಾಣಿಕ್, ಪ್ರ.ಕ. ಸಂಪುಟ ೨೮, ಸಂಚಿಕೆ ೧, ಪು. ೫೯.
೨. ಕೃಷ್ಣಮೂರ್ತಿ ಪುರಾಣಿಕ್, ಪ್ರ.ಕ. ಸಂಪುಟ ೨೮, ಸಂಚಿಕೆ ೧, ಪು. ೬೦.
೩. ಕೃಷ್ಣಮೂರ್ತಿ ಪುರಾಣಿಕ್, ಪ್ರ.ಕ. ಸಂಪುಟ ೨೮, ಸಂಚಿಕೆ ೧, ಪು. ೬೧.

ಜನರು ನಡೆಸಿದ ಕಸರತ್ತು, ಜಾತೀಯನ್ನು ವಿರೋಧಿಸಿ ತನ್ನ ಜನಗಳಿಗೆ ಗೌರವ ಅಭಿಮಾನ ದೊರಕಿಸಿಕೊಟ್ಟ ಕಾಳನ ಕಾರ್ಯ ತನ್ಮೂಲಕ ಜಾತೀಯತೆಯ ಬೆನ್ನುಹತ್ತಿದ್ದ ಜನಗಳ ಮನಃಪರಿವರ್ತನೆ ಇಲ್ಲಿ ಗಮನಿಸಬೇಕಾದ ಅಂಶ ಹುಟ್ಟಿನಿಂದ ಜಾತಿಯಲ್ಲ. ನಡವಳಿಕೆಯಿಂದ ಜಾತಿ ಎಂಬ ಸಂದೇಶವನ್ನು ಈ ಕವನ ಸಾರುತ್ತಿದೆ. ಈ ಜಾತಿಯತೆಯಷ್ಟೇ ವಿನಾಶಕಾರಿಯಾದ ಮತ್ತೊಂದು ವಿಚಾರವೆಂದರೆ ಮೂಢನಂಬಿಕೆಗಳು ದೇವರು ದೆವ್ವದ ಹೆಸರನ್ನು ಹೇಳಿಕೊಂಡು ಜನರನ್ನು ತಪ್ಪುದಾರಿಗೆ ಎಳೆಯುವ ಕಾರ್ಯಗಳು ಸಮಾಜವನ್ನು ಅವನತಿಯತ್ತ ಕೊಂಡುಯ್ಯುತ್ತದೆ.

ಮೂಢ ನಂಬಿಕೆಯನ್ನೇ ಬಂಡವಾಳವಾಗಿರಿಸಿಕೊಂಡು ಹಳ್ಳಿಯ ಮುಗ್ಧ-ಜನತೆಯನ್ನು ಭೂತ, ಪಿಶಾಚಿ, ದೆವ್ವ ಎಂಬ ಹೆಸರಿನಿಂದ ಹೆದರಿಸಿ ಅವರನ್ನು ವಿವಿಧ ರೀತಿಯಲ್ಲಿ ಶೋಷಿಸುವ ಆಷಾಢಭೂತಿ ಮಾಂತ್ರಿಕರ ಬಗ್ಗೆ ವಿರೋಧವನ್ನು ವ್ಯಕ್ತಪಡಿಸುವ ಕಥೆ 'ಪಾತ್ರ ವಿವೇಚನೆ'. ಊರಿನ ಆಚಾರಿಯೊಬ್ಬ ಪೂಜಾರಿಯಾಗಿ ಬದಲಾಗಿ ತಾನು ಮಾಟ ಮಂತ್ರ ಕಲಿತು ಬಂದವನೆಂತಲೂ ಭೂತ ದೆವ್ವಾದಿಗಳ ಮೇಲೆ ನಿಯಂತ್ರಣ ಸಾಧಿಸಬಲ್ಲವನೆಂತಲೂ ಜನರನ್ನು ನಂಬಿಸುತ್ತಾನೆ. ನಂಬಿಕೆ ಬಲಿತ ಮೇಲೆ ಊರ ಹೆಣ್ಣುಮಕ್ಕಳ ಮೇಲೆ ಕಣ್ಣು ಹಾಕಿ ಹಲವರನ್ನು ಪಡೆಯಲು ಯಶಸ್ವಿಯೂ ಆಗುತ್ತಾನೆ. ಕೊನೆಗೆ ಊರ ಗೌಡನ ಮಗಳನ್ನು ಬಯಸಿ ಅವಳನ್ನು ಪಡೆಯಲು ಯತ್ನಿಸಿದಾಗ ಆಕೆ ಧೈರ್ಯದಿಂದ ಅಪಾಯವನ್ನು ಎದುರಿಸಿ ಪಾರಾಗುತ್ತಾಳೆ. ಆತನನ್ನೇ ಊರು ಬಿಟ್ಟು ಹೋಗುವಂತೆ ಮಾಡುತ್ತಾಳೆ. ಭೂತದೆವ್ವಗಳ ಬಗ್ಗೆ ಇಲ್ಲದೇ ಇರುವ ನಂಬಿಕೆಗಳನ್ನು ಬೆಳೆಸಿಕೊಂಡ ಊರ ಜನಗಳು ಒಂದೆಡೆಯಾದರೆ ಬಂದ ಗಂಡಾಂತರದಿಂದ ಪಾರಾಗಿ ಸತ್ಯವೇನೆಂಬುದನ್ನು ನಿರೂಪಿಸುವ ಗೌಡರ ಮಗಳು ಮತ್ತೊಂದು ಕಡೆ ಇವರೀರ್ವರಲ್ಲಿ ಜನತೆಯ ಆಯ್ಕೆ ಯಾರಾಗಿರಬೇಕು ಎಂಬ ವಿವೇಚನೆಯನ್ನು ತುಂಬಿ ಜನರು ಎಚ್ಚೆತ್ತುಕೊಳ್ಳುವಂತೆ ಮಾಡುವ ಈ ಕಥೆಯ ಆಶಯ ಗುರುತರವಾದದ್ದು.

ಉನ್ನತವಾದ ಆಧ್ಯಾತ್ಮಿಕ ಮೌಲ್ಯಗಳನ್ನು ತನ್ನಲ್ಲಿ ಅಳವಡಿಸಿಕೊಂಡಿರುವ ನಮ್ಮ ನಾಡಿನಲ್ಲಿ ಅನೇಕ ಸ್ತ್ರೀ ವಿರೋಧಿ ಮೌಲ್ಯಗಳು ಪಾಲಿಸಲ್ಪಡುತ್ತಿವೆ. ಪತಿಯ ಮರಣದ ಸಂದರ್ಭದಲ್ಲಿ ನೊಂದ ಮಹಿಳೆಯನ್ನೇ ಮತ್ತಷ್ಟು ನೋಯಿಸಿ ಆಕೆಗೆ ವಿಧವೆ ಎಂಬ ಪಟ್ಟವನ್ನು ಕಟ್ಟಲಾಗುತ್ತದೆ. ಇದಕ್ಕೆ ಬಹುತೇಕ ಸಮಾಜದ ಬೆಂಬಲವೂ ದೊರೆತಿರುತ್ತದೆ. ಇಂತಹ ಅಪಾಯಕಾರಿ ಮೌಲ್ಯಗಳು ಸ್ತ್ರೀಯರ ಬದುಕಿಗೆ ಮಾರಕವಾಗುತ್ತದೆ. ಸಮಾಜದಿಂದ ಅಪಮಾನಕ್ಕೆ ಅಗೌರವಕ್ಕೆ ಗುರಿಯಾಗುವ ಈ ವಿಧವೆಯರು ಎದುರಿಸಬೇಕಾದ ಸಮಸ್ಯೆಗಳು ಹಲವಾರು. ಆರ್ಥಿಕವಾಗಿ ಆಕೆ

ಸಬಲಳಾಗದಿದ್ದರಂತೂ ಆಕೆಯ ಸ್ಥಿತಿ ಮತ್ತಷ್ಟು ಹೀನಾಯವಾಗಿರುತ್ತದೆ. ಹದಿಹರೆಯದಲ್ಲೇ ವಿಧವೆಯಾದರೆ ಆಕೆಗೆ ಸಮಾಜದಲ್ಲಿನ ಕಾಮುಕ ಪುರುಷರ ವಕ್ರದೃಷ್ಟಿಯಿಂದ ತಪ್ಪಿಸಿಕೊಳ್ಳಬೇಕಾದ ಅನಿವಾರ್ಯತೆ ಒಂದೆಡೆಯಾದರೆ ಯೌವನದ ಸಹಜವಾದ ಆಸೆಗಳನ್ನು ತನ್ನಲ್ಲೇ ಬಚ್ಚಿಡಬೇಕಾದ ಅಗತ್ಯತೆ ಇನ್ನೊಂದು ಕಡೆ. ಪ್ರಬುದ್ಧ ಕರ್ನಾಟಕ ಇಂತಹ ನೋವುಗಳನ್ನನುಭವಿಸಬೇಕಾದ ಮಹಿಳೆಯರ ಕಡೆ ಸಮಾಜದ ಗಮನಸೆಳೆದಿದೆ. ಎಲ್.ಗುಂಡಪ್ಪ ಅವರ ವಿಧವೆ (೯-೧೨) ಕವನ ವಿಧವೆಯ ಬದುಕಿನ ಬವಣೆಗಳನ್ನು ವಿಧವೆ ಎಂಬ ಕಾರಣದಿಂದಾಗಿಯೇ ಅನುಭವಿಸುತ್ತಿರುವ ನೋವುಗಳನ್ನು ಪರಿಣಾಮಕಾರಿಯಾಗಿ ಕೆಲವೇ ಸಾಲುಗಳಲ್ಲಿ ಚಿತ್ರಿಸಿದರೆ ನನ್ನ ದೇವರು (೧೬-೧) ಕಥೆ ಮನಸ್ಸಿನ ನೂರಾರು ಆಸೆಗಳನ್ನು ತನ್ನಲ್ಲೇ ಅದುಮಿಟ್ಟುಕೊಳ್ಳುತ್ತಾ ಮನಸ್ಸು ಚಂಚಲವಾದಾಗಲೂ ಅದು ಜಾರಿಹೋಗದಂತೆ ಅದನ್ನು ನಿಗ್ರಹಿಸಿಕೊಳ್ಳುತ್ತಾ ಬದುಕಿದ ಹೆಣ್ಣೊಬ್ಬಳ ಚಿತ್ರಣ ನೀಡಿದೆ. ಆದರ್ಶ ನೈತಿಕ ಭಾವನೆ ಹಾಗೂ ಮನದ ಕಾಮನೆ ಆಸೆ ಹಾಗೂ ಪ್ರಲೋಭನೆಗಳ ನಡುವೆ ನಡೆಯುವ ಸಂಘರ್ಷದಲ್ಲಿ ಆದರ್ಶವೇ ಜಯಿಸುತ್ತದೆ ಎಂಬ ಸಂದೇಶ ಕಥೆಯಲ್ಲಿದೆ.

ಹೀಗೆ ಮೂಢನಂಬಿಕೆ, ಅಂಧಾನುಕರಣೆ, ವರ್ಣಾಶ್ರಮ ವಿಧವೆಯರ ಇಂತಹ ಸಮಸ್ಯೆಗಳ ಬಗ್ಗೆ ನೋವನ್ನು ಜೊತೆಯಲ್ಲೇ ಅನುಕಂಪ, ವಿರೋಧಗಳನ್ನು ಪ್ರಕಟಿಸಿರುವ ಪ್ರಬುದ್ಧ ಕರ್ನಾಟಕ ಪ್ರಾಮಾಣಿಕತೆ, ತಾಳ್ಮೆ, ಸತ್ಯ, ಸ್ತ್ರೀ ವಿದ್ಯಾಭ್ಯಾಸ ಇವೇ ಮೊದಲಾದ ಇರಬೇಕಾದ ಗುಣಗಳ ಕಡೆಯೂ ಗಮನಹರಿಸಿದೆ.

ಯಾಂತ್ರಿಕ ಬದುಕಿನಲ್ಲಿ ದುಡಿಮೆ ಅನಿವಾರ್ಯ. ಆದರೆ ಹೀಗೆ ಬಿಡುವಿಲ್ಲದೆ ದುಡಿಯುತ್ತಾ ಬದುಕಿನ ಅಮೂಲ್ಯವಾದ ಕ್ಷಣಗಳನ್ನು ಮರೆತು ನಿರ್ಲಕ್ಷಿಸಿ ತಾಳ್ಮೆಯಿಲ್ಲದೆ ಓಡುವ ಜನಗಳನ್ನು ಕಂಡಾಗ ಕೆ.ಎಸ್.ನರಸಿಂಹಸ್ವಾಮಿಯವರಿಗೆ 'ಗಡಿಯಾರ'ದ ನೆನಪು ಬರುತ್ತದೆ. ಗಡಿಯಾರದಂತೆ ತಡೆರಹಿತವಾಗಿ ಓಡುವುದೇನೋ ಸರಿ. ಆದರೆ ನಡುನಡುವೆ ನಿಂತುನೋಡುವ ತಾಳ್ಮೆಬೇಕು. ಓಟದಿಂದಲೇ ಸದ್ಗತಿಯಿಲ್ಲ ಪ್ರಗತಿಯಾಗಲು ಸಾಧ್ಯವಿಲ್ಲ. ಬದುಕಿನಲ್ಲಿ ತಾಳ್ಮೆ ಅಗತ್ಯ ಇದೇ ಆಲೋಚನೆ ಕುವೆಂಪು ಅವರ ಆರಾಣಿ ಮೂರು ಕಾಸು ಕಥೆಯಲ್ಲೂ ವ್ಯಕ್ತವಾಗಿದೆ. ಕಥೆಯಲ್ಲಿ ಬರುವ ಮಾಧವರಾಯ ತಾಳ್ಮೆಯ ಕಾರಣದಿಂದಲೇ ನವಾಬನಿಗೆ ಎಂದೋ ನೀಡಿದ್ದ ಹಣ ಹಿಂದೆ ಪಡೆಯುವ ವಿಚಾರ ಗಮನಾರ್ಹ. ಆಡಂಬರದ ಅಟ್ಟಹಾಸದ ಬದುಕು ಸಾಗಿಸಿದ್ದ ನವಾಬ ಬೀದಿಬಿಕಾರಿಯಾಗುತ್ತಾನೆ. ತನ್ನ ಅಧೀನದಲ್ಲಿದ್ದ ನೌಕರನ ಮಗ ಮಾಧವರಾಯನನ್ನು ಅನಿರೀಕ್ಷಿತವಾಗಿ ಭೇಟಿಮಾಡಿದಾಗ ಸಹಾಯ ಯಾಚಿಸುತ್ತಾನೆ. ಹಣದ ಸಹಾಯ ಮಾಡಿದ ಮಾಧವರಾಯ, ನವಾಬನು ಕೋರ್ಟಿನಲ್ಲಿ ಕೇಸನ್ನು ಗೆದ್ದು ಹಣ ಹಿಂದಿರುಗಿ ಬರುವ

ತನಕ ತಾಳ್ಮೆಯನ್ನು ಪ್ರದರ್ಶಿಸುತ್ತಾನೆ. ಮಾಧವರಾಯನ ನಡವಳಿಗೆ ತಾಳ್ಮೆಯ ಪ್ರಾಧಾನತೆಯನ್ನು ತಿಳಿಸುತ್ತದೆ. ಈ ಕತೆಯನ್ನು ಕುರಿತಂತೆ "ಮತ್ತೊಂದು ಸಹನದ ತತ್ವದ ಕಡೆ ಈ ಕತೆ ಹೊರಳುತ್ತದೆ. ಅದು ಬದುಕಿನಲ್ಲಿ ತಾಳ್ಮೆಗಿರುವ ಅಪೂರ್ವ ಬೆಲೆ ಮತ್ತು ಸುಖ ದುಃಖ ಅನಿವಾರ್ಯ ಪರಿಭ್ರಮಣ"[೧] ಎಂದಿರುವ ಎಚ್.ಜೆ.ಲಕ್ಕಪ್ಪಗೌಡ ಅವರ ಮಾತುಗಳು ಗಮನಾರ್ಹ. ಬದುಕಿನಲ್ಲಿ ಸುಖದುಃಖ ಅನಿವಾರ್ಯ. ಆದರೆ ದುಃಖ ಬಂದಾಗ ಕುಗ್ಗದೆ ಸುಖ ಬಂದಾಗ ಹಿಗ್ಗದೆ ಸಮಸ್ಥಿತಿ ಅನುಭವಿಸುವ ಮನೋಧರ್ಮ ಅಗತ್ಯ. ಇದೇ ಸಂದರ್ಭದಲ್ಲಿ ಮಾಧವರಾಯನಿಂದ ಪಡೆದಿದ್ದ ಹಣವನ್ನು ನವಾಬ ಕೋರ್ಟಿನಲ್ಲಿ ಕೇಸ್ ಗೆದ್ದ ತಕ್ಷಣ ಹಿಂದಿರುಗಿಸುವುದು ಅವನ ಆದರ್ಶ ಅಭಿರುಚಿಯನ್ನು ಪ್ರತಿಪಾದಿಸಿದೆ.

ಆನಂದ ಅವರ 'ನನ್ನ ನೆನಪಿನ ವೀರ' (೩೫-೩) ಎಂಬ ಕಥೆಯು ಆದರ್ಶವನ್ನು ಹಾಗೂ ಪ್ರಾಮಾಣಿಕತೆಯನ್ನು ಎತ್ತಿಹಿಡಿಯುತ್ತದೆ. ನನ್ನ ನೆನಪಿನ ವೀರಕಥೆಯ ನಾಯಕ ಪಾಪಯ್ಯ ಶೆಟ್ಟಿ ವಿಕಾರ ಶರೀರ ಹೊಂದಿರುವ ಆದರೆ ಸುಂದರ ಮನಸ್ಸನ್ನು ಹೊಂದಿರುವ ಬೀದಿ ವ್ಯಾಪಾರಿ, ಡಬ್ಬಗಳನ್ನು ಹೊತ್ತು ಬೀದಿಯಲ್ಲಿ ಸಂಚರಿಸಿ ವ್ಯಾಪಾರ ಮಾಡಿ ಬದುಕು ಸಾಗಿಸುವಾತ ಚಿಕ್ಕವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ತನ್ನ ತಂದೆ ಮಾಡಿದ ಸಾಲ ಹಾಗೂ ಉತ್ತರಕ್ರಿಯೆಗಾಗಿ ಸಾಲಮಾಡಿ ಅದರಲ್ಲೇ ನಾಲ್ಕಾರು ರೂಪಾಯಿ ಉಳಿಸಿ ಅದರಲ್ಲೇ ಹಣ ಗಳಿಸಿ ಇಪ್ಪತ್ತೈದು ವರ್ಷಗಳಿಗಿಂತ ಹೆಚ್ಚಾಗಿ ದುಡಿದು ಸಾಲ ತೀರಿಸಿದ ಕಥೆ ತನ್ನ ಜೀವಮಾನದ ಬಹುತೇಕ ಭಾಗವನ್ನು ಸಾಲ ತೀರಿಸಲೆಂದೇ ನಿರ್ವಿಕಾರವಾಗಿ ದುಡಿದು ಋಣಮುಕ್ತನಾದ ವಿಚಾರದ ಜೊತೆಯಲ್ಲೇ ಪ್ರಾಮಾಣಿಕತೆಗೆ ಜೀವನದಲ್ಲಿ ನೀಡಬೇಕಾದ ಪ್ರಾಮುಖ್ಯತೆಯನ್ನು ಪರಿಚಯಿಸುತ್ತದೆ.

ಪ್ರಾಮಾಣಿಕತೆಯಷ್ಟೇ ಬದುಕಿನಲ್ಲಿ ಪ್ರಮುಖಸ್ಥಾನ ನೀಡಬೇಕಾದ ವಿಚಾರವೆಂದರೆ ಅದು 'ಸತ್ಯ'ಕ್ಕೆ ನೀಡಬೇಕಾದ ಸ್ಥಾನ. ಬದುಕಿನ ವಿವಿಧ ಸಂದರ್ಭಗಳಲ್ಲಿ ಅಪ್ರಾಮಾಣಿಕತೆ ಅಸತ್ಯ ಇವೇ ಮೊದಲಾದವು ಮೇಲುಗೈ ಸಾಧಿಸಿದರೂ ಅಂತಿಮ ಜಯ ದೊರೆಯುವುದು ಸತ್ಯಕ್ಕೇ ಬಸಪ್ಪನ ಜಮೀನು(೩೪-೪) ಕಥೆಯ ಆಶಯವೂ ಕೂಡ ಇದೇ ಆಗಿದೆ. ಬರಗಾಲ ಬಂದ ಸಂದರ್ಭದಲ್ಲಿ ಊರ ಮುಂದಿರುವ ಪಾಳುಭೂಮಿಯನ್ನು ಹರಾಜು ಹಾಕಲು ಯತ್ನಿಸಿದಾಗ ಪಾದ್ರಿಯೊಬ್ಬ ಆ ಭೂಮಿ ತಮ್ಮ ಚರ್ಚಿಗೇ ಸೇರಬೇಕೆಂದು ವಾದಿಸುತ್ತಾನೆ. ದಾಖಲೆಗಳಲ್ಲಿ ಆ ಜಮೀನು ಬಸಪ್ಪನ ಹೆಸರಿನಲ್ಲಿದೆ. ಆ ಬಸಪ್ಪ ಯಾರು ಎಂಬುದೇ

---

೧. ಲಕ್ಕಪ್ಪಗೌಡ.ಎಚ್.ಜೆ, ಸಹ್ಯಾದ್ರಿಯ ಸೂರ್ಯ, ೨೦೦೪, ಪು. ೧೦೬.

ಆ ಊರಿನಲ್ಲಿ ಯಾರಿಗೂ ತಿಳಿದಿಲ್ಲ. ಮೂಲವನ್ನು ಹುಡುಕುತ್ತಾ ಹೋದಂತೆ ಬಿಶಪ್ ಎಂಬುದು ಬಸಪ್ಪ ಎಂದಾಗಿರುವ ಸತ್ಯ ಹೊರಬರುತ್ತದೆ. ಆಸ್ತಿ ಚರ್ಚಿಗೆ ಸೇರುತ್ತದೆ. ಕಥೆ ತಿಳಿಹಾಸ್ಯದಿಂದ ಕೂಡಿದ್ದು ಏನೇ ಸಮಸ್ಯೆಗಳು ಬಂದರೂ ಅಂತಿಮವಾಗಿ ಸತ್ಯಕ್ಕೇ ಜಯ ಎಂಬ ಸಂದೇಶವನ್ನು ಸಾರುತ್ತದೆ.

ಕಳೆದ ಶತಮಾನದ ಆರಂಭದಲ್ಲಿ ಸಂಪ್ರದಾಯದ ಸಂಕೋಲೆಯೊಳಗೆ ಸಿಲುಕಿದ್ದ ಸ್ತ್ರೀಯರಿಗೆ ಒಂದೆಡೆ ಆಧುನಿಕ ವಿಚಾರಗಳ ಸೆಳೆತ ಇನ್ನೊಂದೆಡೆ ಸಂಪ್ರದಾಯದ ಹಿಡಿತ. ಇವುಗಳಲ್ಲಿ ಯಾವುದನ್ನು ಆಯ್ದುಕೊಳ್ಳಬೇಕು ಎಂಬ ಗೊಂದಲ. ಗೊಂದಲಕ್ಕೆ ಇವುಗಳ ನಡುವೆಯೇ ಸ್ತ್ರೀಯರಿಗೆ ವಿದ್ಯಾಭ್ಯಾಸದ ಅಗತ್ಯವಿದೆಯೇ ಇದ್ದರೆ ಎಂತಹ ವಿದ್ಯೆ ಮುಖ್ಯ ಎಂಬ ವಿಚಾರಗಳು ಚರ್ಚೆಗೆ ಗ್ರಾಸವಾದ ವಿಚಾರಗಳಾಗಿದ್ದವು. ಇದೇ ಸಂದರ್ಭದಲ್ಲಿ ಚುಂಚೋಳಿ ಜಯಪೂರ್ಣಾಚಾರ್ಯ ಅವರು ರಚಿಸಿರುವ 'ಯಾರು ಯಾರಿಗೇನು ಕಡಿಮೆ' (೯–೧) ಎಂಬ ಕಥೆ ಸ್ತ್ರೀ ಪುರುಷರಿಗಿಂತ ಯಾವುದರಲ್ಲೂ ಕಡಿಮೆ ಇಲ್ಲ ಎಂಬ ಅಂಶದ ಕಡೆ ಗಮನಸೆಳೆಯುತ್ತದೆ. ಮತ್ತು ಸ್ತ್ರೀಯರಿಗೆ ನೀಡಬೇಕಾದ ಶಿಕ್ಷಣದ ಮಹತ್ವ ಕುರಿತಂತೆ ತಿಳುವಳಿಕೆ ನೀಡುತ್ತದೆ. 'ದೊಡ್ಡವ'ಳಾದ ಹೆಣ್ಣು ಮನೆಬಿಟ್ಟು ಹೋಗುವುದೇ ತಪ್ಪು ಎಂದು ತಿಳಿದಿದ್ದ ಸಂದರ್ಭದಲ್ಲಿಯೇ ಆಕೆ ಮನೆಬಿಟ್ಟು ಹೊರಗೆ ಹೋಗುವುದಷ್ಟೇ ಅಲ್ಲ ವಿದ್ಯಾಭ್ಯಾಸಕ್ಕೂ ಅರ್ಹಳು ಎಂಬ ವಿಚಾರ ಹಾಗೂ ಪತಿಯೇ ಪರದೈವ ಎಂದು ಆತನ ಅವಿವೇಕಗಳೆಲ್ಲವೂ ಒಪ್ಪಿಕೊಳ್ಳಬೇಕಾದ ಅನಿವಾರ್ಯವಿಲ್ಲ ಎಂಬ ಅಂಶದ ಕಡೆ ಗಮನಸೆಳೆಯುತ್ತದೆ.

ಹೀಗೆ ಕನ್ನಡನಾಡಿನ ಜನಸಾಮಾನ್ಯರ ಹತ್ತು ಹಲವು ಬಗೆಯ ಸಮಸ್ಯೆಗಳಿಗೆ ಸ್ಪಂಧಿಸಿ, ಕನ್ನಡಿಗರಲ್ಲಿ ನೈತಿಕತೆಯನ್ನು ಹೆಚ್ಚಿಸಲು ಪ್ರಬುದ್ಧ ಕರ್ಣಾಟಕ ಪಟ್ಟ ಪ್ರಯತ್ನ ಗಂಭೀರವಾದದ್ದು. ಸಾಹಿತ್ಯದ ವಿವಿಧ ಪ್ರಕಾರಗಳ ಮೂಲಕ ಈ ವಿಚಾರಗಳು ಜನರನ್ನು ಮುಟ್ಟಬೇಕು. ಅದರ ಅನುಷ್ಠಾನದಿಂದಾಗಿ ಕನ್ನಡ ನಾಡಿನ ಜನತೆ ಸೌಖ್ಯ ಮತ್ತು ಸದೃಢವಾದ ಸಮಾಜವನ್ನು ಪಡೆಯುವಂತಾಗಬೇಕು. ಕನ್ನಡನಾಡು ನುಡಿಯ ಉಳಿವಿಗೆ ಇಂತಹ ಆದರ್ಶಗಳು ಅಗತ್ಯವಾಗಿದ್ದು ಆಗ ಮಾತ್ರ ಸಾಮಾಜಿಕ ನ್ಯಾಯವನ್ನು ಒಪ್ಪುವ, ಪಾಲಿಸುವ ವ್ಯವಸ್ಥೆಗೆ ಮನ್ನಣೆ ದೊರೆತಂತಾಗುತ್ತದೆ.

****

# ಸಮಾರೋಪ

**ಕನ್ನಡ ನಾಡು ನುಡಿ ಸಂರಕ್ಷಿಸಿದ ಪ್ರಬುದ್ಧ ಕರ್ನಾಟಕ**

ನವೋದಯ ಕಾಲಘಟ್ಟದ ಆರಂಭದಲ್ಲಿಯೇ ಪ್ರಾರಂಭಗೊಂಡ ಪ್ರಬುದ್ಧ ಕರ್ನಾಟಕ ಆಧುನಿಕ ಕನ್ನಡದ ವಿಶಿಷ್ಟವಾದ ಪತ್ರಿಕೆ. ಆಧುನಿಕ ಕನ್ನಡ ಸಾಹಿತ್ಯದ ಚರಿತ್ರೆಯೆಂದರೆ ಅದು ಪ್ರಬುದ್ಧ ಕರ್ನಾಟಕದ ಚರಿತ್ರೆ ಎನ್ನುವಷ್ಟರಮಟ್ಟಿಗೆ ಸಾಹಿತ್ಯ ವಿಮರ್ಶಕರಿಂದ ಹೊಗಳಿಸಿಕೊಂಡ ಪತ್ರಿಕೆ. ನೂರಾರು ಕವಿಗಳಿಗೆ ಪ್ರೇರಣೆಯನ್ನು ನೀಡಿ ಅವರನ್ನು ಪ್ರೋತ್ಸಾಹಿಸಿ, ಪೋಷಿಸಿ ಹಾಗೂ ಬೆಳೆಸುವ ಮೂಲಕ ಜನಗಳ ಮನದಲ್ಲಿ ಸ್ಥಾನಗಳಿಸಿಕೊಳ್ಳಲು ಯಶಸ್ವಿಯಾಗಿದೆ. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕೆಲವೇ ಸಾಹಿತ್ಯಾಸಕ್ತರಿಂದ ಪ್ರಾರಂಭಗೊಂಡ ಈ ಪತ್ರಿಕೆ ನಂತರ ನಾಡಿನ ಉದ್ದಗಲಕ್ಕೂ ತನ್ನ ಪ್ರಭಾವವನ್ನು ಬೀರಿ ಸಮಸ್ತ ನಾಡಿನ ಪತ್ರಿಕೆಯಾಗಿ ರೂಪುಗೊಂಡ ಬಗೆ ವಿಸ್ಮಯವಾದದ್ದು. ಸಾಹಿತ್ಯವಲಯದಲ್ಲಿ ಪ್ರಭಾವಶಾಲಿಯಾಗಿ ರೂಪುಗೊಂಡ ಈ ಪತ್ರಿಕೆ ಸಾಹಿತ್ಯಾಸಕ್ತರ ನಡುವೆಯಷ್ಟೇ ಅಲ್ಲದೆ ಸಾಮಾಜಿಕರ ನಡುವೆ ಗಳಿಸಿಕೊಂಡ ಗೌರವ ಗಮನಾರ್ಹವಾದದ್ದು. ಯಾವುದೇ ವಿಚಾರಕ್ಕೆ ಸಂಬಂಧಿಸಿದಂತೆ ಪ್ರಬುದ್ಧ ಕರ್ನಾಟಕ ವ್ಯಕ್ತಪಡಿಸುವ ಅಭಿಪ್ರಾಯ ನ್ಯಾಯಸಮ್ಮತ ಹಾಗೂ ಪ್ರಾಮಾಣಿಕ ಎಂಬ ನಂಬುಗೆಯನ್ನು ಗಳಿಸಿಕೊಂಡಿದ್ದು ಈ ಪತ್ರಿಕೆಯ ಹಿರಿಮೆ. ಇಂದೂ ಸಹ ಹಲವು ರೀತಿಯ ಪತ್ರಿಕೆಗಳು ಪ್ರಕಟಗೊಳ್ಳುತ್ತಿದ್ದು ಅವು ಜನಸಾಮಾನ್ಯರ ಸಾಹಿತ್ಯಾಸಕ್ತರ ಬೇಕುಬೇಡಗಳನ್ನು ಅರಿತುಕೊಂಡು ಅದನ್ನು ಒದಗಿಸಿಕೊಡುವ ಪ್ರಯತ್ನಮಾಡುತ್ತಿದೆ. ಆದರೆ ಪ್ರಬುದ್ಧ ಕರ್ನಾಟಕ ಪ್ರಾರಂಭಗೊಂಡ ಸಂದರ್ಭದಲ್ಲಿ ನಾಡಿನಲ್ಲಿ ಹಲವಾರು ಪತ್ರಿಕೆಗಳು ಇದ್ದರೂ ಕನ್ನಡಿಗರಿಗೆ ತಮ್ಮ ಸಮಸ್ತ ವೈಚಾರಿಕ ಚಿಂತನೆಗಳಿಗೆ ಸ್ಪಂಧಿಸಬಲ್ಲ ಮಾಧ್ಯಮ ದೊರೆತಿರಲಿಲ್ಲ. ಈ ಸಂದರ್ಭದಲ್ಲಿ ಪ್ರಬುದ್ಧ ಕರ್ನಾಟಕ ಜನಸಾಮಾನ್ಯರ, ಸಾಹಿತ್ಯಾಸಕ್ತರ ಜ್ಞಾನದ ತೃಷೆಯನ್ನು ತೃಪ್ತಿಗೊಳಿಸಲು ಸಾಮಾಜಿಕವಾದ ಅವರ ಆಸೆ ಆಶೋತ್ತರಗಳನ್ನು ಈಡೇರಿಸಲು ಚಾಲನೆಯನ್ನು ನೀಡಿತು. ಈ ಪತ್ರಿಕೆಯು ಪ್ರಾರಂಭಗೊಂಡ ಸಂದರ್ಭದಲ್ಲಿಯೇ ಕನ್ನಡನಾಡಿನ ವಿವಿಧ ಭಾಗಗಳಲ್ಲಿ ಹಲವಾರು ಪತ್ರಿಕೆಗಳಿದ್ದು ಅವುಗಳ ನಡುವೆಯೇ ಇದು ವಿಶಿಷ್ಟವಾಗಿ ಬೆಳೆದ ರೀತಿಯನ್ನು ಗುರುತಿಸಲು ಸಾಧ್ಯವಾಯಿತು.

ಉತ್ತಮ ಸಾಹಿತ್ಯ ಪತ್ರಿಕೆಯಾಗಬೇಕೆಂಬ ಆಶಯದೊಡನೆ ಪ್ರಾರಂಭಗೊಂಡ ಈ ಪತ್ರಿಕೆಯ ಆಶಯ ಹಲವಾರು ಬದಲಾವಣೆಗಳನ್ನು ಕಂಡು, ಕಾಲದ ಅಗತ್ಯವನ್ನು ಅರಿತುಕೊಂಡು ಅವುಗಳಿಗೆ ಸ್ಪಂದಿಸಿದೆ. ಸಾಹಿತ್ಯ ಪತ್ರಿಕೆಯೆಂದೇ ಗುರುತಿಸಲ್ಪಡುತ್ತಿರುವ ಈ ಪತ್ರಿಕೆಯು ನಾಡುನುಡಿಯ ವಿಷಯ ಬಂದಾಗ ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ

ಒಳಪಟ್ಟರೂ ತನ್ನ ಉದ್ದೇಶ ಧ್ಯೇಯಗಳೊಂದಿಗೆ ಎಂದೂ ರಾಜಿಯಾಗದೆ ತೋರಿದ ಬದ್ಧತೆ ಅಪೂರ್ವವಾದದ್ದು. ಒಂದು ಕಾಲಘಟ್ಟದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದ ಈ ಪತ್ರಿಕೆಯು ಇತ್ತೀಚಿನ ದಿನಗಳಲ್ಲಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಳ್ಳುತ್ತಿದೆ. ನಾಡುನುಡಿಗಾಗಿ ಅದು ನೀಡಿದ ಮೌಲ್ಯಯುಕ್ತವಾದ ಕೊಡುಗೆ ಮರೆತುಹೋಗುತ್ತಿದೆ. ಈ ಪ್ರಬಂಧದ ರಚನೆಯ ಸಂದರ್ಭದಲ್ಲಿ ಸಮಾಜ ಹಾಗೂ ಸಾಹಿತ್ಯದ ಸರ್ವತೋಮುಖ ಬೆಳವಣಿಗೆಗೆ ಸಹಕರಿಸಿದ ಪತ್ರಿಕೆಯ ಸಾಹಿತಿಗಳು, ಅವರು ನೀಡಿದ ಸಹಕಾರ, ಸಂಪಾದಕರುಗಳ ನಿಸ್ವಾರ್ಥ ಸೇವೆ, ಕನ್ನಡಿಗರಿಂದ ದೊರೆತ ಸಹಾಯ ಇವುಗಳಿಂದಾಗಿ ಪತ್ರಿಕೆ ಸಾಧಿಸಿದ ಬೆಳವಣಿಗೆ ಈ ಅಂಶಗಳನ್ನು ಗಮನಿಸಲಾಗಿದೆ. ಭಿನ್ನಭಿನ್ನವಾದ ವಸ್ತು ವೈವಿಧ್ಯಗಳಿಂದ ಭಿನ್ನ ಅಭಿರುಚಿಗಳನ್ನು ಉಳ್ಳ ಜನಗಳ ಪ್ರೀತಿಗೆ ಪಾತ್ರವಾದ ಈ ಪತ್ರಿಕೆಯ ಹುಟ್ಟು ಬೆಳವಣಿಗೆ, ಇದಕ್ಕೆ ಕಾರಣವಾದ ಕರ್ಣಾಟಕ ಸಂಘ ಪತ್ರಿಕೆಯ ಆರ್ಥಿಕ ಪರಿಸ್ಥಿತಿ, ಪ್ರಕಟವಾಗುತ್ತಿದ್ದ ವಸ್ತು ವೈವಿಧ್ಯ, ಸಂಪಾದಕರುಗಳ ಸೇವೆ, ಇವೆಲ್ಲವುಗಳನ್ನು ಗಮನಿಸುವ ಮುಖಾಂತರ ಅದರ ಹುಟ್ಟು, ಬೆಳವಣಿಗೆ, ಕಾರಣಗಳನ್ನು ವೈಶಿಷ್ಟ್ಯಗಳನ್ನು ಗುರುತಿಸಲು ಸಾಧ್ಯವಾಗಿದೆ.

ಪ್ರಬುದ್ಧ ಕರ್ಣಾಟಕದ ವೈಶಿಷ್ಟ್ಯವಡಗಿರುವುದು ಅದರ ನಿಸ್ವಾರ್ಥ ಮನೋಭಾವದಲ್ಲಿ ಕನ್ನಡ ನಾಡು-ನುಡಿಯ ಅಭಿವೃದ್ಧಿಯನ್ನಷ್ಟೇ ತನ್ನ ಧ್ಯೇಯ-ಮಾತ್ರವಾಗಿರಿಸಿಕೊಂಡ ಅದು ಕನ್ನಡಕ್ಕೆ ಯಾವ ಯಾವ ರೀತಿಯಲ್ಲಿ ಸಹಾಯ ಸಹಕಾರವನ್ನು ನೀಡಬಹುದೋ ಆ ಎಲ್ಲಾ ದಿಕ್ಕಿನೆಡೆ ಗಮನವನ್ನು ಹರಿಸಿದೆ. ಪ್ರಬುದ್ಧ ಕರ್ಣಾಟಕವು ತಾನೂ ಒಂದು ಪತ್ರಿಕೆಯಾಗಿದ್ದುಕೊಂಡು ಹಲವು ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದರೂ ಅದು ತನ್ನ ಸಮಕಾಲೀನ ನೂರಾರು ಪತ್ರಿಕೆಗಳನ್ನು ಗಮನಿಸಿ ಕಾಲಕ್ಕೆ ಅನುಗುಣವಾಗಿ ಅವುಗಳಿಗೆ ಮಾರ್ಗದರ್ಶನವನ್ನು ನೀಡುವ ಮೂಲಕ ಸ್ಪಂದಿಸಿದೆ. ಆ ಪತ್ರಿಕೆಗಳಲ್ಲಿರುವ ವೈಶಿಷ್ಟ್ಯಗಳನ್ನು ಸಂಗ್ರಹಿಸಿ ವಾಚಕರಿಗೆ ಅವುಗಳನ್ನು ಪರಿಚಯ ಮಾಡಿಕೊಟ್ಟು ಅವುಗಳ ಬೆಳವಣಿಗೆಗೆ ಕಾರಣವಾಗಿರುವುದರ ಅಂಶವನ್ನು ಪ್ರಮುಖವಾಗಿ ಗುರುತಿಸಲಾಗಿದೆ.

ಪ್ರಬುದ್ಧ ಕರ್ಣಾಟಕ ಪ್ರಾರಂಭಗೊಂಡ ಕಾಲದಲ್ಲಿ ಕನ್ನಡ ಹಾಗೂ ಕನ್ನಡ ನಾಡನ್ನು ಕುರಿತಾಗಿ ಕನ್ನಡಿಗರಲ್ಲಿ ಇದ್ದ ತಿರಸ್ಕಾರವನ್ನು ಹೋಗಲಾಡಿಸಲು ಹಲವು ರೀತಿಯ ಪ್ರಯತ್ನಗಳು ನಾಡಿನ ಬೇರೆ ಬೇರೆ ಭಾಗಗಳಲ್ಲಿ ಸಾಗುತ್ತಿದ್ದವು. ಕನ್ನಡಿಗರಲ್ಲಿ ನಾಡು ನುಡಿಯ ಅಭಿವೃದ್ಧಿಯನ್ನು ಕುರಿತು ಚಿಂತಿಸುವಂತೆ ಪ್ರಚೋದನೆ ನೀಡುವುದು ಅಂದಿನ ಅಗತ್ಯವಾಗಿತ್ತು. ಇದನ್ನು ಅರಿತಿದ್ದ ಪ್ರಬುದ್ಧ ಕರ್ಣಾಟಕ ಅದನ್ನು ಸಾಧಿಸಲು ಹಲವು ರೀತಿಯ ಪ್ರಯತ್ನಗಳನ್ನು ಮಾಡಿ ಸಾಫಲ್ಯವನ್ನು ಸಾಧಿಸಿದೆ. ಇದಕ್ಕಾಗಿ ಕನ್ನಡ ನಾಡಿನ ಪ್ರಾಚೀನತೆಯನ್ನು ಸಾರುವ, ಕನ್ನಡ ನಾಡಿನ

ವಿವಿಧ ಪ್ರದೇಶಗಳಲ್ಲಿರುವ ವೈಶಿಷ್ಟ್ಯಗಳನ್ನು ಪರಿಚಯಿಸುವ ಪ್ರಯತ್ನಗಳನ್ನು ಮಾಡಿದೆ. ಕನ್ನಡನಾಡಿನಲ್ಲಷ್ಟೇ ಅಲ್ಲದೆ ಸಮಸ್ತ ದೇಶದ ಗಮನಸೆಳೆಯಲು ಸಮರ್ಥವಾಗಿರುವ ಐತಿಹಾಸಿಕ ಪ್ರದೇಶಗಳ ಕಡೆ, ಶಿಲ್ಪಕಲೆಯ ವೈಭವಗಳ ಕಡೆ ಗಮನಸೆಳೆಯುವ ಕಾರ್ಯಗಳನ್ನು ಮಾಡಿದೆ. ಮಾನವ ನಿರ್ಮಿತವಲ್ಲದ ಪ್ರಕೃತಿದತ್ತವಾಗಿ ಬಂದಿರುವ ಕನ್ನಡನಾಡಿನ ಪ್ರೇಕ್ಷಣೀಯ ಸ್ಥಳಗಳನ್ನು, ಮನೋಹರ ತಾಣಗಳನ್ನು ಸುಂದರ ಸ್ಥಳಗಳನ್ನು ಪರಿಚಯಿಸುವುದರ ಮೂಲಕ ಕನ್ನಡ ನಾಡಿನ ವಿವಿಧ ಪ್ರಾಂತ್ಯಗಳ ಕಡೆ ಗಮನಸೆಳೆದಿದೆ. ತನ್ಮೂಲಕ ಕನ್ನಡನಾಡಿನ ವಿವಿಧ ಭಾಗಗಳಲ್ಲಿದ್ದ ಜನರಿಗೆ ಆ ಪ್ರದೇಶಗಳೆಲ್ಲವೂ ಕನ್ನಡಿಗರಿಗೆ ಸೇರಿದ್ದು, ಇಂತಹ ಅಪರೂಪದ ತಾಣಗಳನ್ನು ಹೊಂದಿರುವ ಕನ್ನಡಿಗರು ತಮ್ಮ ನಾಡಿನ ಘನತೆ ಗೌರವಗಳ ಬಗೆಗೆ ಅನುಮಾನ ತಳೆಯಬೇಕಾಗಿಲ್ಲ. ಈ ಪ್ರದೇಶಗಳಲ್ಲಿರುವ ಎಲ್ಲರೂ ಒಂದೇ, ಕನ್ನಡ ನಾಡೂ ಒಂದೇ ಎಂಬುದನ್ನು ಮನದಟ್ಟು ಮಾಡಿಕೊಡುವಲ್ಲಿ ಯಶಸ್ವಿಯಾಗಿದೆ. ಜಾನಪದ ವಿಚಾರಗಳು ಇನ್ನೂ ಸ್ಪಷ್ಟವಾಗಿ ಪ್ರಚಾರ ಪಡೆಯದಿದ್ದ ಸಂದರ್ಭದಲ್ಲಿ ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದ್ದ ಕನ್ನಡ ನಾಡಿನದ್ದೇ ಆದ ವಿಶಿಷ್ಟ ಜನಪದ ಆಚರಣೆಗಳನ್ನು ಸಂಪ್ರದಾಯಗಳನ್ನು ಪ್ರಕಟಿಸಿ ಇಡೀ ನಾಡಿಗೆ ಪರಿಚಯಿಸಿ ಕನ್ನಡಿಗರಿಗೆ ತಮ್ಮ ನಾಡಿನ ಬಗೆಗೆ ಹೆಮ್ಮೆ ಮೂಡುವಂತೆ ಮಾಡಿದ ಪ್ರಯತ್ನಗಳನ್ನು ಗಮನಿಸಲಾಗಿದೆ.

ಹೀಗೆ ಕನ್ನಡಿಗರಲ್ಲಿ ನಾಡಿನ ಬಗೆಗೆ ಅಭಿಮಾನವನ್ನು ಬೆಳೆಸುವುದರ ಹಿಂದೆ ಛಿದ್ರವಾಗಿದ್ದ ಕನ್ನಡನಾಡನ್ನು ಒಂದುಗೂಡಿಸುವ ಛಲವನ್ನು ತುಂಬಬೇಕೆಂಬ ಆಶಯವೂ ಅಡಗಿದ್ದು ಅದರಲ್ಲಿ ಸಫಲವೂ ಆಗಿದೆ. ಅಖಂಡವಾಗಿದ್ದ ಕನ್ನಡನಾಡನ್ನು ಸಾಧಿಸಲು ಕನ್ನಡಿಗರು ಒಂದುಗೂಡಿ ಹೋರಾಡಬೇಕಾಗಿರುವುದನ್ನು ಮನದಟ್ಟು ಮಾಡಿಕೊಡುವುದಷ್ಟೇ ಅಲ್ಲದೆ ಅವರು ನಿರ್ವಹಿಸಬೇಕಾದ ಕಾರ್ಯಗಳನ್ನು ಸೂಚಿಸಿ ಮಾರ್ಗದರ್ಶನ ನೀಡಿದೆ. ತನ್ನ ಅಭಿಪ್ರಾಯಗಳನ್ನಷ್ಟೇ ಅಲ್ಲದೆ ನಾಡಿನ ಉಳಿದೆಡೆ ವ್ಯಕ್ತವಾದ ಅಭಿಪ್ರಾಯಗಳನ್ನು ನಡೆದ ಘಟನೆಗಳ ವರದಿಗಳನ್ನು ಪ್ರಕಟಿಸಿ ಏಕೀಕರಣಕ್ಕೆ ಪೂರ್ಣ ಬೆಂಬಲವನ್ನು ಸೂಚಿಸಿದೆ. ಸ್ವಾತಂತ್ರ್ಯಾನಂತರ ಕನ್ನಡ ನಾಡು ಏಕೀಕರಣಗೊಳ್ಳಬೇಕಾದ ಸಂದರ್ಭದಲ್ಲಿ ಬಂದ ಹಲವಾರು ಸಮಿತಿಗಳು ಕನ್ನಡಿಗರ ಆಸೆ–ಆಕಾಂಕ್ಷೆಗಳಿಗೆ ಸ್ಪಂದಿಸಿದೆ ಮನ ನೋಯುವಂತಹ ವರದಿಗಳನ್ನು ನೀಡಿದ ಸಂದರ್ಭದಲ್ಲಿ ಅದಕ್ಕೆ ವಿರೋಧವನ್ನು ಸೂಚಿಸಿ ಸಮಿತಿಯವರು ಎತ್ತಿದ್ದ ಹಲವಾರು ಪ್ರಶ್ನೆಗಳಿಗೆ ಉತ್ತರಗಳನ್ನು ನೀಡಿದೆ. ಅಷ್ಟೇ ಅಲ್ಲದೆ ಸಮಿತಿಯವರು ವ್ಯಕ್ತಪಡಿಸಿದ್ದ ಸಂಶಯಗಳು ನಿರಾಧಾರವೆಂದು ಸಾಬೀತು ಪಡಿಸಲು ಸಂದರ್ಭೋಚಿತವಾಗಿ ಉತ್ತರ ನೀಡಿದ ಅದರ ಕಾರ್ಯ

ಮಹತ್ವದ್ದಾಗಿದೆ. ಹಳೆಯ ಮೈಸೂರು ಪ್ರಾಂತ್ಯದವರು ಏಕೀಕರಣ ವಿರೋಧಿಗಳು ಎಂಬ ಸಂಶಯ ಎದ್ದಿದ್ದ ಸಂದರ್ಭದಲ್ಲಿ ಅದೇ ಭಾಗದ ಪತ್ರಿಕೆಯೊಂದು ಪ್ರತಿಕ್ರಿಯಿಸಿದ ರೀತಿ ಆ ಸಂಶಯಗಳನ್ನು ದೂರ ಮಾಡಲು ಅನುಕೂಲ ಮಾಡಿಕೊಟ್ಟಿದ್ದು ವಿಶೇಷ ಸಂಗತಿಯಾಗಿದೆ. ಕನ್ನಡನಾಡು ಭೌಗೋಳಿಕವಾಗಿ ಬಲಶಾಲಿಯಾದರಷ್ಟೇ ಸಾಲದು ಸಾಂಸ್ಕೃತಿಕವಾಗಿ ಹಾಗೂ ಆರ್ಥಿಕವಾಗಿ ಬಲಶಾಲಿಯಾಗಬೇಕು. ಕನ್ನಡಿಗರು ತಮ್ಮ ನಡುವೆ ಇರುವ ಭಾಷಾಭೇದ ಹಾಗೂ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಂಡು ಮುಂದೆ ಸಾಗಬೇಕೆಂಬ ಆಶಯವನ್ನು ಹೊಂದಿದ್ದ ಪ್ರಬುದ್ಧಕರ್ಣಾಟಕ ಅದಕ್ಕಾಗಿ ಹೇಗೆ ಶ್ರಮಿಸಿದ ಬಗೆಯನ್ನು ಗುರುತಿಸಲಾಗಿದೆ. ಈ ಎಲ್ಲಾ ಕಾರ್ಯಗಳೂ ಇದೊಂದೇ ಪತ್ರಿಕೆ ಕಾರಣದಿಂದಷ್ಟೇ ನಡೆಯಿತು ಎನ್ನುವುದಕ್ಕಿಂತ ಈ ಪತ್ರಿಕೆಯ ಮೂಲಕ ದೊರೆತ ಮಾರ್ಗದರ್ಶನ ಸಲಹೆ ಸೂಚನೆ ಅದಕ್ಕೆ ಹೇಗೆ ಶಕ್ತಿಯನ್ನು ತುಂಬಿತು ಎಂಬುದೂ ಮಹತ್ವದ ಅಂಶವಾಗುತ್ತದೆ.

ಕನ್ನಡ ಭಾಷೆಯ ಅಭಿವೃದ್ಧಿಯಾಗದೆ ಕನ್ನಡ ನಾಡು ಹಾಗೂ ಕನ್ನಡಿಗರು ಏಳಿಗೆಯನ್ನು ಸಾಧಿಸಲು ಸಾಧ್ಯವಿಲ್ಲ ಎಂಬುದನ್ನು ಅರಿತಿದ್ದ ಪ್ರಬುದ್ಧ ಕರ್ಣಾಟಕ ಕನ್ನಡ ಭಾಷೆಗೆ ಸತ್ವವನ್ನು ತುಂಬಲು ಹಲವು ರೀತಿಯ ಪ್ರಯತ್ನಗಳನ್ನು ಮಾಡಿದೆ. ವಿಶ್ವದ ಯಾವುದೇ ಭಾಷೆಗೆ ಸರಿಸಾಟಿಯಾಗಿ ನಿಲ್ಲಬಲ್ಲ ಶಕ್ತಿ ಕನ್ನಡ ಭಾಷೆಗೆ ಇದೆ ಎಂಬ ಭಾವನೆಯನ್ನು ಕನ್ನಡಿಗರಲ್ಲಿ ತುಂಬಿದೆ. ಕನ್ನಡ ಭಾಷೆಯ ಪ್ರಾಚೀನತೆಯನ್ನು ಗುರುತಿಸುವ ಪ್ರಯತ್ನದಲ್ಲಿ ಸಹಕಾರವನ್ನು ನೀಡಿದೆ. ಉತ್ತಮ ಕವಿ ಪರಂಪರೆಯನ್ನು ಹೊಂದಿರುವ ಭಾಷೆಯ ಹಿರಿಮೆಯನ್ನು ಕನ್ನಡ ಜನತೆಯ ಮುಂದೆ ತೆರೆದಿಟ್ಟಿದೆ. ಕನ್ನಡ ಸಾಹಿತ್ಯದ ಉತ್ತಮ ಕೃತಿಗಳ ಸಾರವನ್ನು ಸಂಗ್ರಹಿಸಿ ಜನರ ಮುಂದಿಟ್ಟು ಅವರಲ್ಲಿ ವಾಚನಾಭಿರುಚಿಯನ್ನು ಬೆಳೆಯುವಂತೆ ಮಾಡಿದೆ. ಸಾಹಿತ್ಯ ನಿರ್ಮಾಣದ ಕಾರ್ಯ ಕಷ್ಟಕರವಾದದ್ದು. ಅದರಲ್ಲೂ ಉತ್ತಮವಾದ ವಸ್ತುವನ್ನು ಹುಡುಕುವುದು ತ್ರಾಸದಾಯಕವಾದ ಕಾರ್ಯ. ವಾಚಕರ ನಾಡಿ ಮಿಡಿತವನ್ನು ಅರಿತುಕೊಂಡು ಸಾಹಿತ್ಯವನ್ನು ಸೃಷ್ಟಿಸಿ ಜನರ ಮನ್ನಣೆ ಗಳಿಸುವುದು ಕಷ್ಟವಾದ ಕಾರ್ಯ. ಸಾಹಿತ್ಯದಲ್ಲಿ ಉತ್ತಮ ವಸ್ತು ಇದ್ದಾಗ ಮಾತ್ರ ಇದನ್ನು ಸಾಧಿಸಲು ಸಾಧ್ಯ. ಈ ವಿಚಾರವನ್ನು ಅರಿತಿರುವ ಪ್ರಬುದ್ಧ ಕರ್ಣಾಟಕದ ಸಾಹಿತ್ಯ ನಿರ್ಮಾಣಕ್ಕೆ ಅಗತ್ಯವಾಗಿ ಬೇಕಾಗಿರುವ ಉತ್ತಮ ಸಾಮಗ್ರಿಗಳನ್ನು ಸೂಚಿಸಿದೆ. ಆ ಸೂಚನೆಗಳು ಮುಂದೆ ಹೇಗೆ ಹೊಸರೀತಿಯ ಸಾಹಿತ್ಯ ಸೃಷ್ಟಿಗೆ ಸಹಕಾರಿಯಾದವು ಎಂಬ ಅಂಶವನ್ನು ಲಕ್ಷಿಸಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ನಿರ್ಮಾಣದ ಕಾರ್ಯ ಆಗ ತಾನೆ ಪ್ರಾರಂಭಗೊಂಡಿದ್ದು ಅದಕ್ಕೆ ಬೇಕಾದ ಸಲಹೆಗಳನ್ನು ನೀಡಿದೆ. ಕವಿಗಳ ಕಾಲ, ಕೃತಿ

ದೇಶ ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದಂತೆ ಆರೋಗ್ಯಪೂರ್ಣ ವಾದ-ವಿವಾದಗಳಿಗೆ ವೇದಿಕೆಯನ್ನು ಒದಗಿಸಿಕೊಟ್ಟಿದೆ. ಹಳೆಗನ್ನಡದ ಎಷ್ಟೋ ಕವಿಗಳ ಬಗೆಗೆ ಖಚಿತವಾದ ವಿಚಾರಗಳನ್ನು ಅರಿಯಲು ಅವಕಾಶ ಕಲ್ಪಿಸಿದೆ.

ಪ್ರಾಚೀನ ಪರಂಪರೆಯನ್ನಷ್ಟೇ ನಂಬಿ ಅದನ್ನು ಪಠಿಸುವುದರಿಂದಷ್ಟೇ ಕನ್ನಡ ಭಾಷೆಯ ಬಗೆಗೆ ಕನ್ನಡಿಗರಲ್ಲಿ ಅಭಿಮಾನ ಮೂಡಿಸಲು ಸಾಧ್ಯವಿಲ್ಲ ಎಂಬುದನ್ನು ಅರಿತು ಕನ್ನಡ ಭಾಷೆಯನ್ನು ಆಧುನಿಕಗೊಳಿಸುವ ಹಾಗೂ ಎಲ್ಲಾ ರಂಗಗಳಲ್ಲೂ ಅದನ್ನು ಬೆಳೆಸುವ ಪ್ರಯತ್ನವನ್ನು ಮಾಡಿದೆ. ಭಾಷೆಯ ಏಳಿಗೆಗೆ ಸಂಬಂಧಿಸಿದಂತೆ ಜಗತ್ತಿನ ಬೇರೆ ಭಾಷೆಗಳಲ್ಲಿ ನಡೆಯುತ್ತಿದ್ದ ಪ್ರಯೋಗಗಳನ್ನು ಗಮನಿಸಿ ಕನ್ನಡದಲ್ಲೂ ಅದನ್ನು ದೊರಕಿಸಿಕೊಡಲು ಯತ್ನಿಸಿದೆ.

ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಾದ ಸಣ್ಣ ಕಥೆ, ನಾಟಕ, ಕವಿತೆ, ವಿಮರ್ಶೆ, ಪ್ರಬಂಧ ಇವೆಲ್ಲವುಗಳ ರಚನೆಗೆ ಬೇಕಾದ ಸಲಹೆ ಸೂಚನೆಗಳನ್ನು ನೀಡಿ ಅವುಗಳು ರಚನೆಗೊಂಡ ನಂತರ ಪ್ರಕಟಿಸುವ ಮೂಲಕ ವೇದಿಕೆಯನ್ನೊದಗಿಸುವ ಪ್ರಯತ್ನದಲ್ಲಿ ಯಶಸ್ವಿಯಾಗಿದೆ. ಸಣ್ಣಕಥೆ, ಕವನ ಇವೇ ಮೊದಲಾದ ಪ್ರಕಾರಗಳಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿ ಪ್ರೋತ್ಸಾಹವನ್ನು ನೀಡಿದೆ. ಸಾಹಿತ್ಯ ರಚನೆಯ ಉದ್ದೇಶವೇನು? ಸಾಹಿತ್ಯದ ಸ್ವರೂಪವೇನು? ಎಂಬುದನ್ನು ನಿರ್ಧರಿಸುವ ಬಗ್ಗೆ ಚರ್ಚೆಗಳನ್ನು ಹುಟ್ಟುಹಾಕಿದೆ. ಇಷ್ಟೆಲ್ಲಾ ಪರಿಶ್ರಮದಿಂದ ಸೃಷ್ಟಿಯಾಗುವ ಸಾಹಿತ್ಯಕ್ಕೆ ತಕ್ಕ ಪ್ರಚಾರ ದೊರಕದೇ ಹೋದರೆ ಅದು ಸಾಫಲ್ಯವನ್ನು ಪಡೆಯಲು ವಿಫಲಗೊಳ್ಳುತ್ತದೆ ಎಂಬುದನ್ನು ಅರಿತು ಸಾಹಿತ್ಯ ಪ್ರಚಾರಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿರುವುದನ್ನು ಗುರುತಿಸಲಾಗಿದೆ.

ಜಗತ್ತಿನಾದ್ಯಂತ ಹೊಸ ಹೊಸ ವಿಚಾರಗಳು, ವಿಷಯಗಳು, ವೈಜ್ಞಾನಿಕವಾಗಿ ಸಾಹಿತ್ಯಕವಾಗಿ ಅವಿಷ್ಕಾರಗೊಳ್ಳುತ್ತಿದ್ದ ಕಾಲಘಟ್ಟದಲ್ಲಿ ಪ್ರಾರಂಭಗೊಂಡ ಪ್ರಬುದ್ಧ ಕರ್ಣಾಟಕವು ಹಾಗೂ ಅವುಗಳ ವಿಚಾರಗಳನ್ನು ಜನರಿಗೆ ತಲುಪಿಸಬೇಕು ಎಂಬ ಆಶಯವನ್ನು ಹೊತ್ತು ವೈಜ್ಞಾನಿಕ ಬರಹಗಳನ್ನು ಪ್ರಕಟಿಸಿದೆ. ಇದೇ ಸಂದರ್ಭದಲ್ಲಿ ವಿಚಾರಗಳನ್ನು ನಿರೂಪಿಸುವಾಗ ಬಳಸಬೇಕಾದ ಪಾರಿಭಾಷಿಕ ಪದಗಳನ್ನು ಸೃಷ್ಟಿಸುವ ಕಾರ್ಯವನ್ನು ಮಾಡಿದೆ. ಹೀಗೆ ವೈಜ್ಞಾನಿಕ ವಿಚಾರಗಳಿಗೂ ಕನ್ನಡ ಭಾಷೆಯನ್ನು ಸಿದ್ಧಗೊಳಿಸಿದ ಕೀರ್ತಿ ಪ್ರಬುದ್ಧ ಕರ್ಣಾಟಕಕ್ಕೆ ಸೇರಿದೆ. ಕಳೆದ ಶತಮಾನದ ಆರಂಭದಲ್ಲಿ ಹೆಚ್ಚುಹೆಚ್ಚಾಗಿ ಕಂಡುಬರುತ್ತಿದ್ದ ಅನುವಾದ ಭಾಷಾಂತರಗಳು ಕನ್ನಡಕ್ಕೆ ಯಾವ ಸ್ವರೂಪದಲ್ಲಿ ಬರಬೇಕು ಎಂಬ ವಿಷಯಗಳ ಬಗೆಗೆ ಓದುಗರ ಗಮನಸೆಳೆದಿದೆ. ಈ ವಿಚಾರಕ್ಕೆ ಸಂಬಂಧಿಸಿದಂತೆ ಅಂದು ಪ್ರಕಟಗೊಂಡಿದ್ದ ಮಾರ್ಗಸೂಚಿಗಳು ಇಂದಿಗೂ ಪ್ರಸ್ತುತವಾಗಿದೆ. ಹಲವಾರು ಅನುವಾದ ಹಾಗೂ

ಭಾಷಾಂತರ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಅದರ ಸ್ವರೂಪವನ್ನು ಮಾದರಿಯನ್ನು ಪರಿಚಯಿಸಿಕೊಟ್ಟ ವಿಚಾರವು ಅಧ್ಯಯನದ ಸಂದರ್ಭದಲ್ಲಿ ಗುರುತಿಸಲಾಗಿದೆ.

ಕನ್ನಡನಾಡಿನಲ್ಲಿ ಕನ್ನಡವೇ ಶಿಕ್ಷಣಮಾಧ್ಯಮವಾಗಬೇಕು ಎಂಬ ವಿಚಾರವನ್ನು ಪ್ರಾರಂಭಿಕ ದಿನಗಳಿಂದಲೂ ಪ್ರತಿಪಾದಿಸುತ್ತಾ ಬಂದ ಪ್ರಬುದ್ಧ ಕರ್ಣಾಟಕ ಅದನ್ನು ಸಾಧಿಸಲು ಹಾಕಿದ ಒತ್ತಡ ಹಾಗೂ ಪರಿಶ್ರಮ ಗಮನಾರ್ಹವಾಗಿದೆ. ಆರಂಭದಲ್ಲಿ ಪ್ರಾಥಮಿಕ ಮಟ್ಟದಲ್ಲಿಯಾದರೂ ಮಾತೃಭಾಷೆಯಲ್ಲೇ ಶಿಕ್ಷಣ ದೊರೆಯಬೇಕು ಎಂಬ ಅದರ ಆಶಯ ನಿಧಾನವಾಗಿ ಏರುತ್ತಾ ವಿಶ್ವವಿದ್ಯಾನಿಲಯದವರೆವಿಗೆ ಏರಿದ ವಿಚಾರವನ್ನು ಹಾಗೂ ಅದಕ್ಕಾಗಿ ತನ್ನ ಅಭಿಪ್ರಾಯಗಳನ್ನು ಮಾತ್ರವಲ್ಲದೆ ನಾಡಿನ ಉಳಿದೆಡೆ ನಡೆಯುತ್ತಿದ್ದ ಇಂತಹ ಪ್ರಯತ್ನಗಳನ್ನು ಗಮನಿಸಿ ಅಲ್ಲಿಯ ವಿಚಾರಗಳನ್ನು ಸಂಗ್ರಹಿಸಿ ಅದಕ್ಕೆ ಅದನ್ನು ನಾಡಿನ ಜನತೆಯ ಮುಂದಿಟ್ಟು ಅದಕ್ಕೆ ಹೇಗೆ ಬಲವನ್ನು ತುಂಬಿತು ಎಂಬ ವಿಚಾರವನ್ನು ಗಮನಿಸಲಾಗಿದೆ. ಇದಕ್ಕೆ ನಾಡಿನ ವಿವಿಧ ಬಾಗಗಳ ಬರಹಗಾರರ ಸಹಕಾರವೂ ದೊರೆಯಿತು.

ಪ್ರಬುದ್ಧ ಕರ್ಣಾಟಕದ ಬರಹಗಾರರ ಬಳಗ ಅಪಾರವಾದದ್ದು. ಅವರುಗಳು ಯಾವುದೇ ಪ್ರದೇಶಕ್ಕೆ ಜಾತಿಗೆ ಸೀಮಿತರಾದವರಲ್ಲ. ಸಂಕುಚಿತ ಮನೋಭಾವನೆಗೆ ಪ್ರಬುದ್ಧ ಕರ್ಣಾಟಕದಲ್ಲಿ ಸ್ಥಳವಿಲ್ಲ. ಇದರ ಬಳಗದಲ್ಲಿ ಸಂಪ್ರದಾಯವನ್ನು ಅನುಸರಿಸುವ ಬರಹಗಾರರಿರುವಂತೆಯೇ ಆಧುನಿಕತೆಯನ್ನು ಪ್ರದರ್ಶಿಸುವ, ಪ್ರಯೋಗಗಳನ್ನು ಮಾಡುವ ಬರಹಗಾರರಿಗೂ ಇಲ್ಲಿ ಆದ್ಯತೆ ದೊರೆತಿದೆ. ಮಂಜೇಶ್ವರ ಗೋವಿಂದ ಪೈ, ದ.ರಾ.ಬೇಂದ್ರೆ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಆರ್.ಶ್ರೀನಿವಾಸಮೂರ್ತಿ, ಟಿ.ಎಸ್.ವೆಂಕಟಣಯ್ಯ, ಎ.ಆರ್.ಕೃಷ್ಣಶಾಸ್ತ್ರಿಗಳಂತಹ ಹಿರಿಯ ಬರಹಗಾರರ ಬರಹಗಳಿಗೆ ಆದ್ಯತೆ ದೊರೆತಿರುವಂತೆಯೇ ಅಂದಿನ ಯುವ ಕವಿಗಳಾದ ಕುವೆಂಪು, ಡಿ.ಎಲ್.ನರಸಿಂಹಾಚಾರ್, ಕೆ.ಎಸ್.ನರಸಿಂಹಸ್ವಾಮಿ, ಜಿ.ಪಿ.ರಾಜರತ್ನಂ, ಜಿ.ಎಸ್.ಶಿವರುದ್ರಪ್ಪರಂತಹ ಪ್ರಯೋಗಶೀಲ ಬರಹಗಾರರಿಗೂ ಇಲ್ಲಿ ಪ್ರಮುಖ ಸ್ಥಾನವಿದೆ. ಮಹಿಳಾ ಬರಹಗಾರರು ವಿರಳವಾಗಿದ್ದ ಕಾಲದಲ್ಲಿಯೇ ಜಯಲಕ್ಷ್ಮಮ್ಮ, ವಾಣಿ, ಸರಸ್ವತಮ್ಮರಂತಹ ಹಲವರಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿದೆ.

೧೯೫೦ರ ಸುಮಾರಿಗೆ ನವ್ಯಸಾಹಿತ್ಯ ನಿಧಾನವಾಗಿ ಹರಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ನವೋದಯದ ಪ್ರಮುಖ ಪತ್ರಿಕೆಯಾದ ಇದು ಅಸಹನೆಯನ್ನು ಪ್ರದರ್ಶಿಸಿದಂತೆ ಕಂಡುಬರಲಿಲ್ಲ. ತೀರಾ ಕ್ವಚಿತ್ತಾಗಿ ಅದನ್ನು ವಿಡಂಬಿಸಿರುವ ಬರಹಗಳು ಕಂಡುಬಂದಿದೆ. ಇದರಲ್ಲಿ ಪ್ರಕಟಗೊಂಡಿರುವ ಹಲವಾರು ಬರಹಗಳು ನಂತರ ಸ್ವತಂತ್ರ ಗ್ರಂಥಗಳಾಗಿ ಹೊರಬಂದು ಜನಮನ್ನಣೆಯನ್ನು ಗಳಿಸಿರುವುದನ್ನು

ಗಮನಿಸಬಹುದು. ಪ್ರಬುದ್ಧ ಕರ್ಣಾಟಕಕ್ಕೆ ಇಪ್ಪತ್ತೈದು ವರ್ಷಗಳು ತುಂಬುವ ವೇಳೆಗೆ ಸುಮಾರು ೪೭ಕ್ಕಿಂತ ಅಧಿಕವಾದ ಗ್ರಂಥಗಳು ಪ್ರಕಟವಾಗಿದೆ. ಪ್ರಬುದ್ಧ ಕರ್ಣಾಟಕದ ಇಂತಹ ಅಪೂರ್ವ ಸಾಧನೆಗಳನ್ನು ಸಂಶೋಧನೆಯ ವೇಳೆಯಲ್ಲಿ ಗಮನಿಸಲಾಗಿದೆ.

ನಾಡು-ನುಡಿಯ ಬೆಳವಣಿಗೆಯಲ್ಲಿ ಇಷ್ಟೆಲ್ಲಾ ಮಹತ್ವದ ಕೊಡುಗೆಯನ್ನು ನೀಡಿದ ಪ್ರಬುದ್ಧ ಕರ್ಣಾಟಕದ ಸಾಧನೆಯನ್ನು ವಿವಿಧ ದೃಷ್ಟಿಕೋನದಿಂದ ಗಮನಿಸಲು ಸಾಧ್ಯವಾದರೂ ಈ ಪತ್ರಿಕೆಯ ಪ್ರಕಟಗೊಂಡಿರುವ ವಿಷಯ ಬಾಹುಳ್ಯವನ್ನು ಗಮನಿಸಿದಾಗ ಅದರಲ್ಲಿ ಇನ್ನೂ ಹಲವಾರು ವಿಷಯಗಳನ್ನು ಕುರಿತು ಆಳವಾಗಿ ವ್ಯಾಸಂಗ ಮಾಡಲು ಹಾಗೂ ಸಂಶೋಧನೆ ನಡೆಸಲು ಅವಕಾಶವಿದೆ. ಅಧ್ಯಯನದ ಅವಧಿಯನ್ನು ೧೯೫೭ರ ತನಕ ಮಾತ್ರವೇ ಪರಿಗಣಿಸಿರುವುದರಿಂದ ನಂತರದ ಅವಧಿಯ ಎಂದರೆ ಇಲ್ಲಿಯವರೆಗಿನ ಅದರ ಸಾಧನೆಗಳನ್ನು ಗಮನಿಸಬಹುದು. ನಾಡುನುಡಿಯ ಅಭಿವೃದ್ಧಿಗೆ ಪ್ರಬುದ್ಧ ಕರ್ಣಾಟಕ ನೀಡಿದ ಕೊಡುಗೆಯನ್ನು ಪ್ರಮುಖವಾಗಿ ಪರಿಗಣಿಸಿ ಸಂಶೋಧನೆ ಮಾಡಿರುವುದರಿಂದ ನವೋದಯದ ಸಾಹಿತ್ಯದ ಬೆಳವಣಿಗೆಗೆ ಅದು ನೀಡಿದ ಕೊಡುಗೆಯನ್ನು ಸಮಗ್ರವಾಗಿ ಸಂಶೋಧಿಸಬಹುದು. ಪ್ರಬುದ್ಧ ಕರ್ಣಾಟಕದ ಬರಹಗಳನ್ನು ಗಮನಿಸಿದಾಗ ವೈಜ್ಞಾನಿಕ, ಸಾಮಾಜಿಕ ಹಾಗೂ ಸಮಕಾಲೀನ ಕಳಕಳಿಯುಳ್ಳ ಬರಹಗಳು ಹೇರಳವಾಗಿದ್ದು ವಿಸ್ತೃತವಾದ ಅಧ್ಯಯನವನ್ನು ಕೈಗೊಳ್ಳಲು ಅವಕಾಶವಿದೆ.

ಒಟ್ಟಾರೆಯಾಗಿ ಇದರಲ್ಲಿ ವ್ಯಕ್ತವಾಗಿರುವ ದೇಶಪ್ರೇಮ, ಭಾಷಾಭಕ್ತಿ, ಸಾಹಿತ್ಯಸೇವೆ, ಜನರ ಉದ್ಧಾರ, ಅಜ್ಞಾನದ ವಿರುದ್ಧದ ಹೋರಾಟ, ಜ್ಞಾನ ಪ್ರಸಾರ, ನೆಮ್ಮದಿಯ ಬದುಕು ಇಂತಹ ಹಲವಾರು ಅಂಶಗಳ ಬಗ್ಗೆ ಅದು ನಡೆಸಿರುವ ಚಿಂತನೆಗಳು ಚೇತೋಹಾರಿಯಾಗಿದ್ದು ಕನ್ನಡ ನಾಡು ನುಡಿ ಹಾಗೂ ಕನ್ನಡಿಗರ ಅಭಿವೃದ್ಧಿಗೆ ಪೂರಕವಾಗಿದೆ. ಪ್ರಬುದ್ಧ ಕರ್ಣಾಟಕ ಜನ್ಮತಾಳಿದಾಗಿನಿಂದಲೂ ಅದು ಕನ್ನಡದ ಸ್ಥಾನಮಾನಗಳನ್ನು ಸಂರಕ್ಷಿಸಲು ಹೋರಾಡುತ್ತಾ ಬಂದಿದೆ. ಬರಿಯ ಹೋರಾಟದಲ್ಲಿಯೇ ಅದು ತೃಪ್ತಿಗೊಳ್ಳದೆ ಕನ್ನಡವನ್ನು ವಿಜ್ಞಾನದ ಭಾಷೆಯನ್ನಾಗಿಸಲು ಸಂಸ್ಕೃತಿಯ ಭಾಷೆಯನ್ನಾಗಿಸಲು ಉಚ್ಚ ಶಿಕ್ಷಣದ ಮಾಧ್ಯಮವನ್ನಾಗಿಸಲು ಪ್ರಯತ್ನಪಟ್ಟಿದೆ. ಪ್ರಪಂಚದ ಮುಂದುವರೆದ ಭಾಷೆಗಳು ಏನೆಲ್ಲಾ ಶಕ್ತಿ ಸಾಮರ್ಥ್ಯಗಳನ್ನು ಗಳಿಸಿಕೊಂಡಿವೆಯೋ ಅವೆಲ್ಲವನ್ನೂ ಪಡೆಯಲು ಕನ್ನಡಿಗರಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿದೆ. ಇಷ್ಟೆಲ್ಲಾ ಮಹತ್ತರವಾದ ಕಾರ್ಯಗಳನ್ನು ಮಾಡಿರುವ, ಕೊಡುಗೆಗಳನ್ನು ನೀಡಿರುವ ಈ ಪತ್ರಿಕೆಯ ಸಾಧನೆ ಕನ್ನಡ ನಾಡಿನಲ್ಲೇ ಅಪೂರ್ವವಾದದ್ದು ಹಾಗೂ ಅನನ್ಯವಾದದ್ದು.

# ಪರಾಮರ್ಶನ ಗ್ರಂಥಗಳು


೧. ಅನಂತನಾರಾಯಣ.ಎಸ್, ೨೦೦೦, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ಡಿ.ವಿ.ಕೆ. ಮೂರ್ತಿ, ಮೈಸೂರು.

೨. ಅನಂತ ರಂಗಾಚಾರ್.ಎನ್, ೧೯೮೨, ಪ್ರಬುದ್ಧ ಕರ್ಣಾಟಕ ಅಕಾರಾದಿ ಕವಿಕಾವ್ಯಸೂಚಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಕರ್ಕಿ ಡಿ.ಎಸ್. ೨೦೦೨, ಕನ್ನಡ ಛಂದೋ ವಿಕಾಸ, ಭಾರತ ಪ್ರಕಾಶನ ಧಾರವಾಡ.

೪. ಕುರ್ತುಕೋಟಿ.ಕೆ.ಡಿ, ೧೯೬೨, ಯುಗಧರ್ಮ ಹಾಗೂ ಸಾಹಿತ್ಯದರ್ಶನ ಮನೋಹರ ಗ್ರಂಥಮಾಲಾ, ಧಾರವಾಡ.

೫. ಕನ್ನಡ ವಿಷಯ ವಿಶ್ವಕೋಶ, ೨೦೦೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೬. ಕುವೆಂಪು (ಪ್ರಧಾನ ಸಂ.), ೧೯೭೦, ಸವಿನೆನಪು, ತ.ವೆಂ.ಸ್ಮಾರಕಮಾಲೆ, ಮೈಸೂರು

೭. ಡಾ. ಕೃಷ್ಣಕುಮಾರ್.ಸಿ.ಪಿ, ೧೯೯೫, ಕುವೆಂಪು ಸಾಹಿತ್ಯ ಸಂಧಾನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೮. ಕೃಷ್ಣಶಾಸ್ತ್ರಿ ಎ.ಆರ್, ೧೯೬೦, ಭಾಷಣಗಳು ಮತ್ತು ಲೇಖನಗಳು, ಶಾರದಾಮಂದಿರ, ಮೈಸೂರು

೯. ಗುಂಡಪ್ಪ.ಡಿ.ವಿ, ೧೯೯೮, ಸಾಹಿತ್ಯ ಶಕ್ತಿ, ಕಾವ್ಯಾಲಯ, ಮೈಸೂರು.

೧೦. ಗೌರಶ ಕಾಯ್ಕಿಣಿ (ಸಂ), ೧೯೮೨, ಸ್ವಾತಂತ್ರ್ಯೋತ್ತರ ವಿಚಾರಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೧೧. ಚಂದ್ರಶೇಖರ್.ಎನ್, ೨೦೦೫, ಏಕೀಕರಣ ಒಂದು ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೨. ಜವರೇಗೌಡ.ದೇ, ೧೯೭೨, ಸಾಹಿತಿಗಳ ಸಂಗದಲ್ಲಿ, ಉಷಾಸಾಹಿತ್ಯಮಾಲೆ, ಮೈಸೂರು.

೧೩. ಜವರೇಗೌಡ.ದೇ, ೧೯೮೫, ಕುವೆಂಪು ದರ್ಶನ ಮತ್ತು ಸಂದೇಶ, ಸಹ್ಯಾದ್ರಿ ಪ್ರಕಾಶನ, ಮೈಸೂರು.

೧೪. ದೊಡ್ಡರಂಗೇಗೌಡ, ೨೦೦೨, ಸಾಹಿತ್ಯಾ ಸುರಭಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೫. ತಿಪ್ಪೇರುದ್ರಸ್ವಾಮಿ, ೧೯೬೮, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ, ಮೈಸೂರು.

೧೬. ನಾಗರಾಜಯ್ಯ.ಹಂ.ಪ.(ಪ್ರಧಾನ ಸಂ.), ೧೯೮೬, ಶ್ರೀ ಉತ್ಸವ ಕನ್ನಡ ಸಾಹಿತ್ಯ ಪರಿಸರ, ಬೆಂಗಳೂರು.

೧೭. ನಾಯಕ.ಹಾ.ಮಾ(ಸಂ.), ೧೯೭೪, ಚಿನ್ನದಗರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ನಾಯಕ.ಹಾ.ಮಾ, ತಿಪ್ಪೇರುದ್ರಸ್ವಾಮಿ.ಹೆಚ್, ೧೯೭೧, ಎ.ಆರ್.ಕೃ. ಜೀವನ ಸಾಧನೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೯. ನಿರಂಜನ ವಾನಳ್ಳಿ, ೨೦೦೧, ಕನ್ನಡದಲ್ಲಿ ಕಲೆ-ಸಾಹಿತ್ಯ ಪತ್ರಿಕೆಗಳು, ಶಿವರಾಮ ಕಾರಂತ ಅಧ್ಯಯನ ಕೇಂದ್ರ, ಪುತ್ತೂರು.

೨೦. ಪರಮೇಶ್ವರಭಟ್ಟ, ೧೯೯೫, ರಸಋಷಿ ಕುವೆಂಪು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೧. ಪಾರ್ವತಿ.ಎಚ್.ಎಸ್, ೧೯೭೬, ನವೋದಯ ಕಾವ್ಯದಲ್ಲಿ ಪ್ರಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೨. ಪ್ರಭುಶಂಕರ, ೨೦೦೦, ಕನ್ನಡದಲ್ಲಿ ಭಾವಗೀತೆ, ಡಿ.ವಿ.ಕೆ. ಮೂರ್ತಿ, ಮೈಸೂರು.

೨೩. ರಾಧಾಕೃಷ್ಣ ಬಿ.ಪಿ, ೧೯೯೭, ಸಾರ್ಥಕ ಬದುಕು, ವಿ.ಸೀ.ಸಂಪದ, ಬೆಂಗಳೂರು.

೨೪. ಲತಾ ರಾಜಶೇಖರ್, ೨೦೦೩, ಕುವೆಂಪು ಕಾವ್ಯದಲ್ಲಿ ಪ್ರಕೃತಿ ಒಂದು ಅಧ್ಯಯನ, ಸಹ್ಯಾದ್ರಿ ಪ್ರಕಾಶನ, ಮೈಸೂರು.

೨೫. ವೆಂಕಟಸುಬ್ಬಯ್ಯ.ಜಿ, ೨೦೦೭, ಕರ್ನಾಟಕ ಏಕೀಕರಣ ಅನುಭವ ಸ್ವಪ್ನ ಬುಕ್ ಹೌಸ್, ಬೆಂಗಳೂರು.

೨೬. ವೆಂಕಟಾಚಲಶಾಸ್ತ್ರಿ, ೧೯೮೨, ಹೊಸಗನ್ನಡ ಸಾಹಿತ್ಯದ ಕೆಲವು ನೋಟಗಳು,

೨೭. ವೆಂಕಟಾಚಲಶಾಸ್ತ್ರಿ, ೨೦೦೦, ಎ.ಆರ್.ಕೃಷ್ಣಶಾಸ್ತ್ರಿ, ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೮. ಶಾಮರಾಯ.ತ.ಸು, , ಕನ್ನಡ ನಾಟಕ,

೨೯. ಶಾಮರಾಯ.ತ.ಸು, ೧೯೮೫, ಪ್ರಾಧ್ಯಾಪಕ ವೆಂಕಣಯ್ಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೦. ಶೇಷಗಿರಿರಾವ್.ಎಲ್.ಎಸ್, ೨೦೦೮, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತಪುಸ್ತಕ, ಬೆಂಗಳೂರು.

೩೧. ಶ್ರೀಕಂಠಯ್ಯ.ಬಿ.ಎಂ., ೧೯೮೩, ಶ್ರೀ ಸಾಹಿತ್ಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೨. ಶ್ರೀನಿವಾಸ ಹಾವನೂರ, ೨೦೦೦, ಹೊಸಗನ್ನಡ ಅರುಣೋದಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೩. ಸುಜನಾ(ಸಂ.), ೧೯೯೭, ನೀರವ ಸಾಧಕ, ಉ.ಕ.ಸುಬ್ಬರಾಯ ಸ್ಮರಣ ಸಮಿತಿ, ಮೈಸೂರು.

೩೪. ಸುಜಾತ.ಎಚ್.ಎಸ್, ೧೯೮೧, ಎಂ.ಎಸ್.ಪುಟ್ಟಣ್ಣ ಒಂದು ಅಧ್ಯಯನ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೩೫. ಸೂರ್ಯನಾಥ ಯು ಕಾಮತ್, ೨೦೦೩, ಕರ್ನಾಟಕ ಏಕೀಕರಣ ಸಿದ್ಧಿ ಮತ್ತು ಸಾಧನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

## ಪರಾಮರ್ಶನ ಪತ್ರಿಕೆಗಳು

### ಪ್ರಬುದ್ಧ ಕರ್ಣಾಟಕ

೧೯೧೯ನೇ ಇಸವಿಯ ಸಿದ್ಧಾರ್ಥ ಸಂವತ್ಸರದ ಮೊದಲ ಸಂಪುಟದಿಂದ

೧೯೫೬ನೇ ಇಸವಿಯ ದುರ್ಮುಖಿ ಸಂವತ್ಸರದ ೩೮ನೆ ಸಂಪುಟದವರೆಗಿನ

೧೪೮ ಸಂಚಿಕೆಗಳು.

****













ಪ್ರಬುದ್ಧ ಕರ್ಣಾಟಕದ ಮುಖಪುಟದ ಕೆಲವು ಮಾದರಿಗಳು




# ಪ್ರಬುದ್ಧ ಕರ್ಣಾಟಕ.

ಬೆಳಗಾಯಿತು. ಕೂಡಲೆ ಮಲಗಿದ್ದವರೆಲ್ಲರೂ ಎದ್ದು ಅವರವರ ಕೆಲಸಗಳಿಗೆ ಹೊರಟರು. ಮನೆಯಲ್ಲಿ ಎಲ್ಲೆಲ್ಲಿ ನೋಡಿದರೂ ಗದ್ದಲ; ಆದರೂ ಇನ್ನೂ ಕೆಲವು ಹುಡುಗರು ಮಲಗಿ ನಿದ್ದೆಹೋಗುತ್ತಿದ್ದರು. ಅದನ್ನು ನೋಡಿ ಅವರ ತಾಯಿಯು "ಇನ್ನೂ ಏಳುವುದಿಲ್ಲವೇನೋ! ಓದುವ ಹುಡುಗರು ಇಷ್ಟು ಹೊತ್ತು ಮಲಗಿದರೆ ಹ್ಯಾಗೆ?" ಎಂದು ಗದರಿಸಿದಳು.

ಕೂಡಲೆ ಹುಡುಗರು ಎದ್ದು ಸರಸರನೆ ಕೈಯಲ್ಲಿ ಒಂದೊಂದು ಕನ್ನಡ ಪುಸ್ತಕವನ್ನು ಹಿಡಿದು ಕುಳಿತುಕೊಂಡರು. ಸ್ವಲ್ಪ ಹೊತ್ತಿನಮೇಲೆ ಅವರ ಉಪಾಧ್ಯಾಯರು ಬಂದು ನೋಡುತ್ತಾರೆ! ಕೆಲವು ಹುಡುಗರು ಇನ್ನೂ ತೂಕಡಿಸುತ್ತಿದ್ದಾರೆ! ಕೆಲವರು ಪುಸ್ತಕವನ್ನು ತಲೆಕೆಳಗಾಗಿ ಹಿಡಿದುಕೊಂಡಿದ್ದಾರೆ! ಒಬ್ಬನಾದರೂ ಮುಖವನ್ನೇ ತೊಳೆದಿಲ್ಲ! ಉಪಾಧ್ಯಾಯರು ಅವರೆಲ್ಲರನ್ನೂ ಮೊದಲು

ಪ್ರಬುದ್ಧ ಕರ್ಣಾಟಕದ ಮೊದಲ ಸಂಪುಟದ ಮೊದಲ ಸಂಚಿಕೆಯ ಮೊದಲನೆಯ ಪುಟ

